# ಪುತ್ತೂರು ಕೇಂದ್ರದ ಸಾಂಸ್ಕೃತಿಕ ಚಟುವಟಿಕೆಗಳು [illegible]
# ಅಧ್ಯಯನ

ಪಿ.ಎಚ್.ಡಿ. ಪದವಿಗಾಗಿ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು
ಬಸ್ತ್ಯಾಂವ್ ಪಾಯ್ಸ್

ಮಾರ್ಗದರ್ಶಕರು
ಡಾ. ಸತ್ಯನಾರಾಯಣ ಮಲ್ಲಿಪಟ್ಟಣ
ಪ್ರಾಧ್ಯಾಪಕರು, ವಿಶ್ವವಿದ್ಯಾನಿಲಯ ಕಾಲೇಜು ಮಂಗಳೂರು.

ಮೂಲಕ
ಡಾ. ಹಾ.ಮಾ.ನಾ. ಸಂಶೋಧನಾ ಕೇಂದ್ರ
ಶ್ರೀ. ಧ.ಮಂ.ಕಾಲೇಜು, ಉಜಿರೆ

ಮಾನ್ಯತೆ
ಕನ್ನಡ ವಿಶ್ವವಿದ್ಯಾನಿಲಯ ಹಂಪಿ
ವಿದ್ಯಾರಣ್ಯ - ೫೮೩ ೨೭೬

೨೦೧೮

# ಪುತ್ತೂರು ಕೇಂದ್ರದ ಸಾಂಸ್ಕೃತಿಕ ಚಟುವಟಿಕೆಗಳು ಒಂದು ಅಧ್ಯಯನ

**ಪಿ.ಎಚ್.ಡಿ. ಪದವಿಗಾಗಿ**
**ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ**


*ಸಂಶೋಧಕರು*
**ಬಸ್ತ್ಯಾಂವ್ ಪಾಯ್ಸ್**





*ಮಾರ್ಗದರ್ಶಕರು*
**ಡಾ। ಸತ್ಯನಾರಾಯಣ ಮಲ್ಲಿಪಟ್ಟಣ**
ಪ್ರಾಧ್ಯಾಪಕರು, ವಿಶ್ವವಿದ್ಯಾನಿಲಯ ಕಾಲೇಜು ಮಂಗಳೂರು.

*ಮೂಲಕ*
**ಡಾ। ಹಾಮಾನಾ ಸಂಶೋಧನ ಕೇಂದ್ರ**
ಶ್ರೀ. ಧ.ಮಂ.ಕಾಲೇಜು, ಉಜಿರೆ



*ಮಾನ್ಯತೆ :*
**ಕನ್ನಡ ವಿಶ್ವವಿದ್ಯಾನಿಲಯ ಹಂಪಿ**
ವಿದ್ಯಾರಣ್ಯ – ೫೮೩ ೨೭೬

**೨೦೧೪**

# ಪ್ರಮಾಣ ಪತ್ರ

**‘ಪುತ್ತೂರು ಕೇಂದ್ರದ ಸಾಂಸ್ಕೃತಿಕ ಚಟುವಟಿಕೆಗಳು – ಒಂದು ಅಧ್ಯಯನ’** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿ.ಎಚ್.ಡಿ. ಪದವಿಗಾಗಿ ಸಿದ್ಧಪಡಿಸಲಾಗಿದೆ. ಡಾ। ಸತ್ಯನಾರಾಯಣ ಮಲ್ಲಿಪಟ್ಟಣ, ಪ್ರಾಧ್ಯಾಪಕರು, ವಿಶ್ವವಿದ್ಯಾನಿಲಯ ಕಾಲೇಜು, ಮಂಗಳೂರು. ಇವರು ಈ ಪ್ರಬಂಧ ರಚನೆಗೆ ಮಾರ್ಗದರ್ಶನ ಮಾಡಿದ್ದಾರೆ. ಈ ಮಹಾಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಯಾವುದೇ ಪದವಿಗಾಗಲಿ ಇಲ್ಲವೆ ಬೇರೆ ಯಾವುದೇ ಪ್ರಕಟಣೆಗಾಗಲಿ ಬಳಸಿಕೊಂಡಿರುವುದಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

Blius

**ಬಸ್ತ್ಯಾಂವ್ ಪಾಯ್ಸ್**
ಕನ್ನಡ ಉಪನ್ಯಾಸಕರು
ಸಂತ ಫಿಲೋಮಿನಾ ಕಾಲೇಜು
ದರ್ಬೆ – ಪುತ್ತೂರು

ದಿನಾಂಕ : 20. 7. 2014
ಸ್ಥಳ : ಪುತ್ತೂರು.

# ದೃಢೀಕರಣ ಪತ್ರ

ಬಸ್ತ್ಯಾಂವ್ ಪಾಯ್ಸ್ ಇವರು '**ಪುತ್ತೂರು ಕೇಂದ್ರದ ಸಾಂಸ್ಕೃತಿಕ ಚಟುವಟಿಕೆಗಳು – ಒಂದು ಅಧ್ಯಯನ**' ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿ.ಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಮಂಡಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಈ ಮಹಾಪ್ರಬಂಧವನ್ನು ಇಲ್ಲವೇ ಇದರ ಯಾವುದೇ ಭಾಗವನ್ನು ಈ ಮೊದಲು ಅಭ್ಯರ್ಥಿಯು ಯಾವುದೇ ಪದವಿಗಾಗಲಿ, ಇಲ್ಲವೇ ಬೇರೆ ಯಾವುದೇ ಪ್ರಕಟಣೆಗಾಗಲಿ ಬಳಸಿಕೊಂಡಿರುವುದಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

**ಡಾ। ಸತ್ಯನಾರಾಯಣ ಮಲ್ಲಿಪಟ್ಟಣ**
ಕನ್ನಡ ಪ್ರಾಧ್ಯಾಪಕರು
ವಿಶ್ವವಿದ್ಯಾನಿಲಯ ಕಾಲೇಜು
ಮಂಗಳೂರು.

ದಿನಾಂಕ : 20·7·2014
ಸ್ಥಳ : ಪುತ್ತೂರು

# ಪುತ್ತೂರು ಕೇಂದ್ರದ ಸಾಂಸ್ಕೃತಿಕ ಚಟುವಟಿಕೆಗಳು ಒಂದು ಅಧ್ಯಯನ

## ಪರಿವಿಡಿ

# ಪುತ್ತೂರು ಕೇಂದ್ರದ ಸಾಂಸ್ಕೃತಿಕ ಚಟುವಟಿಕೆಗಳು – ಒಂದು ಅಧ್ಯಯನ

## ಅಧ್ಯಾಯ – ೧

೧.೧ ಪ್ರಸ್ತಾವನೆ

೧.೨ ಅಧ್ಯಯನದ ಉದ್ದೇಶ, ವ್ಯಾಪ್ತಿ

೧.೩. ಅಧ್ಯಯನದ ವಿಧಾನ,

೧.೪. ಇದುವರೆಗೆ ನಡೆದ ಅಧ್ಯಯನಗಳು

# ಅಧ್ಯಾಯ – ೧

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

### ೧.೧.೦ ಪ್ರವೇಶ :

ಮಲೆನಾಡಿನ ಮಡಿಲಾದ ಪುತ್ತೂರು ಭೌಗೋಳಿಕವಾಗಿ ಚಿಕ್ಕದಾದರೂ ಸಾಂಸ್ಕೃತಿಕವಾಗಿ ಶ್ರೀಮಂತ ಊರು, ಭಾಷೆ, ಸಾಹಿತ್ಯ, ಜಾನಪದ, ಸಂಗೀತ, ನೃತ್ಯ, ಪುಸ್ತಕ ಪ್ರಕಟಣೆ, ಯಕ್ಷಗಾನ, ಚಿತ್ರಕಲೆ ಹೀಗೆ ಈ ಚಿಕ್ಕ ಊರಿನ ಸಾಧನೆ ಬಹು ದೊಡ್ಡದು. ಕನ್ನಡ ನಾಡು ನುಡಿಯ ಕೈಂಕರ್ಯಕ್ಕೆ ತಮ್ಮನ್ನು ಸಮರ್ಪಿಸಿಕೊಂಡ ಅನೇಕ ಕವಿಗಳ, ವಿದ್ವಾಂಸರ, ಲೇಖಕರ, ಪ್ರಕಾಶಕರ, ಕಲಾವಿದರ ತವರೂರು ಪುತ್ತೂರು. ಇವರ ಸಾಧನೆಗೆ ಪ್ರೇರಣೆಯಾಗಿ ಇಂದಿಗೂ ಇಲ್ಲಿಯ ತಾಲೂಕು ಕೇಂದ್ರ ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿ ಅನೇಕ ಸಾಹಿತ್ಯಸಂಘಗಳು ಹಲವು ಬಗೆಯ ಸೃಜನಾತ್ಮಕ ಚಟುವಟಿಕೆಗಳನ್ನು ಹಮ್ಮಿಕೊಂಡು ಅಪೂರ್ವ ಸೇವೆಯನ್ನು ಮಾಡುತ್ತಿದೆ.

ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಗುವವರೆಗೆ ಈ ಊರು ಅಳುಪ ಅರಸರ ಒಡೆತನ ದಲ್ಲಿತ್ತು.[೧] ಅನಂತರ ತುಳುವ ಸಂಸ್ಕೃತಿಯಲ್ಲಿ ಪುತ್ತೂರಿಗೆ ಹೆಚ್ಚಿನ ಮಹತ್ವ ಬಂತು. ಕೆಳದಿಯ ಶಿವಪ್ಪ ನಾಯಕ ಹಾಗೂ ಸುಲ್ತಾನರ ಆಳ್ವಿಕೆಗೂ ಒಳಗಾಗಿ ದೆಹಲಿಯ ಪತನಾನಂತರ ಇದು ಬ್ರಿಟಿಷರ ಅಧಿಪತ್ಯಕ್ಕೆ ಸೇರಿತು. ಹಳೆಪುತ್ತೂರು, ಈಗಿನ ಸುಳ್ಯ, ಬೆಳ್ತಂಗಡಿ, ಬಂಟ್ವಾಳ ತಾಲೂಕಿನ ಬಹು ಭಾಗಗಳನ್ನು ಸೇರಿಸಿಕೊಂಡಿತ್ತು.

ಪುತ್ತೂರಿನ ಮಹಾಲಿಂಗೇಶ್ವರ ದೇವಾಲಯಕ್ಕೆ ದೀರ್ಘ ಇತಿಹಾಸವಿದೆ. ಈ ದೇವಾಲಯದ ಕೆರೆಯಲ್ಲಿ ಮುತ್ತು ದೊರೆಯುತ್ತಿತ್ತು ಎಂದು ಪ್ರತೀತಿ. ಹಾಗಾಗಿ 'ಮುತ್ತೂರು' ಕ್ರಮೇಣ ಪುತ್ತೂರು ಆಯಿತು[೨] ಎಂದು ಹೇಳಲಾಗಿದೆ.

೧೯೩೧ರಲ್ಲಿ ಹುಟ್ಟೂರು ಬಿಟ್ಟು ಪುತ್ತೂರಿಗೆ ಬಂದ ಕಾರಂತರು ಬಾಲವನವನ್ನು ಸ್ಥಾಪಿಸಿ ಇಲ್ಲಿ ಅನೇಕ ಸಾಹಿತ್ಯಿಕ, ಸಾಂಸ್ಕೃತಿಕ ಕೆಲಸಗಳಿಗೆ ಚಾಲನೆ ನೀಡಿದರು. ಹರ್ಷ ಮುದ್ರಣಾಲಯವನ್ನು ಸ್ಥಾಪಿಸಿ ವಿಜ್ಞಾನ, ನಿಘಂಟು, ಕಲೆ, ಮಕ್ಕಳ ಶಿಕ್ಷಣಕ್ಕೆ ಸಂಬಂಧಿಸಿದ ಉಪಯುಕ್ತ ಕೃತಿಗಳನ್ನು ಪ್ರಕಟಿಸಿದರು. ಕಾರಂತರ ಈ ಪ್ರಯೋಗಶಾಲೆ ಪುತ್ತೂರಿನ ಇತಿಹಾಸದಲ್ಲಿ ಚಿರಸ್ಮರಣೀಯ ಕೊಡುಗೆ.

ಕಾರಂತರು ಮೊಳಹಳ್ಳಿ ಶಿವರಾಯರೊಂದಿಗೆ ಸೇರಿ ಸಾಂಸ್ಕೃತಿಕವಾಗಿ ಶೈಕ್ಷಣಿಕವಾಗಿ ಆರಂಭಿಸಿದ 'ದಸರಾ ಉತ್ಸವ' ಕನ್ನಡ ನಾಡಿನಲ್ಲಿ ಮನೆಮಾತಾಗಿತ್ತು[೩]. ಕರ್ನಾಟಕದ ಮೂಲೆಮೂಲೆ ಗಳಿಂದ ಅನೇಕ ವಿದ್ವಾಂಸರು ಬಂದು ಇದರಲ್ಲಿ ಭಾಗವಹಿಸುತ್ತಿದ್ದರು. ಕುವೆಂಪು, ಬೇಂದ್ರೆ, ಮಾಸ್ತಿ,

ಗೋಕಾಕ್, ವಿ.ಸೀ., ರಾಜರತ್ನಂ ಮೊದಲಾದವರು ಆಗ ನಡೆಯುತ್ತಿದ್ದ ಗೋಷ್ಠಿಗಳಲ್ಲಿ ಮಾತನಾಡಿದ್ದಾರೆ, ಕಾರಂತರ ನಿರ್ಗಮನದ ನಂತರ ಸ್ವಲ್ಪಕಾಲ ನಿಂತು ಹೋದ ನಾಡಹಬ್ಬ ಮತ್ತೆ ಆರಂಭವಾಗಿದೆ.

ಈ ಶತಮಾನದ ಇಪ್ಪತ್ತು ಮೂವತ್ತರ ದಶಕದ ಅನಂತರ ಪುತ್ತೂರಿನಲ್ಲಿ ಸಮೃದ್ಧ ಸಾಹಿತ್ಯ ರಚನೆಯಾಗಿದೆ. ಉಗ್ರಾಣ ಮಂಗೇಶರಾವ್, ಕಡವ ಶಂಭುಶರ್ಮ, ಬೆಳ್ಳೆ ರಾಮಚಂದ್ರರಾವ್, ಪಡುಕೋಣೆ ಸೀತಾದೇವಿ, ಮರ್ಮುಂಜ ರಾಮಚಂದ್ರ, ಕೆಮ್ಮಿಂಜೆ ಸುಬ್ರಾಯ ಉಪಾಧ್ಯಾಯರು, ಮಂಜೇಶ್ವರ ಅನಂತರಾಯ, ಮುಳಿಯ ತಿಮ್ಮಪ್ಪಯ್ಯ, ಸೇವಕ ಮಿರಾಜಮಲ್ಲ, ನಾಗೇಶ್ ರಾವ್, ನಾರಾಯಣ ಕಿಲ್ಲೆ, ವೆಂಕಪ್ಪ ಶೆಟ್ಟಿ, ಪುಟ್ಟಣ್ಣ ಶೆಟ್ಟಿ, ದಾಮೋದರ ಬಾಳಿಗ, ಮರಿಯಪ್ಪ ಭಟ್, ರಘುನಾಥ ಭಟ್, ಮಚ್ಚಿಮಲೆ ಶಂಕರನಾರಾಯಣ ರಾವ್, ಜಿ. ಎನ್. ಲಕ್ಷ್ಮಣ ಪೈ, ಪಿ. ಸುಬ್ಬಯ್ಯ ಶೆಟ್ಟಿ, ಬಿ. ರಾಮಚಂದ್ರ ಭಟ್, ಸೇಡಿಯಾಪು ಕೃಷ್ಣ ಭಟ್ ಮೊದಲಾದವರು ಹೊಸಗನ್ನಡ ಸಾಹಿತ್ಯ ಪರಂಪರೆಯಲ್ಲಿ ವೈವಿಧ್ಯಮಯ ಕೃತಿಗಳನ್ನು ರಚಿಸಿದ್ದಾರೆ. ಈ ಮೂಲಕ ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆ ನೀಡಿದ್ದಾರೆ.

ತುಳುವಿನಲ್ಲಿ ಕೆದಂಬಾಡಿ ಜತ್ತಪ್ಪ ರೈ, ಕುದ್ಕಾಡಿ ವಿಶ್ವನಾಥ ರೈ, ಪಾಲ್ತಾಡಿ ರಾಮಕೃಷ್ಣ ಆಚಾರ್ ಮೊದಲಾದವರು ಸಾಕಷ್ಟು ಕೃಷಿ ಮಾಡಿದ್ದಾರೆ. ಬಹುಮುಖ ಪ್ರತಿಭೆಯ ಲೇಖಕರಾಗಿ ಶಿವರಾಮ ಕಾರಂತ, ಎ.ಪಿ. ಮಾಲತಿ, ಗಂಗಾ ಪಾದೇಕಲ್ ಮುಂತಾದವರು ಹೆಸರು ಮಾಡಿದ್ದು ತಾಳ್ತಜೆ ವಸಂತ ಕುಮಾರ್, ಶ್ರೀಕೃಷ್ಣ ಭಟ್ ಅರ್ತಿಕಜೆ ಮತ್ತು ಹರಿಕೃಷ್ಣ ಭರಣ್ಯ ಹೊರನಾಡಿಗೆ ಹೋಗಿ ಕನ್ನಡದ ಕಂಪನ್ನು ಹಬ್ಬಿಸಿದ್ದಾರೆ.

ಪ್ರಕಾಶನರಂಗದಲ್ಲಿ ಪುತ್ತೂರಿಗೆ ಅಖಿಲ ಕರ್ನಾಟಕ ಮಟ್ಟದಲ್ಲಿ ಮನ್ನಣೆಯಿದೆ. ಪ್ರಾರಂಭದಲ್ಲಿ ಶಿವರಾಮ ಕಾರಂತರ ಹರ್ಷ ಪ್ರಕಟಣಾಲಯವು ಪ್ರಸಿದ್ಧವಾಗಿತ್ತು. ಕಳೆದ ಮೂರು ದಶಕಗಳಿಂದ ಕರ್ನಾಟಕ ಸಂಘ, ಹಾಗೂ ಇಲ್ಲಿನ ಕಾಲೇಜು ಕನ್ನಡ ಸಂಘಗಳು ಹಲವು ಉತ್ತಮ ಗ್ರಂಥಗಳನ್ನು ಬೆಳಕಿಗೆ ತಂದಿವೆ. ಪುಸ್ತಕ ಮಾರಾಟ ಮತ್ತು ಸಾಹಿತ್ಯ ವಿತರಣೆಗಾಗಿ ಬೋಳಂತಕೋಡಿ ಈಶ್ವರ ಭಟ್ಟ, ವಿ.ಬಿ. ಮೊಳೆಯಾರ್ ಮುಂತಾದವರು ಶ್ರಮಿಸಿದ್ದಾರೆ.

ಕಲೆಗಳ ಕ್ಷೇತ್ರಗಳಲ್ಲಿ ಪುತ್ತೂರು ತನ್ನದೇ ಆದ ನೆಲೆಯನ್ನು ಕಂಡುಕೊಂಡಿದೆ. ಸ್ಯಾಕ್ಸೋಫೋನ್ ವಾದನದಲ್ಲಿ ಡೋಗ್ರ ವೆಂಕಟಪ್ಪ ಅಗ್ರಗಣ್ಯರಾದರೆ ಮೃದಂಗ ಹಾಗೂ ತಬಲಾ ಸವ್ಯಸಾಚಿಯಾಗಿ ಎನ್. ವಿ. ಮೂರ್ತಿ ಅಂತಾರಾಷ್ಟ್ರೀಯ ಸಿದ್ಧಿ ಪ್ರಸಿದ್ಧಿಗಳನ್ನು ಗಳಿಸಿದ್ದಾರೆ. ಪಿಟೀಲಿನಲ್ಲಿ ಪುತ್ತೂರು ದೇವದಾಸ ಜೋಷಿಯವರ ಸಾಧನೆ ಅನನ್ಯವಾದುದು. ಕರ್ನಾಟಕ ಸಂಗೀತದ ತಿರುವಯ್ಯೂರು ಎಂದೇ ಹೆಸರಾದ ಕಾಂಚನದ ವೆಂಕಟಸುಬ್ರಹ್ಮಣ್ಯ ಅಯ್ಯರ್ ಅವರು ಹಾಕಿಕೊಟ್ಟ ಮೇಲ್ಪಂಕ್ತಿಯನ್ನು ಹಲವು ಶಿಕ್ಷಕ-ಶಿಕ್ಷಕಿಯರು ಮುಂದುವರಿಸುತ್ತಿದ್ದಾರೆ. ಪುತ್ತೂರು ನರಸಿಂಹನಾಯಕ್

ಹಿನ್ನೆಲೆ ಮುನ್ನೆಲೆ ಗಾಯಕರಾಗಿ ದಾಖಲೆಯನ್ನೇ ಸ್ಥಾಪಿಸಿದ್ದಾರೆ. ಮೇಘನಾ ಮೂರ್ತಿಯವರಂತಹ ಎಳೆಯರು ಸಾಧನೆ ಗೈಯುತ್ತಿದ್ದಾರೆ.

ನಾಟಕರಂಗದಲ್ಲಿ ರಾಮಣ್ಣ ರೈ, ಪುರಂದರ ಭಟ್, ಐ.ಕೆ. ಬೊಳುವಾರು ಮತ್ತಿತರರು ಹೆಸರು ಮಾಡಿದ್ದು, ನಿರತ ನಿರಂತ, ಬಹುವಚನಂ ಮುಂತಾದ ಸಂಸ್ಥೆಗಳು ರಂಗಚಟುವಟಿಕೆಗಳ ಉಳಿವಿಗಾಗಿ ಶ್ರಮಿಸುತ್ತಿವೆ. ವ್ಯಂಗ್ಯ ಚಿತ್ರಕಾರರಾಗಿ ಶಿಂಗಣ್ಣರವರು ಪ್ರಸಿದ್ಧರಾಗಿದ್ದಾರೆ.

ಚಿತ್ರಗಾರಿಕೆಯಲ್ಲಿ ಚಂದ್ರನಾಥ್, ಮನೋಹರ್, ಸುಧಾಕರ ಅಪೂರ್ವ ಸಾಧನೆ ಮಾಡಿದ್ದು, ಎಳವೆಯಿಂದ ಶಿವಪ್ರಸಾದ್, ಲಕ್ಷ್ಮೀಪ್ರಸಾದ್ ಅಂತರರಾಷ್ಟ್ರೀಯ ಪ್ರಸಿದ್ಧಿ ಗಳಿಸಿದ್ದಾರೆ[೫]. ಉತ್ತಮ ಚಿತ್ರಕಾರರನ್ನು ತಿದ್ದಿ-ತೀಡಿ ರೂಪಿಸುವಲ್ಲಿ ಎಂ.ಎನ್. ಪುರುಷೋತ್ತಮರ ಪಾತ್ರ ಶ್ಲಾಘನೀಯ. ಮಕ್ಕಳ ಸಾಹಿತ್ಯದಲ್ಲಿ ಉಲ್ಲಾಸಣ್ಣ, ಸಿ.ಎಚ್.ಲಕ್ಷ್ಮೀ, ರಮೇಶ ಉಳಿಯ, ಮನೋವಿಶ್ಲೇಷಣೆಯಲ್ಲಿ ಗಂಗಾಧರ ಬೆಳ್ಳಾರೆ ಗಮನ ಸೆಳೆದಿದ್ದಾರೆ. ಪರಿಸರ ಹೋರಾಟದಲ್ಲಿ ಶಂಪಾ ದೈತೋಟ ಹಾಗೂ ಗೆಳೆಯರು ಮಾಡಿದ ಸಾಧನೆ ಸ್ಮರಣೀಯ.

ಪುತ್ತೂರಿಗೆ ದೇಶ-ವಿದೇಶಗಳಲ್ಲಿ ಹೆಸರು ತಂದುಕೊಟ್ಟ ಮತ್ತೊಂದು ಕ್ಷೇತ್ರ ಯಕ್ಷಗಾನ. ಮೊಣಂಗಾಯಿ ಕೃಷ್ಣಭಟ್, ನಾರಾಯಣ ಹೆಗ್ಡೆ, ನಯನಕುಮಾರ್, ಪೆರುವಡಿ ನಾರಾಯಣಭಟ್, ಪಾತಾಳ ವೆಂಕಟರಮಣ, ಭರತ್, ಶೀನಪ್ಪ ಭಂಡಾರಿ, ಮುಂತಾದವರು ಯಕ್ಷಗಾನದಲ್ಲಿ ಹೆಸರುಮಾಡಿದವರು[೬]. ಬೊಳುವಾರಿನ ಆಂಜನೇಯ ಯಕ್ಷಗಾನ ಮಂಡಳಿ, ಉಪ್ಪಿನಂಗಡಿಯ ಕಾಳಿಕಾಂಬಾ ಯಕ್ಷಗಾನ ಮಂಡಳಿ, ಹಾಗೂ ಆಂಜನೇಯ ಮಹಿಳಾ ಯಕ್ಷಗಾನ ಮಂಡಳಿಗಳು ತಾಳಮದ್ದಳೆಯನ್ನು ನಡೆಸಿಕೊಂಡು ಬರುತ್ತಿವೆ. ಯಕ್ಷಕೂಟದಂತಹ ತರುಣರ ಸಂಘಟನೆಗಳು ಹೊಸಹೊಸ ಪ್ರಯೋಗಗಳನ್ನು ನಡೆಸುತ್ತಿವೆ. ವಿವಿಧ ತೆಂಕು-ಬಡಗು ಮೇಳಗಳು ನಟರಾಜ ವೇದಿಕೆಯಲ್ಲಿ ನಡೆಸುವ ಸಪ್ತಾಹಗಳು ಯಶಸ್ಸು ಕಂಡಿವೆ. ಪುತ್ತೂರಿನ ದಸರಾ ನಾಡಹಬ್ಬವು ಸಂಸ್ಕೃತಿ ಪ್ರಸಾರಕ್ಕೆ ಉತ್ತಮ ವೇದಿಕೆಯಾಗಿದೆ. ನೃತ್ಯರಂಗದಲ್ಲಿ ದೀಪಕ್ ಕುಮಾರ್, ತೇಜಸ್ವಿನಿ, ಮಂಜುಳಾ ಮುಂತಾದವರ ಸಾಧನೆ ಶ್ಲಾಘನೀಯ.

ಅನ್ಯಾನ್ಯ ಸಾಂಸ್ಕೃತಿಕ ಚಟುವಟಿಕೆಗಳ ತಾಣವಾದ ಅನುರಾಗ ವಠಾರದ ಬಿ. ಪುರಂದರ ಭಟ್ ಅವರ ಹೆಸರು ಉಲ್ಲೇಖನೀಯ. ಪಟ್ಟಣದ ಹೃದಯ ಭಾಗದಲ್ಲಿರುವ ತಮ್ಮ ಮನೆಯ ಅಟ್ಟವನ್ನು (ಮಾಳಿಗೆ) ಅವರು ಸಜ್ಜುಗೊಳಿಸಿ ಸಹೃದಯರ ಸೂಕ್ತ ಕಲಾಪಗಳಿಗೆ ಉಚಿತವಾಗಿ ಒದಗಿಸುತ್ತಿದ್ದಾರೆ. ಕರ್ನಾಟಕ ಸಂಘ, ಎಚ್ಚರ ಬಳಗ, ದೃಶ್ಯ, ಪುತ್ತೂರು ಹವ್ಯಾಸಿ ಪತ್ರಕರ್ತರ ಸಂಘ, ಕನ್ನಡ ಸಾಹಿತ್ಯ ಪರಿಷತ್, ತುಳುಕೂಟ, ಚುಟುಕು ಸಾಹಿತ್ಯ ಪರಿಷತ್ ಕುಶಲ ಹಾಸ್ಯಪ್ರಿಯರ ಸಂಘ ಮುಂತಾದ ಹತ್ತಾರು ಸಂಘಗಳು ಇಲ್ಲಿಂದಲೇ ಕಾರ್ಯವೆಸಗುತ್ತಿವೆ.

ವಿಚಾರವಾಣಿ, ಭಾರತ, ಇಂದ್ರಧನುಷ್, ಸಂಶೋಧಕ ಪತ್ರಿಕೆಗಳು ಪುತ್ತೂರಿನಿಂದ ಪ್ರಕಟವಾಗುತ್ತಿದ್ದವು. ಈಗ ಅಡಿಕೆ ಪತ್ರಿಕೆ, ಮಧು ಪ್ರಪಂಚ, ಸುದ್ದಿಬಿಡುಗಡೆ ಮುಂತಾದ ಕನ್ನಡ ಪತ್ರಿಕೆಗಳು ಹಾಗೂ ಪುತ್ತೂರ್ಚೆ ನೆಕೆತ್ರ್, ಆವಯ್ ಎಂಬ ಕೊಂಕಣಿ ಪತ್ರಿಕೆಗಳು ಪ್ರಕಟವಾಗುತ್ತಿವೆ.

ಒಂದು ಪ್ರದೇಶದ ಬೆಳವಣಿಗೆಗೆ ಅಲ್ಲಿನ ಧಾರ್ಮಿಕ ಚಿಂತನೆಗಳು ಮತ್ತು ಬದುಕನ್ನು ಆಧರಿಸಿ ಇರುವುದು ಸಹಜ, ಪುತ್ತೂರು ತಾಲೂಕಿನ ನಾನಾ ಭಾಗಗಳಲ್ಲಿ ವಿವಿಧ ಪಂಗಡಗಳಿಗೆ ಸೇರಿದ, ಆದರೆ ಪರಸ್ಪರ ಒಂದಾಗಿರುವ ಜನರು ಸರ್ವಧರ್ಮಗಳ ರಕ್ಷಣೆಗಾಗಿ ತಮ್ಮ ಜೀವನವನ್ನೇ ಮುಡಿಪಾಗಿಟ್ಟಿದ್ದಾರೆ. ಈ ನಿಟ್ಟಿನಲ್ಲಿ ಇಲ್ಲಿ ಹಲವು ದೇವಸ್ಥಾನಗಳು, ದೈವಸ್ಥಾನಗಳು, ಜೈನ ಬಸದಿಗಳು, ಚರ್ಚುಗಳು ಮತ್ತು ಮಸೀದಿಗಳು ಪೂರಕ ವಾತಾವರಣವನ್ನು ಸೃಷ್ಟಿಸುತ್ತಿವೆಯೆಂಬುದಕ್ಕೆ ತಾಲೂಕಿನಾದ್ಯಾಂತ ಕಾಣಸಿಗುವ ಈ ಧಾರ್ಮಿಕ ಕೇಂದ್ರಗಳೇ ಸಾಕ್ಷಿ.

'ವಿವಿಧತೆಯಲ್ಲಿ ಏಕತೆ' ಎಂಬುದು ಭಾರತೀಯ ಸಂಸ್ಕೃತಿಯಲ್ಲಿ ಕಾಣುವ ವಿಶೇಷ ಅಂಶಗಳಲ್ಲಿ ಒಂದು. ಭಾರತೀಯ ಭೌಗೋಳಿಕ ಚೌಕಟ್ಟಿನಲ್ಲಿ ಹಲವು ಜನಾಂಗ, ಸಮುದಾಯಗಳು ಒಟ್ಟಿಗೆ ಸಾಮರಸ್ಯದಿಂದ ಬದುಕುತ್ತಿವೆ. ಅದರೊಂದಿಗೆ ಪ್ರತಿಯೊಂದು ಸಮುದಾಯವೂ ತನ್ನದೇ ಆದ ಸಾಂಸ್ಕೃತಿಕ ಅನನ್ಯತೆಯನ್ನು ಉಳಿಸಿಕೊಂಡು ಬಂದಿದೆ. ಬದಲಾಗುತ್ತಿರುವ ವರ್ತಮಾನ ಹತ್ತು ಹಲವು ಒತ್ತಡಗಳ ನಡುವೆಯೂ ತನ್ನದೇ ಆದ ಅನನ್ಯತೆಯ ನೆಲೆಯನ್ನು ಕಾಪಾಡಿಕೊಂಡು ಬಂದ ಪ್ರದೇಶಗಳಲ್ಲಿ ಪುತ್ತೂರು ಸಮುದಾಯವೂ ಒಂದು. ಈ ಸಮುದಾಯದ ಸಾಂಸ್ಕೃತಿಕ ಮತ್ತು ಸಾಹಿತ್ಯಿಕ ಅಂಶಗಳನ್ನು ಗಮನಿಸಲು ಯತ್ನಿಸಿದೆ.

## ೧.೨.೦ ಅಧ್ಯಯನದ ಉದ್ದೇಶ, ವ್ಯಾಪ್ತಿ :

ಇಪ್ಪತ್ತನೆಯ ಶತಮಾನದಲ್ಲಿ ಪುತ್ತೂರಿನ ಪರಿಸರದಲ್ಲಿ ಅನೇಕ ಕವಿಗಳು ನಾಡು-ನುಡಿಗೆ ತಮ್ಮ ಅಮೂಲ್ಯವಾದ ಕೊಡುಗೆಯನ್ನು ನೀಡಿದ್ದಾರೆ. ಇವರ ಈ ಸಾಹಿತ್ಯಿಕ ಕೊಡುಗೆಯನ್ನು ದಾಖಲಿಸುವುದು ಈ ಸಂಶೋಧನೆಯ ಉದ್ದೇಶ. ಇದರೊಂದಿಗೆ ಪುತ್ತೂರಿನಲ್ಲಿ ಹಲವು ಜಾತಿ. ಬುಡಕಟ್ಟುಗಳಿಗೆ ಸೇರಿದ ಜನರು ವಾಸಿಸುತ್ತಿದ್ದು, ಅವರಲ್ಲಿ ಅನೇಕ ರೀತಿಯ ಆಚಾರ-ವಿಚಾರಗಳು ಇದ್ದು, ಅನೇಕ ಹಬ್ಬ-ಹರಿದಿನಗಳನ್ನು ಆಚರಿಸುತ್ತಾರೆ. ಇವುಗಳ ಬಗ್ಗೆಯೂ ಸಂಶೋಧನೆ ಮಾಡಿ ಅವುಗಳ ವಿಶಿಷ್ಟತೆಯನ್ನು ಗುರುತಿಸುವುದು ಈ ಅಧ್ಯಯನದ ಉದ್ದೇಶ.

ಈ ಸಂಶೋಧನೆಯ ವ್ಯಾಪ್ತಿಯನ್ನು ಪುತ್ತೂರು ತಾಲೂಕಿಗೆ ಮಾತ್ರ ಸೀಮಿತಗೊಳಿಸಲಾಗಿದೆ. ಪುತ್ತೂರು ಕಂದಾಯ ತಾಲೂಕಿಗೆ ಸಂಬಂಧಿಸಿದಂತೆ ಪುತ್ತೂರು,

ಉಪ್ಪಿನಂಗಡಿ, ಪಂಜ, ಕಡಬ, ಪಡುಕೋಣೆ, ಕೆಮ್ಮಿಂಜೆ, ಸೇಡಿಯಾಪು, ಕೆದಂಬಾಡಿ, ಬೊಳುವಾರು, ಪಾಲ್ತಾಡಿ ಮುಂತಾದ ಪುತ್ತೂರು ತಾಲೂಕಿನ ಒಳಗಡೆ ಇರುವ ಪ್ರದೇಶಗಳಲ್ಲಿನ ಸಾಂಸ್ಕೃತಿಕ ಚಟುವಟಿಕೆಗಳ ಬಗ್ಗೆ ಸಂಶೋಧನೆ ಕೈಗೊಳ್ಳಲಾಗಿದೆ.

ಈ ಸಂಶೋಧನೆಯು ಒಂದು ಸಾಂಸ್ಕೃತಿಕ ಅಧ್ಯಯನವಾಗಿದೆ. ಪುತ್ತೂರನ್ನು ಕೇಂದ್ರವಾಗಿಟ್ಟು ಈ ಊರಿನ ಸುತ್ತಮುತ್ತಲ ಪ್ರದೇಶದ ಸಾಂಸ್ಕೃತಿಕ ವೈಶಿಷ್ಟ್ಯವನ್ನು ದಾಖಲಿಸುವುದು ಇಲ್ಲಿಯ ಉದ್ದೇಶ. ಕನ್ನಡದ ಉಪಭಾಷೆಗಳಾದ ಗೌಡಕನ್ನಡ, ಹವ್ಯಕಕನ್ನಡ ಮುಂತಾದ ಭಾಷೆಗಳಲ್ಲಿ ನಡೆದಿರುವ ಕಾರ್ಯಚಟುವಟಿಕೆಗಳನ್ನು ದಾಖಲಿಸಲಾಗುವುದು. ಪುತ್ತೂರು ತುಳುನಾಡಿನ ಒಂದು ಭಾಗವಾಗಿದ್ದು ಇಲ್ಲಿ 'ತುಳು' ಜನರ ಆಡುನುಡಿಯಾಗಿದೆ. ತುಳುಭಾಷೆ ಅನಾದಿ ಕಾಲದಿಂದಲೂ ಬಳಕೆಯಲ್ಲಿದ್ದು ಸಂಧಿ, ಪಾಡ್ದನ, ಯಕ್ಷಗಾನ, ನಾಟಕ ಮುಂತಾದ ಸಾಂಸ್ಕೃತಿಕ ಚಟುವಟಿಕೆಗಳು ನಡೆದುಬಂದಿವೆ. ಇವುಗಳ ಬಗ್ಗೆಯೂ ಸಂಶೋಧನೆ ನಡೆಸಲಾಗುವುದು. ತುಳು ಭಾಷೆಯೊಂದಿಗೆ ಕೊಂಕಣಿ, ಉರ್ದು ಮತ್ತು ಬ್ಯಾರಿ ಭಾಷೆಗಳನ್ನಾಡುವ ಜನರೂ ಪುತ್ತೂರು ತಾಲೂಕಿನಲ್ಲಿ ಇದ್ದು ಅವರ ಸಾಹಿತ್ಯಿಕ ವಿಚಾರಗಳ ಬಗ್ಗೆಯೂ ದಾಖಲಿಸಲಾಗುವುದು.

ಅಧ್ಯಯನವನ್ನು ಕ್ರಿ.ಶ. ೧೮೦೦ ರಿಂದ ಕ್ರಿ.ಶ. ೨೦೦೮ರ ವರೆಗೆ ಕಾಲದ ಮಿತಿಯನ್ನು ಗಮನದಲ್ಲಿಟ್ಟು ನಡೆಸಲಾಗುವುದು. ಕ್ರಿ.ಶ. ೧೭೮೨ರಲ್ಲಿ ಹೈದರಾಲಿಯ ನಂತರ ಟಿಪ್ಪು ಸುಲ್ತಾನ್ ಅಧಿಕಾರ ವಹಿಸಿಕೊಂಡು ದಕ್ಷಿಣ ಕನ್ನಡ ಜಿಲ್ಲೆಗೂ ತನ್ನ ಅಧಿಕಾರ ವ್ಯಾಪ್ತಿಯನ್ನು ವಿಸ್ತರಿಸಿದ್ದನು. ಮಡಿಕೇರಿ, ವಿಟ್ಲ ಮಾರ್ಗವಾಗಿ ಪುತ್ತೂರಿಗೆ ಬಂದ ಟಿಪ್ಪು ಪುತ್ತೂರಿನ ಪೂರ್ವ ಭಾಗದ ಸ್ಥಳಗಳಾದ ಅಮರ ಸುಳ್ಯ, ಪಂಜ ಮತ್ತು ಬೆಳ್ಳಾರೆಗಳನ್ನು ಕೊಡಗಿಗೆ ಸೇರಿಸಿಕೊಂಡ, ತದನಂತರ ಸ್ಥಳೀಯವಾಗಿ ಹಲವಾರು ಬದಲಾವಣೆಗಳಿಗೆ ಕಾರಣವಾಯಿತು. ಈ ಬಗ್ಗೆ ಅಧ್ಯಯನ ಕೈಗೊಂಡು ಟಿಪ್ಪುವಿನ ನಂತರ ಇಲ್ಲಿ ಸಾಹಿತ್ಯ ಯಾವ ರೀತಿ ಬೆಳೆಯಿತು. ಮುಂದೆ ಯಾವ ಯಾವ ಸಾಹಿತಿಗಳು ಲೇಖಕರು ಇಲ್ಲಿ ಪ್ರಸಿದ್ಧಿಗೆ ಬಂದರು ಎಂದು ಅಧ್ಯಯನ ಕೈಗೊಳ್ಳಲಾಗುವುದು. ಟಿಪ್ಪುವಿನ ನಂತರ ಇಂದಿನವರೆಗೆ ಇಲ್ಲಿಯ ಪ್ರಧಾನ ಆಡುಮಾತಾದ ತುಳು ಭಾಷೆಯ ಸಾಹಿತ್ಯಿಕ ಅಂಶಗಳನ್ನು ಅದರೊಂದಿಗೆ ಕನ್ನಡ ಸಾಹಿತ್ಯ, ಕೊಂಕಣಿ, ಉರ್ದು, ಬ್ಯಾರಿ ಭಾಷೆ ಮತ್ತು ಇತ್ತೀಚಿನ ವರ್ಷಗಳಲ್ಲಿ ಮಲಯಾಳಂ ಭಾಷೆಯ ಸಾಹಿತ್ಯವೂ ಬೆಳವಣಿಗೆ ಹೊಂದುತ್ತಿರುವ ಬಗ್ಗೆ ಅಧ್ಯಯನ ಕೈಗೊಳ್ಳಲಾಗುವುದು.

### ೧.೩.೦ ಅಧ್ಯಯನ ವಿಧಾನ :

ಪುತ್ತೂರನ್ನು ಕೇಂದ್ರವಾಗಿಟ್ಟು ನಡೆಸುವ ಸಾಂಸ್ಕೃತಿಕ ಅಧ್ಯಯನ ಇದಾಗಿದೆ. ಈ ದೃಷ್ಟಿಯಿಂದ ಸಾಂಸ್ಕೃತಿಕ ಅಧ್ಯಯನಕ್ಕೆ ನೆರವಾಗುವ ಅಂಶಗಳನ್ನು ಗಮನಿಸಲಾಗುವುದು. ಪುತ್ತೂರಿನ

ಐತಿಹಾಸಿಕ ಹಿನ್ನೆಲೆ ಕುರಿತು ದೊರೆಯುವ ಆಕರಸಾಮಗ್ರಿಗಳ ಸಹಾಯದಿಂದ ಪುನರ್‌ರಚಿತ ಚರಿತ್ರೆಯನ್ನು ರೂಪಿಸಲು ಪ್ರಯತ್ನಿಸ ಲಾಗುವುದು. ಪ್ರಸ್ತುತ ಪುತ್ತೂರಿನಲ್ಲಿರುವ ಹಿರಿಯ ಸಾಹಿತಿಗಳ ಸಂದರ್ಶನ ನಡೆಸಿ ಅವರಿಂದ ಮಾಹಿತಿ ಸಂಗ್ರಹಿಸಲಾಗುವುದು. ಪುತ್ತೂರಿನಲ್ಲಿ ದೊರೆತ ಶಾಸನಗಳ ಅಧ್ಯಯನದಿಂದ ಇಲ್ಲಿಯ ಇತಿಹಾಸದ ಬಗ್ಗೆ ತಿಳಿದುಕೊಳ್ಳಲು ಪ್ರಯತ್ನಿಸಲಾಗುವುದು. ಸಾಂಸ್ಕೃತಿಕ ಅಭಿವ್ಯಕ್ತಿಯ ಅಂಶಗಳಾದ, ಭಾಷೆ, ಸಾಹಿತ್ಯ, ಲಲಿತ ಕಲೆ, ಜನಪದ, ಕಲಾ ಸಂಸ್ಥೆಗಳು ರಂಗ ಚಟುವಟಿಕೆಗಳು, ಕಲಾವಿದರು ಮುಂತಾದವುಗಳನ್ನು ಕುರಿತು ಪ್ರಕಟಿತಕೃತಿಗಳ ಮತ್ತು ಕ್ಷೇತ್ರಕಾರ್ಯದ ಮುಖೇನ ಅವಲೋಕಿಸಲಾಗುವುದು.

### ೧.೪.೦ ಇದುವರೆಗೆ ನಡೆದ ಅಧ್ಯಯನಗಳು :

ಪುತ್ತೂರು ತಾಲೂಕಿನ ಬಗ್ಗೆ ಹಲವು ವಿದ್ವಾಂಸರು ಅಧ್ಯಯನ ನಡೆಸಿದ್ದಾರೆ. ೧೯೩೧ರಲ್ಲಿ ಪಂಜೆ ಮಂಗೇಶರಾಯರು ಬರೆದ 'ಸ್ಥಳನಾಮ' ಎಂಬ ಲೇಖನದಲ್ಲಿ ಪುತ್ತೂರಿನ ಬಗ್ಗೆ ವಿವರಿಸಿದ್ದಾರೆ. ಪುತ್ತೂರು ವಿವೇಕಾನಂದ ಕಾಲೇಜಿನ ಇತಿಹಾಸ ಪ್ರಾಧ್ಯಾಪಕರಾದ ಪೀಟರ್ ವಿಲ್ಸನ್ ಪ್ರಭಾಕರ್ ಮತ್ತು ವಿಘ್ನೇಶ್ವರ ವರ್ಮುಡಿಯವರ 'ಪುತ್ತೂರು ತಾಲೂಕು ಇತಿಹಾಸ ದರ್ಪಣ' (೨೦೦೫) ಎಂಬ ಕೃತಿಯಲ್ಲಿ ಪುತ್ತೂರು ತಾಲೂಕಿನ ಇತಿಹಾಸವನ್ನು, ಪುತ್ತೂರಿನ ಪ್ರಮುಖ ಧಾರ್ಮಿಕ, ಶೈಕ್ಷಣಿಕ ಸಂಸ್ಥೆಗಳ ಕುರಿತಾಗಿ ಅಧ್ಯಯನ ನಡೆಸಿದ್ದಾರೆ. ವಸಂತಕುಮಾರ್ ಪೆರ್ಲ ಅವರು 'ಪುತ್ತೂರು ತಾಲೂಕು ದರ್ಶನ' (೧೯೮೬) ಎಂಬ ಕೃತಿಯಲ್ಲಿ ಪುತ್ತೂರಿನ ವಿಚಾರಗಳು ಮತ್ತು ಪುತ್ತೂರು ತಾಲೂಕಿನ ಸ್ಥಳನಾಮಗಳ ಕುರಿತಾಗಿ ವಿವರಿಸಿದ್ದಾರೆ. ವೈ ಉಮಾನಾಥ ಶೆಣೈ 'ಪುತ್ತೂರು ಕ್ಷೇತ್ರದ ಇತಿಹಾಸ' (೧೯೮೫) ಎಂಬ ಕೃತಿಯಲ್ಲಿ ಪುತ್ತೂರಿನ ಮಹಾಲಿಂಗೇಶ್ವರ ದೇವಸ್ಥಾನದ ಇತಿಹಾಸ, ಪುತ್ತೂರು ಎಂಬ ಹೆಸರು ಹೇಗೆ ಬಂತು? ಅದರ ಮೂಲವೇನು? ಮುಂತಾದವುಗಳ ಕುರಿತು ವಿಶ್ಲೇಷಿಸಿದ್ದಾರೆ. ಗಣಪತಿರಾವ್ ಐಗಳ 'ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ' (೧೯೨೨) ಎಂಬ ಕೃತಿಯಲ್ಲಿ ಪುತ್ತೂರಿನ ಬಗ್ಗೆ ಉಲ್ಲೇಖ ಮಾಡಿದ್ದಾರೆ. ವಿ. ಬಿ. ಅರ್ತಿಕಜೆಯವರ 'ಹೀಗೊಂದು ವೃತ್ತಾಂತ' ಎಂಬ ಕೃತಿಯಲ್ಲಿ ಪುತ್ತೂರಿನ ಬಾಲವನ, ಕನ್ನಡ ಸಂಘಗಳು ಮುಂತಾದವುಗಳ ಬಗ್ಗೆ ವಿವರಗಳಿವೆ. ಬೋಳಂತಕೋಡಿ ಈಶ್ವರಭಟ್, ವಿ. ಬಿ. ಅರ್ತಿಕಜೆ, ರಾಮಕೃಷ್ಣ ಪೆರುವಾಜೆಯವರು ಸಂಪಾದಿಸಿದ 'ಕನ್ನಡ ಸಂಘದ ದಶಕದ ಸಾಧನೆ' ಎಂಬ ಕೃತಿಯಲ್ಲಿ ಸಂತ ಫಿಲೋಮಿನಾ ಕಾಲೇಜಿನ ಕನ್ನಡಸಂಘದ ಹುಟ್ಟು ಮತ್ತು ಹತ್ತು ವರ್ಷಗಳ ಸಾಧನೆಯನ್ನು ಕುರಿತು ವಿವರಿಸಿದ್ದಾರೆ. ನರೇಂದ್ರ ರೈ ದೇರ್ಲ ಇವರ 'ಕನ್ನಡ ಸಂಘ ಬೆಳ್ಳಿ ಗುರುತು' ಎಂಬ ಕೃತಿಯಲ್ಲಿ ಫಿಲೋಮಿನಾ ಕಾಲೇಜಿನ ಕನ್ನಡಸಂಘದ ಪ್ರಾರಂಭದಿಂದ ೨೫ ವರ್ಷಗಳವರೆಗಿನ

ಸಾಧನೆಗಳ ಕುರಿತು ವಿವರಿಸಿದ್ದಾರೆ. ವಿವೇಕಾನಂದ ಕಾಲೇಜು ರಜತಮಹೋತ್ಸವ ಸ್ಮರಣ ಸಂಚಿಕೆ 'ಜಾಗೃತಿ'ಯಲ್ಲಿ ವಿವೇಕಾನಂದ ಕಾಲೇಜಿನ ಕನ್ನಡಸಂಘದ ಬಗ್ಗೆ ವಿವರಗಳಿವೆ. ಎನ್. ಎಸ್. ದೇವಿಪ್ರಸಾದ್ ಸಂಪಾಜೆಯವರ 'ಅಮರಸುಳ್ಯದ ಸ್ವಾತಂತ್ರ್ಯ ಸಮರ'ದಲ್ಲಿ (೧೯೯೯) ಪುತ್ತೂರಿನ ಕ್ರಾಂತಿಯ ಬಗ್ಗೆ ವಿವರಗಳಿವೆ. ಎ. ಸುಬ್ಬಣ್ಣ ರೈಯವರ 'ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು' (೧೯೯೪) ಕೃತಿಯಲ್ಲಿ ಪುತ್ತೂರಿನ ಬಗ್ಗೆ ಉಲ್ಲೇಖಗಳಿವೆ.

ಮುರಳೀಧರ ಉಪಾಧ್ಯ ಮತ್ತು ಪಿ. ಎನ್. ನರಸಿಂಹ ಮೂರ್ತಿಯವರು ಸಂಪಾದಿಸಿದ 'ದಕ್ಷಿಣಕನ್ನಡದ ದೇವಾಲಯಗಳು' ಕೃತಿಯಲ್ಲಿ ಪುತ್ತೂರಿನ ದೇವಸ್ಥಾನಗಳ ಬಗ್ಗೆ ವಿವರಗಳಿವೆ. ವಿ.ಬಿ. ಅರ್ತಿಕಜೆಯವರ 'ಅನನ್ಯ ಸಾಧಕ' ಕೃತಿಯಲ್ಲಿ ಪುತ್ತೂರಿನಲ್ಲಿ ಅನೇಕ ಶೈಕ್ಷಣಿಕ ಸಂಸ್ಥೆಗಳನ್ನು ಸ್ಥಾಪಿಸಿದ ಫಾ। ಆ್ಯಂಟನಿ ಪತ್ರಾವೊ ಅವರ ಬಗ್ಗೆ ವಿವರಗಳಿವೆ. ಕೆ. ಮೋಹನ್ ಕೃಷ್ಣ ರೈ ಯವರ 'ತುಳು ಸಂಸ್ಕೃತಿ'ಯಲ್ಲಿ ಪುತ್ತೂರಿನ ಸಾಂಸ್ಕೃತಿಕ ವಿಚಾರಗಳ ಬಗ್ಗೆ ವಿವರಗಳಿವೆ. ಅಮೃತ ಸೋಮೇಶ್ವರರ 'ತುಳುವ ಜಾನಪದದ ಕೆಲವು ನೋಟಗಳು' ಕೃತಿಯಲ್ಲಿ ಇಲ್ಲಿನ ಸಂಸ್ಕೃತಿಯನ್ನು ಕುರಿತು ವಿವರಿಸಿದ್ದಾರೆ.

ಕನ್ನಡ ವಿಷಯ ವಿಶ್ವಕೋಶದಲ್ಲಿ ಪುತ್ತೂರಿನ ಕೆಲವು ಸಾಹಿತಿಗಳ ಬಗ್ಗೆ ಉಲ್ಲೇಖಗಳಿವೆ. ಶೈಲಾವರ್ಮ ಅವರ 'ತುಳು ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಕೃತಿಯಲ್ಲಿ ಪುತ್ತೂರು ತಾಲೂಕಿನಲ್ಲಿ ದೊರೆತ ಶಾಸನಗಳನ್ನು ಅಧ್ಯಯನ ಮಾಡಿದ್ದಾರೆ. ಶ್ರೀಮತಿ ಆರ್ಯಾಂಬ ಪಟ್ಟಾಭಿಯವರ 'ಮಹಿಳಾ ಸಾಹಿತ್ಯ ಸಮೀಕ್ಷೆ'ಯಲ್ಲಿ ಪುತ್ತೂರಿನ ಮಹಿಳಾ ಸಾಹಿತಿಗಳ ಬಗ್ಗೆ ವಿವರಗಳಿವೆ.

ಪೀಟರ್‌ವಿಲ್ಸನ್ ಪ್ರಭಾಕರ್ ಬರೆದ 'ದಕ್ಷಿಣಕನ್ನಡದಲ್ಲಿ ಬಾಸೆಲ್‌ಮಿಷನ್' ಕೃತಿಯಲ್ಲಿ ಪುತ್ತೂರಿನಲ್ಲಿ ಬಾಸೆಲ್ ಮಿಷನ್ ಪ್ರಾರಂಭ ಮತ್ತು ಕಾರ್ಯಚಟುವಟಿಕೆಗಳ ಬಗ್ಗೆ ಉಲ್ಲೇಖಗಳಿವೆ. ಶ್ರೀಕೃಷ್ಣ ಭಟ್ ಅರ್ತಿಕಜೆ ಬರೆದ 'ಪ್ರತಿಭಾಲೋಕ' ಕೃತಿಯಲ್ಲಿ ಪುತ್ತೂರಿನ ಕೆಲವು ಸಾಹಿತಿಗಳ ವಿವರಗಳಿವೆ.

ದಕ್ಷಿಣ ಕನ್ನಡ ಜಿಲ್ಲಾ ಐದನೆಯ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆಗಳಾದ 'ಸ್ವಾಭಿಮಾನ' ಮತ್ತು 'ಅಭಿಮಾನ' ಕೃತಿಯಲ್ಲಿ ಪುತ್ತೂರಿನ ಸಾಹಿತಿಗಳ ಬಗ್ಗೆ ವಿವರಗಳಿವೆ. ನಾ. ಕಾರಂತ ಪೆರಾಜೆಯವರ 'ಶ್ರೇಣಿ ದರ್ಶನ'ದಲ್ಲಿ ಪುತ್ತೂರಿನ ಯಕ್ಷಗಾನದ ಬಗ್ಗೆ ಉಲ್ಲೇಖವಿದೆ. ಶ್ರೇಣಿ ಗೋಪಾಲಕೃಷ್ಣ ಭಟ್‌ರವರ 'ಯಕ್ಷಗಾನ ಮತ್ತು ನಾನು' ಕೃತಿಯಲ್ಲಿ ಪುತ್ತೂರಿನಲ್ಲಿ ಯಕ್ಷಗಾನ ಬೆಳೆದು ಬಂದ ವಿವರಗಳಿವೆ.

ಪಾಲ್ತಾಡಿ ರಾಮಕೃಷ್ಣ ಆಚಾರ್ ಬರೆದ 'ಜಾನಪದ ಪರಿಸರ', 'ಸಂವಹನ ಮಾಧ್ಯಮವಾಗಿ ಜನಪದ ಕುಣಿತಗಳು' ಕೃತಿಗಳಲ್ಲಿ ಇಲ್ಲಿನ ಜಾನಪದ ವಿಚಾರಗಳನ್ನು ಚರ್ಚಿಸಿದ್ದಾರೆ. ಹೀಗೆ ಪುತ್ತೂರಿನ ಬಗ್ಗೆ ಇಲ್ಲಿನ ಆಚಾರ-ವಿಚಾರಗಳ ಬಗ್ಗೆ ಹಲವು ವಿದ್ವಾಂಸರು ಅಧ್ಯಯನ ಮಾಡಿದ್ದಾರೆ.

**೧.೫.೦ ಅಧ್ಯಯನದ ಅಗತ್ಯ :**

ಪುತ್ತೂರಿನ ಬಗ್ಗೆ ಕೆಲವು ಪುಸ್ತಕಗಳಲ್ಲಿ ಅಲ್ಪಸ್ವಲ್ಪ ವಿಷಯಗಳು ಪ್ರಕಟವಾಗಿವೆ. ಅವುಗಳಲ್ಲಿ ಉಮಾನಾಥ ಶೆಣೈಯವರು ಬರೆದಿರುವ ಪುತ್ತೂರು ಕ್ಷೇತ್ರದ ಇತಿಹಾಸದಲ್ಲಿ ಪುತ್ತೂರಿನ ಮಹಾಲಿಂಗೇಶ್ವರ ದೇವಸ್ಥಾನದ ಹಿನ್ನೆಲೆ, ಪುತ್ತೂರು ಪದ ನಿಷ್ಪತ್ತಿ ಬಗ್ಗೆ ಇಲ್ಲಿ ದೊರೆತ ಕೆಲವು ಶಾಸನಗಳ ಬಗ್ಗೆ ಉಲ್ಲೇಖವಿದೆ. ಪೀಟರ್ ವಿಲ್ಸನ್ ಪ್ರಭಾಕರ್ ಹಾಗೂ ವಿಘ್ನೇಶ್ವರ ವರ್ಮುಡಿಯವರು ಬರೆದಿರುವ ಪುತ್ತೂರು ತಾಲೂಕು ಇತಿಹಾಸ ದರ್ಪಣದಲ್ಲಿ ಪುತ್ತೂರಿನ ಇತಿಹಾಸ, ಧಾರ್ಮಿಕ ಬದುಕು, ಕೈಗಾರಿಕೆ ಮತ್ತು ಸೇವಾಕ್ಷೇತ್ರದ ಬಗ್ಗೆ ವಿವರಣೆ ಇದೆ. ಈ ಎರಡು ಕೃತಿಗಳಲ್ಲೂ ಅಲ್ಪ ವಿವರಗಳು ದೊರೆಯುತ್ತವೆಯೇ ಹೊರತು ಪುತ್ತೂರಿನ ಸಾಂಸ್ಕೃತಿಕ ಮತ್ತು ಸಾಹಿತ್ಯ ಚಟುವಟಿಕೆಗಳ ಬಗ್ಗೆ ಸಂಪೂರ್ಣ ವಿವರಗಳಿಲ್ಲ. ಹಲವು ಲೇಖನಗಳು ಪುತ್ತೂರಿನ ಬಗ್ಗೆ ಬರೆದಿದ್ದರೂ ಅವುಗಳಿಂದಲೂ ಪೂರ್ಣ ಮಾಹಿತಿ ಲಭಿಸುವುದಿಲ್ಲ.

ಆದ್ದರಿಂದ ನನ್ನ ಅಧ್ಯಯನದಲ್ಲಿ ಪುತ್ತೂರು ಹೋಬಳಿಯ ಸಂಪೂರ್ಣ ಸಾಂಸ್ಕೃತಿಕ ಮತ್ತು ಸಾಹಿತ್ಯ ಅಂಶಗಳನ್ನು ಅಧ್ಯಯನಕ್ಕಾಗಿ ಕೈಗೊಳ್ಳಲಾಗಿದೆ. ಇಲ್ಲಿ ಹಿಂದೆ ಇದ್ದ ಹಾಗೂ ಪ್ರಸ್ತುತ ಇರುವ ಎಲ್ಲಾ ಸಾಹಿತಿಗಳ ಬಗ್ಗೆ ಮಾಹಿತಿ ಸಂಗ್ರಹಿಸಲಾಗಿದೆ. ಇಲ್ಲಿನ ಸಾಂಸ್ಕೃತಿಕ ಸಂಘ ಸಂಸ್ಥೆಗಳ ಬಗ್ಗೆಯೂ ಅಧ್ಯಯನ ಮಾಡಲಾಗಿದೆ. ಪುತ್ತೂರು ಕೇಂದ್ರದ ಸಾಂಸ್ಕೃತಿಕ ಚಟುವಟಿಕೆಗಳ ಸಮಗ್ರ ಅಧ್ಯಯನದ ದೃಷ್ಟಿಯಿಂದ ಈ ಅಧ್ಯಯನ ಅಗತ್ಯವಾಗಿದೆ.

ಪುತ್ತೂರು ಪ್ರದೇಶದಲ್ಲಿ ಜನರು ಆಡುವ ಭಾಷೆಗಳ ಕುರಿತು ನನ್ನ ಅಧ್ಯಯನದಲ್ಲಿ ವಿವರಿಸಲಾಗಿದೆ. ಪುತ್ತೂರು ಪ್ರದೇಶದಲ್ಲಿ ಪ್ರಮುಖವಾಗಿರುವ ತುಳು, ಕನ್ನಡ, ಕೊಂಕಣಿ, ಮಲಯಾಳಂ ಭಾಷೆಗಳೊಂದಿಗೆ ತುಳುವಿನ ಉಪಭಾಷೆಗಳ ಬಗ್ಗೆಯೂ ಇಲ್ಲಿ ಅಧ್ಯಯನ ಮಾಡಲಾಗಿದೆ. ಪುತ್ತೂರು ಪ್ರದೇಶದಲ್ಲಿ ಸುಮಾರು ೫೦ಕ್ಕಿಂತಲೂ ಅಧಿಕ ಸಾಹಿತಿಗಳಿದ್ದಾರೆ. ಇವರ ಬಗ್ಗೆಯೂ ಬಂದಿರುವ ಲೇಖನಗಳ ಹಿನ್ನೆಲೆಯಲ್ಲಿ ಹಾಗೂ ಪ್ರಸ್ತುತ ಸಾಹಿತಿಗಳ ಸಂದರ್ಶನ ಮಾಡಿ, ಅವರ ಸಾಹಿತ್ಯ ಕೊಡುಗೆಯನ್ನು ದಾಖಲಿಸಲಾಗಿದೆ. ಅಂತೆಯೇ ಸ್ವಾತಂತ್ರ್ಯಪೂರ್ವಕಾಲ ಹಾಗೂ ಸ್ವಾತಂತ್ರ್ಯೋತ್ತರ ಕಾಲದಲ್ಲಿ ಸಾಹಿತ್ಯ ಈ ಪ್ರದೇಶದಲ್ಲಿ ಯಾವ ರೀತಿ ಇತ್ತೆಂದು ಅಧ್ಯಯನ ಮಾಡಲಾಗಿದೆ.

ಪ್ರಸ್ತುತ ಪುತ್ತೂರು ತಾಲೂಕಿನಲ್ಲಿರುವ ಕನ್ನಡ, ಕೊಂಕಣಿ, ತುಳು, ಬ್ಯಾರಿ ಜನಪದ ಸಾಹಿತ್ಯ, ಯಕ್ಷಗಾನ, ತಾಳಮದ್ದಳೆ, ಕುಣಿತ ಮುಂತಾದ ಪ್ರದರ್ಶನ ಕಲೆಗಳ ಕುರಿತು ಹಾಗೂ ಭೂತಾರಾಧನೆಯ ಬಗ್ಗೆ ಸಮಗ್ರ ಅಧ್ಯಯನ ಕೈಗೊಳ್ಳಲಾಗಿದೆ. ಪುತ್ತೂರು ಪ್ರದೇಶದಲ್ಲಿ ಉಪಯೋಗಿಸುವ ಗೃಹ,ವಾದ್ಯ, ಕೃಷಿ, ಜನಪದ ಪರಿಕರಗಳ ಬಗ್ಗೆ ಅಧ್ಯಯನ ಮಾಡಲಾಗಿದೆ.

ಈ ಪ್ರದೇಶದ ವಿವಿಧ ಸಮುದಾಯದವರು ಆಚರಿಸುವ ಹಬ್ಬಗಳ ಬಗ್ಗೆ ವಿವರಿಸಲಾಗಿದೆ. ಪುತ್ತೂರಿನ ಜನಪದ ಐತಿಹ್ಯಗಳ ಬಗ್ಗೆ ಮಾಹಿತಿ ಸಂಗ್ರಹಿಸಲಾಗಿದೆ.

ಶಿವರಾಮ ಕಾರಂತರು ಪುತ್ತೂರಿಗೆ ಆಗಮಿಸಿ ಇಲ್ಲಿ ಅವರು ಮಕ್ಕಳಿಗಾಗಿ ಸ್ಥಾಪಿಸಿದ ಬಾಲವನ ಹಾಗೂ ಕರ್ನಾಟಕಸಂಘದ ಬಗ್ಗೆಯೂ ಅಧ್ಯಯನ ಕೈಗೊಳ್ಳಲಾಗಿದೆ. ಇಲ್ಲಿರುವ ಇತರ ಕನ್ನಡಸಂಘ ಗಳಾದ ಸಂತ ಫಿಲೋಮಿನಾ ಕಾಲೇಜು ಕನ್ನಡಸಂಘ ಮತ್ತು ವಿವೇಕಾನಂದ ಕಾಲೇಜು ಕನ್ನಡ ಸಂಘಗಳು ಯಾವ ರೀತಿ ಕನ್ನಡ ಸಾಹಿತ್ಯಕ್ಕೆ ಪ್ರೋತ್ಸಾಹ ನೀಡುತ್ತಿವೆ ಎಂಬ ಬಗ್ಗೆಯೂ ಅಧ್ಯಯನ ಮಾಡಲಾಗಿದೆ. ಪುತ್ತೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಘಟಕ ಇದ್ದು ಕನ್ನಡ ಸಾಹಿತ್ಯ ಅಭಿವೃದ್ಧಿಗೆ ಹೇಗೆ ಶ್ರಮಿಸುತ್ತಿದೆ ಎಂಬ ಬಗ್ಗೆಯೂ ವಿವರಿಸಲಾಗಿದೆ. ಪುತ್ತೂರಿನಲ್ಲಿರುವ ಕಲಾ ಸಂಸ್ಥೆಗಳು, ಕಲಾ ಮೇಳಗಳ ಬಗ್ಗೆ ಹಾಗೂ ಇಲ್ಲಿನ ಕಲಾವಿದರ ಬಗ್ಗೆಯೂ ಅಧ್ಯಯನ ಮಾಡಲಾಗಿದೆ. ಹೀಗೆ ಪುತ್ತೂರು ಕೇಂದ್ರದ ಸಮಗ್ರ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಅಧ್ಯಯನದ ದೃಷ್ಟಿಯಲ್ಲಿ ನನ್ನ ಸಂಶೋಧನೆ ಮಹತ್ವ ಪಡೆದಿದೆ.

## ಅಡಿ ಟಿಪ್ಪಣಿ

೧. ಸಪ್ತಪದಿ : ಪುತ್ತೂರು ತಾಲೂಕು ೬ನೇ ಸಾಹಿತ್ಯ ಸಮ್ಮೇಳನದ ಸ್ಮರಣಸಂಚಿಕೆ – ಪುಟ ೩೨

೨. ಪುತ್ತೂರು ಕ್ಷೇತ್ರದ ಇತಹಾಸ – ವೈ ಉಮಾನಾಥ ಶೆಣ್ಯೆ – ಪುಟ ೨

೩. ಪುತ್ತೂರು ತಾಲೂಕು ಇತಿಹಾಸ ದರ್ಪಣ : ಪೀಟರ್ ವಿಲ್ಸನ್ ಪ್ರಬಾಕರ್

– ಪುಟ ೨೯

೪. ಪಡಿದನಿ : ಶ್ರೀಕೃಷ್ಣ ಭಟ್ ಅರ್ತಿಕಜೆ – ಪುಟ ೩೨

೫. ಸ್ವರ್ಣರೇಖೆ ೧೨ನೆ ಪುತ್ತೂರು ತಾಲೂಕು ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ

– ಪುಟ ೧೯

# ಅಧ್ಯಾಯ - ೨

೨.೧. ಸಂಸ್ಕೃತಿಯ ನಿರ್ವಚನ,

೨.೨ ಸಾಂಸ್ಕೃತಿಕ ಅಧ್ಯಯನದ ಸ್ವರೂಪ

೨.೩. ಪುತ್ತೂರಿನ ಇತಿಹಾಸ (ಶಾಸನಗಳು, ಐತಿಹಾಸಿಕ, ಭೌಗೋಳಿಕ ಸ್ಥಳಗಳು)

# ಅಧ್ಯಾಯ – ೨

## ೨.೧.೦ ಸಂಸ್ಕೃತಿಯ ನಿರ್ವಚನ, ಪುತ್ತೂರು ಪದ ನಿಷ್ಪತ್ತಿ, ಪುತ್ತೂರಿನ ಇತಿಹಾಸ

'ಸಂಸ್ಕೃತಿ' ಎಂಬ ಶಬ್ದವು 'ಸಂಸ್ಕೃತ', 'ಸಂಸ್ಕಾರ' ಮುಂತಾದವು ಹುಟ್ಟಿದ ಮೂಲದಿಂದಲೇ ಹುಟ್ಟಿದೆ. ಸಂಸ್ಕಾರ ಅಥವಾ ಸಂಸ್ಕೃತ ಎಂದರೆ ಸುಧಾರಿಸಿದ, ನಯಗೊಳಿಸಿದ, ಪವಿತ್ರಗೊಳಿಸಿದ, ಪರಿಶುದ್ಧಗೊಳಿಸಿದ, ಶ್ರೇಷ್ಠವಾದ ಮುಂತಾದ ಅರ್ಥಗಳಿವೆ[೧]. ಈ ಅರ್ಥಗಳ ಹಿನ್ನೆಲೆಯಲ್ಲಿ ಗಮನಿಸಿದರೆ, ಕಚ್ಚಾತನದಿಂದ ಬೇರ್ಪಡಿಸುವ, ಸುಧಾರಿಸುವ, ಶ್ರೇಣೀಕರಿಸುವ ಮತ್ತು ಪವಿತ್ರೀಕರಿಸುವ ಕ್ರಿಯೆಗಳು ಮುಖ್ಯವಾಗಿವೆ.

ನಂತರದ ಒಂದು ಘಟ್ಟದಲ್ಲಿ 'ಸಂಸ್ಕೃತಿ' ಎಂದರೆ 'ಸಮುದಾಯ ಒಂದರ ಸಮಗ್ರ ಜೀವನ ವಿಧಾನಗಳ ಮೊತ್ತ' ಎಂಬ ವ್ಯಾಖ್ಯೆ ಪ್ರವೇಶಿಸಿತು. ಇದು ಮಾನವ ಶಾಸ್ತ್ರೀಯ ಅಧ್ಯಯನಗಳಿಂದ ಹುಟ್ಟಿ ಬಂದುದಾಗಿತ್ತು. ಸಮುದಾಯವೊಂದರ ಜೀವನ ವಿಧಾನ ಎಂದರೆ, ಉಡುವ ಬಟ್ಟೆ, ಉಣ್ಣುವ ಊಟ, ಆಡುವ ಮಾತು, ಮಾಡುವ ಆಚರಣೆ, ನಂಬಿದ ನಂಬಿಕೆ ಮುಂತಾಗಿ ಇಡೀ ಬದುಕಿನ ವಿವರಗಳನ್ನು ಒಳಗೊಳ್ಳುತ್ತದೆ.

ಸಂಸ್ಕೃತಿ ಶಬ್ದಕ್ಕೆ 'ಮಾನಸಿಕ ಪಕ್ವತೆ', 'ಒಂದು ದೇಶದ ಅಥವಾ ಜನಾಂಗದ ಮಾನಸಿಕ ಸಾಧನೆ' ಎಂಬ ಅರ್ಥಗಳನ್ನು ನಿಘಂಟುಗಳು ಕೊಡುತ್ತವೆ[೨]. ಆದರೆ ಈ ಅರ್ಥಗಳೆಲ್ಲ ಈಚೆಗೆ ಸೇರಿದಂತಹವು. ಕಿಟೆಲ್ ತನ್ನ ನಿಘಂಟು ರಚಿಸಿದಾಗ (೧೮೯೪) 'ಸಂಸ್ಕೃತಿ' ಶಬ್ದಕ್ಕೆ ಈ ಯಾವ ಅರ್ಥಗಳೂ ಇರಲಿಲ್ಲ. ಅವನು 'ಸಂಸ್ಕಾರ' ಎಂದಷ್ಟೇ ದಾಖಲಿಸುತ್ತಾನೆ. 'ಸಂಸ್ಕಾರ'ಕ್ಕೆ ಶುದ್ಧೀಕರಿಸುವ ಪವಿತ್ರೀಕರಿಸುವ ಅರ್ಥಗಳನ್ನು ಕೊಡುತ್ತಾನೆ. ಎಲ್ಲೂ ಕೂಡ 'ಸಂಸ್ಕೃತಿ'ಗೆ 'ಒಂದು ಸಮುದಾಯದ ಜೀವನಕ್ರಮಗಳ ಮೊತ್ತ ಎಂದರ್ಥ ನೀಡುವುದಿಲ್ಲ. ಇದಕ್ಕೆ ಕಾರಣ ಸ್ಪಷ್ಟವಾಗಿದೆ. ಅವನ ಕಾಲಕ್ಕೆ ಕನ್ನಡದಲ್ಲಿ 'ಸಂಸ್ಕೃತಿ' ಶಬ್ದವು ಈಗಿನ ಅರ್ಥಗಳಲ್ಲಿ ಬಳಕೆಯಾಗುತ್ತಿರಲಿಲ್ಲ. 'ಸಂಸ್ಕೃತಿ'ಗೆ ಇಂಗ್ಲಿಷಿನ ಸಂವಾದಿ ಪದವಾಗಿರುವ 'ಕಲ್ಚರ್' ಎಂಬುದು ಲ್ಯಾಟಿನ್ ಭಾಷೆಯ 'ಕಲ್ಟ್' ಅಥವಾ 'ಕಲ್ಟಸ್' ಎಂಬ ಶಬ್ದದಿಂದ ಬಂದಿದೆ. ಈ ಶಬ್ದಗಳಿಗೆ ಮೂಲದಲ್ಲಿ ಭೂಮಿದೈವದ ಆರಾಧನೆ, ಪೈರು ಬೆಳೆವುದು ಎಂಬ ಅರ್ಥಗಳಿವೆ. ಈಗಲೂ ಧಾರ್ಮಿಕ ಪಂಥಗಳಿಗೆ ಬಳಕೆಯಾಗುವ 'ಕಲ್ಟ್' ಎಂಬ ಶಬ್ದದಲ್ಲಿ ಪೂಜೆ ಆಚರಣೆಗಳಿವೆ. ಇದು ಪೂಜೆಯಂತಹ ಆಚರಣೆಗೂ ಕೃಷಿಗೂ ಪ್ರಾಚೀನ ಕಾಲದಲ್ಲಿ ಇದ್ದ ಸಂಬಂಧದ ಸಂಕೇತ, ಕೃಷಿ ಮಾಡುವಿಕೆಗೆ ಸಂಬಂಧಿಸಿದ ಈ ಶಬ್ದವನ್ನು ಬಳಸಿಕೊಂಡು ಸಾಗುವಳಿ,

ವ್ಯವಸಾಯ (ಅಗ್ರಿಕಲ್ಚರ್), ಮೀನು ಸಾಕಣೆ, ರೇಶ್ಮೆ, ಜೇನು ಮುಂತಾದ ಹುಳು ಸಾಕಣೆ (ಸೆರಿಕಲ್ಚರ್) ಮಾಡುವ ಪದಗಳು ಹುಟ್ಟಿಕೊಂಡವು. ತಳಿ ವಿಜ್ಞಾನ ಹಾಗೂ ಸಸ್ಯಶಾಸ್ತ್ರಗಳು ಈಗಲೂ 'ಕಲ್ಚರ್' ಶಬ್ದವನ್ನು ಇದೇ ಅರ್ಥದಲ್ಲಿ ಬಳಸುತ್ತಿವೆ.

ತನ್ನ ಹುಟ್ಟಿನ ಮೂಲದಲ್ಲಿ 'ಕಲ್ಚರ್' ಶಬ್ದಕ್ಕೆ ಈಗ ಬಳಸುತ್ತಿರುವ ಅರ್ಥಗಳಿರಲಿಲ್ಲ ಎನ್ನುವುದನ್ನು ಈ ಮಾಹಿತಿ ಸೂಚಿಸುತ್ತದೆ. ಇದ್ದಕ್ಕಿದ್ದಂತೆ 'ಬೆಳೆಯುವ' ಎಂಬರ್ಥದ ಜತೆಗೆ ಮೊದಲ ಹಂತದಲ್ಲಿ 'ಶ್ರೇಷ್ಠ ಜೀವನಾದರ್ಶ' ಎಂಬರ್ಥ ಸೇರಿತು. ನಂತರ ಸಾಹಿತ್ಯ, ಸಂಗೀತ, ಚಿತ್ರಕಲೆಗೆ ಸಂಬಂಧಿಸಿದ ಅರ್ಥಗಳು ಸೇರಿಕೊಂಡವು. ನಂತರ ಸಮುದಾಯದ ಸಮಸ್ತ ಜೀವನವಿವರಗಳು ಎಂಬರ್ಥ ಸೇರಿತು. ಗಮನಾರ್ಹ ಸಂಗತಿಯೆಂದರೆ, ಇಂಗ್ಲಿಷ್ ಹಾಗೂ ಭಾರತೀಯ ಭಾಷೆಗಳಲ್ಲಿ 'ಸಂಸ್ಕೃತಿ' ಹಾಗೂ 'ಕಲ್ಚರ್' ಎಂಬ ಶಬ್ದಗಳು. ತಮ್ಮ ಭಾಷಿಕ ಮೂಲದಲ್ಲಿ ಬೇರೆಬೇರೆ ಅರ್ಥಗಳನ್ನೇ ಹೊಂದಿರುವುದು. ಒಂದೆಡೆ ಬೆಳೆಯವುದು ಎಂದರ್ಥವಿದೆ. ಮತ್ತೊಂದೆಡೆ ಶುದ್ಧೀಕರಿಸುವುದು ಎಂಬರ್ಥವಿದೆ. ಎರಡೂ ಕಡೆಯ ಮೂಲಗಳಲ್ಲಿ 'ನಮ್ಮ ಪ್ರಾಚೀನರ ಜೀವನ ಸಾಧನೆ' ಎಂಬರ್ಥವಿಲ್ಲ. ಇದರಿಂದ ನಾಲ್ಕು ಸಂಗತಿಗಳು ತಿಳಿಯುತ್ತವೆ.

ಅ. 'ಸಂಸ್ಕೃತಿ' ಎಂಬುದು ಮೂಲತಃ ಒಂದು ರಚನೆ ಬೌದ್ಧಿಕವಾಗಿ ರೂಪಿಸಿಕೊಂಡ ಒಂದು ಪರಿಕಲ್ಪನೆ.

ಆ. ಈ ಶಬ್ದ ಅಥವಾ ಪರಿಭಾಷೆ ಬಳಕೆಗೆ ಬಂದಿದ್ದು ೧೯ನೇ ಶತಮಾನದಲ್ಲಿ ಈ ಬಳಕೆಗೆ ಹೆಚ್ಚೆಂದರೆ ಎರಡು ಶತಮಾನದ ಇತಿಹಾಸವಿದೆ. ಕನ್ನಡದಲ್ಲಿ ಸುಮಾರು ಎಂಟು ದಶಕಗಳ ಇತಿಹಾಸವಿದೆ. ೨೦ನೇ ಶತಮಾನದ ಕೊನೆಯ ಭಾಗದಿಂದ ಇದರ ಬಳಕೆ ಬಹಳ ಹೆಚ್ಚಾಯಿತು.

ಇ. 'ಸಂಸ್ಕೃತಿ' ಎಂಬ ಶಬ್ದ ಕೇಳಿದಾಗ ಮನಸ್ಸಿನಲ್ಲಿ ಮೂಡುವ 'ಧಾರ್ಮಿಕ ಆದರ್ಶಗಳು', 'ಗತಕಾಲದಲ್ಲಿ ಪೂರ್ವಜರು ಮಾಡಿದ ಸಾಧನೆ' ಇತ್ಯಾದಿ ಜನಪ್ರಿಯ ಮತ್ತು ಭಾವನಾತ್ಮಕ ಅರ್ಥಗಳ ಜತೆಯಲ್ಲೇ, ಅನೇಕ ಕಾಲಘಟ್ಟಗಳಲ್ಲಿ ಇದು ಬೇರೆ ಬೇರೆ ಅರ್ಥಗಳನ್ನು ಪಡೆದುಕೊಳ್ಳುತ್ತ ಬಂದಿದೆ. 'ಸಾಂಸ್ಕೃತಿಕ ಅಧ್ಯಯನದ ವಿಷಯಕ್ಕೆ ಬಂದರೆ ಸದ್ಯಕ್ಕೆ ಇದು ಬಹು ಶಿಸ್ತೀಯ ಪರಿಶೀಲನೆ ಎಂಬರ್ಥದಲ್ಲಿ ಚಾಲ್ತಿಯಲ್ಲಿದೆ.

ಈ. 'ಸಂಸ್ಕೃತಿ' ಶಬ್ದವು ಇಂಗ್ಲಿಷಿನ 'ಕಲ್ಚರ್' ಎಂಬುದಕ್ಕೆ ಪರ್ಯಾಯವಾಗಿ ಭಾರತದಲ್ಲಿ ೨೦ನೇ ಶತಮಾನದಲ್ಲಿ ರೂಪುಗೊಂಡ ಪರ್ಯಾಯ ಪದ. ಆದರೆ ಪಶ್ಚಿಮದಲ್ಲಿ 'ಕಲ್ಚರ್' ಪಡೆದುಕೊಂಡ ಎಲ್ಲ ಬದಲಾವಣೆಗಳನ್ನು ಇದು ಪಡೆದುಕೊಳ್ಳಲಿಲ್ಲ[೩]. ಹೆಚ್ಚಿನ ಅಧ್ಯಯನಕಾರರು 'ಸಂಸ್ಕೃತಿ' ಶಬ್ದವನ್ನು ನಿರ್ದಿಷ್ಟ ಅರ್ಥವಿಲ್ಲದೆ ಬಳಸುತ್ತಾರೆ. ವಿಚಿತ್ರ ಎಂದರೆ, ಸಂಸ್ಕೃತಿಚಿಂತಕರೆಂದು ಖ್ಯಾತರಾದ ಕೆಲವರು ಈ ಶಬ್ದವನ್ನೇ ಬಳಸುವುದಿಲ್ಲ. ಉದಾಹರಣೆಗೆ ರಾಜಕಾರಣಿಯೂ ಸಂಸ್ಕೃತಿ

ಚಿಂತಕರೂ ಆದ ರಾಮಮನೋಹರ ಲೋಹಿಯಾ ಅವರ ಬರಹಗಳಲ್ಲಿ 'ಸಂಸ್ಕೃತಿ' ಎಂಬ ಶಬ್ದದ ಬಳಕೆಯೇ ಇಲ್ಲ. ಅಂಬೇಡ್ಕರ್ ಕೂಡ 'ಸಂಸ್ಕೃತಿ' ಪರಿಕಲ್ಪನೆಯನ್ನು ಬಳಸುವುದು ಕಡಿಮೆ.

ಹೀಗೆ 'ಸಂಸ್ಕೃತಿ' ಶಬ್ದವು ತನ್ನ ಚರಿತ್ರೆಯನ್ನು ಪಡೆದುಕೊಂಡು ಬಂದ ಅರ್ಥಗಳನ್ನು ಹಾಗೂ ಅದು ಬಳಕೆಯಾದ ರೀತಿಯನ್ನು ಕಾಣುವಾಗ, ಅದೊಂದು ಸಾಮಾಜಿಕ, ರಾಜಕೀಯ, ಆರ್ಥಿಕ ವಿಚಾರಗಳನ್ನು ಹೇಳಲು ಸಜ್ಜುಗೊಂಡ ಪರಿಭಾಷೆ ಎಂದು ಗೊತ್ತಾಗುತ್ತದೆ. ಈ ಶಬ್ದವು ಆಧುನಿಕ ಕಾಲದ ಒಂದು ಪರಿಕಲ್ಪನೆ ಮತ್ತು ರಚನೆಯಾಗಿರುವುದು. ಇದಕ್ಕೆ ಸರ್ವಸಮ್ಮತವಾದ ಒಂದು ಅರ್ಥವೆಂಬುದು ಇಲ್ಲ. ಹಾಗೆಂದು ಇದನ್ನು ನಮ್ಮ ಬೌದ್ಧಿಕ ಚರ್ಚೆಗಳಿಂದಲಾಗಲಿ, ರಾಜಕಾರಣದಿಂದಾಗಲಿ ಹೊರಹಾಕಲು ಸಾಧ್ಯವಿಲ್ಲ ಹಾಕಬೇಕಾದ ಅಗತ್ಯವೂ ಇಲ್ಲ. ಬದಲಿಗೆ ಇದು ಯಾವ್ಯಾವ ಅರ್ಥಗಳಲ್ಲಿ ಬಳಕೆಯಾಗುತ್ತಿದೆ. ನಾವು ಯಾವ ಅರ್ಥದಲ್ಲಿ ಇದನ್ನು ಬಳಸುತ್ತಿದ್ದೇವೆ ಎಂಬ ತಿಳುವಳಿಕೆ ಮತ್ತು ತಾತ್ವಿಕ ಖಚಿತತೆ ಇರಬೇಕು. ಈ ಹಿನ್ನೆಲೆಯಲ್ಲಿ 'ಸಂಸ್ಕೃತಿ' ಎಂದರೆ ಸದ್ಯಕ್ಕೆ ಈ ಕೆಳಕಂಡಂತೆ ಅರ್ಥ ಕೊಟ್ಟು ಇದನ್ನು ಬಳಸಬಹುದು.

ಅ. 'ಸಂಸ್ಕೃತಿ' ಎಂಬುದು ಒಂದು ಸಮುದಾಯ ಬದುಕುವ, ಆಲೋಚಿಸುವ ಸಮಸ್ತ ಆಯಾಮಗಳನ್ನು ಒಳಗೊಳ್ಳುವ ಒಂದು ಪರಿಭಾಷೆ.

ಆ. 'ಸಮುದಾಯ' ಎಂದಾಗ ಒಂದು ಗುಂಪಲ್ಲ, ಹಲವಾರು ಗುಂಪುಗಳಿರುತ್ತವೆ. ಈ ಎಲ್ಲ ಗುಂಪುಗಳ ನಂಬಿಕೆ ಆಚರಣೆಗಳೂ ಒಟ್ಟು ಸೇರಿಯೆ ಅದರ ಸಂಸ್ಕೃತಿ.

ಇ. ಇದೇ ರೀತಿ ಇಡೀ ನಾಡಿಗೆ ಏಕರೂಪಿಯಾದ ಒಂದು ಸಂಸ್ಕೃತಿ ಇರುವುದಿಲ್ಲ. ಅದರೊಳಗೆ ಪ್ರಾದೇಶಿಕ, ಜಾತೀಯ, ಧಾರ್ಮಿಕ, ಬುಡಕಟ್ಟಿನ ರೂಪಗಳಿರುತ್ತದೆ. ಭಾರತದಂತಹ ದೇಶದಲ್ಲಿ ಇದು ಸಹಜ, ಇದನ್ನು ಸಂಸ್ಕೃತಿಯ ಬಹುರೂಪಿ ಗುಣ ಎನ್ನಬಹುದು.

ಈ. ನಾಡಿನ ಈ ಬಹುರೂಪಿ ಸಂಸ್ಕೃತಿಗಳ ಒಳಗೆ ಬಹುಕಾಲದಿಂದಲೂ ಕೊಡುಕೊಳ್ಳು ನಡೆಯುತ್ತ ಬಂದಿದೆ. ನಾಡಿನ ಒಳಗಿನಿಂದ ಮಾತ್ರವಲ್ಲ, ಹೊರಗಿನಿಂದಲೂ ಕೊಡುಕೊಳ್ಳುವಿಕೆ ನಡೆದಿವೆ. ಈ ಕೊಡುಕೊಳ್ಳುವಿಕೆಗಳಿಗೆ ಅನೇಕ ಚಾರಿತ್ರಿಕ ಕಾರಣಗಳಿವೆ. ಸಾಮಾಜಿಕ, ರಾಜಕೀಯ, ಆರ್ಥಿಕವಾದ ಚಲನೆಗಳು ಕಾರಣವಾಗಿವೆ. ಆದ್ದರಿಂದ 'ಶುದ್ಧ', 'ಮೂಲ' ಸಂಸ್ಕೃತಿ ಎಂಬುದು ಇರಲು ಸಾಧ್ಯವಿಲ್ಲ.

ಉ. ಸಂಸ್ಕೃತಿ ಎಂಬುದು ಹಿಂದೆ ಹಿರೀಕರು ಕಟ್ಟಿಟ್ಟುಹೋದ ಬುತ್ತಿಯಲ್ಲ. ಅದು ಉದ್ದಕ್ಕೂ ಬದಲಾಗುತ್ತ ಬಂದಿದ್ದು, ನಮ್ಮ ಕಾಲದಲ್ಲಿ ನಿರ್ಧಿಷ್ಟ ರೂಪದಲ್ಲಿ ಅಸ್ತಿತ್ವದಲ್ಲಿದೆ. ನಮ್ಮ ಬದುಕಿನಂತೆ ಅಥವಾ ಸಮಾಜದಂತೆ ಇದು ಕೂಡ ಚಲನಶೀಲ ಇದನ್ನು ಕೆಡದಂತೆ ರಕ್ಷಿಸಿಕೊಂಡು ಬರುವುದು

ಸಾಧ್ಯವಿಲ್ಲ. ಇದಕ್ಕೆ ಪ್ರತಿ ತಲೆಮಾರು ಕೂಡ ತನ್ನದನ್ನು ಕೂಡಿಸಿ ರೂಪಾಂತರ ಮಾಡುತ್ತ ಹೋಗುತ್ತದೆ.

ಊ. ಸಂಸ್ಕೃತಿಯಲ್ಲಿ ತರತಮ ಎಂಬುದಿಲ್ಲ. ನೈತಿಕವಾಗಿ ಕೆಟ್ಟ – ಒಳ್ಳೆಯ ವಿಕಾಸದ ದೃಷ್ಟಿಯಿಂದ ಹಿಂದುಳಿದ – ಮುಂದುವರಿದ, ಶ್ರೇಣೀಕರಣದ ನೆಲೆಯಿಂದ ಮೇಲು–ಕೀಳು ಎಂಬ ಪರಿಭಾಷೆಯಲ್ಲಿ ಇದನ್ನು ಅಳೆಯಲು ಸಾಧ್ಯವಿಲ್ಲ. ಸಮುದಾಯಗಳ ಎಲ್ಲ ಬಗೆಯ ನಂಬಿಕೆ, ಆಚರಣೆಗಳನ್ನು ಸಂಸ್ಕೃತಿ ಎಂದು ಒಪ್ಪಿಕೊಳ್ಳಬೇಕು.

ಎ. ಸಂಸ್ಕೃತಿ ಪರಿಕಲ್ಪನೆ ಮೂಲತಃ ಒಂದು ರಾಜಕೀಯ, ಆರ್ಥಿಕ, ಸಾಮಾಜಿಕವಾದ ಲೋಕ ದೃಷ್ಟಿಯನ್ನು ಸೂಚಿಸುವ ಸೈದ್ಧಾಂತಿಕ ಪರಿಭಾಷೆ. ಅದನ್ನು ಧಾರ್ಮಿಕವಾಗಿ ಪವಿತ್ರವೆಂಬ ಭಾವನೆಯಲ್ಲಿ ಬಳಸುವಾಗಲೂ ಅದು ನಿರ್ಧಿಷ್ಟ ರಾಜಕೀಯ, ಆರ್ಥಿಕ, ಸಾಮಾಜಿಕ ಚಿಂತನೆಯನ್ನು ಒಳಗೊಂಡಿರುತ್ತದೆ. ಆದ್ದರಿಂದ ಸಂಸ್ಕೃತಿಯು ರಾಜಕಾರಣದ ಗುಪ್ತಭಾಷೆಯಾಗಿದೆ. ಇಲ್ಲಿ ರಾಜಕಾರಣ ಎಂದರೆ, ಸಾಮಾಜಿಕ ಆರ್ಥಿಕವಾದ ತಾತ್ವಿಕತೆಯಾಗಿದೆ[೪].

ಆದ್ದರಿಂದ ಸಂಸ್ಕೃತಿ ಎಂಬುದನ್ನು ಸಾಮಾನ್ಯವಾಗಿ ಜನರ ಬದುಕುವ ರೀತಿ ಅಂದರೆ ಅವರ ಹವ್ಯಾಸಗಳು, ಅವರ ಆಚರಣೆಗಳು, ಅವರ ಊಟೋಪಚಾರ, ತೊಡುವ ಬಟ್ಟೆ, ಆಡುವ ಮಾತು, ಅವರ ಧಾರ್ಮಿಕ ನಂಬಿಕೆಗಳು, ಮುಂತಾದುವೆಲ್ಲವನ್ನು ಒಟ್ಟಾಗಿ ಆ ಜನರ ಸಂಸ್ಕೃತಿ ಎಂದು ಕರೆಯಬಹುದು.

ಈ ಸಂಸ್ಕೃತಿಯು ಒಂದು ಭಾಗದ ಜನರಿಗೆ ಅವರ ಹಿರಿಯರಿಂದ ಬಂದದ್ದು, ಹಿರಿಯರು ತಮ್ಮ ಆಚಾರ–ವಿಚಾರಗಳನ್ನು ಅವರಿಂದ ಅವರ ಮುಂದಿನ ಪೀಳಿಗೆಗೆ ಕಲಿಸಿ ಕೊಡುತ್ತಾರೆ. ಇಲ್ಲವೇ ಅದನ್ನು ನೋಡಿ ಕಿರಿಯರು ಕಲಿಯತ್ತಾರೆ. ಇದರಿಂದ ಸಂಸ್ಕೃತಿಯು ಒಂದು ಜನಾಂಗದಲ್ಲಿ ಮುಂದುವರಿದು ಕೊಂಡು ಹೋಗುತ್ತದೆ. ಕೆಲವೊಮ್ಮೆ ಇಲ್ಲಿ ಅಲ್ಪ ಸ್ವಲ್ಪ ಬದಲಾವಣೆಗಳೂ ಆಗಬಹುದು. ಈ ಬದಲಾವಣೆಗೆ ಪ್ರಮುಖ ಕಾರಣಗಳು ಹೀಗಿವೆ,

೧. **ವಿದ್ಯಾಭ್ಯಾಸ :** ಹಳ್ಳಿಯಲ್ಲಿರುವ ಒಂದು ಸಮುದಾಯದ ಜನರು ಅನೇಕ ವರ್ಷಗಳಿಂದ ಒಂದೇ ತೆರನಾದ ಸಂಸ್ಕೃತಿಯನ್ನು ಆಚರಿಸುತ್ತಾ ಬಂದಿದ್ದರೂ, ಅವರ ಮಕ್ಕಳನ್ನು ವಿದ್ಯಾಭ್ಯಾಸಕ್ಕಾಗಿ ಕಳುಹಿಸಿದಾಗ, ಅವರ ಮಕ್ಕಳಲ್ಲಿ ವಿದ್ಯೆಯಿಂದ ಯೋಚಿಸುವ ರೀತಿ ಬದಲಾಗಿ ತಮ್ಮ ತಂದೆ–ತಾಯಿಯಂತೆಯೇ ನಾವೂ ಏಕೆ ನಂಬಬೇಕು, ಅವರ ನಂಬಿಕೆಗಳು ತಪ್ಪು, ನಾವು ಕಲಿತ ಪ್ರಕಾರ ಈ ರೀತಿ ಇರಬೇಕಾಗಿಲ್ಲ ಎಂದು ಯೋಚಿಸಿ ಸಂಸ್ಕೃತಿಯ ಬದಲಾವಣೆಗೆ ಕಾರಣವಾಗಬಹುದು.

೨. **ಮಾಧ್ಯಮದ ಪ್ರಭಾವ :** ಪ್ರಸ್ತುತ ಮಾಧ್ಯಮಗಳು ವ್ಯಕ್ತಿಗಳ ಮೇಲೆ ಬಹುವಾಗಿ ಪರಿಣಾಮ ಬೀರುತ್ತವೆ. ಟಿ.ವಿ ನೋಡುವುದರಿಂದ, ರೇಡಿಯೋದಲ್ಲಿ ಬರುವ ಕಾರ್ಯಕ್ರಮಗಳನ್ನು ಆಲಿಸುವುದರಿಂದ

ಜನರು ತಮ್ಮ ನಡೆ-ನುಡಿಯಲ್ಲಿ, ಬದುಕುವ ರೀತಿಯಲ್ಲಿ ಕೆಲವು ಬದಲಾವಣೆಗಳಿಗೆ ಒಳಗಾಗುತ್ತಾರೆ. ಇದರಿಂದ ಅವರ ಹಿಂದಿನ ಸಂಸ್ಕೃತಿಯಲ್ಲಿ ಕೆಲವು ಬದಲಾವಣೆಗಳಾಗುತ್ತವೆ.

೩. **ಉದ್ಯೋಗ :** ಉದ್ಯೋಗದ ನಿಮಿತ್ತವಾಗಿಯೂ ಜನರು ಬದುಕುವ ರೀತಿ ಬದಲಾಗುತ್ತದೆ. ಅದುವರೆಗೆ ಕೃಷಿ ಕುಟುಂಬದಲ್ಲಿರುವ ವ್ಯಕ್ತಿ ಶಿಕ್ಷಣ ಪಡೆದು ಬೇರೆ ಸರಕಾರಿ ಅಥವಾ ಇತರ ವೃತ್ತಿ ಮಾಡಿದಾಗ ಸಹಜವಾಗಿ ಅವನ ದಿನಚರಿ ಆಚಾರ-ವಿಚಾರಗಳು ಹಾಗೂ ಬದುಕುವ ರೀತಿ ಬದಲಾಗುತ್ತದೆ.

೪. **ಸ್ಥಳ ಬದಲಾವಣೆ (ವಲಸೆ) :** ವ್ಯಕ್ತಿಗಳು ಒಂದು ಕಡೆಯಿಂದ ಇನ್ನೊಂದೆಡೆಗೆ ಅನೇಕ ಕಾರಣಗಳಿಗಾಗಿ ಹೋಗಬೇಕಾದ ಅನಿವಾರ್ಯತೆ ಇದೆ. ಈ ಸಮಯದಲ್ಲಿ ಅವರು ಅಲ್ಲಿನ ಪರಿಸ್ಥಿತಿಗೆ ಅನುಗುಣವಾಗಿ ತಮ್ಮ ಬದುಕುವ ರೀತಿಯನ್ನು ಬದಲಾಯಿಸುತ್ತಾರೆ. ಹಲವು ವೇಳೆ ಇದು ಅನಿವಾರ್ಯವೂ ಆಗಬಹುದು.

ಹೀಗೆ ಸಂಸ್ಕೃತಿ ಎಂಬುದು ಹರಿಯುವ ನೀರಿನಂತೆ, ಹಿರೀಕರು ಹೇಳಿದಂತೆಯೇ ಮಕ್ಕಳು ಅದನ್ನು ಮುಂದುವರಿಸಿಕೊಂಡು ಹೋಗುತ್ತಾರೆ ಎಂದು ಹೇಳುವಂತಿಲ್ಲ. ಒಂದೇ ಪ್ರದೇಶದಲ್ಲಿರುವ ಜನರೂ ಕಾಲ ಬದಲಾದಂತೆ ತಮ್ಮ ಸಂಸ್ಕೃತಿಯಲ್ಲಿ ಬದಲಾವಣೆಗೆ ಕಾರಣವಾಗಬಹುದು ಅಥವಾ ವಿದ್ಯಾಭ್ಯಾಸ, ಮಾಧ್ಯಮಗಳ ಪ್ರಭಾವ, ಉದ್ಯೋಗ ಇವುಗಳ ಹಿನ್ನೆಲೆಯಲ್ಲಿಯೂ ಒಂದು ಸಮುದಾಯದ ಸಂಸ್ಕೃತಿಯಲ್ಲಿ ಬದಲಾವಣೆಗಳಾಗಬಹುದು.

ಕೆಲವು ಬಾರಿ ಧರ್ಮದ ನಂಬಿಕೆಯಲ್ಲಿ ಹೆಚ್ಚು-ಕಡಿಮೆಯಾದಾಗಲೂ ಅದು ಸಂಸ್ಕೃತಿಯ ಮೇಲೆ ಪರಿಣಾಮ ಬೀರುತ್ತದೆ. ಹಲವು ಬಾರಿ ವಿದೇಶಿ ವ್ಯಾಮೋಹ, ವೈಜ್ಞಾನಿಕ ತಿಳುವಳಿಕೆ, ಬದುಕಿನ ಆಡಂಬರದ ವಸ್ತುಗಳೂ ವ್ಯಕ್ತಿಯ ಮೇಲೆ ಪರಿಣಾಮ ಬೀರುತ್ತವೆ. ಆದ್ದರಿಂದ ಸಂಸ್ಕೃತಿ ಎಂಬುದು ಹೀಗೆಯೇ ಇರಬೇಕೆಂದು ಹೇಳಲು ಸಾಧ್ಯವಿಲ್ಲ. ಇದು ಸದಾಕಾಲ ಬದಲಾವಣೆ ಆಗುತ್ತಲೇ ಇರುತ್ತದೆ.

ಸಂಸ್ಕೃತಿಯಲ್ಲಿ ಒಳ್ಳೆಯ ಸಂಸ್ಕೃತಿ, ಕೆಟ್ಟ ಸಂಸ್ಕೃತಿ ಎಂದು ಹೇಳಲೂ ಸಾಧ್ಯವಿಲ್ಲ ಹಲವರಿಗೆ ಒಳ್ಳೆಯದು ಎನ್ನುವ ವಿಚಾರಗಳು ಇನ್ನು ಕೆಲವು ಸಮುದಾಯಗಳಿಗೆ ಅದು ಕೆಟ್ಟದಾಗಿ ಕಾಣಬಹುದು. ಅವರವರ ಸಂಸ್ಕೃತಿ ಅವರಿಗೆ ಒಳ್ಳೆಯದಾಗಿ ಕಂಡು ಅದರಿಂದ ಬೇರೆಯವರಿಗೆ ಅನ್ಯಾಯವಾಗದಿದ್ದರೆ ಆ ಸಮಾಜ ಶಾಂತಿ-ನೆಮ್ಮದಿಯಿಂದ ಬದುಕಲು ಸಾಧ್ಯವಾಗುತ್ತದೆ.

## ೨.೨.೦ ಸಾಂಸ್ಕೃತಿಕ ಅಧ್ಯಯನದ ಸ್ವರೂಪ :

ಸಾಂಸ್ಕೃತಿಕ ಅಧ್ಯಯನಗಳ ಪ್ರಾರಂಭದಲ್ಲಿ ಸಂಸ್ಕೃತಿ ಚಿಂತನೆ ಹಾಗೂ ಸಾಂಸ್ಕೃತಿಕ ಅಧ್ಯಯನಗಳ ವ್ಯತ್ಯಾಸವನ್ನು ಸ್ಪಷ್ಟಪಡಿಸಬೇಕು. ಸಂಸ್ಕೃತಿ ಪರಿಕಲ್ಪನೆ ಕುರಿತು ತಾತ್ವಿಕವಾಗಿ ಚಿಂತನೆ

ಮಾಡುವುದು. ಅದರ ಅರ್ಥವನ್ನು ವಿವಿಧ ಉದಾಹರಣೆಗಳ ಮೂಲಕ ನಿರೂಪಿಸುವುದು. ಇದರ ಬಗ್ಗೆ ಪ್ರಕಟವಾಗಿರುವ ಇತರರ ಚಿಂತನೆಗಳ ಜತೆ ವಾಗ್ವಾದ ನಡೆಸುವುದು ಇವೆಲ್ಲವನ್ನು ವಿಶಾಲ ಅರ್ಥದಲ್ಲಿ ಸಾಂಸ್ಕೃತಿಕ ಅಧ್ಯಯನ ಎಂದು ಕರೆಯಬಹುದು.

ಒಂದು ಸಮೂಹಕ್ಕೆ ಸೇರಿದ ಜನರ ಸಂಸ್ಕೃತಿಯನ್ನು ಅಧ್ಯಯನ ಮಾಡುವಾಗ ಸಾಂಸ್ಕೃತಿಕ ಪರಿಸರದ ಬಗ್ಗೆ ಗಮನ ಹರಿಸಬೇಕಾಗುತ್ತದೆ. ಸಂಸ್ಕೃತಿಯಲ್ಲಿ ಭಿನ್ನತೆ ಕಂಡು ಬರುವುದು ಆಯಾ ಸಾಂಸ್ಕೃತಿಕ ಪರಿಸರದ ಭಿನ್ನತೆಯಿಂದ. ಒಂದು ನಿರ್ದಿಷ್ಟ ಭೌಗೋಳಿಕ ಪರಿಸರಕ್ಕೆ ವಿಶಿಷ್ಟವಾದ ಸಾಂಸ್ಕೃತಿಕ ಅನನ್ಯತೆ ಇರುತ್ತದೆ. ಆಯಾ ನೆಲೆಯ ಪ್ರಕೃತಿ, ಪರಿಸರ, ಆಯಾ ಸಂಸ್ಕೃತಿಯ ಮೇಲೆ ವಿಶಿಷ್ಟ ಪ್ರಭಾವವನ್ನು ಉಂಟು ಮಾಡಲು ಕಾರಣವಾಗಿರುತ್ತದೆ. 'ಪರಿಸರ' ಎನ್ನುವುದು ಮುಖ್ಯವಾಗಿ ನಿರ್ದಿಷ್ಟ ಪ್ರದೇಶ. ಅಲ್ಲಿಯ ಜನಾಂಗ ಹಾಗೂ ಆ ಒಂದು ಕಾಲ ಘಟ್ಟವನ್ನು ಸಹಜವಾಗಿಯೇ ಪಡೆದುಕೊಂಡಿರುತ್ತದೆ. ಪ್ರಾದೇಶಿಕ ವಾತಾವರಣ ಅಲ್ಲಿಯ ಜನರ ಜೀವನ ವಿಧಾನದ ಮೇಲೆಯೂ ಪ್ರಭಾವವನ್ನು ಬೀರಿ ಪರೋಕ್ಷವಾಗಿ ಆ ನಿರ್ದಿಷ್ಟ ಸಂಸ್ಕೃತಿಯೊಂದರ ಮೇಲೆಯೂ ತನ್ನ ಪರಿಣಾಮವನ್ನು ಬೀರಿರುತ್ತದೆ. ಪರಂಪರೆಯನ್ನು ಮೈಗೂಡಿಸಿಕೊಂಡಿದ್ದರೂ, ಕಾಲಘಟ್ಟದಲ್ಲಿ ಅದು ಬದಲಾಗುತ್ತ ಬರುತ್ತದೆ. ಇದೊಂದು ಅನಿವಾರ್ಯ ಸ್ಥಿತಿ. ಮನುಷ್ಯ ಮತ್ತು ನಿಸರ್ಗದ ಸಂಬಂಧ ನಿಕಟವಾದದ್ದು. ಅದಕ್ಕೆ ಅನುಗುಣವಾಗಿಯೇ ಪ್ರಾಚೀನ ಸಂಸ್ಕೃತಿ ಮತ್ತು ಆ ಸಂಬಂಧವಾದ ಬದುಕು ರೂಪುಗೊಂಡದ್ದು ಹಾಗೂ ಕಾಲಘಟ್ಟಗಳಲ್ಲಿ ರೂಪಾಂತರ ಹೊಂದುತ್ತ ಬಂದದ್ದು. ಆರ್ಥಿಕ ಬಲ ಹೆಚ್ಚಾದಂತೆ, ವೈಜ್ಞಾನಿಕ ದೃಷ್ಟಿಕೋನಗಳು ತಲೆ ಎತ್ತಿದಂತೆ ಈ ಬದಲಾವಣೆಯ ಗತಿ ತೀವ್ರಗೊಳ್ಳುತ್ತದೆ. ಅದನ್ನು ನಮ್ಮ ನಗರಸಂಸ್ಕೃತಿಯಲ್ಲಿ ಗುರುತಿಸಬಹುದು.

ಯಾವುದೇ ಪ್ರದೇಶದ ಸಾಂಸ್ಕೃತಿಕ ಅಧ್ಯಯನ ಮಾಡುವಾಗ ಅಲ್ಲಿಯ ಜನರ ಬದುಕಿನ ಪ್ರತಿಯೊಂದು ಅಂಶಗಳೂ ಅಲ್ಲಿಯ ಸಂಸ್ಕೃತಿಯಲ್ಲಿ ಪ್ರಧಾನವಾಗಿ ಗೋಚರಿಸುತ್ತವೆ. ಅವರ ಆಹಾರ ಪದ್ಧತಿಯಿಂದ ಹಿಡಿದು ಉಡುಗೆ–ತೊಡುಗೆ, ಆಚಾರ–ವಿಚಾರ, ನಂಬಿಕೆ–ನಡವಳಿಕೆಗಳು, ಮಾತು–ಕತೆ, ಹೀಗೆ ಇಡೀ ಸಮೂಹದ ಸಂಸ್ಕೃತಿಯನ್ನು ಅದಕ್ಕೆ ತಕ್ಕ ರೀತಿಯಲ್ಲಿ ರೂಪಿಸಲು ಅದು ಕಾರಣವಾಗಿರುತ್ತದೆ. 'ಪ್ರಕೃತಿ ಮತ್ತು ಸಂಸ್ಕೃತಿ' ಒಂದು ಸಮೂಹದ ನೆಲೆಯನ್ನು ರೂಪಿಸುವಲ್ಲಿ ಮುಖ್ಯ ಅಂಶಗಳೆಂಬುದನ್ನು ಕಡೆಗಣಿಸುವಂತಿಲ್ಲ.

ಚಾರಿತ್ರಿಕವಾಗಿ ಮೊದಲು ಶುರುವಾಗಿದ್ದು ಸಂಸ್ಕೃತಿ ಚಿಂತನೆ. ನಂತರ ಬಂದದ್ದು ಸಾಂಸ್ಕೃತಿಕ ಅಧ್ಯಯನಗಳು. ಆದರೆ ಇವೆರಡರ ನಡುವಣ ವ್ಯತ್ಯಾಸಗಳು ಕಡ್ಡಾಯ ಹಾಗೂ ಅನುಕ್ರಮವಲ್ಲ. ಸಾಂಸ್ಕೃತಿಕ ಅಧ್ಯಯನ ಮಾಡುತ್ತಲೆ, ಸಂಸ್ಕೃತಿ ಚಿಂತನೆ ರೂಪು ತಳೆಯಬಹುದು. ಪರಿಕಲ್ಪನಾತ್ಮಕವಾಗಿ

ಸಂಸ್ಕೃತಿ ಚಿಂತನೆ ಮಾಡುವವರು ಅಧ್ಯಯನ ಮಾಡದೆಯೂ ಇರಬಹುದು[೫]. ಮ್ಯಾಥ್ಯೂ ಆರ್ನಲ್ಡ್, ಡಿವಿಜಿ ಇವರು ಮುಖ್ಯವಾಗಿ ಸಂಸ್ಕೃತಿ ಚಿಂತಕರು, ನಿರ್ಧಿಷ್ಟ ವಿಷಯ ಆರಿಸಿಕೊಂಡು ಕ್ರಮಬದ್ಧವಾದ ಸಾಂಸ್ಕೃತಿಕ ಅಧ್ಯಯನ ಮಾಡಿದವರಲ್ಲ. ಆದರೂ ಅವರ ಗ್ರಹಿಕೆಗಳು ಬಹಳ ಅಧ್ಯಯನಕಾರರ ಮೇಲೆ ಪ್ರಭಾವ ಬೀರಿದವು. ಡಿ. ಆರ್. ನಾಗರಾಜ, ಶಂ. ಭಾ. ಜೋಶಿ ಇವರು ಸಂಸ್ಕೃತಿ ಚಿಂತಕರೂ ಹೌದು. ಸಾಂಸ್ಕೃತಿಕ ಅಧ್ಯಯನಕಾರರೂ ಹೌದು. ಇಂಗ್ಲೆಂಡಿನ ರೇಮಂಡ್ ವಿಲಿಯಮ್ಸ್ ಒಬ್ಬ ಸಂಸ್ಕೃತಿ ಅಧ್ಯಯನಕಾರ. ಸಂಸ್ಕೃತಿಗೆ ವ್ಯಾಖ್ಯೆ ರೂಪಿಸುವ ಚಿಂತಕರು ಹಾಗೂ ರೂಪಿಸಿದ ವ್ಯಾಖ್ಯೆಗೆ ಮಾಹಿತಿ ಅನ್ವಯಿಸಿ ವಿಶ್ಲೇಷಣೆ ಮಾಡುವ ಸಾಂಸ್ಕೃತಿಕ ಅಧ್ಯಯನಕಾರರು ಎಂಬ ವಿಂಗಡಣೆ ಪಾಶ್ಚಾತ್ಯ ರಾಷ್ಟ್ರಗಳಲ್ಲಿದೆ. ಕನ್ನಡದಲ್ಲಿಲ್ಲ. ನಮ್ಮಲ್ಲಿ ಸಂಸ್ಕೃತಿ ಚಿಂತನೆ ಹಾಗೂ ಸಾಂಸ್ಕೃತಿಕ ಅಧ್ಯಯನಗಳು ಸಾಮಾನ್ಯವಾಗಿ ಒಟ್ಟಿಗೆ ಬರುತ್ತವೆ. ಮಾಸ್ತಿ ಹಾಗೂ ದೇವುಡು ಸಾಂಸ್ಕೃತಿಕ ಅಧ್ಯಯನಕಾರರು. ಆದರೆ ಜತೆಯಲ್ಲೇ ಸಂಸ್ಕೃತಿ ಚಿಂತನೆ ಕೂಡ ಮಾಡುತ್ತಾರೆ[೬]. ಇದು ಕನ್ನಡದ ವಿಶೇಷತೆ.

ಇಲ್ಲಿ ಎರಡು ಪ್ರಶ್ನೆ ಹುಟ್ಟುತ್ತದೆ. ಮೊದಲನೆಯದು, 'ಸಂಸ್ಕತಿ' ಕುರಿತ ತಾತ್ವಿಕ ಪರಿಕಲ್ಪನೆಗಳು 'ಸಾಂಸ್ಕೃತಿಕ ಅಧ್ಯಯನ'ಗಳನ್ನು ಮಾಡುವಾಗ ಎಷ್ಟರಮಟ್ಟಿಗೆ ಪ್ರಭಾವ ಬೀರುತ್ತವೆ? ಹೆಚ್ಚಿನ ಅಧ್ಯಯನ ಕಾರರು ತಮ್ಮದೇ ಆದ ಸಂಸ್ಕೃತಿ ವ್ಯಾಖ್ಯೆಯನ್ನು ರೂಪಿಸಿಕೊಳ್ಳುವುದಿಲ್ಲ. ಕಣ್ಣೆದುರಿರುವ ಸಂಸ್ಕೃತಿ ಚಿಂತನೆಗಳನ್ನು ಪರಿಶೀಲಿಸಿ, ತಮಗೆ ಸರಿಕಂಡ ಒಂದನ್ನಾರಿಸಿಕೊಂಡು. ಅದರ ನಿರ್ದೇಶನದಲ್ಲಿ ಅಧ್ಯಯನ ಮಾಡುತ್ತಾರೆ. ಉದಾಹರಣೆಗೆ ಚಿದಾನಂದ ಮೂರ್ತಿ ಅವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'ವನ್ನು ಗಮನಿಸಬಹುದು. ಅವರು ಇದರಲ್ಲಿ ಆರ್ನಲ್ಡ್, ಎಮರ್ಸನ್, ರವೀಂದ್ರನಾಥ್ ಟಾಗೂರ್ ಟಿ. ಎಸ್., ಎಲಿಯಟ್ ಮುಂತಾದ ಚಿಂತಕರ ಅಭಿಪ್ರಾಯಗಳನ್ನು ಚರ್ಚೆಗೆ ಎತ್ತಿಕೊಳ್ಳುತ್ತಾರೆ. ಅವನ್ನು ವ್ಯಕ್ತಿಗತ ವಿಕಾಸ ಸೂಚಿಸುವ ಹಾಗೂ ಸಾಮುದಾಯಕ ಜೀವನವನ್ನು ಒಳಗೊಳ್ಳುವ ವ್ಯಾಖ್ಯೆಗಳು ಎಂದು ಎರಡು ನೆಲೆಗಳಲ್ಲಿ ವಿಂಗಡಿಸುತ್ತಾರೆ. ಚರ್ಚೆಯ ಕೊನೆಗೆ ಮೇಲಿನ ಎರಡು ವಿವರಣೆಗಳಲ್ಲಿ ಎರಡನೆಯ ವಿವರಣೆಯನ್ನು ನಾವು ಅಂಗೀಕರಿಸಿದ್ದೇವೆ ಎಂದು ಹೇಳಿ, 'ಪ್ರಾಚೀನ ಕನ್ನಡಿಗರ 'ಸಂಸ್ಕೃತಿ'ಯನ್ನು ಎತ್ತಿ ತೋರಿಸತಕ್ಕಂತಹ, ಅವರ ಬದುಕಿನ ರೀತಿ, ಅವರ ಧರ್ಮಗಳು, ಆರ್ಥಿಕ ವ್ಯವಸ್ಥೆ, ಜಾತಿನೀತಿಗಳು, ಅವರ ಬಾಳನ್ನು ಹಿಡಿದು ನಡೆಯಿಸಿದ ಮೌಲ್ಯಗಳು, ಒಟ್ಟಿನಲ್ಲಿ ಅವರ ಜೀವನ ವಿಧಾನಗಳನ್ನು ನಿರೂಪಿಸುವುದು ನಮ್ಮ ಗುರಿ' ಎಂದು ತಮ್ಮ ಸಾಂಸ್ಕೃತಿಕ ಅಧ್ಯಯನಕ್ಕೆ ಪೀಠಿಕೆ ಹಾಕಿಕೊಳ್ಳುತ್ತಾರೆ[೭]. ಇದು ಸಂಸ್ಕೃತಿ ಚಿಂತನೆಗಳನ್ನು ಸಾಂಸ್ಕೃತಿಕ ಅಧ್ಯಯನಕಾರರು ಬಳಸಿಕೊಳ್ಳುವ ಒಂದು ವಿಧಾನ.

ಎರಡನೆಯ ಪ್ರಶ್ನೆ, ಅಧ್ಯಯನಕಾರರು ತಾವು ಶೈಕ್ಷಣಿಕವಾಗಿ ಒಪ್ಪಿಕೊಳ್ಳುವ 'ಸಂಸ್ಕೃತಿ' ಗ್ರಹಿಕೆಗೆ ಅನುಸಾರವಾಗಿಯೇ ಅಧ್ಯಯನ ಮಾಡುತ್ತಾರೆಯೇ? ಇದನ್ನು ಹೇಳುವುದು ಕಷ್ಟ. ಯಾಕೆಂದರೆ ಚಿದಾನಂದ ಮೂರ್ತಿ ಆರಿಸಿಕೊಂಡ ವಿಷಯ, ಬಳಸುವ ಆಕರ, ನಂಬಿರುವ ಸಿದ್ಧಾಂತ, ಇಟ್ಟುಕೊಂಡ ಉದ್ದೇಶ– ಇವು ಅಧ್ಯಯನವನ್ನು ನಿರ್ಧಿಷ್ಟ ದಿಕ್ಕಿಗೆ ಎಳೆದುಕೊಂಡು ಹೋಗುತ್ತದೆ. ಉದಾಹರಣೆಗೆ ಅಧ್ಯಯನಕಾರರು ಒಂದು ಜನಸಮುದಾಯದ ಸಮಗ್ರ ಜೀವನ ವಿಧಾನವೇ ಸಂಸ್ಕೃತಿ ಎಂಬ ವ್ಯಾಖ್ಯೆಯನ್ನು ಒಪ್ಪಿಕೊಂಡಿರಬಹುದು. ಆದರೆ ತಮ್ಮ ಅಧ್ಯಯನದಲ್ಲಿ ಆಳುವ ವರ್ಗದ ಚರಿತ್ರೆಯನ್ನು ಪ್ರತಿನಿಧಿಸುವ ಶಾಸನಗಳನ್ನು ಇಟ್ಟುಕೊಂಡು, ಇದೇ ನಾಡಿನ ಸಾಂಸ್ಕೃತಿಕ ಇತಿಹಾಸ ಎಂದು ಹೇಳತೊಡಗುತ್ತಾರೆ. ಆಗ ಇಟ್ಟುಕೊಂಡ ವ್ಯಾಖ್ಯೆಗೂ ಮಾಡುವ ವಿಶ್ಲೇಷಣೆಗೂ ಸಂಬಂಧ ಏರ್ಪಡುವುದಿಲ್ಲ. ಕೆಲವೊಮ್ಮೆ ಅಧ್ಯಯನಕಾರರು ಘೋಷಿತ ವಾಗಿ ಒಪ್ಪಿದ ಸಂಸ್ಕೃತಿ ವ್ಯಾಖ್ಯೆಗೆ ಕುರುಡು ನಿಷ್ಠೆ ತೋರುತ್ತ, ತಮ್ಮ ಮಾಹಿತಿ ಹಾಗೂ ವಿಶ್ಲೇಷಣೆಗಳನ್ನೆಲ್ಲ ಅದರ ಚೌಕಟ್ಟಿಗೆ ಹೊಂದಿಸುತ್ತ ಹೋಗಬಹುದು. ಸಾಮಾನ್ಯವಾಗಿ ಅಂತರಧರ್ಮೀಯ ಕೊಡುಕೊಳ್ಳುವಿಕೆ ನಡೆದಿರುವ ಒಂದು ಪಂಥವನ್ನು ಅಧ್ಯಯನ ಮಾಡುವವರು ಸೈದ್ಧಾಂತಿಕವಾಗಿ ಜನಪ್ರಿಯವಾಗಿರುವ ಮತೀಯ ಗ್ರಹಿಕೆಗಳಿಂದ ಬಿಡಿಸಿಕೊಂಡಿರುವುದಿಲ್ಲ. ಇಂತಹ ಸಂದರ್ಭಗಳಲ್ಲಿ ಘೋಷಿತವಾಗಿ ಒಪ್ಪಿಕೊಂಡ ಸಂಸ್ಕೃತಿ ವ್ಯಾಖ್ಯೆಗೂ ವಾಸ್ತವದಲ್ಲಿ ಅನುಸರಿಸಿದ ಅಧ್ಯಯನ ವಿಧಾನಕ್ಕೂ ನಡುವೆ ಬಿರುಕು ಕಾಣಿಸುತ್ತದೆ.

ಕನ್ನಡದ ಸಾಂಸ್ಕೃತಿಕ ಅಧ್ಯಯನಗಳಲ್ಲಿ ಇಂಥ ಅನೇಕ ವೈರುಧ್ಯಗಳು ಇವೆ. ಪ್ರಸಿದ್ಧ ಸಾಂಸ್ಕೃತಿಕ ಶೋಧಕರಾದ ಶಂ. ಭಾ. ಜೋಶಿ ಅವರಲ್ಲೂ ಈ ಸಮಸ್ಯೆಯಿದೆ. ಸಂಸ್ಕೃತಿಯ ವ್ಯಾಖ್ಯೆ ಬಂದಾಗ ಅವರು ಕಲಾಕೇಂದ್ರಿತ ಸಂಸ್ಕೃತಿ ವ್ಯಾಖ್ಯೆಯನ್ನು ತಾತ್ವಿಕವಾಗಿ ಒಪ್ಪಿಕೊಳ್ಳುವಂತೆ ತೋರುತ್ತಾರೆ[೮]. ಆದರೆ ವಾಸ್ತವವಾಗಿ ತಮ್ಮ ಅಧ್ಯಯನದಲ್ಲಿ ಸಾಹಿತ್ಯ, ಚಿತ್ರಕಲೆ, ಮುಂತಾದ ಕಲ್ಪನಾ ಪ್ರಧಾನವಾದ ಕಲಾಭಿವ್ಯಕ್ತಿಗಳನ್ನು ಆಕರವಾಗಿ ಬಳಸಿಕೊಳ್ಳುವುದಿಲ್ಲ. ಇದಕ್ಕೆ ಸಾಹಿತ್ಯ ಅಕಾಡೆಮಿಯಿಂದ ಪ್ರಕಟವಾದ ಉಪಸಂಸ್ಕೃತಿ ಅಧ್ಯಯನಗಳಲ್ಲೂ ಉದಾಹರಣೆಗಳಿವೆ. ಕೆಲವು ವಿದ್ವಾಂಸರು 'ಸಮುದಾಯದ ಸಮಗ್ರ ಜೀವನ ವಿವರಗಳೇ ಸಂಸ್ಕೃತಿ' ಎಂಬ ಮಾನವ ಶಾಸ್ತ್ರೀಯ ವ್ಯಾಖ್ಯೆಯಿಂದ ಶುರು ಮಾಡುತ್ತಾರೆ. ನಂತರ ಪ್ರತಿಷ್ಠಿತ ವರ್ಗಗಳ ಜೀವನ ಮೌಲ್ಯಗಳ ದೃಷ್ಟಿಯಿಂದ ಬುಡಕಟ್ಟು ಸಮುದಾಯದ ಆಚರಣೆಗಳನ್ನು 'ನೀಚ' ಎಂದು ನೈತಿಕ ಮೌಲ್ಯಮಾಪನ ಮಾಡುತ್ತಾರೆ. ಇದು ಅಧ್ಯಯನದ ವಸ್ತು ಒಪ್ಪಿಕೊಂಡ ಸಂಸ್ಕೃತಿ ಪರಿಕಲ್ಪನೆ ಹಾಗೂ ಅಧ್ಯಯನಕ್ಕೆ ಅನುಸರಿಸಿದ ವಿಧಾನ. ಇವುಗಳ ನಡುವೆ ಗಂಭೀರ ತಾತ್ವಿಕ ಬಿಕ್ಕಟ್ಟನ್ನು ಸೃಷ್ಟಿಸುತ್ತದೆ. ಈ ಬಿಕ್ಕಟ್ಟು ಸಂಸ್ಕೃತಿ ಚಿಂತನೆ ಹಾಗೂ ಸಾಂಸ್ಕೃತಿಕ ಅಧ್ಯಯನಗಳ ನಡುವೆ ಇರುವ ದೊಡ್ಡ ಸಮಸ್ಯೆ.

ಸಾಂಸ್ಕೃತಿಕ ಅಧ್ಯಯನಗಳಲ್ಲಿ ಮೇಲ್ಕಾಣಿಸಿದ ಸಮಸ್ಯೆ ಮತ್ತು ಸಾಧ್ಯತೆಗಳನ್ನು ಮತ್ತಷ್ಟು ಅರಿಯ ಬೇಕಾದರೆ, ಪ್ರಚಲಿತದಲ್ಲಿರುವ ಸಂಸ್ಕೃತಿ ಚಿಂತನೆಗಳನ್ನೂ ಅವುಗಳ ಹಿಂದಿನ ಸೈದ್ಧಾಂತಿಕ ಗ್ರಹಿಕೆ ಹಾಗೂ ಚಾರಿತ್ರಿಕ ಹಿನ್ನೆಲೆಗಳನ್ನು ಪರಿಶೀಲಿಸುವುದು ಅಗತ್ಯ. ಈ ಎಲ್ಲಾ ವಿವರಗಳಿಂದ ತಿಳಿಯುವುದೇನೆಂದರೆ ಸಂಸ್ಕೃತಿ ಎಂಬ ಪದದ ಅರ್ಥವು ವಿಶಾಲವಾದದ್ದು, ವಿದ್ಯಾಪ್ರಭಾವ, ಸಾಹಿತ್ಯ ಮಹಿಮೆ ಸಭ್ಯದರ್ಶನ ಮತ್ತು ಗುಣಶೀಲತೆಯನ್ನು ಕುರಿತು ಮಾತನಾಡುವ ಸಂದರ್ಭದಲ್ಲಿ ಸಂಸ್ಕೃತಿ ಎಂಬ ಪದವನ್ನು ಬಳಸಲಾಗುತ್ತದೆ. ಸಂಸ್ಕೃತಿ ಎಂಬುದು ಬರಿಯ ವಿದ್ಯೆಯಲ್ಲ. ಅದು ಜೀವನದ ನಾನಾ ವಿಷಯಗಳ ನಾನಾ ಧರ್ಮಗಳ ಜ್ಞಾನದಿಂದಾದ ಸಮನ್ವಯ ಸ್ವಾರಸ್ಯ. ಅದನ್ನು ನಾವು ನಯ, ವಿನಯ, ಮರ್ಯಾದೆ ಎಂದೂ ಕರೆಯುತ್ತೇವೆ.

ಸಂಸ್ಕೃತಿ ಎಂಬುದು ಬರೀ ಪಾಂಡಿತ್ಯ ಮಾತ್ರವೂ ಅಲ್ಲ ಒಬ್ಬ ಮನುಷ್ಯ ಅನೇಕ ಭಾಷೆಗಳನ್ನು ಕಲಿತಿರಬಹುದು. ನಾನಾ ಗ್ರಂಥಗಳನ್ನು ಓದಿರಬಹುದು. ಆದರೆ ಅಷ್ಟರಿಂದಲೇ ಅವನು ಸುಸಂಸ್ಕೃತ ವ್ಯಕ್ತಿ ಎನಿಸಲಾರ, ಬರಿಯ ತಿಳುವಳಿಕೆ ಮತ್ತು ವಸ್ತು ಜ್ಞಾನವು ಸಂಸ್ಕೃತಿಯಲ್ಲ. ಬರೇ ಜಾಣತನ ಮತ್ತು ಯುಕ್ತಿ ಸಂಸ್ಕೃತಿಯಲ್ಲ. ಒಬ್ಬ ವ್ಯಕ್ತಿ ಚಮತ್ಕಾರದಿಂದ ಮಾತನಾಡಬಹುದು. ಉಪಾಯ ದಿಂದಲೂ ನಯದಿಂದಲೂ ಜಯ ಸಂಪಾದನೆ ಮಾಡಬಹುದು. ಆದರೆ ಅದೂ ಸಂಸ್ಕೃತಿಯಲ್ಲ.

ಆದ್ದರಿಂದ ಸಂಸ್ಕೃತಿ ಎಂಬುದು ಸಂಸ್ಕಾರದಿಂದ ಬಂದದ್ದು ಎಂದು ನಾವು ಖಂಡಿತವಾಗಿ ಹೇಳಬಹುದು. ಸಂಸ್ಕಾರ ಎಂದರೆ ಒಳ್ಳೆಯದನ್ನಾಗಿಸುವುದು ಎಂದರ್ಥ. ಅದೇ ಒಳ್ಳೆಯದು ಎಂದರ್ಥ. ಒಂದು ವಸ್ತು ಅಥವಾ ಒಂದು ವರ್ತನೆ ಹೇಗಿದ್ದರೆ ನಮ್ಮ ಜೀವಿತದ ಪರಮೋದ್ದೇಶ ಸಿದ್ಧಿಯು ನಮಗೆ ಲಭಿಸುತ್ತದೆಯೋ ಅದೇ ಒಳ್ಳೆಯದು ಎಂದರ್ಥ. ಆ ಒಳ್ಳೆಯದನ್ನು ಕಂಡುಕೊಳ್ಳುವ ಪ್ರಯತ್ನವೇ ಸಂಸ್ಕೃತಿ ಎಂದು ಹೇಳಬಹುದು. ನಮ್ಮ ಜೀವನವನ್ನು ಸಾಧುವನ್ನಾಗಿ ಮಾಡಿಕೊಡುವ ವಿಧಾನವೂ ಸಂಸ್ಕೃತಿ ಎನಿಸಿಕೊಳ್ಳುತ್ತದೆ. ನಡೆನುಡಿಗಳ ಸೊಗಸೂ ಸಂಸ್ಕೃತಿ ಎಂದೆನಿಸುತ್ತದೆ. ಸಂಸ್ಕೃತಿಯು ಮನುಷ್ಯನ ಮನಸ್ಸನ್ನು ತೊಳೆದು ಶುಚಿ ಮಾಡುತ್ತದೆ. ಈ ಸಂಸ್ಕೃತಿಯಲ್ಲಿ ಪರಿಜ್ಞಾನ, ಸರಳತೆಯಲ್ಲಿ, ಅಭಿರುಚಿ, ಧರ್ಮ ಚಿಂತನೆಯ ಜಾಗರೂಕತೆ, ಸರಸತೆ, ಆತ್ಮಶೋಧನೆ, ಆತ್ಮಸಂಯಮ ಹೀಗೆ ಅನೇಕ ವಿಷಯಗಳು ಸೇರಿರುತ್ತವೆ.

### ೨.೩.೦ ಪುತ್ತೂರು ಪದ ನಿಷ್ಪತ್ತಿ :

ಪುರಾಣ ಮತ್ತು ಮಹಾಕಾವ್ಯಗಳ ಕಾಲದಿಂದ ಹಿಡಿದು ಇಂದಿನ ಆಧುನಿಕ ವೈಜ್ಞಾನಿಕ ಯಗದ 'ಕಂಪ್ಯೂಟರ್ ಮಹಾ ಪ್ರವಾಹ'ದ ರಭಸಕ್ಕೂ ಕೊಚ್ಚಿಕೊಂಡು ಹೋಗದೆ ಇನ್ನೂ 'ತುಳುನಾಡು' ಎಂಬ ತನ್ನ ಐತಿಹಾಸಿಕ ನಾಮಧೇಯವನ್ನು ಉಳಿಸಿಕೊಂಡು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪುತ್ತೂರು ಒಂದು ತಾಲೂಕಾಗಿ ಪ್ರಸಿದ್ಧಿ ಪಡೆದಿದೆ. ಪಶ್ಚಿಮದಲ್ಲಿ ಬಂಟ್ವಾಳ ತಾಲೂಕು ಮತ್ತು ಕೇರಳ ರಾಜ್ಯ, ಉತ್ತರದಲ್ಲಿ ಬೆಳ್ತಂಗಡಿ ತಾಲೂಕು, ದಕ್ಷಿಣದ ಕಡೆಗೆ ಸುಳ್ಯ ತಾಲೂಕು ಇದ್ದು ಮಧ್ಯೆ ನಿಸರ್ಗ ರಮಣೀಯತೆಯ ವೈಭವಯುತ ಸೌಂದರ್ಯವನ್ನು ಹೊರಸೂಸುತ್ತಾ ಮೈ ಚಾಚಿ ನಿಂತಿರುವ ಫಲವತ್ತಾದ ಕೃಷಿ ಭೂಮಿಯೇ ಪುತ್ತೂರು. 'ಪುತ್ತೂರು' ಎಂಬ ಹೆಸರು ಹೇಗೆ ಹುಟ್ಟಿಕೊಂಡಿತು ಮತ್ತು ಅದರ ಮೂಲವೇನು? ಎಂಬ ಬಗ್ಗೆ ಇನ್ನೂ ಭಿನ್ನಾಭಿಪ್ರಾಯಗಳಿವೆ. ಈ ಬಗ್ಗೆ ಅಧ್ಯಯನ ನಡೆದಿದ್ದು ಬಹಳಷ್ಟು ಅಭಿಪ್ರಾಯಗಳು ವ್ಯಕ್ತವಾಗಿವೆ.

೧. ಪುತ್ತೂರು ತನ್ನ ಹೆಸರನ್ನು ದ್ರಾವಿಡ ಮೂಲದ 'ಪುತ್' ಮತ್ತು 'ಊರ್' ಎಂಬ ಎರಡು ಪದಗಳ ಸಂಯೋಗದಿಂದ ಪಡೆದುಕೊಂಡಿದ್ದು 'ಪುತ್' ಎಂದರೆ ಹೊಸತು ಮತ್ತು 'ಊರ್' ಎಂದರೆ ಊರು ಎಂದು ಅರ್ಥ. ಆದುದರಿಂದ ಪುತ್ತೂರು ಎಂದರೆ 'ಹೊಸ ಊರು' ಎಂಬ ಅರ್ಥವೆಂದು ವೈ. ಉಮಾನಾಥ ಶೆಣೈಯವರು ಹೇಳಿದ್ದಾರೆ.

೨. ಪುತ್ತೂರನ್ನು ಹೊಸ ಊರು ಎಂದು ಕರೆಯುವುದಕ್ಕೆ ಕಾರಣವು ಇದೆ. ಕ್ರಿಸ್ತಶಕದ ಆರಂಭದ ದಿನಗಳಲ್ಲಿ ಪುತ್ತೂರಿನ ಸಮೀಪದ ಕಬಕ ಮತ್ತು ಅದರ ಸುತ್ತಮುತ್ತ ಮಾತ್ರ ಜನ ವಸತಿಯಿದ್ದು, ಅಲ್ಲಿ ಜನರ ನೆಲೆ ಅಥವಾ ಪಾಳ್ಯವೊಂದಿತ್ತು. ಆ ಹೊತ್ತಿಗೆ ಕಬಕದಲ್ಲಿ ಗ್ರಾಮ ಚಾವಡಿ ಇದ್ದುದರಿಂದ ಅದು ಗ್ರಾಮದ ಕೇಂದ್ರವಾಗಿತ್ತು. ಕ್ರಿ.ಶ. ೧೮೩೭ರಲ್ಲಿ ಕೆನರಾ ಜಿಲ್ಲೆಯಲ್ಲಿ ನಡೆದ 'ಕಲ್ಯಾಣಪ್ಪನ ಕಾಟಕಾಯಿ' ಎನ್ನಲಾದ ಹೋರಾಟದ ಸಮಯದಲ್ಲಿ ಕಬಕದಲ್ಲಿ ಗ್ರಾಮ ಚಾವಡಿಯಿದ್ದ ಬಗ್ಗೆ ಆಧಾರವಿದೆ. ಪುತ್ತೂರನ್ನು ವಶಪಡಿಸಿಕೊಂಡ ಕಲ್ಯಾಣಪ್ಪನ ದಂಡು ಬಂಟ್ವಾಳಕ್ಕೆ ತೆರಳುವ ಮಾರ್ಗದಲ್ಲಿ ಕಬಕದಲ್ಲಿ ಬೀಡು ಬಿಟ್ಟಾಗ, ಕಲ್ಯಾಣಪ್ಪನು ವಿಟ್ಲದ ಡೊಂಬ ಹೆಗ್ಗಡೆ ಅರಸರನ್ನು ಕಬಕದ ಗ್ರಾಮಚಾವಡಿಗೆ ಕರೆಸಿ ಅವರ ಸಹಾಯ ಯಾಚಿಸಿದನು ಎಂದು ನಿರಂಜನರ 'ಕಲ್ಯಾಣ ಸ್ವಾಮಿ' ಎಂಬ ಕಾದಂಬರಿಯಲ್ಲಿ ಬಳಸಿಕೊಳ್ಳಲಾಗಿದೆ. ಈ ಬಗ್ಗೆ ಸಮಗ್ರ ವಿವರವನ್ನು ಕೆನರಾ ಜಿಲ್ಲೆಯ ಅಂದಿನ ಕಲೆಕ್ಟರ್ ಎಂ.ಲೇವಿನ್ಸ್ ಕೂಡ ತಮ್ಮ ವರದಿಯಲ್ಲಿ ನೀಡಿದ್ದಾರೆ. ಅಂದರೆ ಪಾಳ್ಯದಲ್ಲಿ ವಾಸವಾಗಿದ್ದ ಜನರು ನಂತರ ಈಗಿನ ಪುತ್ತೂರು ನಗರವಿರುವ ಸ್ಥಳದಲ್ಲಿ ವಿಪುಲ ನೀರಿನ ಆಶ್ರಯವಿರುವ ಫಲವತ್ತಾದ ಮಣ್ಣಿರುವ ಪ್ರದೇಶಕ್ಕೆ ಬಂದು

ಅಲ್ಲಿ ತಮ್ಮನ್ನು ಕೃಷಿ ಕಾರ್ಯದಲ್ಲಿ ತೊಡಗಿಸಿ ಕೊಂಡರು. ನಂತರ ಹಂತಹಂತವಾಗಿ ಬೆಳೆದ ಈ ಹೊಸ ಊರು, ಪುತ್ತೂರು ಪಟ್ಟಣವಾಗಿ ಬೆಳೆಯಿತು ಮತ್ತು ಪಾಳ್ಯ ಎಂಬ ಶಬ್ದವು ಉಚ್ಛಾರಣೆಯಲ್ಲಾದ ಬದಲಾವಣೆಯಂತೆ 'ಪೋಳ್ಯ'ವೆಂದು ಕರೆಯಲ್ಪಟ್ಟಿತು ಎಂದು ತಿಳಿಯಲಾಗಿದೆ[೧೦]. ಇಂದೂ ಕೂಡ ಪಾಳ್ಯವೆಂದು ಕರೆಯಲ್ಪಡುತ್ತಿದ್ದ ಸ್ಥಳವು ಪೋಳ್ಯವೆಂಬ ತನ್ನ ನಾಮಾಂಕಿತವನ್ನು ಉಳಿಸಿಕೊಂಡಿದೆ. ಅಂದರೆ ಕಬಕ ಮತ್ತು ಪೋಳ್ಯಗಳು ಹಳೇ ಪುತ್ತೂರಿನ ಭಾಗವಾಗಿದ್ದು, ಹಳೆಯ ಪುತ್ತೂರು ಪಟ್ಟಣವನ್ನು 'ಕಲ್ಲೆ' (ಕಲ್ಲೆ ಪುತ್ತೂರು) ಅಥವಾ 'ಕಲ್ಲೇಗ' ಎಂದು ಕರೆಯಲಾಗುತ್ತಿದೆ[೧೧]. ಇಂದೂ ಕೂಡ ಕಲ್ಲೆಗವು ತನ್ನ ನಾಮಾಂಕಿತವನ್ನು ಉಳಿಸಿಕೊಂಡಿದ್ದು, ಆ ಭಾಗವು ಸ್ವಲ್ಪ ವಿಸ್ತಾರವಾಗಿ 'ನೆಹರುನಗರ'ವೆಂದು ಹೊಸ ನಾಮಧೇಯವನ್ನು ಪಡೆದರೂ, ನೆಹರುನಗರದಲ್ಲಿ ಕಲ್ಕುಡ ದೈವಸ್ಥಾನವಿರುವ ಸ್ಥಳವು ಕಲ್ಲೇಗವೆಂದೆ ಕರೆಯಲ್ಪಡುತ್ತಿದೆ.

"ಊರು", ಇದು ಇರ್. ಧಾತುವಿನಿಂದ ಹುಟ್ಟಿದ್ದೆಂದು ಹೇಳುವುದಕ್ಕಿಂತ 'ಉರ' ಎಂಬುದರಿಂದ ಬಂತೆಂದು ಹೇಳಬೇಕು ಎಂದು ಪಂಜೆ ಮಂಗೇಶರಾಯರು ೧೯೩೧ರಲ್ಲಿ ತಾವು ಬರೆದ 'ಸ್ಥಳನಾಮ' ಎಂಬ ಲೇಖನದಲ್ಲಿ ಬರೆದಿದ್ದಾರೆ. ಉರ ಎಂದರೆ ತುಳುವಿನಲ್ಲಿ ಉಳುವುದೆಂದರ್ಥ. ಗದ್ದೆಯೆಂಬುದು ಅದರ ಎರಡನೆಯ ಅರ್ಥ. ಯಾವ ಸ್ಥಳವು ಉರ್‌ತ್ತು (ಉತ್ತು) ಇದೆಯೋ, ಅದೇ ಊರು ಎಂದು ಪಂಜೆಯವರು ಅಭಿಪ್ರಾಯಪಟ್ಟಿದ್ದಾರೆ. ಪಂಜೆಯವರ ವ್ಯಾಖ್ಯಾನವು ಈ ಹಿಂದೇ ತಿಳಿಸಿದ ಶಬ್ದಾರ್ಥಕ್ಕೆ ಪೂರಕವಾಗಿದೆ. ಅಂದರೆ ಗದ್ದೆಯನ್ನು ಉತ್ತು, ಕೃಷಿ ಮಾಡಿಕೊಂಡು ಬೆಳೆಸಿದ ಹೊಸ ಊರು ಪುತ್ತೂರು ಆಯಿತೆಂದು ಹೇಳಬಹುದು.

೩. ಇನ್ನೊಂದು ಅರ್ಥವಿವರಣೆಯ ಪ್ರಕಾರ, ಪುತ್ತೂರು ಎಂಬ ಪದವನ್ನು ಕೆಲವರು ಪೂತ + ಊರು ಎಂದು ವಿಭಾಗಿಸಿದ್ದಾರೆ. ಪೂತ ಎಂದರೆ ಪರಿಶುದ್ಧ ಅಥವಾ ಪವಿತ್ರ ಎಂಬ ಅರ್ಥವಿದೆ. ಅಂದರೆ ಈ ವಿವರಣೆಯ ಪ್ರಕಾರ. ಪವಿತ್ರವಾದ ಊರು ಪುತ್ತೂರಾಯಿತೆಂದು ಅಭಿಪ್ರಾಯ ಪಡಲಾಗಿದೆ.

೪. ಇದಲ್ಲದೆ ಪುತ್ತೂರು ನಗರದಲ್ಲಿರುವ ಶ್ರೀ ಮಹಾಲಿಂಗೇಶ್ವರ ದೇವಸ್ಥಾನದ ಕೆರೆಯಲ್ಲಿ ಮುತ್ತುಗಳು ಬೆಳೆಯುತ್ತಿದ್ದುದರಿಂದ ಈ ಊರನ್ನು 'ಮುತ್ತೂರು' ಎಂದು ಕರೆಯಲಾಗಿತ್ತೆಂದೂ, ಆದರೆ ಕಾಲಕ್ರಮೇಣ 'ಮುತ್ತೂರ'ನ್ನು 'ಪುತ್ತೂರು' ಎಂದು ಕರೆಯುವ ಪರಿಪಾಠ ಪ್ರಾರಂಭ ವಾಯಿತೆಂಬುದು ಇನ್ನೂ ಕೆಲವರ ನಂಬಿಕೆ[೧೨]. ಆದರೆ ಇದು ಸರಿಯಲ್ಲ ಏಕೆಂದರೆ, ಪುತ್ತೂರಿಗೆ ಸಂಬಂಧಪಟ್ಟ ಕ್ರಿ. ಶ. ೧೦ನೇ ಶತಮಾನದಿಂದ ೩೦ನೇ ಶತಮಾನದವರೆಗೆ ಸಿಗುವ ಎಲ್ಲಾ ಶಾಸನಗಳು ಮತ್ತು ಇತರ

ದಾಖಲೆಗಳಲ್ಲಿ ಈ ಸ್ಥಳವನ್ನು ಪುತ್ತೂರು ಎಂದು ಕರೆಯಲಾಗಿದೆಯೇ ಹೊರತು, ಮುತ್ತೂರು ಎಂದು ಕರೆದಿರುವುದು ಕಂಡುಬರುವುದಿಲ್ಲವೆಂದು ವೈ ಉಮಾನಾಥ ಶೆಣೈಯವರು ಹೇಳಿದ್ದಾರೆ.

೫. ಬ್ರಿಟಿಷ್ ಸರಕಾರದ ಅಧಿಕಾರಿಗಳಾದ ಎಂ. ಲೇವಿನ್ಸ್ ಅಥವಾ ಮಾರ್ಕ್ ಕಬ್ಬನ್ ಈ ಸ್ಥಳದ ಬಗ್ಗೆ ಸರಕಾರಕ್ಕೆ ಆಗಾಗ್ಗೆ ಕಳುಹಿಸುತ್ತಿದ್ದ ವರದಿಗಳಲ್ಲಿ ಪುತ್ತೂರನ್ನು 'ಪೂತೂರು' ಎಂದು ಸಂಬೋಧಿಸಲಾಗಿದೆ[೧೩]. ಆದರೆ ಇಂಗ್ಲಿಷ್ ಭಾಷೆಯ ಅಕ್ಷರ ಜೋಡಣೆ, ಉಚ್ಚಾರ ಅಲ್ಲದೆ ನಾಮ ಪದವನ್ನು ಯಾವುದೇ ರೀತಿಯಲ್ಲಿ ಬರೆಯುವ ಸ್ವಾತಂತ್ರ್ಯವಿರುವುದರಿಂದ, ಬ್ರಿಟಿಷ್ ಅಧಿಕಾರಿ ಗಳಿಂದ ಪ್ರಯೋಗಿಸಲ್ಪಟ್ಟ 'ಪೂತೂರು' ಎಂಬ ಪದವನ್ನು ಗಂಭೀರವಾಗಿ ಗಣನೆಗೆ ತೆಗೆದು ಕೊಳ್ಳುವ ಅವಶ್ಯವಿಲ್ಲ. ಈ ಹಿನ್ನೆಲೆಯಲ್ಲಿ ಕ್ರಿ. ಶ. ೧೦ನೇ ಶತಮಾನದ ಹೊತ್ತಿಗೆ ಕೃಷಿಕಾರ್ಯಕ್ಕೆ ಯೋಗ್ಯವಾಗಿದ್ದು ಜನರ ಹೊಸ ವಾಸಸ್ಥಾನವಾಗಿ ರೂಪುಗೊಂಡ ಹೊಸ ಊರೇ, ಪುತ್ತೂರು ಎಂದು ತಿಳಿಯಲಾಗಿದೆ.

ಆದ್ದರಿಂದ ಪುತ್ತೂರು ಎಂದರೆ ಹೊಸ ಊರು ಎಂದು ಹೇಳಬಹುದು. ಕ್ರಿಸ್ತಶಕದ ಆರಂಭದ ದಿನಗಳಲ್ಲಿ ಪುತ್ತೂರಿನ ಸಮೀಪದ ಕಬಕ ಮತ್ತು ಅದರ ಸುತ್ತಮುತ್ತ ಮಾತ್ರ ಜನ ವಸತಿ ಇದ್ದ ಬಗ್ಗೆ ಆಧಾರ ದೊರೆಯುತ್ತದೆ. ಮುಂದೆ ಕ್ರಿ.ಶ. ೧೦ನೇ ಶತಮಾನದ ಹೊತ್ತಿಗೆ ಕೃಷಿಕಾರ್ಯಕ್ಕೆ ಯೋಗ್ಯವಾದ ಪ್ರದೇಶವಾಗಿ ಪರಿಣಮಿಸಿ, ಇದು ಜನರ ಹೊಸ ವಾಸಸ್ಥಾನವಾಗಿ ರೂಪುಗೊಂಡ ಪರಿಣಾಮ ಇದನ್ನು ಹೊಸ ಊರು ಎಂದು ಕರೆದು, ಕ್ರಮೇಣ ಉಚ್ಛಾರಣೆ ಬದಲಾವಣೆಯಾಗುತ್ತಾ ಪುತ್ತೂರು ಎಂಬ ಹೆಸರು ಬಂದಿದೆ.

### ೨.೪.೦ ಪುತ್ತೂರಿನ ಇತಿಹಾಸ :

ಹಿಂದಿನ ಅವಿಭಜಿತ ದಕ್ಷಿಣಕನ್ನಡ ಜಿಲ್ಲೆಯ ಪ್ರಾಚೀನ ಪುರಾಣಗಳ ಕಾಲದಿಂದಲೂ ತುಳುನಾಡೆಂದು ಗುರುತಿಸಲ್ಪಟ್ಟಿದೆ.[೧೪] ರಾಮಾಯಣದ ಕಾಲದಲ್ಲಿ ತುಳುನಾಡು ಪ್ರತ್ಯೇಕ ಒಂದು ಸ್ವತಂತ್ರ ರಾಜ್ಯವಾಗಿದ್ದು, ಅದು ರಾವಣನ ಅಧೀನದಲ್ಲಿತ್ತೆಂದು, ತುಳುನಾಡನ್ನು ತ್ರಿಗರ್ತವೆಂದು (ತ್ರಿಗರ್ತ ಎಂದರೆ ೩ ತಗ್ಗಾದ ಕಣಿವೆಯಿಂದ ಕೂಡಿದ ಸ್ಥಳ ಎಂದು ಅರ್ಥ) ಕರೆಯಲಾಗುತ್ತಿತ್ತೆಂದು. ಆನಂದ ರಾಮಾಯಣದಲ್ಲಿ ಬರುವ ವರ್ಣನೆಯ ಆಧಾರದಲ್ಲಿ 'ಪ್ರಾಚೀನ ತುಳುನಾಡು' ಕೃತಿಯಲ್ಲಿ ಹೇಳಲಾಗಿದೆ. ಮಹಾಭಾರತದ ಕಾಲದಲ್ಲಿ ಸಹದೇವನು ಈ ಪ್ರದೇಶವನ್ನು ಆಳುತ್ತಿದ್ದನು ಎಂಬ ವರ್ಣನೆಯಿದೆ.

ತುಳುವರ ಕುಲದೈವವಾದ ಲೆಕ್ಕೇಸಿರಿ ಭೂತದ ಪಾಡ್ದನ ಮತ್ತು ಇತರ ಕೆಲವು ದೈವಗಳ ಪಾಡ್ದನಗಳಲ್ಲಿ, ತುಳುನಾಡಿನ ಗಡಿಯು, 'ತುಳು' ಬಡಕಾಯಿ ಅಂಕೋಲೆ ಗಡೀಡ್ದ್ ತೆನ್ಕಾಯಿ

ರಾಮೇಸರ ಮುಟ್ಟ, ಮುಡಾಯಿ ಕಾಯಿರಿ ಗಟ್ಟಡ್ದ್ ಪಡ್ಡಾಯಿ ನುಗುರು ನಾಗಜಿಡೆ ಬೆರ್ಮೆರೆ ಗುಂಡ ಗದ್ದಿಗೆದ್'ಲು ಬಲಿ ನೇಮ ದೆತ್ತೊನು ಸತ್ಯೊಲು' ಎಂದು ಹೇಳುವುದರಿಂದ ಉತ್ತರದಲ್ಲಿ ಅಂಕೋಲೆಯಿಂದ ದಕ್ಷಿಣದಲ್ಲಿ ರಾಮೇಶ್ವರ ತನಕ ಮತ್ತು ಪೂರ್ವದಲ್ಲಿ ಗಟ್ಟಿ ಪ್ರದೇಶದಿಂದ ಪಶ್ಚಿಮದಲ್ಲಿ ಅರಬ್ಬಿ ಸಮುದ್ರತನಕ ತುಳುನಾಡಿನ ಮೇರೆ ವಿಸ್ತರಿಸಿತು ಎಂದು ತಿಳಿಯುತ್ತದೆ.

ಈಗಿನ ಪುತ್ತೂರು ಸಹಿತ, ತುಳುನಾಡಿನ (ದಕ್ಷಿಣಕನ್ನಡ ಜಿಲ್ಲೆಯ) ದಕ್ಷಿಣದ ಹೆಚ್ಚಿನ ಪ್ರದೇಶವು ಪ್ರಾಚೀನ ಕಾಲದಿಂದ ಹಿಡಿದು ಕ್ರಿ.ಶ. ಸುಮಾರು ೧೮-೧೯ನೇ ಶತಮಾನಗಳ ತನಕ ಅರಣ್ಯದಿಂದ ತುಂಬಿತ್ತು ಎಂದು ತಿಳಿದು ಬರುತ್ತದೆ[೧೫]. ೧೯ನೇ ಶತಮಾನದ ಉತ್ತರ ಭಾಗದಲ್ಲಿ ಪುತ್ತೂರಿಗೆ ಬಂದ ಬಾಸೆಲ್ ಮಿಷನರಿಗಳು ಈ ಬಗ್ಗೆ ತಮ್ಮ ವರದಿಯಲ್ಲಿ ತಿಳಿಸಿದ್ದು ಇಲ್ಲಿಯ ಬಹಳಷ್ಟು ಜನರು 'ಕಾಡುಜ್ವರ'ದಿಂದ ಪ್ರಾಣ ಕಳಕೊಳ್ಳುತ್ತಿದ್ದರೆಂದು ಹೇಳಿದ್ದಾರೆ. ಇಂತಹ ಏರು ತಗ್ಗುಗಳಿಂದ ಕೂಡಿ, ಕೊಂಕುಡೊಂಕಾಗಿರುವ, ದಟ್ಟವಾದ ಕಾಡಿರುವ ಬೆಟ್ಟಗುಡ್ಡಗಳ ಈ ಪ್ರದೇಶವನ್ನು ಪ್ರಾಚೀನ ತಮಿಳರು 'ಕೊಂಕಾನಂ' ಅಥವಾ ಕೊಂಕಣಂ' ಎಂದು ಕರೆಯುತ್ತಿದ್ದು, ಪುತ್ತೂರು ಇದರ ಒಂದು ಭಾಗವಾಗಿತ್ತು. ಈ ಪ್ರದೇಶದ ಪ್ರತಿನಿಧಿಯೋರ್ವನು ಕಾಂಚಿ ಕೇಂದ್ರವಾಗಿ ಇಟ್ಟುಕೊಂಡು ರಾಜ್ಯಭಾರ ಮಾಡುತ್ತಿದ್ದ ಪಲ್ಲವ ಅರಸರ ರಾಜಸಭೆಯಲ್ಲಿದ್ದನು ಎಂಬುದನ್ನು ಪಲ್ಲವರ ಇತಿಹಾಸ ತಿಳಿಸುತ್ತದೆ. ಆದುದರಿಂದ ಕ್ರಿ.ಶ. ೩-೪ರ ಹೊತ್ತಿಗೆ ಪಲ್ಲವ ಅರಸರು ಈ ಪ್ರದೇಶವನ್ನು ಆಳುತ್ತಿದ್ದರೆಂದು ನಂಬಲಾಗಿದೆ. ಆದರೆ ತಂಜಾವೂರು ರಾಜಧಾನಿಯಾಗಿದ್ದು ಕೊಂಡು ಆಳಿದ ಚೋಳ ವಂಶದ ಆರಂಭಿಕ ಶಾಖೆಗೆ ಸೇರಿದ ಕರಿಕಾಲಚೋಳ ಮುಂತಾದ ರಾಜರ ಕೈಕೆಳಗಿತ್ತು ಎಂದು ಹೇಳಬಹುದು. ಆದರೆ ತುಳುನಾಡಿನ ಮೇಲೆ ಪಲ್ಲವ ಅರಸರ ಅಧಿಕಾರ ಬಹುಕಾಲ ಮುಂದುವರಿಯಲಿಲ್ಲ[೧೬]. ಏಕೆಂದರೆ ಕ್ರಿ.ಶ. ೩೪೫ರಲ್ಲಿ ಪಲ್ಲವರ ವಿರುದ್ಧ ಸಿಡಿದು ನಿಂತ ಕದಂಬ ಮಯೂರವರ್ಮನು, ಕರ್ನಾಟಕದ ಬನವಾಸಿಯಲ್ಲಿ (ಉತ್ತರ ಕನ್ನಡ ಜಿಲ್ಲೆ) ಒಂದು ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದ, ಅದೇ ಹೊತ್ತಿಗೆ ಉಡುಪಿ ಮತ್ತು ಸುತ್ತಲಿನ ಪ್ರದೇಶಗಳು ಮಯೂರ ವರ್ಮನ ಅಧೀನವಾಗಿದ್ದರೂ, ಪುತ್ತೂರು ಸಹಿತ ದಕ್ಷಿಣಕನ್ನಡ ಜಿಲ್ಲೆಯ ದಕ್ಷಿಣದ ಭಾಗವು ಗಂಗರ ಅಧೀನದಲ್ಲಿತ್ತು ಎಂದು ತಿಳಿಯಲಾಗಿದೆ. ಪ್ರಸಿದ್ಧ ಇತಿಹಾಸ ಕಾರರಾದ ಬಿ.ಎಲ್. ರೈಸ್‌ರವರ ಬರವಣಿಗೆ ಇದನ್ನು ಸಮರ್ಥಿಸುತ್ತದೆ. ಪುತ್ತೂರು, ಬಹಳ ಸ್ವಲ್ಪ ಕಾಲ ಮಾತ್ರ ಗಂಗ ಅರಸರ ಕೈಕೆಳಗೆ ಇದ್ದಂತೆ ಕಂಡು ಬರುತ್ತದೆ. ಏಕೆಂದರೆ ಕದಂಬ ಮಯೂರವರ್ಮನ ಮಗನಾದ ಕಾಂಗವರ್ಮನ ಕಾಲದಲ್ಲಿ ಪುತ್ತೂರು, ಉಪ್ಪಿನಂಗಡಿ ಮತ್ತು ಕಡಬ ಪ್ರಾಂತ್ಯಗಳು ಕದಂಬರ ರಾಜ್ಯಕ್ಕೆ ಹೊಸದಾಗಿ ಸೇರ್ಪಡೆಗೊಂಡವು ಎಂದು ತಿಳಿಯುತ್ತದೆ[೧೭]. ಅನಂತರ ಕದಂಬಪುರ ಅಥವಾ ಕಡಬವು ಈ ಸೀಮೆಯ ಮುಖ್ಯ ಕೇಂದ್ರ ಅಥವಾ ರಾಜಧಾನಿಯಾಗಿತ್ತು ಎಂದು ತಿಳಿಯಲಾಗಿದೆ. ಈ ಸಂಬಂಧ ಕ್ರಿ.ಶ. ೮-೯ನೇ ಶತಮಾನಕ್ಕೆ ಸೇರಿರುವ ಪುತ್ತೂರು ತಾಲೂಕಿನ ಬಂಟ್ರ

ಶಾಸನದಲ್ಲಿರುವ ಉಲ್ಲೇಖದ ಬಗ್ಗೆ ಖ್ಯಾತ ಇತಿಹಾಸ ತಜ್ಞರಾದ ಗುರುರಾಜ ಭಟ್ಟರು 'ಸ್ಟಡೀಸ್ ಇನ್ ತುಳುವ ಹಿಸ್ಟರಿ ಎಂಡ್ ಕಲ್ಚರ್' ಎಂಬ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ. ಈ ಶಾಸನದಲ್ಲಿ ಕದಂಬ ರಾಜರ ಬಗ್ಗೆ ಉಲ್ಲೇಖವಿದೆಯೆಂದು ಅವರು ಹೇಳಿದ್ದಾರೆ. ಗುರುರಾಜ ಭಟ್ಟರ ಪ್ರಕಾರ ಪುತ್ತೂರು ತಾಲೂಕಿನ ಗಡಿ ಪ್ರದೇಶವಾದ ಕಡಬವು ಕದಂಬವಂಶದ ಒಂದು ಶಾಖೆಯ ರಾಜಧಾನಿಯಾಗಿತ್ತು. ಭಗ್ನ ಅರಮನೆ ಮತ್ತು ಕೋಟೆಯ ಅವಶೇಷಗಳನ್ನು ಕಡಬದಲ್ಲಿ ಈಗಲೂ ಕಾಣಬಹುದು.

ಕದಂಬರ ಅವನತಿಯಾಗುತ್ತಿದ್ದಂತೆ ಕ್ರಿ.ಶ. ೫೬೭–೫೯೮ರ ಮಧ್ಯೆ ೧ನೇ ಪುಲಕೇಶಿಯು ಕದಂಬರನ್ನು ಸೋಲಿಸಿ ಬನವಾಸಿಯನ್ನು ವಶಪಡಿಸಿಕೊಂಡ. ಮುಂದೆ ಬಾದಾಮಿ ಚಾಲುಕ್ಯರಲ್ಲಿ ಅತೀ ಪ್ರಸಿದ್ಧನಾಗಿದ್ದ ಇಮ್ಮಡಿಪುಲಕೇಶಿಯು ಅಧಿಕಾರಕ್ಕೆ ಬಂದು ತನ್ನ ರಾಜ್ಯವನ್ನು ವಿಸ್ತರಿಸಿದಾಗ, ಮಂಗಳೂರಿನಿಂದ ಆಳುತ್ತಿದ್ದ ಅಲೂಪರನ್ನು ಸೋಲಿಸಿ, ಅವರ ರಾಜ್ಯದ ಮೇಲೆ ತನ್ನ ಹತೋಟಿ ಸ್ಥಾಪಿಸಿದನು[೧೮]. ಇದರಿಂದಾಗಿ ಪುತ್ತೂರು ಮತ್ತು ಅದರ ಸುತ್ತಮುತ್ತಲಿನ ಪ್ರದೇಶವು ಇಮ್ಮಡಿ ಪುಲಕೇಶಿಯ ಸಾಮ್ರಾಜ್ಯದ ಒಂದು ಭಾಗವಾಗಿತ್ತು. ಕ್ರಿ. ಶ. ೭೫೦ರ ಹೊತ್ತಿಗೆ ಚಾಲುಕ್ಯ ಸಾಮ್ರಾಜ್ಯವು ರಾಷ್ಟ್ರಕೂಟರ ಅಧೀನವಾದಾಗ ಪುತ್ತೂರು ಕೂಡ ಅವರ ಅಧಿಕಾರಕ್ಕೊಳಪಟ್ಟಿತ್ತು. ಆದರೆ ರಾಷ್ಟ್ರಕೂಟರ ಆಳ್ವಿಕೆಯ ಕೊನೆಯ ದಿನಗಳಲ್ಲಿ ಮಂಗಳೂರಿನಿಂದ ದಕ್ಷಿಣಕ್ಕಿರುವ ಕುಂಬಳೆಯ ಅರಸರಲ್ಲಿ ಓರ್ವನಾದ ಜಯಸಿಂಹನೆಂಬವನು, ಪುತ್ತೂರು ಸಹಿತ ಸುಬ್ರಹ್ಮಣ್ಯ ತನಕ ತನ್ನ ರಾಜ್ಯವನ್ನು ವಿಸ್ತರಿಸಿದ್ದ ಎಂದು ತಿಳಿದುಬರುತ್ತದೆ.

ಕ್ರಿ.ಶ. ೧೩೩೬ರಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದ ಬಳಿಕ ಪೂರ್ತಿ ತುಳುನಾಡು ವಿಜಯನಗರ ರಾಜರ ಅಧಿನಕ್ಕೆ ಬಂತು ಅಲ್ಲದೆ ಅನಂತರ ಅವರ ಉತ್ತರಾಧಿಕಾರಿಗಳಾಗಿ ಅಧಿಕಾರಕ್ಕೆ ಬಂದ ಕೆಳದಿಯ ನಾಯಕರ ಹಿಡಿತದಲ್ಲಿತ್ತು. ಆದರೆ ಆ ವೇಳೆಗೆ ವಿಜಯನಗರ ಮತ್ತು ಕೆಳದಿನಾಯಕರ ಕೈಕೆಳಗೆ ತುಳುನಾಡಿನಲ್ಲಿ ಹಲವು ಸಾಮಂತ ಅರಸರು ಆಳುತ್ತಿದ್ದರು. ಅವುಗಳಲ್ಲಿ ಎರಡು ಸಾಮಂತ ಮನೆತನಗಳು ಪುತ್ತೂರಿನ ಮೇಲೆ ಅಧಿಕಾರ ಸ್ಥಾಪಿಸಿದವು. ವಿಟ್ಲದ ಡೊಂಬ ಹೆಗ್ಗಡೆ ಮನೆತನವು ಪುತ್ತೂರಿನ ದಕ್ಷಿಣಭಾಗದ ಮೇಲೆ ಹಿಡಿತ ಸಾಧಿಸಿದ್ದರೆ, ಬಂಗ ಅರಸರು ಪುತ್ತೂರಿನ ಉತ್ತರ ಭಾಗದ ಮೇಲೆ ತಮ್ಮ ಅಧಿಕಾರ ಸ್ಥಾಪಿಸಿದ್ದರು.

ಕ್ರಿ.ಶ. ೧೭೬೦ರಲ್ಲಿ ಮೈಸೂರಿನ ಸುಲ್ತಾನನಾಗಿ ಅಧಿಕಾರಕ್ಕೆ ಬಂದ ಹೈದರಾಲಿಯು, ಕೆಳದಿ ವಂಶದ ಕೊನೆಯ ರಾಣಿ ವೀರಮ್ಮಾಜಿಯು (ಕ್ರಿ.ಶ. ೧೭೫೭–೧೭೬೩) ಬಿದನೂರಿನಿಂದ ಆಳುತ್ತಿದ್ದಾಗ, ೧೭೬೩ರಲ್ಲಿ ಅವಳ ರಾಜ್ಯದ ಮೇಲೆ ಮುತ್ತಿಗೆ ಹಾಕಿ ಅವಳನ್ನು ಸೋಲಿಸಿ, ಸೆರೆ ಹಿಡಿದ, ಇದರೊಂದಿಗೆ ಕೆಳದಿ ನಾಯಕರ ಆಳ್ವಿಕೆ ಕೊನೆಗೊಂಡು ಇದೇ ಕೆನರಾ ಜಿಲ್ಲೆಯು ಹೈದರಾಲಿಯ ವಶವಾಯಿತು[೧೯]. ಹೈದರಾಲಿಯು ವಿಟ್ಲದ ಅರಸರನ್ನು ಪದಚ್ಯುತಿಗೊಳಿದರೂ ೪ನೇ

ಲಕ್ಷ್ಮಪ್ಪರಸ ಬಂಗರಾಜನು, ಹೈದರಾಲಿಯನ್ನು ಮಂಗಳೂರಿನಲ್ಲಿ ಸ್ವಾಗತಿಸಿದುದರಿಂದ ಇದೇ ಕೆನರಾಜಿಲ್ಲೆಯ ಮೇಲಿನ ಅಧಿಕಾರವನ್ನು ಹೈದರಾಲಿಯು ಮತ್ತೆ ಬಂಗರಸರಿಗೆ ವಹಿಸಿಕೊಟ್ಟ ಈ ಮಧ್ಯೆ ಇಂಗ್ಲಿಷರು ಮತ್ತು ಹೈದರಾಲಿ ನಡುವೆ ಪ್ರಥಮ ಆಂಗ್ಲೋ – ಮೈಸೂರು ಯುದ್ಧ (ಕ್ರಿ. ಶ. ೧೭೬೬–೬೯) ಪ್ರಾರಂಭವಾದಾಗ, ೧೭೬೬ರಲ್ಲಿ ಮಂಗಳೂರಿನಲ್ಲಿ ಬ್ರಿಟಿಷರ ವಿರುದ್ಧ ಹೋರಾಡಿದ ಹೈದರಾಲಿಯು ಪುತ್ತೂರು ಮಾರ್ಗವಾಗಿ ಮೈಸೂರಿಗೆ ಹೋಗುವ ದಾರಿಯಲ್ಲಿ ಕೊಡಗಿನ ಅರಸ ಮದ್ದರಾಜನು ತನಗೆ ನೀಡಿದ ಸಹಾಯಕ್ಕೆ ಪ್ರತಿಯಾಗಿ ಉಪ್ಪಿನಂಗಡಿ ತಾಲೂಕಿನ ಪಂಜ ಮತ್ತು ಬೆಳ್ಳಾರೆ ಮಾಗಣೆಗಳನ್ನು ಅವನಿಗೆ ಬಿಟ್ಟುಕೊಟ್ಟನು. ಕೊಡಗಿನ ಅರಸನು ಪುತ್ತೂರು ಪಟ್ಟಣದ ಉತ್ತರ ಭಾಗದಲ್ಲಿ ಒಂದು ಅರಮನೆಯನ್ನು ಕಟ್ಟಿಸಿ ಅದರ ಸಮೀಪ ಸಾಲುಮರಗಳನ್ನು ನೆಡಿಸಿದನು. ಆಗ ಅರಮನೆ ಇದ್ದ ಪ್ರದೇಶ ಮಾತ್ರ ಈಗಲೂ ಸಾಲ್ಮರ ಎಂಬ ಹೆಸರಿನಿಂದ ಕರೆಯಲ್ಪಡುತ್ತಿದೆ[೨೦]. ಆದರೆ ಎರಡನೇ ಆಂಗ್ಲೋ–ಮೈಸೂರು ಯುದ್ಧದ (ಕ್ರಿ.ಶ. ೧೭೮೦–೮೪) ಕೊನೆಯ ವೇಳೆಯಲ್ಲಿ ಟಿಪ್ಪುಸುಲ್ತಾನನು ಕೊಡಗಿನ ರಾಜನಾದ ವೀರರಾಜೇಂದ್ರನನ್ನು ಸೋಲಿಸಿ, ಕೊಡಗನ್ನು ವಶಪಡಿಸಿದ, ಇದರಿಂದಾಗಿ ಕ್ರಿ.ಶ. ೧೭೬೬–೬೮ರ ಹೊತ್ತಿಗೆ ಕೊಡಗಿನ ಅರಸನಿಗೆ ಕೊಟ್ಟಿದ್ದ ಪಂಜ ಮತ್ತು ಬೆಳ್ಳಾರೆ ಮಾಗಣೆಗಳು ಮತ್ತೆ ಟಿಪ್ಪುವಿನ ರಾಜ್ಯಕ್ಕೆ ಮರುಸೇರ್ಪಡೆಗೊಂಡವು. ಆ ಹೊತ್ತಿಗೆ ಪುತ್ತೂರಿನ, ಸಾಲ್ಮರಲ್ಲಿದ್ದ ಕೊಡಗಿನ ಅರಸರ ಅರಮನೆ ನಾಶವಾಯಿತು.

ಕ್ರಿ. ಶ. ೧೭೯೯ರ ಎಪ್ರಿಲ್ ತಿಂಗಳಲ್ಲಿ, ಕೊಡಗಿನ ಅರಸರ ಗುಂಪಿಗೆ ಸೇರಿದ ಗೋಪಾಲ ಗೌಡನೆಂಬವನು, ಕೆನರಾ ಜಿಲ್ಲೆಯಲ್ಲಿ ಟಿಪ್ಪುಸುಲ್ತಾನ್‌ಗೆ ಸೇರಿದ್ದ ಭೂಭಾಗಗಳಾದ ಜಮಾಲಬಾದ್ ಕೋಟೆ, ಬೆಳ್ತಂಗಡಿ, ಪುತ್ತೂರು, ಬಂಟ್ವಾಳ, ನಂದಾವರದ ಮೇಲೆ ದಾಳಿ ಮಾಡಿ ಪುತ್ತೂರಿನ ಪೂರ್ವಭಾಗದ ಸ್ಥಳಗಳಾದ ಅಮರಸುಳ್ಯ, ಪಂಜ ಮತ್ತು ಬೆಳ್ಳಾರೆಗಳನ್ನು ಕೊಡಗಿಗೆ ಸೇರಿಸಿ ಕೊಂಡ[೨೧]. ಈ ಸೇರ್ಪಡೆಗೆ ಇಂಗ್ಲಿಷರು ಮನ್ನಣೆ ನೀಡಿದರು. ಇದರಿಂದಾಗಿ ಕೊಡಗಿನ ಅರಸರ ಆಳ್ವಿಕೆ ವೇಳೆ ಪುತ್ತೂರು ವಿಭಜನೆಯಾಯಿತು. ಪುತ್ತೂರಿನ ಈಗಿನ ಕಲ್ಲೇಗದಿಂದಾಚೆಗೆ ಇರುವ ಕಲ್ಲೆ ಪುತ್ತೂರು (ಕಲ್ಲೇಗ, ಪೋಳ್ಯ, ಕಬಕ ಇತ್ಯಾದಿ) ಎಂಬ ಭಾಗವು ಕೊಡಗಿನ ಅರಸರ ಕೈಕೆಳಗೆ ಬಂತು. ಆದರೆ ೧೭೯೭ರ ಉತ್ತರಾರ್ಧದಲ್ಲಿ ಬೆಳ್ಳಾರೆ ತನಕದ ಪ್ರದೇಶ ಬ್ರಿಟಿಷರ ಕೈವಶವಾಯಿತು.

ಕ್ರಿ.ಶ. ೧೭೯೯ರಲ್ಲಿ ನಡೆದ ನಾಲ್ಕನೆಯ ಆಂಗ್ಲೋ–ಮೈಸೂರು ಯುದ್ಧದಲ್ಲಿ ಟಿಪ್ಪು ಸುಲ್ತಾನ್ ಮಡಿದಾಗ, ಕೆನರಾ ಜಿಲ್ಲೆಯು ಬ್ರಿಟಿಷರ ಕೈವಶವಾಯಿತು. ಆದರೆ ಈ ಮೇಲೆ ತಿಳಿಸಿದಂತೆ ೧೭೯೯ರಿಂದ ಕಲ್ಲೆ ಪುತ್ತೂರು ಮಾತ್ರ ಬ್ರಿಟಿಷರ ವಶದಲ್ಲಿದ್ದು ಉಳಿದರ್ಧ ಕ್ರಿ. ಶ. ೧೮೩೪ರ ತನಕ ಕೊಡಗಿನ ಅರಸರ ಕೈಕೆಳಗಿತ್ತು[೨೨]. ೧೮೩೪ರಲ್ಲಿ ಕೊಡಗಿನ ಅರಸ ಚಿಕ್ಕವೀರರಾಜೇಂದ್ರನನ್ನು ಪದಚ್ಯುತಿಗೊಳಿಸಿ ಇಡೀ ಕೊಡಗನ್ನು ತಮ್ಮ ಸಾಮ್ರಾಜ್ಯಕ್ಕೆ ಸೇರಿಸಿದ ಬ್ರಿಟಿಷರು. ಅದರೊಂದಿಗೆ

ಅಮರಸುಳ್ಯ ಮತ್ತು ಪುತ್ತೂರನ್ನು ಕೊಡಗಿನಿಂದ ಪ್ರತ್ಯೇಕಿಸಿ ಕೆನರಾ ಜಿಲ್ಲೆಗೆ ಸೇರಿಸಿದರು. ಅನಂತರ ಕೊಡಗು, ಬ್ರಿಟಿಷ್ ಕಮಿಷನರ್ ಆಳ್ವಿಕೆಗೆ ಒಳಪಟ್ಟರೆ, ಇಡೀ ಪುತ್ತೂರು, ಕೆನರಾದ ಜಿಲ್ಲಾ ಕಲೆಕ್ಟರ್ ಅಧಿಕಾರ ವ್ಯಾಪ್ತಿಗೊಳಪಟ್ಟಿತು. ಹೀಗೆ ಕ್ರಿ.ಶ. ೧೮೩೪ರಲ್ಲಿ ಪೂರ್ತಿಯಾಗಿ ಬ್ರಿಟಿಷರ ವಶವಾದ ಪುತ್ತೂರು, ಮುಂದೆ ೧೯೪೭ರಲ್ಲಿ ಭಾರತವು ಸ್ವಾತಂತ್ರ್ಯಗೊಳಿಸುವ ತನಕವು ಅದು ಬ್ರಿಟಿಷರ ವಸಾಹತುಷಾಹಿ ಸಾಮ್ರಾಜ್ಯದ ಒಂದು ಭಾಗವಾಗಿತ್ತು.

### ೨.೫.೦ ಶಾಸನಗಳು, ಐತಿಹಾಸಿಕ ಸ್ಥಳಗಳು :

ಶಾಸನಗಳು ಚರಿತ್ರೆಯಲ್ಲಿನ ಪ್ರಮುಖ ವ್ಯಕ್ತಿಗಳು, ಘಟನೆಗಳು ಮತ್ತು ಕಾಲಜ್ಞಾನದ ಕುರಿತು ಖಚಿತ ಅರಿಕೆಯನ್ನು ಉಂಟುಮಾಡುವುದಲ್ಲದೆ, ರಾಜಕೀಯ ಆಗುಹೋಗುಗಳ ಕಾಲಾನುಕ್ರಮವನ್ನು ಹಾಗೂ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ವಿಷಯಗಳ ಅನೇಕ ವಿವರಗಳನ್ನು ಒದಗಿಸುತ್ತವೆ.

ಶಾಸನಗಳಲ್ಲಿ ವ್ಯಕ್ತವಾಗುವ ಜನಜೀವನ, ಸಂಸ್ಕೃತಿಯನ್ನು ಅರಿಯಬೇಕಾದರೆ ಅವುಗಳ ಆಂತರಿಕ ಸ್ವರೂಪಕ್ಕೆ ಗಮನಕೊಡಬೇಕಾಗುತ್ತದೆ. ಅವು ಪ್ರತಿಪಾದಿಸುವ ವಸ್ತುವಿನ ಅಥವಾ ವಿಷಯದ ವೈವಿಧ್ಯವನ್ನು ಗಮನಿಸಬೇಕಾಗುತ್ತದೆ. ಹೀಗೆ ಅವುಗಳಲ್ಲಿನ ವಿಷಯದ ಉದ್ದೇಶದ ಆಧಾರದ ಮೇಲೆ ಶಾಸನಗಳನ್ನು ದಾನ(ದತ್ತಿ) ಶಾಸನಗಳು, ಸ್ಮಾರಕ ಶಾಸನಗಳು ಅವುಗಳಲ್ಲಿ ವೀರಗಲ್ಲುಗಳು, ಸತಿಕಲ್ಲುಗಳು, ನಿಷಿಧಿಗಳು ಎಂದೂ ರಾಜಾಜ್ಞೆಗಳು, ಘಟನೆ ನಿರೂಪಣ ಶಾಸನಗಳು, ಪ್ರಶಸ್ತಿ ಶಾಸನಗಳು ಮುಂತಾಗಿ ವರ್ಗೀಕರಿಸಬಹುದು.

ಬ್ರಿಟಿಷರು ಭಾರತವನ್ನು ಆಳುತ್ತಿದ್ದಾಗ ಈ ದೇಶದ ಇತಿಹಾಸ ಮತ್ತು ಸಂಸ್ಕೃತಿಯನ್ನು ತಿಳಿದುಕೊಳ್ಳುವ ಪ್ರಯತ್ನವನ್ನು ಅವರು ಮಾಡಿದರು. ಇದಕ್ಕಾಗಿ ಶಾಸನಾಧ್ಯಯನದ ಪ್ರಯತ್ನಗಳು ಮೊದಲೇ ನಡೆದಿದ್ದರೂ ಬಹಳ ಪ್ರಾಚೀನ ಕಾಲದ ಶಾಸನಗಳನ್ನು ಓದುವುದು ಸಾಧ್ಯವಾಗಿರಲಿಲ್ಲ. ಆ ಪ್ರಯತ್ನ ಫಲಿಸಿದ್ದು ಜೇಮ್ಸ್ ಪ್ರಿನ್ಸೆಪ್‌ನ ಸಾಧನೆಯಿಂದ. ಸ್ವಾತಂತ್ರ್ಯಾನಂತರ ಕೇಂದ್ರ ಪುರಾತತ್ವ ಇಲಾಖೆ ೧೮೮೮ರಲ್ಲಿ ಪ್ರಾರಂಭಿಸಿದ ಎಫಿಗ್ರಾಫಿಯಾ ಇಂಡಿಕಾ ಒಟ್ಟು ೩೮ ಉಪಯುಕ್ತ ಸಂಪುಟಗಳನ್ನು ಹೊರತಂದಿದೆ.

ಕರ್ನಾಟಕ ವಿಶ್ವವಿದ್ಯಾನಿಲಯದ ಕನ್ನಡ ಸಂಶೋಧನಾ ಸಂಸ್ಥೆ 'ಕರ್ನಾಟಕ ಇನ್ಸ್‌ಕ್ರಿಪ್‌ಷನ್ಸ್' ಸಂಪುಟಗಳನ್ನು ಪ್ರಕಟಿಸಿ ಕರ್ನಾಟಕದ ಉತ್ತರ ಭಾಗದಲ್ಲಿ ಬಹಳಷ್ಟು ಕೆಲಸ ಮಾಡಿದೆ[೨೩]. ಶಾಸನ ಅಧ್ಯಯನ, ಪ್ರಕಟನೆ ಮತ್ತು ಈ ಕ್ಷೇತ್ರದಲ್ಲಿ ಹೊಂದಾಣಿಕೆಯಿಂದ ಪ್ರಗತಿ ಸಾಧಿಸುವುದಕ್ಕೋಸ್ಕರ ೧೯೭೪ರಿಂದ ಎಫಿಗ್ರಾಫಿಕಲ್ ಸೊಸೈಟಿ ಆಫ್ ಇಂಡಿಯಾ ಪ್ರಯತ್ನಿಸುತ್ತಿದೆ. ಇತ್ತೀಚೆಗಂತೂ ಶಾಸನಾಧ್ಯಯನಕ್ಕೆ ಕಂಪ್ಯೂಟರ್ ಬಳಸುವ ಪ್ರಯತ್ನವೂ ನಡೆಯುತ್ತಿದೆ.

**೨.೫.೧ ಪುತ್ತೂರಿನಲ್ಲಿ ದೊರೆತ ಶಾಸನಗಳು :**

**ಪುತ್ತೂರಿನ ಶಿಲಾಶಾಸನಗಳು :**

**ಶಿಲಾಶಾಸನ – ೧ :** ಈ ಶಾಸನವನ್ನು ಶ್ರೀ ಮಹಾಲಿಂಗೇಶ್ವರ ದೇವಾಲಯದ ಒಳಾಂಗಣದಲ್ಲಿ, ಗರ್ಭಗೃಹ ಬಲಪಾರ್ಶ್ವದಲ್ಲಿರುವ ೧.೯೨ ಮೀಟರ್ ಎತ್ತರ, ೯೨ ಸೆಂ.ಮೀ. ಅಗಲ ಮತ್ತು ೨೮ ಸೆಂ.ಮೀ. ದಪ್ಪವಿರುವ ಶಿಲಾಫಲಕದ ಎದುರು ಬದಿಯಲ್ಲಿಯೂ, ಬಲಮಗ್ಗುಲಲ್ಲಿಯೂ ಬರೆಯಲಾಗಿದೆ. ಪ್ರಾರಂಭ ದಲ್ಲಿರುವ ಶಿವಸ್ತುತಿ ಮಾತ್ರ ಸಂಸ್ಕೃತ ಭಾಷೆಯಲ್ಲಿದ್ದು, ಶಾಸನದ ಉಳಿದ ಭಾಗವು ಕನ್ನಡ ಭಾಷೆ ಹಾಗೂ ಲಿಪಿಯಲ್ಲಿದೆ. ಶಾಸನದ ಶಿರೋಭಾಗದಲ್ಲಿರುವ ೩೮ ಸೆಂ.ಮೀ. ಎತ್ತರದ, ಮೇಲೆ ಹೋದಂತೆ ಅಗಲ ಕಿರಿದಾಗುವ ಕಿರೀಟದಂತಹ ಭಾಗದ ಮಧ್ಯದಲ್ಲಿ ಒಂದು ಮಂಟಪದ ಆಕೃತಿ ಇದ್ದು ಇದರೊಳಗೆ ಶಿವಲಿಂಗ, ಮಂಟಪದ ಬಲಬದಿಗೆ ನಂದಿ ಮತ್ತು ಸೂರ್ಯ, ಎಡಬದಿಗೆ ಭೃಂಗಿ ಮತ್ತು ಚಂದ್ರ ಈ ಆಕೃತಿಗಳಿವೆ.

ಈ ಶಿಲಾಶಾಸನದ ಕಾಲ – ಶಕ ವರುಷ ೧೩೫೩ನೇ ವರ್ತಮಾನದ ವಿರೋಧಿಕೃತು ಸಂವತ್ಸರದ ಮಾರ್ಗಶಿರ ಶುದ್ಧ ಪಂಚಮಿ, ಆದಿತ್ಯವಾರ. ಅಂದರೆ ಕ್ರಿ.ಶ. ೧೪೩೧ನೇ ಇಸವಿ ನವೆಂಬರ್ ತಿಂಗಳ ೧೧ನೇ ತಾರೀಕು ಆದಿತ್ಯವಾರ, ಅರುಣೋದಯದ ಸಮಯ[೨೪].

ವಿಜಯನಗರ ಸಾಮ್ರಾಜ್ಯವನ್ನು ಇಮ್ಮಡಿ ಪ್ರತಾಪದೇವರಾಯನೂ, ಮಂಗಳೂರು ರಾಜ್ಯವನ್ನು ಅಣ್ಣಪ್ಪ ಒಡೆಯನೂ, ಪುತ್ತೂರನ್ನೂ ಪಾಂಡ್ಯಪ್ಪರಸ ಬಂಗರಾಯನೂ ಆಳುತ್ತಿದ್ದಾಗ ವಿಜಯನಗರದ ಸಾರ್ವಭೌಮನ ಅರಮನೆಯಿಂದ ಕ್ರಿಯಾಶಕ್ತಿದೇವ ಒಡೆಯರೆಂಬ ರಾಜಗುರುಗಳು ಮೇಲೆ ಹೇಳಿದ ದಿನ ದಂದು ಪುತ್ತೂರಿನ ಶ್ರೀ ಮಹಾಲಿಂಗೇಶ್ವರ ದೇವರ ಸನ್ನಿಧಿಗೆ ಬಂದು, ಈ ದೇವಾಲಯ ಹಾಗೂ ಸೀಮೆಯ ಇತರ ದೇವಾಲಯಗಳಲ್ಲಿ ನಿತ್ಯ ನೈಮಿತ್ತಿಕ ಅನುಷ್ಠಾನಗಳು ಶಾಸ್ತ್ರೋಕ್ತವಾದ ರೀತಿಯಲ್ಲಿ ಸರ್ವಕಾಲವೂ ನಡೆಯುವಂತಾಗಲು ಮಾಡಿದ ವ್ಯವಸ್ಥೆಯನ್ನು ೯೧ ಪಂಕ್ತಿಗಳಿರುವ ಈ ದೀರ್ಘ ಶಾಸನದಲ್ಲಿ ವಿವರಿಸಲಾಗಿದೆ.

**ಪುತ್ತೂರಿನ ಶಿಲಾಶಾಸನ – ೨ :**

ಈ ಶಾಸನವನ್ನು ಶ್ರೀ ಮಹಾಲಿಂಗೇಶ್ವರ ದೇವಾಲಯದ ಒಳ ಪ್ರಾಂಗಣದಲ್ಲಿರುವ ದೈವಗಳ ಗುಡಿಯ ನೈಋತ್ಯ ಮೂಲೆಯಲ್ಲಿರುವ ಸುಮಾರು ೮೦ ಸೆಂ.ಮೀ. ಎತ್ತರವಿರುವ, ಹಾವಿನ ಹೆಡೆಯಾಕಾರಾದ ಶಿಲಾಫಲಕದ ಎರಡೂ ಬದಿಗಳಲ್ಲಿ ಬರೆಯಲಾಗಿದೆ. ಇರುವ ಒಟ್ಟು ೨೩ ಪಂಕ್ತಿಗಳ ಪೈಕಿ ಪ್ರಾರಂಭದ ೧೫ ಪಂಕ್ತಿಗಳನ್ನು ಎದುರುಭಾಗದಲ್ಲಿಯೂ ಉಳಿದ ೮ ಪಂಕ್ತಿಗಳನ್ನು ಹಿಂಭಾಗದಲ್ಲಿಯೂ ಬರೆಯಲಾಗಿದೆ. ಈ ಶಿಲಾ ಫಲಕವನ್ನು ಜನರು ಗುಳಿಗನಕಲ್ಲೆಂದು ಹೆಸರಿಸಿ ಇದಕ್ಕೆ

ತೆಂಗಿನಕಾಯಿಯನ್ನು ಹೊಡೆಯುತ್ತಿದ್ದುದರಿಂದ ಈ ಶಾಸನದ ಹಲವಾರು ಅಕ್ಷರಗಳು ನಾಶವಾಗಿ ಹೋಗಿವೆ. ಆದರೂ ಓದಲು ಸಾಧ್ಯವಾಗುವಷ್ಟು ಭಾಗವನ್ನು ಈಗ ಉಳಿಸಲಾಗಿದೆ.

ಈ ಶಾಸನದ ಅಕ್ಷರಗಳ ವಿನ್ಯಾಸದ ಹಿನ್ನೆಲೆಯಿಂದ ಇದು ಹನ್ನೆರಡನೇ ಶತಮಾನದ ಶಾಸನವೆಂದು ಶಾಸನಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ[೨೫]. ಈ ಶಾಸನವನ್ನು (೧೨ನೇ ಶತಮಾನದಲ್ಲಿ ಬಂದಿದ್ದ) ಸಾಧಾರಣ ನಾಮ ಸಂವತ್ಸರದ ಒಂದು ಸಂಕ್ರಮಣದಂದು (ಪ್ರಾಯಶಃ ಹೊಯ್ಸಳ ವಿಷ್ಣುವರ್ಧನ) ಮಹಾಮಂಡಲೇಶ್ವರನು ಬರೆಸಿದ್ದನು. ಈ ದೇವಾಲಯದ ಕೆರೆಯನ್ನು ಕಟ್ಟಿಸಿದ ವರ್ಷದ ಕಾರ್ತಿಕ ತಿಂಗಳಿಂದ ತೊಡಗಿ ಈ ಕೆರೆಯಲ್ಲಿ ಇಳಿದು ಸ್ನಾನ ಮಾಡಬಾರದು. ಕೆರೆಗೆ ಇಳಿದು ಬಲೆಯನ್ನು ಬೀಸಿ ಅಥವಾ ಗಾಳವನ್ನು ಹಾಕಿ ಮೀನನ್ನು ಹಿಡಿಯಬಾರದು. ಒಂದುವೇಳೆ ಮೀನನ್ನು ಹಿಡಿದರೆ ಅಂಥವರನ್ನು ಅರಸನಿಗೆ ಒಂದು ನೂರು ಗದ್ಯಾಣಗಳನ್ನು ತಪ್ಪುದಂಡವನ್ನಾಗಿ ಕೊಡಬೇಕು. (ಒಮ್ಮೆ) ಶ್ರೀಮತ್ ಅರಸನಿಗೆ ಕೊಟ್ಟ ದಂಡ ಒಂದು ನೂರು ಗದ್ಯಾಣಗಳು – ಎಂದು ಈ ಶಾಸನದಲ್ಲಿ ಹೇಳಲಾಗಿದೆ.

### ೨.೫.೨ ಬೀರ್‌ಮಲೆ ;

ಪುತ್ತೂರು–ಪಂಜ ರಸ್ತೆಯ ಬಲಬದಿಯಲ್ಲಿ ೧ನೇ ಮೈಲಿಕಲ್ಲಿನ ಹತ್ತಿರ 'ಬೀರ್‌ಮಲೆ' ಎಂಬ ಒಂದು ಮುರಕಲ್ಲಿನ ಗುಡ್ಡವಿದೆ. ಕ್ರಿ.ಶ. ೧೯೭೦ರಲ್ಲಿ ಇದರ ಮೇಲೆ ಅಲ್ಲಿಯ ಚಿನಿವಾರನು ಅವರ ಆರಾಧ್ಯ ದೇವತೆಯಾದ ವಿಶ್ವಕರ್ಮನಿಗೆ ಒಂದು ಗುಡಿಯನ್ನು ಕಟ್ಟುವುದಕ್ಕೋಸ್ಕರ ತಳಪಾಯವನ್ನು ಹಾಕಲು ಗುಂಡಿ ಅಗೆಯುತ್ತಿದ್ದಾಗ ಅಕಸ್ಮಿಕವಾಗಿ ಏಳು ದೊಡ್ಡ ದೊಡ್ಡ ಮಣ್ಣಿನ ಗುಡಾಣಗಳು ಸಿಕ್ಕಿದವು. ಇವು ನೆಲದಿಂದ ಸುಮಾರು ೬೦ ರಿಂದ ೭೦ ಸೆಂ.ಮೀ. ಕೆಳಗೆ ಇದ್ದವು. ಅಗೆಯುವ ಕಾಲದಲ್ಲಿ ಇವು ಒಡೆದು ಚೂರು ಚೂರಾದವು[೨೬]. ಇವುಗಳನ್ನು ಪರೀಕ್ಷಿಸಿದಾಗ ಬೃಹತ್ ಶಿಲಾ ಸಂಸ್ಕೃತಿಯ ಕಾಲದೆಂದು ಖಚಿತವಾಗಿದೆ. ಇವುಗಳನ್ನು ಅ. ಸುಂದರರು ಪರೀಕ್ಷಿಸಿದಾಗ ಗುಡಾಣಗಳಲ್ಲಿ ಎರಡು ಬರಿದಾಗಿದ್ದವು. ಉಳಿದವುಗಳಲ್ಲಿ ಸಣ್ಣಸಣ್ಣ ಸುಟ್ಟ ಮಣ್ಣಿನ ಪಾತ್ರೆಗಳು ಮಕ್ಕಳ ಆಟಿಕೆಗಳಂಥ ಬಹುಚಿಕ್ಕ ಮಣ್ಣಿನ ಪಾತ್ರೆಗಳು, ಮನುಷ್ಯರ ಎಲುಬು ಚೂರುಗಳು, ತುಕ್ಕು ಹಿಡಿದ ಕಬ್ಬಿಣದ ಉಪಕರಣಗಳು ಮತ್ತು ಮಣ್ಣು ಇದ್ದವು. ಒಂದರಲ್ಲಿ ಇವುಗಳ ಜೊತೆಗೆ ಒಂದು ನಕ್ಷತ್ರಾಕೃತಿಯ ಅತಿ ತೆಳುವಾದ, ಚಿನ್ನದ ತಗಡಿನ ಆಭರಣ, ಮತ್ತೊಂದು ಕಂಚಿನ ತಗಡಿನ ಕಟ್ಟುಳ್ಳ ಕಬ್ಬಿಣದ ಉಂಗುರ ಕೂಡ ದೊರೆತವು.

ಈ ಗುಡಾಣಗಳ ಬಾಯಿಯನ್ನು ಮುಚ್ಚಿರಲಿಲ್ಲ. ಗುಡಾಣಗಳು ದಪ್ಪವಾಗಿಯೂ ಒರಟಾದ ಮೈಯುಳ್ಳದ್ದಾಗಿಯೂ, ನಸುಗೆಂಪಾಗಿಯೂ ಇದ್ದವು. ಸುಮಾರು ೧ ಮೀಟರ್ ಎತ್ತರ ಅಗಲವಾದ ಬಾಯಿ, ಉಬ್ಬಿದ ಹೊಟ್ಟೆ, ಕಿರಿದಾದ ಮತ್ತು ಚಪ್ಪಟೆಯಾದ ತಳ, ಇವುಗಳ ಬಾಯಿಯ ಅಂಚಿನಲ್ಲಿ ಬೆರಳಿನಿಂದ ಅಚ್ಚೊತ್ತಿದ ಸರಪಳಿಯಂಥ ಚಿತ್ರವಿದೆ. ಇದರಂತೆಯೇ ಇದರ ಕುತ್ತಿಗೆಯ ಮೇಲೂ ಹೀಗೆಯೇ ಮಣ್ಣಿನಲ್ಲಿ ಮಾಡಿದ ಬೆರಳಚ್ಚಿನ ಮಾಲೆಯನ್ನು ಅಂಟಿಸಲಾಗಿದ್ದು ಇವುಗಳ ತುದಿಗಳನ್ನು ಹಿಮ್ಮುಖವಾಗಿ ತಿರುಗಿಸಲಾಗಿದೆ. ಈ ಮೃತ್ ಪಾತ್ರೆಗಳಲ್ಲೂ ಆಕಾರ, ಬಣ್ಣ ಮತ್ತು ರಚನೆಗಳಲ್ಲಿ ದಕ್ಷಿಣ ಭಾರತದ ಬೃಹತ್ ಶಿಲಾ ಸಂಸ್ಕೃತಿಯ ಪಾತ್ರೆಗಳನ್ನು ಹೋಲುತ್ತವೆ.

**೨.೫.೩ ಬಡಕಜೆಕಾರು :**

ಉಪ್ಪಿನಂಗಡಿ–ಮಡಂತ್ಯಾರ್ ರಸ್ತೆಯಲ್ಲಿ ಹೋದರೆ ಬಡಕಜೆಕಾರು ಎಂಬ ಸ್ಥಳಕ್ಕೆ ಹೋಗಬಹುದು. ಇದು ಮಂಗಳೂರಿನ ಸುಮಾರು ೩೬ ಕಿ.ಮೀ. ಈಶಾನ್ಯಕ್ಕೆ ಇದೆ. ಈ ಹಳ್ಳಿಯ ದಕ್ಷಿಣ ವಲಯದಲ್ಲಿ ಸುಮಾರು ೩೦ ಕಲ್ಗೋರಿಗಳ ಅವಶೇಷಗಳು ಅಲ್ಲಲ್ಲಿ ಇವೆ. ಇವುಗಳನ್ನು 'ಪಾಂಡವರ ಕಲ್ಲು' ಎಂದು ಸ್ಥಳೀಯರು ಕರೆಯುತ್ತಾರೆ. ಆದರೆ ಇವು ನಿಜಕ್ಕೂ ಬೃಹತ್ ಶಿಲಾಸಂಸ್ಕೃತಿಯ ಕಲ್ಗೋರಿಗಳು[೨೭]. ಈ ಪ್ರಾಚೀನ ನಿವೇಶನವನ್ನು ಮೊಟ್ಟಮೊದಲು ಕಂಡುಹಿಡಿದವರು ಡಾ. ಪಿ. ಗುರುರಾಜ ಭಟ್ಟರು. ಇವುಗಳಲ್ಲಿ ಕೆಲವು ನೆಲದಿಂದ ಮೇಲೆ ಬಹಳಷ್ಟು ಭಾಗ ಎದ್ದು ಕಾಣುತ್ತದೆ. ಮತ್ತೆ ಕೆಲವುದರ ಸ್ವಲ್ಪ ಭಾಗ ನೆಲದಲ್ಲಿ ಹುಗಿದಿರುತ್ತದೆ. ಪ್ರತಿಯೊಂದು ಕಲ್ಗೋರಿಯು, ನೆಟ್ಟಗೆ ನಿಲ್ಲಿಸಿದ ಕನಿಷ್ಠ ನಾಲ್ಕು ದೊಡ್ಡದೊಡ್ಡ ಕಲ್ಲು ಹಲಗೆಗಳಿಂದ ಮಾಡಿದ ಒಂದು ಕೋಣೆಯಾಗಿರುತ್ತದೆ. ಇವುಗಳ ಮೇಲೆ ಅಡ್ಡಲಾಗಿ ಎಲ್ಲಕ್ಕೂ ದೊಡ್ಡದಾದ ಕಲ್ಲುಹಲಗೆಯನ್ನು ಹೇರಿಸಲಾಗಿದೆ. ನೆಟ್ಟಗೆ ನಿಲ್ಲಿಸಿದ ಯಾವುದಾದರೊಂದು ಕಲ್ಲು ಹಲಗೆಯಲ್ಲಿ ಒಂದು ತೂತು ಇರುತ್ತದೆ. ಆದ್ದರಿಂದ ಇಂಥ ಕಲ್ಗೋರಿಯ ಅವಶೇಷಗಳಿಗೆ "ತೂತುಕಲ್ಲು"ಗಳೆಂದು ಹೇಳುವುದು ಉಂಟು. ಈ ತೂತಿನ ಮುಂದೆ ಅಕ್ಕಪಕ್ಕದಲ್ಲಿ ಒಂದೊಂದು ಕಲ್ಲು ಹಲಗೆಯನ್ನಿಟ್ಟು ಮಾಡಿದ ಕಾಲುವೆ ಯಂಥ ದಾರಿ ಇರುತ್ತದೆ. ಇಂಥ ಕಲ್ಮನೆಯ ಸುತ್ತಲೂ ಹೊರಬದಿಯಲ್ಲಿ ಕಲ್ಲು ಹಲಗೆಗಳನ್ನು ಒಂದರ ಪಕ್ಕದಲ್ಲಿ ಒಂದರಂತೆ ಮೇಲಿನ ಅಡ್ಡ ಹಲಗೆಗೆ ತಾಗಿಸಿ ಜೋಡಿಸಲಾಗಿದೆ. ಅಥವಾ ಸಣ್ಣಸಣ್ಣ ಕಲ್ಲುಗುಂಡು ಗಳನ್ನು ಸುತ್ತಲೂ ರಾಶಿ ಹಾಕಿ ಅವುಗಳು ಚದುರದ ಹಾಗಿ ಒಂದು ಸುತ್ತಿನ ಕಟ್ಟೆ ಇರುತ್ತದೆ. ಇಂಥ ಕಲ್ಗೋರಿಯ ಯಾವುದಾದರೂ ಒಂದು ಬದಿಯ ಕಲ್ಲು ಹಲಗೆಯಲ್ಲಿ ಇರುವ ತೂತು ಒಳ ಬದಿಯಲ್ಲಿ ಸುಮಾರು ೧.೫೦ ಮೀ. ಅಗಲ ಮತ್ತು ೨ ರಿಂದ ೨.೫೦ ಮೀ. ಉದ್ದ

ಮತ್ತು ೧ ಮೀ. ಎತ್ತರವೂ ಇರುತ್ತವೆ. ತೂತು ಸುಮಾರು ೪೫ ರಿಂದ ೫೦ ಸೆಂ.ಮೀ.ನಷ್ಟು ವ್ಯಾಸವಿರುತ್ತದೆ.

**೨.೫.೪ ಉಳ್ಳಾಲ್ತಿ ಐತಿಹ್ಯ:**

ಪುತ್ತೂರು ಮಹಾಲಿಂಗೇಶ್ವರ ದೇವಾಲಯದ ಕಾರ್ಯಗಳಲ್ಲಿ ಪ್ರಮುಖ ಪಾತ್ರ ವಹಿಸುವ ದೈವಗಳೆಂದರೆ ಬಲ್ನಾಡಿನ ಉಳ್ಳಾಲ್ತಿ, ದಂಡನಾಯಕ ಮತ್ತು ಮಲರಾಯ ಪಾಡ್ದನಗಳಲ್ಲಿ ಉಳ್ಳಾಲ್ತಿಯನ್ನು ಮೀನಾಕ್ಷಿ ಎಂದೂ, ಏಣಾಕ್ಷಿ ಎಂದೂ ಪಾರ್ವತಿಯೊಂದಿಗೆ ಸಮೀಕರಿಸಲಾಗಿದೆ. ಕೈಯಲ್ಲಿ ದರ್ಪಣವನ್ನು ಧರಿಸಿರುವುದರಿಂದ ಈ ದೈವವನ್ನು ಮಹಾಸತಿ ಎಂದೂ ನಂಬಲಾಗಿದೆ[೨೮].

ದೇವಾಲಯದ ವಾರ್ಷಿಕ ಜಾತ್ರೆಯ ಸಮಯದಲ್ಲಿ ಕೆರೆಯಾಯನ (ತೆಪ್ಪೋತ್ಸವ)ದಂದು ರಾತ್ರಿ ಧನುರ್ಬಾಣ, ಬಾಳು ಭಂಡಾರ, ತಿರ್ಪಾಳ ದಂಡಿಗೆ, ಛತ್ರ, ಪತಾಕೆ ಬಿರುದು ಬಾವಲಿಗಳೊಂದಿಗೆ ಸೂಟೆ (ತೆಂಗಿನ ಗರಿಯ ಪಂಜು)ಗಳ ಬೆಳಕಿನಲ್ಲಿ ಉಳ್ಳಾಲ್ತಿಯ ಪಾತ್ರಿಗಳು ತಮ್ಮ ಪರಿವಾರದ ಮಲರಾಯ ಮತ್ತು ದಂಡನಾಯಕರೊಂದಿಗೆ ಶ್ರೀ ಮಹಾಲಿಂಗೇಶ್ವರನ ಸನ್ನಿಧಿಗೆ ಬರುವುದು ರೂಢಿ. ಇದನ್ನು ಭಂಡಾರ ಬರುವುದು ಎನ್ನುತ್ತಾರೆ. ಇದು ದೇವರ ಜತೆಯಲ್ಲಿ ರಥೋತ್ಸವದಂದು ಬಂಗರ ಕಾಯರ್‌ಕಟ್ಟೆಯವರೆಗೆ ಬಂದು ಅಲ್ಲಿಂದ ಬಲ್ನಾಡಿಗೆ ಹಿಂದಿರುಗುತ್ತದೆ.

ಈ ಉಳ್ಳಾಲ್ತಿಯು ದಂಡನಾಯಕನ ತಂಗಿಯೆಂದೂ ಪಾಡ್ದನಗಳು ತಿಳಿಸುತ್ತವೆ[೨೯]. ಅವುಗಳಲ್ಲಿ ಹೇಳಿರುವಂತೆ ಪುತ್ತೂರಿನಲ್ಲಿ ಬಂಗರಾಯನ ಕ್ರೌರ್ಯವು ಹೆಚ್ಚಾದಾಗ ಇಲ್ಲಿಯ ಜನರನ್ನು ರಕ್ಷಿಸಿ ಶಾಂತಿ ಸ್ಥಾಪಿಸುವುದಕ್ಕಾಗಿ ದಂಡನಾಯಕನೂ, ತಂಗಿ ಉಳ್ಳಾಲ್ತಿಯೂ, ಅಹಿ ಕ್ಷೇತ್ರದಿಂದ ಘಟ್ಟವನ್ನು ಇಳಿದು ತುಳುನಾಡಿಗೆ ಬಂದರು. ಬರುವ ದಾರಿಯಲ್ಲಿ ಸಿಕ್ಕಿದ ಸುಬ್ರಹ್ಮಣ್ಯಕ್ಷೇತ್ರಕ್ಕೆ ಬಂದು ಕುಮಾರಸ್ವಾಮಿಯನ್ನು ಅರ್ಚಿಸಿದರು. ಪುತ್ತೂರಿಗೆ ಬಂದು ಬಂಗರಾಯನೊಡನೆ ಕಾದಾಡುವ ಮೊದಲು ಈ ಅಣ್ಣ ತಂಗಿಯರು ಶ್ರೀ ಮಹಾಲಿಂಗೇಶ್ವರನ ಬಳಿ ಸಾರಿ ನಾನಾ ವಿಧವಾಗಿ ಸ್ತುತಿಸಿದರು. ಮಹಾದೇವನ ಲೀಲೆಯನ್ನು ಕೊಂಡಾಡಿ ವಿಶೇಷ ಶಕ್ತಿಯನ್ನು ಪಡೆದರು.

ಇವರು ಆಗಮನದ ವೇಳೆಯಲ್ಲಿ ಬಂಗರಾಯನು ಕಾಯರ್‌ಕಟ್ಟೆಯಲ್ಲಿ ತನ್ನ ದರ್ಬಾರನ್ನು ಏರ್ಪಡಿಸಿ ಕಂಬಳವನ್ನು ವೀಕ್ಷಿಸುತ್ತಿದ್ದನು. ಸುಖಲೋಲುಪನಾದ ಬಂಗರಾಯನನ್ನು ದಂಡನಾಯಕನೂ, ಉಳ್ಳಾಲ್ತಿಯೂ ಮುತ್ತಿಗೆ ಹಾಕಿದಾಗ ಬಂಗರಾಯನು ಅವರೊಡನೆ ಕಾದಾಡಿ ಮರಣವನ್ನಪಿದ. ರಾಜನಾಗಿದ್ದ ಬಂಗರಾಯನ ನೆನಪಿಗಾಗಿ ಅಂಕದ ಗದ್ದೆಯಲ್ಲಿ ಇವನ ಸಮಾಧಿಯನ್ನು ಕಟ್ಟಿಸಿ ಅದಕ್ಕೆ ಬಂಗರ ಕಾಯರ್‌ಕಟ್ಟೆ ಎಂದು ಹೆಸರಿಡಲಾಯಿತು[೩೦]. ಅವಿವಾಹಿತೆಯಾದ ಉಳ್ಳಾಲ್ತಿಯು ಕೆಲಕಾಲದ ಬಳಿಕ ಮಹಾಸತಿಯಾಗಿ ಇಹಲೋಕವನ್ನು ತ್ಯಜಿಸಿ ಶಕ್ತಿದೇವತೆಯಾಗಿ ಮೆರೆದಳು. ಈಕೆಯೂ ದಂಡನಾಯಕನೂ ಹಿಂದಿನ ಕಾಲದಲ್ಲಿ ದೇವಾಲಯದ ಪ್ರಾಂಗಣದಲ್ಲಿಯೇ ಗುಡಿಯನ್ನು ಹೊಂದಿದ್ದು ಕಾಲಾನಂತರದಲ್ಲಿ ಇತರ ದೈವಗಳ ಅಭಯದ ಅನುಸಾರ, ಬಲ್ನಾಡಿನಲ್ಲಿ ಗುಡಿಯನ್ನು ಕಟ್ಟಿ ಅವರನ್ನು

ಅಲ್ಲಿ ಪ್ರತಿಷ್ಠಾಪಿಸಲಾಯಿತು. ಆದರೆ ಇಂದಿಗೂ ಶ್ರೀ ಮಹಾಲಿಂಗೇಶ್ವರ ದೇವರ ಬಲಿ ಹೊರಡುವ ಮೊದಲು ಉಳ್ಳಾಲ್ತಿಯನ್ನು ಆಹ್ವಾನಿಸಿ ಪ್ರಾರ್ಥನೆ ಸಲ್ಲಿಸುವ ಸಂಪ್ರದಾಯವಿದೆ.

ಹದಿನೇಳನೆಯ ಶತಮಾನಕ್ಕೆ ಸೇರಿದ ಒಂದು ಮಾಸ್ತಿಕಲ್ಲು ಪುತ್ತೂರು ಮಹಾಲಿಂಗೇಶ್ವರ ದೇವಸ್ಥಾನದ ಅಶ್ವತ್ಥಕಟ್ಟೆಯ ಬಳಿಯಲ್ಲಿದೆ. ಇದರಲ್ಲಿ ಎರಡು ಅಂಕಣಗಳಿದ್ದು ಆರಾಧನೆ ನಡೆಯುತ್ತಿದೆ. ಎತ್ತರದ ವೇದಿಕೆ ಯಲ್ಲಿ ಕುಳಿತ ಸ್ತ್ರೀ ಕೆಳಗಿನ ಅಂಕಣದಲ್ಲಿ ವೀರನೊಬ್ಬ ಹಲ್ಲೆ ಮಾಡುವಂತಹ ಚಿತ್ರಣವಿದೆ. ಅದರ ಪಕ್ಕದಲ್ಲಿ ನಾಗನ ಕಲ್ಲುಗಳಿವೆ.

**೨.೫.೫. ಪುತ್ತೂರಿನ ಇತಿಹಾಸ ಮತ್ತು ಸಂಸ್ಕೃತಿ ಅಧ್ಯಯನದಲ್ಲಿ ಶಾಸನಗಳ ಮಹತ್ವ :**

ಪಿ. ಬಿ. ದೇಸಾಯಿಯವರು ಹೇಳುವಂತೆ 'ಶಾಸನಗಳು ದೊರೆಯದಿದ್ದರೆ ನಮ್ಮ ಚರಿತ್ರೆಯೊಂದು ಕತ್ತಲೆಯ ಗವಿಯಂತೆ ವಿಕಾರವಾಗಿ ತೋರುತ್ತಿತ್ತು'[೧೧]. ಶಾಸನಗಳು ಚರಿತ್ರೆಯಲ್ಲಿನ ಪ್ರಮುಖ ವ್ಯಕ್ತಿಗಳು, ಘಟನೆಗಳು ಮತ್ತು ಕಾಲಜ್ಞಾನ ಕುರಿತು ಖಚಿತ ಅರಿಕೆಯನ್ನು ಉಂಟುಮಾಡುವುದಲ್ಲದೆ, ರಾಜಕೀಯ ಆಗುಹೋಗುಗಳ ಕಾಲಮಿತಿ, ಕಾಲಾನುಕ್ರಮವನ್ನು ಹಾಗೂ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ವಿಷಯಗಳ ಅನೇಕ ವಿವರಗಳನ್ನು ಒದಗಿಸುತ್ತವೆ. ಪುತ್ತೂರಿನ ಶ್ರೀ ಮಹಾಲಿಂಗೇಶ್ವರ ದೇವಾಲಯದ ಒಳಾಂಗಣದಲ್ಲಿ ದೊರೆತ ಶಾಸನ ಕ್ರಿ. ಶ. ೧೪೫೧ರ ಸುಮಾರಿಗೆ ಪುತ್ತೂರನ್ನು ಪಾಂಡ್ಯಪ್ಪರಸ ಬಂಗರಾಯನೂ ದೇವ ಒಡೆಯರೆಂಬ ರಾಜಗುರುಗಳು ಪುತ್ತೂರಿನ ಶ್ರೀಮಹಾಲಿಂಗೇಶ್ವರ ದೇವರ ಸನ್ನಿಧಿಗೆ ಬಂದು, ಈ ದೇವಾಲಯ ಹಾಗೂ ಸೀಮೆಯ ಇತರ ದೇವಾಲಯಗಳಲ್ಲಿ ನಿತ್ಯನೈಮಿತ್ತಿಕ ಅನುಷ್ಠಾನಗಳು ಶಾಸ್ತ್ರೋಕ್ತವಾದ ರೀತಿಯಲ್ಲಿ ಸರ್ವಕಾಲವೂ ನಡೆಯುವಂತಾಗಲು ಮಾಡಿದ ವ್ಯವಸ್ಥೆಯನ್ನು ತಿಳಿಸುತ್ತದೆ.

ಪುತ್ತೂರಿನ ಬೀರ್‌ಮಲೆಯಲ್ಲಿ ದೊರೆತ ಮಣ್ಣಿನ ಪಾತ್ರೆಗಳಲ್ಲಿ ಶಿಲಾ ಸಂಸ್ಕೃತಿಯ ಕುರಿತಾಗಿ ಮಾಹಿತಿ ನೀಡುತ್ತವೆ. ಬಡಕಜೆಕಾರಿನಲ್ಲಿ ದೊರೆತ ಕಲ್ಗೋರಿಯ ಅವಶೇಷಗಳಿಂದ ಇಲ್ಲಿನ ಕಲ್ಲು ಕೆತ್ತನೆ ಕೆಲಸದ ವೈಶಿಷ್ಟ್ಯತೆಯ ಬಗ್ಗೆ ಅರಿಯಬಹುದು. ಪುತ್ತೂರಿನ ಮಹಾಲಿಂಗೇಶ್ವರ ದೇವಸ್ಥಾನದಲ್ಲಿ ದೊರೆತ ಮಾಸ್ತಿ ಕಲ್ಲಿನಲ್ಲಿ ಪುತ್ತೂರನ್ನು ಆಳುತ್ತಿದ್ದ ಬಂಗರಾಯನು ಸುಖಲೋಲಪನಾಗಿ ಜೀವನ ಸಾಗಿಸುತ್ತಿದ್ದಾಗ ಮತ್ತು ಪುತ್ತೂರಿನಲ್ಲಿ ಅವರ ಕ್ರೌರ್ಯವು ಹೆಚ್ಚಾದಾಗ ಇಲ್ಲಿಯ ಜನರನ್ನು ರಕ್ಷಿಸಿ ಶಾಂತಿ ಸ್ಥಾಪಿಸುವುದಕ್ಕಾಗಿ ಉಳ್ಳಾಲ್ತಿ ಎಂಬವಳು ಘಟ್ಟವನ್ನು ಇಳಿದು ತುಳುನಾಡಿಗೆ ಬಂದು ಬಂಗರಾಯನಲ್ಲಿ ಕಾದಾಡಿ ಅವನನ್ನು ಕೊಂದ ವಿವರಗಳಿವೆ.

ಹೀಗೆ ಪುತ್ತೂರಿನ ರಾಜಕೀಯ ಇತಿಹಾಸ ಹಾಗೂ ಸಾಂಸ್ಕೃತಿಕ ಇತಿಹಾಸದ ಪುನರ್ರಚನೆಯಲ್ಲಿ ಶಾಸನಗಳು ಮಹತ್ವದ ಪಾತ್ರವನ್ನು ವಹಿಸಿವೆ.

**೨.೬.೦ ಐತಿಹಾಸಿಕ ಸ್ಥಳಗಳು :**

ಪುತ್ತೂರು ತಾಲೂಕಿನಲ್ಲಿ ಹಲವಾರು ಐತಿಹಾಸಿಕ ಸ್ಥಳಗಳಿದ್ದು ಅವುಗಳಲ್ಲಿ ಮುಖ್ಯವಾದ ಕೆಲವೊಂದು ಸ್ಥಳಗಳ ವಿಶೇಷತೆಯನ್ನು ದಾಖಲಿಸುವ ಪ್ರಯತ್ನವನ್ನು ಮಾಡಲಾಗಿದೆ.

**೨.೬.೧. ಉಪ್ಪಿನಂಗಡಿ :** ಸ್ವಾತಂತ್ರ್ಯ ಪೂರ್ವದಲ್ಲಿ ತಾಲೂಕಿನ (ಕ್ರಿ.ಶ. ೧೯೨೭ರವರೆಗೆ) ಕೇಂದ್ರವಾಗಿದ್ದ ಉಪ್ಪಿನಂಗಡಿಯು, ಪುತ್ತೂರಿನಿಂದ ೧೨ ಕಿ.ಮೀ. ಈಶಾನ್ಯದಲ್ಲಿ ನೇತ್ರಾವತಿ – ಕುಮಾರಧಾರಾ ನದಿಗಳ ಸಂಗಮದ ಪಕ್ಕದಲ್ಲಿ ಬೆಳೆದು ನಿಂತ ಒಂದು ಪಟ್ಟಣವಾಗಿದ್ದು, ಪ್ರಸ್ತುತ ಅದು ಪುತ್ತೂರು ತಾಲೂಕಿನ ಒಂದು ಹೋಬಳಿ ಕೇಂದ್ರವಾಗಿದೆ. ಪ್ರಾಚೀನ ಕಾಲದಿಂದ ಹಲವಾರು ಶತಮಾನಗಳ ತನಕ ಕರಾವಳಿ ತೀರ ಮತ್ತು ಘಟ್ಟದ ಮೇಲಿನ ವ್ಯಾಪಾರಿಗಳು ಸಂಧಿಸುವ ಮತ್ತು ವ್ಯಾಪಾರ ವಹಿವಾಟುಗಳ ಒಂದು ಕೇಂದ್ರವಾಗಿತ್ತು. ಘಟ್ಟದ ಮೇಲಿನ ವ್ಯಾಪಾರಿಗಳು ಮುಖ್ಯವಾಗಿ ಇಲ್ಲಿನ ಪೇಟೆಯಲ್ಲಿ ಉಪ್ಪನ್ನು ಖರೀದಿಸುತ್ತಿದ್ದುದರಿಂದ ಈ ಸ್ಥಳಕ್ಕೆ ಉಪ್ಪಿನಂಗಡಿ ಎಂಬ ಹೆಸರು ಬಂದಿರಬೇಕೆಂದು ತಿಳಿಯಲಾಗಿದೆ. ತುಳುವರಿಗೆ ಇದು ಉಬಾರ್, ಉಬಾರ್ ಎಂದರೆ ಉಬ್ಬರ, ಮಳೆಗಾಲದ ಸಮಯ ನೇತ್ರಾವತಿ – ಕುಮಾರಧಾರ ನದಿಯಲ್ಲಿ ಉಕ್ಕಿ ಹರಿಯುವ ಪ್ರವಾಹದಿಂದಾಗಿ ಈ ಸ್ಥಳ ಮುಳುಗಿ ಹೋಗುವುದರಿಂದ ಈ ಊರನ್ನು 'ಉಬಾರು' ಎಂದು ಕರೆಯಲಾಗಿದೆ.

ದಕ್ಷಿಣ ಕನ್ನಡದಲ್ಲಿ ಪತ್ತೆ ಹಚ್ಚಲಾದ ಶಿಲಾಯುಗದ ಕೇಂದ್ರಗಳಲ್ಲಿ ಉಪ್ಪಿನಂಗಡಿ ಕೂಡ ಒಂದು. ಪುಣೆಯ ಡೆಕ್ಕನ್ ಕಾಲೇಜಿನ ಸಂಶೋಧಕ ಡಾ. ಪಿ. ರಾಜೇಂದ್ರನ್ ೧೯೮೫ರಲ್ಲಿ ಉಪ್ಪಿನಂಗಡಿಯಲ್ಲಿ ನೇತ್ರಾವತಿ ನದಿ ತೀರದಲ್ಲಿ ಮಧ್ಯ ಶಿಲಾಯುಗ ಮತ್ತು ಹೊಸ ಶಿಲಾಯುಗದ ಕುರುಹುಗಳನ್ನು ಸಂಶೋಧಿಸಿ ದಾಖಲಿಸಿದ್ದಾರೆ. ಇದು ಕ್ರಿ. ಪೂ. ೫೦೦೦ ವರ್ಷಗಳ ಹಿಂದಿನಿಂದಲೇ ಇಲ್ಲಿ ಮಾನವ ನೆಲೆಗಳಿದ್ದವು ಎಂಬುದನ್ನು ಸಮರ್ಥಿಸುತ್ತದೆ.

ಕ್ರಿ.ಶ. ೧೮೮೧ರಿಂದ ೧೯೨೭ರ ವರೆಗೆ ಉಪ್ಪಿನಂಗಡಿಯು, ಉಪ್ಪಿನಂಗಡಿ ತಾಲೂಕಿನ (ಕ್ರಿ.ಶ. ೧೯೨೭ರ ನಂತರ ಪುತ್ತೂರು ತಾಲೂಕು) ಕೇಂದ್ರವಾಗಿತ್ತು[೨]. ನದಿ ಸಂಗಮದಿಂದಾಗಿ ಇದನ್ನು 'ಗಯಾಪದ ಕ್ಷೇತ್ರ', 'ದಕ್ಷಿಣಕಾಶಿ' ಎಂದು ಕರೆಯುತ್ತಾರೆ. ಇಲ್ಲಿ ಮಾಘ ಮಾಸದ ಅಮಾವಾಸ್ಯೆ, ಫಲ್ಗುಣದ ಹುಣ್ಣಿಮೆ ಮತ್ತು ಕೃಷ್ಣ ಪಕ್ಷದ ಅಷ್ಟಮಿಯಂದು ಅಂದರೆ ವರ್ಷಕ್ಕೆ ಮೂರು ಸಲ ತೀರ್ಥಸ್ನಾನ ಜಾತ್ರೆ ನಡೆಯುತ್ತದೆ. ಈ ತೀರ್ಥಸ್ನಾನವನ್ನು 'ಮಖೆ' ಎಂದು ಈ ಜಾತ್ರೆಯನ್ನು 'ಮಖೆ ಜಾತ್ರೆ' ಎಂದು ಕರೆಯುವುದು ರೂಢಿ. ಇಲ್ಲಿ ಸಹಸ್ರಲಿಂಗೇಶ್ವರ ದೇವಸ್ಥಾನ, ಶ್ರೀ ಲಕ್ಷ್ಮೀ ವೆಂಕಟರಮಣ ದೇವಸ್ಥಾನ, ಮಾಂಕಾಳಿ ಅಬ್ಬೆಯ ಗುಡಿ ಇವೆ. ಅಲ್ಲದೆ ಚಂದ್ರನಾಥ ಬಸದಿ, ಕ್ರೈಸ್ತರ ಚರ್ಚು ಮತ್ತು ಮುಸ್ಲಿಂ ಮಸೀದಿಗಳು ಉಪ್ಪಿನಂಗಡಿಯಲ್ಲಿವೆ. ಈ ಸ್ಥಳವು ಬಂಗರಸರ ಆಳ್ವಿಕೆಗೆ

ಒಳಪಟ್ಟಿದ್ದಾಗ, ಲಕ್ಷ್ಮಪ್ಪರಸ ಬಂಗನು ಕ್ರಿ.ಶ. ೧೪೧೧ರಲ್ಲಿ ಇಲ್ಲೊಂದು ಕೋಟೆ ಮತ್ತು ಅರಮನೆಯನ್ನು ಕಟ್ಟಿದ್ದನೆಂದು ತಿಳಿಯಾಗಿದೆ[೩೩]. ಆದರೆ ಈಗ ಅವೆರಡು ನಾಶವಾಗಿದೆ.

೨.೩.೨. **ಬೆಂದ್ರ್‌ತೀರ್ಥ** : 'ಬೆಂದ್ರ್‌ತೀರ್ಥ'ವು ದಕ್ಷಿಣ ಭಾರತದ ಏಕೈಕ ಬಿಸಿ ನೀರಿನ ಚಿಲುಮೆ[೩೪]. ಪುತ್ತೂರು ಪೇಟೆಯಿಂದ ೧೫ ಕಿ. ಮೀ. ದೂರದಲ್ಲಿರುವ ಇರ್ದೆಯ, ಬೈಲಾಡಿ ಎಂಬಲ್ಲಿ ಇರುವ ಈ ಕೊಳದ ನೀರಿನಲ್ಲಿ ಕೆಲವು ದಿನ ಸ್ನಾನ ಮಾಡಿದರೆ ಕೆಲವೊಂದು ಚರ್ಮ ರೋಗಗಳು ವಾಸಿಯಾಗುತ್ತವೆ ಎಂಬುದು ಜನರ ನಂಬಿಕೆ. ಈ ಕೊಳದ ನೀರು ಗಂಧಕದ ವಾಸನೆಯಿಂದ ಕೂಡಿದ್ದು ಈ ನೀರಿನಲ್ಲಿ ಸ್ನಾನ ಮಾಡಿದರೆ ಚರ್ಮರೋಗಗಳು ವಾಸಿಯಾಗುತ್ತವೆ ಎಂದು ಹಳ್ಳಿ ಜನ ನಂಬಲು ಮುಖ್ಯ ಕಾರಣ. ತುಳು ಭಾಷೆಯಲ್ಲಿ 'ಬೆಂದ್ರು' ಅಂದರೆ ನೀರನ್ನು ಹಂಡೆಯಲ್ಲಿ ಕಾಯಿಸಿ ಬಿಸಿನೀರು ತಯಾರಿಸುವುದು. 'ತೀರ್ಥ' ಎಂದರೆ ಪವಿತ್ರ ಜಲ, ಆದುದರಿಂದ ಈ ಕೊಳದಲ್ಲಿರುವ ನೀರನ್ನು ಬಿಸಿ ಪವಿತ್ರಜಲ ಎಂದು ಸ್ಥಳೀಯ ಜನರು ನಂಬಿದ್ದಾರೆ. ಹಲವು ವರ್ಷಗಳ ಹಿಂದೆಯೇ ಈ ಬಿಸಿನೀರಿನ ಬುಗ್ಗೆಯ ಸುತ್ತ ೨೬ ಅಡಿ, ೧೩ ಅಡಿ ವಿಸ್ತೀರ್ಣವಿರುವ ಒಂದು ಕೊಳವನ್ನು ರಚಿಸಲಾಗಿದೆ. ಈ ಚಿಲುಮೆಯಿಂದ ಗಂಟೆಗೆ ೧೩೫೦ರಿಂದ ೪೬೦೦ ಲೀಟರ್‌ನಷ್ಟು ನೀರು ಹೊರಚಿಮ್ಮುತ್ತದೆ. ಇದರ ಉಷ್ಣಾಂಶ ೯೯ ಡಿಗ್ರಿಯಿಂದ ೧೦೬ ಡಿಗ್ರಿ ಫಾರನ್ ಹೀಟ್.

ಕೆ. ಶಿವರಾಮ ಕಾರಂತರು ೧೯೪೯ರಲ್ಲಿ ಪ್ರಕಟಿಸಿದ 'ಕರುಳಿನ ಕರೆ' ಎಂಬ ತಮ್ಮ ಕಾದಂಬರಿಯಲ್ಲಿ ಈ ಕೊಳದ ಬಗ್ಗೆ ತಿಳಿಸಿದ್ದಾರೆ. 'ಇರ್ದೆಯ ಕೆರೆ ಆ ಪ್ರಾಂತ್ಯಕ್ಕೆ ಹೆಸರಾದದ್ದು, ನದಿಯ ಮಗ್ಗುಲಿಗೆ ಇರುವ ಚಿಕ್ಕದೊಂದು ನೀರಿನ ಕುಂಡ, ನಡುಗಾತ್ರಕ್ಕಷ್ಟೆ ನೀರು. ಅಲ್ಲಿ ಸದಾ ಬೆಚ್ಚಗಿನ ನೀರು ತುಂಬಿರುತ್ತದೆ. ನೆಲದೊಳಗಿಂದ ಬಿಸಿನೀರಿನ ಗುಳ್ಳೆಗಳು ಮೇಲಕ್ಕೆ ನೆಗೆಯುತ್ತಲೇ ಇರುತ್ತವೆ. ಇಲ್ಲಿ ಮಾತ್ರ ಬಿಸಿನೀರು, ನಾಲ್ಕು ಮಾರಿನ ಆಚೆ ತಣ್ಣೀರ ಹೊಳೆ', ಹಿಂದಿನ ದಿನಗಳಲ್ಲಿ ಶ್ರಾವಣ ಅಮವಾಸ್ಯೆ (ತೀರ್ಥ ಅಮವಾಸ್ಯೆ) ಯ ಶುಭದಿನದಂದು ಸಮೀಪದ ಹಳ್ಳಿಗಳಿಂದ ಸಾವಿರಾರು ಜನರು ಈ ಕೊಳದ ಬಳಿ ಸೇರುತ್ತಿದ್ದರು. ಭಕ್ತರು ಈ ಕೊಳಕ್ಕೆ ಮೂರು ಪ್ರದಕ್ಷಿಣೆ ಹಾಕಿ ನಂತರ ಕೊಳದ ನೀರಿನಲ್ಲಿ ಮುಳುಗು ಹಾಕುತ್ತಿದ್ದರು ಅಥವಾ ಸ್ನಾನ ಮಾಡುತ್ತಿದ್ದರು. ಮತ್ತು ಫಲ ತಾಂಬೂಲ ಮತ್ತು ಕಾಣಿಕೆ (ಹಣ)ಯನ್ನು ಕೊಳಕ್ಕೆ ಹಾಕುತ್ತಿದ್ದರು. ಸ್ಥಳೀಯ ಮರಾಠಿಜಾತಿಯಲ್ಲಿ ಹೊಸದಾಗಿ ವಿವಾಹವಾದ ದಂಪತಿಗಳಿಗೆ ಈ ಕೊಳದಲ್ಲಿ ತೀರ್ಥಸ್ನಾನ ಮಾಡುವುದು ಕಡ್ಡಾಯವಾಗಿತ್ತು.

ಕೊಳದ ಪಕ್ಕದಲ್ಲಿ 'ಸೀರೆ ಹೊಳೆ' ಹರಿಯುತ್ತಿದೆ. ಹೊಳೆಗೆ ಅಡ್ಡಲಾಗಿ ಸಮೀಪದಲ್ಲಿ 'ವೆಂಟೆಡ್ ಡ್ಯಾಂ' ಕಟ್ಟಲಾಗಿದೆ. ಹೊಳೆಯ ಮತ್ತೊಂದು ಬದಿಯಲ್ಲಿ ಶ್ರೀ ವಿಷ್ಣುಮೂರ್ತಿ ದೇವಸ್ಥಾನವಿದೆ.

೨.೬.೩ **ಕಡಬ:** ಪ್ರಸ್ತುತ, ಪುತ್ತೂರು ತಾಲೂಕಿನ ಒಂದು ಹೋಬಳಿಯಾಗಿರುವ ಕಡಬವು, ಉಪ್ಪಿನಂಗಡಿ– ಸುಬ್ರಹ್ಮಣ್ಯ ಮಾರ್ಗದಲ್ಲಿ ಪುತ್ತೂರಿನಿಂದ ೪೨ ಕಿ.ಮೀ. ದೂರದಲ್ಲಿದ್ದು ಕದಂಬ ವಂಶದ ಆಳ್ವಿಕೆ ಕಾಲದಿಂದಲೇ ಅದು ಸೀಮೆಯ ಕೇಂದ್ರವಾಗಿತ್ತು[೩೪]. ವಿಜಯನಗರ ಅರಸರ ಆಳ್ವಕೆ ವೇಳೆ ಕಡಬವು, ಮಂಗಳೂರು ರಾಜ್ಯದ ಒಂದು ಆಡಳಿತ ವಿಭಾಗವಾಗಿ 'ಕಡಬ ಸ್ಥಳ'ವೆಂದು ಕರೆಯಲ್ಪಡುತ್ತಿದ್ದು, ಕ್ರಿ.ಶ. ೧೮೮೧ರ ತನಕ ಅದು ಪುತ್ತೂರು ತಾಲೂಕಿನ ಕೇಂದ್ರವಾಗಿತ್ತು. ಕಡಬದಲ್ಲಿ ಕದಂಬರ ಕಾಲದ ವೀರಗಲ್ಲೊಂದು ಈಗಲೂ ಇದ್ದು, ಅಲ್ಲೊಂದು ರಸಬಾವಿ ಇದೆ ಎಂಬ ಪ್ರತೀತಿ ಮಾತ್ರ ಇದೆ. ಅಲ್ಲಿ ಬಲ್ಲಾಳರ ಬೀಡು ಇದ್ದು ಅವರು ಕೋಡಿಂಬಾಳ, ಕುಟ್ರುಪಾಡಿ ಮತ್ತು ಕಡಬ ಎಂಬ ಮೂರು ಗ್ರಾಮ ಗಳನ್ನು ಆಳುತ್ತಿದ್ದರು. ಅಲ್ಲಿ ಶ್ರೀ ಅನಂತನಾಥ ಸ್ವಾಮಿ ಬಸದಿ, ಕ್ರೈಸ್ತರ ಚರ್ಚು ಮತ್ತು ಶ್ರೀ ಗಣೇಶ ಮತ್ತು ನೀಲಕಂಠ ದೇವಸ್ಥಾನಗಳಿವೆ .

೨.೬.೪ **ಸವಣೂರು :** ಪುತ್ತೂರು–ಸುಬ್ರಹ್ಮಣ್ಯ ಮಾರ್ಗದಲ್ಲಿ, ಪುತ್ತೂರು ಪೇಟೆಯಿಂದ ೧೩ ಕಿ.ಮೀ. ದೂರ ದಲ್ಲಿರುವ ಒಂದು ಐತಿಹಾಸಿಕ ಸ್ಥಳ. ಪ್ರಸಿದ್ಧ ಚಂದ್ರನಾಥ ಬಸದಿ ಇರುವ ಇದು ಒಂದೊಮ್ಮೆ ಜೈನ ಶ್ರಾವಕರ ಊರಾಗಿತ್ತು. ಆದುದರಿಂದ ಶ್ರವಣರ ಊರು ಸವಣೂರು ಎಂದಾಯಿತು. ತುಳುನಾಡಿನಾದ್ಯಂತ ಜೈನಅರಸರು ಅಧಿಕಾರದ ಚುಕ್ಕಾಣಿ ಹಿಡಿದಿದ್ದ ವೇಳೆ ಜೈನರ ಕೇಂದ್ರವಾಗಿದ್ದ ಸವಣೂರಿನಲ್ಲಿ ಸಿಗುವ ಒಂದು ಶಾಸನದ ಪ್ರಕಾರ ಈ ಸ್ಥಳವು ಪಣಪಿಲದ ಕೊಣ್ಣರೆಂಬ ಜೈನರ ಆಳ್ವಿಕೆಗೊಳಪಟ್ಟಿತ್ತು[೩೫]. ಸವಣೂರಿನ ಸುತ್ತಮುತ್ತ ಈಗಲೂ ಹಲವು ಜೈನ ಬಸದಿಗಳಿವೆ. ಈ ಬಸದಿಗಳಿರುವ ಸ್ಥಳದಲ್ಲಿ ಹಿಂದೆ ಒಂದು ಹೂದೋಟವಿದ್ದು ಅದನ್ನು ಪುಷ್ಪಪುರವೆಂದು ಕರೆಯಲಾಗುತ್ತಿತ್ತು. ಪುಷ್ಪಪುರವು ಪೂದೋಟವಾಗಿ ಪ್ರಸ್ತುತ ಪುದ್ದೊಟ್ಟು ಎಂದು ಕರೆಯಲ್ಪಡುತ್ತಿದೆ.

**೨.೬.೫ ಪಡುಮಲೆ :** ತುಳುನಾಡಿನ ಸಾಂಸ್ಕೃತಿಕ ವೀರರಾಗಿ, ಪ್ರಸ್ತುತ ನಾಡಿನ ದೈವಗಳ ಸಾಲಿನಲ್ಲಿ ಸ್ಥಾನಪಡೆದಿರುವ ಕೋಟಿ–ಚೆನ್ನಯರು ಹುಟ್ಟಿದ ಪರ್ಮಲೆಯೇ ಇಂದಿನ ಪಡುಮಲೆ[೩೬], ಪುತ್ತೂರಿನಿಂದ ಸುಮಾರು ೨೫ ಕಿ.ಮೀ. ದೂರದಲ್ಲಿ ಈಶ್ವರಮಂಗಲದ ಸಮೀಪ ಬಡಗನ್ನೂರು ಗ್ರಾಮದಲ್ಲಿರುವ ಈ ಚಾರಿತ್ರಿಕ ಪ್ರಸಿದ್ಧ ಸ್ಥಳವು ಬೀಡಿನ ಬಲ್ಲಾಳರ ಕೇಂದ್ರವಾಗಿತ್ತು. ಮಾಡ್ನೂರು, ಪಡುವನ್ನೂರು, ಇರ್ದೆ, ಬೆಟ್ಟಂಪಾಡಿ, ನಿಡ್ಪಳ್ಳಿ, ಬಡಗನ್ನೂರು, ಅರಿಯಡ್ಕ, ಕನಕಮಜಲು ಇತ್ಯಾದಿ ಸ್ಥಳಗಳು ಈ ಬೀಡಿನ ಬಲ್ಲಾಳರ ಅಧೀನದಲ್ಲಿದ್ದವು. ಕೋಟಿ–ಚೆನ್ನಯರು ಆಡುತ್ತಿದ್ದರೆನ್ನಲಾದ ದೊಡ್ಡ ಗುಂಡುಕಲ್ಲುಗಳೂ, ಆಡುತ್ತಿದ್ದ ಕಂಬಳದ ಗದ್ದೆ, ಬಲ್ಲಾಳನ ಅರಮನೆ ಇದ್ದ ಸ್ಥಳ, ಬುದ್ಧಿವಂತ ಮಂತ್ರಿಯನ್ನು ಕೊಂದ ಸ್ಥಳವೆಲ್ಲವನ್ನು ಸ್ಥಳೀಯ ಜನರು ಗುರುತಿಸುತ್ತಾರೆ.

**೨.೬.೬ ಎಣ್ಮೂರು :** ಅವಿಭಜಿತ ಪುತ್ತೂರು ತಾಲೂಕಿನ ಭಾಗವಾಗಿದ್ದು, ಪ್ರಸ್ತುತ ಸುಳ್ಯ ತಾಲೂಕು ವ್ಯಾಪ್ತಿಯೊಳಗೆ ಇರುವ ಎಣ್ಮೂರಿನಲ್ಲಿ ತುಳುನಾಡಿನ ವೀರ ಸಹೋದರರಾದ ಕೋಟಿ-ಚೆನ್ನಯರ ಸಮಾಧಿಗಳಿವೆ.

**೨.೬.೭ ಜಾಂಬ್ರಿ ಗುಹೆ :** ಪುತ್ತೂರಿನಿಂದ ಸುಮಾರು ೧೫ ಕಿ.ಮೀ. ದೂರದಲ್ಲಿರುವ ಪಾಣಾಜೆ ಗ್ರಾಮದ ಆರ್ಲಪದವು ಪೇಟೆ ಸಮೀಪ ಅರಣ್ಯದೊಳಗೆ ಸಾಗುವ ಮಣ್ಣಿನ ರಸ್ತೆಯಲ್ಲಿ ೫ ಕಿ.ಮೀ. ದೂರ ಕ್ರಮಿಸಿದಾಗ ಸಿಗುವ ಗುಡ್ಡದಲ್ಲಿ, ರಸ್ತೆಯ ಬಲಭಾಗದಲ್ಲಿರುವ ಒಂದು ಗುಹೆಯನ್ನು 'ಜಾಂಬ್ರಿಗುಹೆ' ಎಂದು ಕರೆಯುತ್ತಾರೆ[೩೭]. ಖರಾಸುರನೆಂಬ ರಾಕ್ಷಸ ಕಾಶೀಕ್ಷೇತ್ರದಿಂದ ತಂದ ಮೂರು ಶಿವಲಿಂಗಗಳಲ್ಲಿ ಒಂದನ್ನು ಈ ಪ್ರದೇಶದಲ್ಲಿ ಪ್ರತಿಷ್ಠಾಪಿಸಿದನೆಂಬ ಐತಿಹ್ಯವಿದೆ. ಖರಾಸುರ ತಲೆ ಎತ್ತಿದ ಜಾಗದಲ್ಲಾದ ಗುಹೆ ಸ್ವಯಂಭೂ-ಜಾಂಬ್ರಿಗುಹೆ, ಸಾಮಾನ್ಯವಾಗಿ ಜಾಂಬ್ರಿ ಉತ್ಸವ ಮೇ ತಿಂಗಳಲ್ಲಿ ನಡೆಯುತ್ತದೆ. ಉತ್ಸವದ ಸಂದರ್ಭದಲ್ಲಿ ಊರಿನ ಕಾಪಾಡ ಮತ್ತು ತಂತ್ರಿಗಳು ಏಣಿಯ ಮೂಲಕ ಗುಹೆಯೊಳಗೆ ಇಳಿದು ಒಳಗೆ ಪೂಜೆ ನಡೆಸಿ ಹಿಂದಿರುಗುತ್ತಾರೆ. ಇದನ್ನು ಜಾಂಬ್ರಿ ಯಾತ್ರೆ ಎನ್ನುತ್ತಾರೆ. ೧೨ ವರ್ಷಗಳಿಗೊಮ್ಮೆ ಮಾತ್ರ ಜಾಂಬ್ರಿ ಉತ್ಸವ ನಡೆಯುತ್ತದೆ .

**೨.೬.೮ ಸನ್ಯಾಸಿಗುಹೆ :** ಪುತ್ತೂರು ತಾಲೂಕಿನ ಕೆದಂಬಾಡಿ ಗ್ರಾಮದಲ್ಲಿ ಸನ್ಯಾಸಿಗುಡ್ಡೆ ಎಂದು ಕರೆಯಲ್ಪಡುವ ಎತ್ತರದ ಸ್ಥಳವೊಂದರಲ್ಲಿ ಪ್ರಾಚೀನ ಗುಹೆಗಳೆರಡು ಕಂಡುಬಂದಿದ್ದು ಸ್ಥಳೀಯವಾಗಿ ಅವು ಸನ್ಯಾಸಿ ಗುಹೆಗಳೆಂದು ಹೆಸರುವಾಸಿಯಾಗಿವೆ. ಹತ್ತು ಹದಿನೈದು ಜನರಿಗೆ ಸ್ಥಳಾವಕಾಶವಿರುವ ಈ ಗುಹೆಗಳ ಸಮೀಪವಿರುವ ಕಲ್ಲುಬಂಡೆಯಲ್ಲಿ ಚೆನ್ನೆಯ ಮತ್ತು ರುಬ್ಬುವ ಕಲ್ಲನ್ನು ಚಿತ್ರಿಸಿದ್ದು, ಗುಹೆಯೊಳಗೆ ಕೆಲವು ವರ್ಷಗಳ ಹಿಂದೆ ಮಣ್ಣಿನ ಮತ್ತು ಹಿತ್ತಾಳೆಯ ಪಾತ್ರೆಗಳು ದೊರಕಿವೆ. ಆದರೆ ಅವುಗಳಲ್ಲಿ ಯಾವುದೇ ರೀತಿಯ ಲಿಪಿ, ಬರಹಗಳು ಕಂಡುಬಂದಿಲ್ಲ. ಈ ಹಿನ್ನೆಲೆಯಲ್ಲಿ ಅವುಗಳನ್ನು 'ಹೊಸ ಶಿಲಾಯುಗ' ಅಥವಾ 'ತಾಮ್ರ ಯುಗ'ಕ್ಕೆ ಸೇರಿರುವ ಜನವಸತಿಯ ನೆಲೆಗಳೆಂದು ಹೆಸರಿಸಬಹುದು.

**೨.೬.೯ ವಿಷ ಸರೋವರ :** ಪುರಾಣ ಪ್ರಸಿದ್ಧವಾದ 'ವಿಷ ಸರೋವರ' (ಕೆರೆ)ವೊಂದು ಪುತ್ತೂರು ತಾಲೂಕಿನ ಕುಂತೂರು ಗ್ರಾಮದ ಕೆದ್ದೊಟ್ಟುವಿನಲ್ಲಿದೆ. ಉಪ್ಪಿನಂಗಡಿ ಸುಬ್ರಹ್ಮಣ್ಯ ರಸ್ತೆಯಲ್ಲಿ ಉಪ್ಪಿನಂಗಡಿಯಿಂದ ಸುಮಾರು ೧೫ ಕಿ.ಮೀ. ದೂರದಲ್ಲಿ ಬಲಬದಿ ಸಾಗುವ ಕಚ್ಚಾ ರಸ್ತೆಯಲ್ಲಿ ೧.೫ ಕಿ.ಮೀ. ಸಾಗಿದರೆ ಸಿಗುವುದೇ ಶಿರಾಡಿ ದೈವದ ಸ್ಥಾನ, ಇಲ್ಲಿಂದ ಮುಂದುವರಿದು ಸಿಗುವ ಏಣಾಜೆಯೆಂಬ ಬೈಲನ್ನು ದಾಟಿ ಮತ್ತೆ ೧.೫ ಕಿ.ಮೀ. ದೂರ ಕ್ರಮಿಸಬೇಕು ಅಥವಾ ಕುಂತೂರು ಪೇಟೆಯಿಂದ ಸ್ವಲ್ಪ ಮುಂದೆ ಬಲಬದಿಯಲ್ಲಿ ಸಿಗುವ ಕಚ್ಚಾರಸ್ತೆಯಲ್ಲಿ ಸುಮಾರು ೧೦ ಕಿ.ಮೀ.ನಷ್ಟು ಕ್ರಮಿಸಿದರೆ ಮುಂದೆ ಸಿಗುವ ಅಡಿಕೆ ತೋಟವನ್ನು ದಾಟಿದರೆ ಕಾಣಸಿಗುವುದೇ ಕೆದ್ದೊಟೆಯ ವಿಶಾಲವಾದ 'ಕೆದ್ದಡ' ಎಂಬ ಹೆಸರಿರುವ ವಿಶಾಲವಾದ ಕೆರೆ. ಈ ಕೆರೆಯ ಸಮೀಪದಲ್ಲಿ ಒಂದು

ನಾಗಬನವಿದ್ದು ಅಲ್ಲಿಯೇ ಬಳಿಯಲ್ಲಿ ಪಾಂಡವರ ಕಲ್ಲಿನ ಮೂರ್ತಿಗಳಿವೆ. ಒಂದು ಮೂರ್ತಿ ಮಾತ್ರ ತುಂಡರಿಸಲ್ಪಟ್ಟಿದ್ದು ಇತರ ನಾಲ್ಕು ಮೂರ್ತಿಗಳು ಸುಸ್ಥಿತಿಯಲ್ಲಿವೆ. ಇಲ್ಲಿರುವ ಪಾಂಡವರ ಮೂರ್ತಿಗಳಿಗೆ ಪೂಜೆ ಮತ್ತು ಪಂಚಕಜ್ಜಾಯ ಪೂಜೆಗಳನ್ನು ಮಾಡಲಾಗುತ್ತದೆಯೆಂದು ಅಲ್ಲಿನ ಸ್ಥಳೀಯರಾದ ಮೋನಪ್ಪ ಗೌಡ ತಿಳಿಸಿದ್ದಾರೆ.

ಈ ಸರೋವರಕ್ಕೆ ಸಂಬಂಧಪಟ್ಟ 'ಚಲ್ಲಮೇರ'ನ ಐತಿಹ್ಯವೊಂದಿದೆ[೩೮]. ಅದರ ಪ್ರಕಾರ ಕೆಡ್ಡಸದ (ಮೇ ತಿಂಗಳಲ್ಲಿ ಬರುವ ತುಳು ವಾಡಿಕೆಯ ಹಬ್ಬ) ಬೇಟೆಗಾಗಿ ಕಲೆಂಜಿಮಲೆ ಕಡಿಗೆ ಹೋದ ಚಲ್ಲಮೇರನು ಅಲ್ಲಿ ಬೆಂಕಿಯಿಂದ ಆವರಿಸಲ್ಪಟ್ಟ ಸರ್ಪವೊಂದನ್ನು ರಕ್ಷಿಸಿ ಪಶ್ಚಿಮಾಭಿಮುಖವಾಗಿ ಇಳಿದು ಬಂದು ತಂಪಾದ ನೀರಿನ ಹಳ್ಳವಿರುವ ಪ್ರದೇಶದಲ್ಲಿ ಅದನ್ನು ಬಿಡುತ್ತಾನೆ. ತನಗೆ ನೀಡಿದ ಸಹಾಯಕ್ಕೆ ಪ್ರತ್ಯುಪಕಾರ ಮಾಡುವ ಉದ್ದೇಶದಿಂದ ಸರ್ಪವು ನಿಧಿಯೊಂದನ್ನು ಎಳೆದುತಂದಾಗ ಉಂಟಾದ ಶಬ್ದಕ್ಕೆ ಹೆದರಿ ಚಲ್ಲಮೇರನು ಓಡಿಹೋಗುತ್ತಾನೆ. ಅವನನ್ನು ಕಾಣದ ಸರ್ಪವು ಆ ನಿಧಿಯು ಅಲ್ಲೆ ಹೂತು ಹೋಗಿ ನೀರು ಮೇಲೆ ಬಂದು ಈ ಕೆರೆ ನಿರ್ಮಾಣವಾಯಿತೆಂದು ಸ್ಥಳೀಯವಾಗಿ ಪ್ರಚಲಿತವಿರುವ ಐತಿಹ್ಯ

**೨.೬.೧೦ ಕೆಮ್ಮಾಲ್ ಸರೋವರ :** ಪುತ್ತೂರು ತಾಲೂಕಿನ ಒಂದು ಹೋಬಳಿ ಕೇಂದ್ರವಾಗಿರುವ ಉಪ್ಪಿನಂಗಡಿಯ ಸಮೀಪವಿರುವ ಹಿರೇಬಂಡಾಡಿ ಗ್ರಾಮದಲ್ಲಿ, ಕೆಮ್ಮಾಲ್ ಎಂಬ ಸರೋವರವೊಂದು ಇತ್ತು ಎಂದು ಕೃತಿಗಳಲ್ಲಿ ದಾಖಲಾಗಿದೆ[೩೯]. ಆದರೆ ಪ್ರಸ್ತುತ ಅಲ್ಲಿ ಅಂತಹ ಯಾವುದೇ ಸರೋವರ ಕಂಡುಬರುವುದಿಲ್ಲ.

**೨.೬.೧೧ ಬಾಲವನ :** ಶಿವರಾಮ ಕಾರಂತರು ಪುತ್ತೂರಿನಲ್ಲಿ ವಾಸವಾಗಿದ್ದ ಮನೆ ಬಾಲವನ. ಪುತ್ತೂರು ಕೇಂದ್ರ ಬಸ್ ನಿಲ್ದಾಣದಿಂದ ೨ ಕಿ.ಮೀ. ದೂರದಲ್ಲಿರುವ ಪರ್ಲಡ್ಕ ಎಂಬಲ್ಲಿ ಕಾರಂತರು ಬಾಲವನವನ್ನು ಕಟ್ಟಿ ಅಲ್ಲಿ ಸುಮಾರು ೪೦ ವರ್ಷ ಕಾಲ ವಾಸವಾಗಿದ್ದರು. ಡಾ। ಶಿವರಾಮ ಕಾರಂತರು ಬಾಲವನದಲ್ಲಿ ವಾಸವಾಗಿದ್ದಷ್ಟು ಕಾಲ ಅದೊಂದು ಮನೆ ಮಾತ್ರ ಆಗಿರದೆ ಒಂದು ಸಾಂಸ್ಕೃತಿಕ ಕೇಂದ್ರವಾಗಿ ರೂಪುಗೊಂಡಿತ್ತು. ಅಲ್ಲಿದ್ದ ಪುಟಾಣಿ ರೈಲು (೧೯೩೫) ಚಿಕ್ಕ ಪ್ರಾಣಿಸಂಗ್ರಹಾಲಯ ಮತ್ತು ಹಲವು ಆಟದ ಸಾಮಾನುಗಳು ಮುಖ್ಯವಾಗಿ ಮಕ್ಕಳ ಆಕರ್ಷಣೆಯ ಕೇಂದ್ರವಾಗಿದ್ದವು[೪೦]. ಪ್ರಾತ್ಯಕ್ಷಿಕೆಗಳ ಮೂಲಕ ಮಕ್ಕಳಿಗೆ ಪಾಠ ಹೇಳಿ ಕೊಡುತ್ತಿದ್ದ ಕಾರಂತರು, ಸ್ವತಃ ನಾಟಕ ಬರೆದು ಮಕ್ಕಳಿಂದ ಆಡಿಸುತ್ತಿದ್ದರು. ಆ ಮೂಲಕ ನಿಜಾರ್ಥದಲ್ಲಿ ಇದೊಂದು ಬಾಲಜಗತ್ತಾಗಿತ್ತು .

ನಾಲ್ಕು ದಶಕಗಳ ಕಾಲ ಸಾಹಿತ್ಯ ಮತ್ತು ಕಲಾರಂಗದಲ್ಲಿ ವಿವಿಧ ಪ್ರಯೋಗಗಳನ್ನು ಮಾಡಿದ ಈ ಸ್ಥಳಕ್ಕೆ ನಾಡಿನ ವಿವಿಧೆಡೆಯಿಂದ ಸಾಹಿತಿಗಳು ಮತ್ತು ಸಂಗೀತಕಾರರು ಭೇಟಿ ನೀಡುತ್ತಿದ್ದುದರಿಂದ ಅದೊಂದು ಯಾತ್ರಾ ಸ್ಥಳವಾಗಿತ್ತು. ಇಲ್ಲಿ ಸುಮಾರು ೧೨ ವರ್ಷಗಳ ಕಾಲ ಕಾರಂತರು ಪ್ರತಿ ವರ್ಷ ಸಾಹಿತ್ಯೋತ್ಸವವನ್ನು  ಏರ್ಪಡಿಸುತ್ತಿದ್ದರು. ಅವರು ತಮ್ಮ 'ಹರ್ಷ ಮುದ್ರಣಾಲಯ'ವನ್ನು ಇಲ್ಲಿಯೇ ಸ್ಥಾಪಿಸಿದ್ದರು. ಆದರೆ ೧೯೭೪ರಲ್ಲಿ ಶಿವರಾಮ ಕಾರಂತರು ಪುತ್ತೂರು ಬಿಟ್ಟು ಸಾಲಿಗ್ರಾಮಕ್ಕೆ ಹೋದ ನಂತರ ಬಾಲವನವು ತನ್ನ ಹಿಂದಿನ ಸೊಬಗನ್ನು ಕಳಕೊಂಡಿತು.

**೨.೬.೧೨ ಬಿರುಮಲೆ :** ಪುತ್ತೂರು ಪೇಟೆಯ ಪಕ್ಕದಲ್ಲಿ, ದರ್ಬೆ ಎಂಬ ಸ್ಥಳದ ಸಮೀಪ ಬಿರುಮಲೆ ಬೆಟ್ಟವಿದೆ. 'ಬಿರು' ಅಂದರೆ ಬಿಲ್ಲು ಎಂದರ್ಥ. ಆದುದರಿಂದ ಬಿರುಮಲೆ ಎಂದರೆ ಬಿಲ್ಲಿನ ಬೆಟ್ಟ ಅಥವಾ ಬೇಟೆಯಾಡುವ ಬೆಟ್ಟ ಎಂದು ಅರ್ಥೈಸಿಕೊಳ್ಳಬಹುದು. ಇದನ್ನು ಬೀರುಮಲೆ ಎಂದು ಕರೆಯುವುದರ ಹಿಂದೊಂದು ಐತಿಹ್ಯವಿದೆ. ಬೀರನೆಂಬಾತನೊಬ್ಬನು ತನ್ನ ಕಳೆದುಹೋದ ಕುರಿಮರಿಯನ್ನು ಹುಡುಕಲು ಈ ಬೆಟ್ಟಕ್ಕೆ ಹೋಗಿ ಅಲ್ಲಿಯೇ ಸಾವನ್ನಪ್ಪಿದನು. ಇದರಿಂದ ಈ ಬೆಟ್ಟಕ್ಕೆ ಬೀರುಮಲೆ ಎಂಬ ಹೆಸರು ಅಂಟಿಕೊಂಡಿತು ಎಂಬುದು ಸಾಮಾನ್ಯ ಹೇಳಿಕೆ[೪೧].

ಕೆಲವು ವರ್ಷಗಳ ಹಿಂದೆ ಯಾವುದೇ ಗಿಡಮರಗಳಿಲ್ಲದೇ ಬೋಳು ಬೋಳಾಗಿದ್ದ ಈ ಬೆಟ್ಟದ ಇಳಿಜಾರಿನಲ್ಲಿ ಶ್ರೀ ಕೋಚಣ್ಣ ರೈಯವರು ಪುತ್ತೂರಿನ ತಹಶಿಲ್ದಾರರಾಗಿದ್ದಾಗ ಪ್ರಥಮವಾಗಿ ಇಲ್ಲಿ ಗಿಡಮರಗಳನ್ನು ನೆಡುವ ಕಾರ್ಯದ ಮೂಲಕ ಇದರ ಸೌಂದರ್ಯಕರಣಗೊಳಿಸುವ ಕೆಲಸಕ್ಕೆ ಚಾಲನೆ ನೀಡಿದರು. ಬೆಟ್ಟದ ತುದಿಗೆ ಹೋಗಲು ರಸ್ತೆಯ ನಿರ್ಮಾಣವಾಗಿದೆ. ಬೆಟ್ಟದ ತುದಿಯಲ್ಲಿ ಮಕ್ಕಳ ಆಟದ ಉದ್ಯಾನವನ, ಸಾರ್ವಜನಿಕ ಗ್ರಂಥಾಲಯ, ದೂರದರ್ಶನ ಮರುಪ್ರಸಾರ ಕೇಂದ್ರವಿದೆ. ಇಡೀ ಪುತ್ತೂರು ಪೇಟೆಯನ್ನು ವೀಕ್ಷಿಸಲು ಅವಕಾಶ ಒದಗಿಸಿಕೊಟ್ಟಿರುವ ಬಿರುಮಲೆಯು, ಆಕರ್ಷಣೆಯ ಕೇಂದ್ರವಾಗಿದೆ. ಪುತ್ತೂರಿನ ಐತಿಹಾಸಿಕ ಸ್ಥಳಗಳ ಅಧ್ಯಯನದಿಂದ ತಿಳಿಯುವುದೇನೆಂದರೆ, ಪುತ್ತೂರು ಶಿಲಾಯುಗದಿಂದಲೂ ಪ್ರಸಿದ್ಧಿಯಲ್ಲಿದ್ದು, ಕೋಟಿ–ಚೆನ್ನಯ್ಯ ಮುಂತಾದ ವೀರರು ನೆಲೆಸಿದನಾಡು ಪುತ್ತೂರು ಎಂದು ತಿಳಿಯುತ್ತದೆ. ಇದರೊಂದಿಗೆ ಇಲ್ಲಿನ ಧಾರ್ಮಿಕ ಕ್ಷೇತ್ರಗಳು ಹಿಂದಿನಿಂದಲೂ ಪ್ರಸಿದ್ಧವಾಗಿದ್ದು ಅನೇಕ ರಾಜ ಮಹಾರಾಜರ ಆಳ್ವಿಕೆಗೆ ಈ ಪ್ರದೇಶ ಒಳಪಟ್ಟತ್ತು. ಪುತ್ತೂರು ತಾಲೂಕಿನ ಉಪ್ಪಿನಂಡಿಯು ಒಂದು ಪ್ರಮುಖ ವ್ಯಾಪಾರಿ ಕೇಂದ್ರವಾಗಿದ್ದು, ಇಲ್ಲಿಂದ ನದಿ ಮೂಲಕ ಮಂಗಳೂರಿಗೆ ವ್ಯಾಪಾರಕ್ಕಾಗಿ ಹೋಗುತ್ತಿದ್ದರು. ಹೀಗೆ ಪುತ್ತೂರು ಕೇಂದ್ರದ ಗತವೈಭವವನ್ನು ಈ ಐತಿಹಾಸಿಕ ಸ್ಥಳಗಳಿಂದ ಗಮನಿಸಬಹುದು.

## ಅಡಿ ಟಿಪ್ಪಣಿ

೧. ಸಾಂಸ್ಕೃತಿಕ ಅಧ್ಯಯನ; ರಹಮತ್ ತರೀಕೆರೆ – ಪುಟ ೫

೨. ಕ.ಸಾ.ಪ ಕನ್ನಡ ನಿಘಂಟು ಸಂ. ೮

೩. ಸಾಂಸ್ಕೃತಿಕ ಅಧ್ಯಯನ ರಹಮತ್ ತರೀಕೆರೆ – ಪುಟ ೭

೪. ಸಾಂಸ್ಕೃತಿಕ ಅಧ್ಯಯನ ರಹಮತ್ ತರೀಕೆರೆ – ಪುಟ ೧೦

೫. ಸಾಂಸ್ಕೃತಿಕ ಅಧ್ಯಯನ–ರಹಮತ್ ತರೀಕೆರೆ ಪುಟ ೮

೬. ಸಾಂಸ್ಕೃತಿಕ ಅಧ್ಯಯನ–ರಹಮತ್ ತರೀಕೆರೆ ಪುಟ ೧೧

೭. ಸಾಂಸ್ಕೃತಿಕ ಅಧ್ಯಯನ–ರಹಮತ್ ತರೀಕೆರೆ ಪುಟ ೧೧

೮. ಸಾಂಸ್ಕೃತಿಕ ಅಧ್ಯಯನ–ರಹಮತ್ ತರೀಕೆರೆ ಪುಟ ೧೨

೯. ಪುತ್ತೂರು ತಾಲೂಕು ಇತಿಹಾಸ ದರ್ಪಣ – ಪೀಟರ್ ವಿಲ್ಸನ್ ಪ್ರಭಾಕರ್, ವಿಘ್ನೇಶ್ವರ ವರ್ಮುಡಿ – ಪುಟ ೫

೧೦. ಅದೇ – ಪುಟ ೬

೧೧. ಅದೇ – ಪುಟ ೬

೧೨. ಅದೇ – ಪುಟ ೭

೧೩. ಅದೇ – ಪುಟ ೭

೧೪. ಅದೇ – ಪುಟ ೭

೧೫. ಅದೇ – ಪುಟ ೮

೧೬. ಅದೇ – ಪುಟ ೯

೧೭. ಅದೇ – ಪುಟ ೯

೧೮. ಅದೇ – ಪುಟ ೧೦

೧೯. ಅದೇ – ಪುಟ ೧೧

೨೦. ಅದೇ – ಪುಟ ೧೨

೨೧. ಅದೇ – ಪುಟ ೧೨

೨೨. ಅದೇ – ಪುಟ ೧೩

೨೩. ಶಾಸನ ಶಾಸ್ತ್ರ – ಬಿ. ವಸಂತ ಶೆಟ್ಟಿ – ಪುಟ ೨೦

೨೪. ಪುತ್ತೂರು ಕ್ಷೇತ್ರದ ಇತಿಹಾಸ – ವೈ. ಉಮಾನಾಥ ಶೆಣೈ – ಪುಟ ೪೧

೨೫. ಪುತ್ತೂರು ಕ್ಷೇತ್ರದ ಇತಿಹಾಸ – ವೈ. ಉಮಾನಾಥ ಶೆಣೈ – ಪುಟ ೪೨

೨೬. ಸುದರ್ಶನ : ದಕ್ಷಿಣ ಕನ್ನಡದ ಪ್ರಾಚೀನತಮ ಸಾಂಸ್ಕೃತಿಕ ಅವಶೇಷಗಳು
– ಅ. ಸುಂದರ – ಪುಟ ೧೨೯

೨೭. ಸುದರ್ಶನ – ಅ. ಸುಂದರ ಪುಟ ೧೩೦

೨೮. ತುಳುನಾಡಿನ ಮಾಸ್ತಿಕಲ್ಲು; ವೀರಗಲ್ಲುಗಳು, ಬಿ. ಎಂ. ರೋಹಿಣಿ, ಶಶಿಲೇಖಾ ಬಿ. –
ಪುಟ ೧೫೯

೨೯. ತುಳುನಾಡಿನ ಮಾಸ್ತಿಕಲ್ಲು ವೀರಗಲ್ಲುಗಳು – ಪುಟ ೧೬೦

೩೦. ತುಳುನಾಡಿನ ಮಾಸ್ತಿಕಲ್ಲು ವೀರಗಲ್ಲುಗಳು – ಪುಟ ೧೬೦

೩೧. ಶಾಸನ ಶಾಸ್ತ್ರ – ಬಿ. ವಸಂತ ಶೆಟ್ಟಿ ೧೯೮೬ – ಪುಟ ೭

೩೨. ಪುತ್ತೂರು ತಾಲೂಕು ಇತಿಹಾಸ ದರ್ಪಣ – ಪೀಟರ್ ವಿಲ್ಸನ್ ಪ್ರಭಾಕರ್,
ವಿಘ್ನೇಶ್ವರ ವರ್ಮುಡಿ – ಪುಟ ೨೨

೩೩. ಪುತ್ತೂರಿನ ಕ್ರಾಂತಿ ಪೀಟರ್ ವಿಲ್ಸನ್ ಪ್ರಭಾಕರ್ – ಪುಟ ೧೪

೩೪. ಅದೇ – ಪುಟ ೨೨

೩೪. ಅದೇ – ಪುಟ ೨೩

೩೫. ಅದೇ – ಪುಟ ೨೪

೩೬. ಅದೇ – ಪುಟ ೨೪

೩೭. ಅದೇ – ಪುಟ ೨೫

೩೮. ಅದೇ – ಪುಟ ೨೭

೩೯. ಪುತ್ತೂರು ತಾಲೂಕು ಇತಿಹಾಸ ದರ್ಪಣ –
ಪೀಟರ್ ವಿಲ್ಸನ್ ಪ್ರಭಾಕರ್, ವಿಘ್ನೇಶ್ವರ ವರ್ಮುಡಿ – ಪುಟ ೨೮

೪೦. ಹೀಗೊಂದು ವೃತ್ತಾಂತ – ವಿ. ಬಿ. ಅರ್ತಿಕಜೆ ಪುಟ ೫೯

೪೧. ಪುತ್ತೂರು ತಾಲೂಕು ಇತಿಹಾಸ ದರ್ಪಣ –
ಪೀಟರ್ ವಿಲ್ಸನ್ ಪ್ರಭಾಕರ್, ವಿಘ್ನೇಶ್ವರ ವರ್ಮುಡಿ – ಪುಟ ೩೦

# ಅಧ್ಯಾಯ – ೩

## ಭಾಷಿಕ ನೆಲೆ

೩.೧. ಪುತ್ತೂರಿನ ಭಾಷಾ ರಚನೆಯ ಸ್ವರೂಪ

೩.೨ ಪುತ್ತೂರಿನ ಬಳಕೆಯ ಭಾಷೆಗಳು / ಉಪಭಾಷೆಗಳು

# ಅಧ್ಯಾಯ – ೩

## ಭಾಷಿಕ ನೆಲೆ

### ೩.೧.೦ ಪುತ್ತೂರಿನ ಭಾಷಾ ರಚನೆಯ ಸ್ವರೂಪ :

ಪುತ್ತೂರಿನಲ್ಲಿರುವ ಪ್ರಮುಖ ಭಾಷೆಗಳೆಂದರೆ ತುಳು, ಕೊಂಕಣಿ, ಕನ್ನಡ, ಮಲೆಯಾಳಂ, ಮರಾಠಿ, ತಮಿಳು, ತೆಲುಗು, ಮತ್ತು ಉರ್ದು (ಹಿಂದೂಸ್ಥಾನೀ). ಪುತ್ತೂರಿನ ನಗರದಲ್ಲಿ ಹೆಚ್ಚಿನ ವ್ಯವಹಾರಗಳೆಲ್ಲ ಕನ್ನಡದಲ್ಲಿ ಸಾಗುವುದರಿಂದ, ಸರಕಾರಿ ಶಾಲೆಗಳಲ್ಲಿ ಕನ್ನಡವೇ ಮಾಧ್ಯಮವಾಗಿರುವುದರಿಂದ, ಪಟ್ಟಣಿಗರಿಗೆ ಹಾಗೂ ಸಾಮಾನ್ಯವಾಗಿ ಓದುಬರಹ ಬರುವವರಿಗೆ ಕನ್ನಡ ಬಂದೇ ಬರುತ್ತದೆ. ತಾಯ್ನುಡಿ ಹೇಗೂ ಗೊತ್ತಿರುತ್ತದೆ. ಆದುದರಿಂದ ಹೆಚ್ಚಿನ ಜನಕ್ಕೆ ಎರಡು ಭಾಷೆಗಳಲ್ಲಿ ವ್ಯವಹರಿಸುವ ಸಾಮರ್ಥ್ಯವಿದ್ದೇ ಇರುತ್ತದೆ. ಕನ್ನಡ ತಾಯ್ನುಡಿಯಾಗಿರುವವರಿಗೆ ತುಳು ಗೊತ್ತಿರುತ್ತದೆ. ಓದು ಬರಹ ಬಾರದ ಹಳ್ಳಿಗಳಲ್ಲಿ ಹೆಚ್ಚಿನವರ ತಾಯ್ನುಡಿ ತುಳು. ತುಳುವನ್ನು ಬಿಟ್ಟರೆ ಅವರಿಗೆ ಬೇರೆ ಭಾಷೆ ಗೊತ್ತಿಲ್ಲ. ಅವರೊಡನೆ ವ್ಯವಹರಿಸಬೇಕಾದರೆ ತುಳು ಗೊತ್ತಿರಬೇಕಾಗುತ್ತದೆ.

ಪುತ್ತೂರಿನಲ್ಲಿ ಬ್ರಾಹ್ಮಣರು, ಜೈನರು, ಪರಿಶಿಷ್ಟ ಜಾತಿಯವರು, ಪೂಜಾರಿಗಳು, ಗೌಡರು, ಮನೆ ಮಾತಾಗಿ ತುಳುವನ್ನು ಮಾತನಾಡುತ್ತಾರೆ. ಉಳಿದ ಜಾತಿಯವರು ಮನೆಯ ಹೊರಗೆ, ವ್ಯವಹಾರದ ಸಮಯದಲ್ಲಿ ಮಾತ್ರ ತುಳು ಭಾಷೆಯನ್ನು ಮಾತನಾಡುತ್ತಾರೆ. ಪುತ್ತೂರಿನ ತುಳುವಿನಲ್ಲಿ 'ಸ'ಕಾರದಿಂದ ಹೆಚ್ಚು ನಾಮಪದಗಳು ಪ್ರಾರಂಭವಾಗುತ್ತವೆ. ಸುಳ್ಯ ಕಡೆಗೆ 'ಙ' ಕಾರದಿಂದ ನಾಮಪದಗಳು ಪ್ರಾರಂಭ ವಾಗುತ್ತವೆ. ಪುತ್ತೂರಿನಲ್ಲಿ 'ನೆ' ಯಿಂದ ಕ್ರಿಯಾಪದಗಳು ಅಂತ್ಯವಾಗುತ್ತವೆ. ಮಂಗಳೂರು ಉಡುಪಿ ಕಡೆಗಳಲ್ಲಿ 'ನಿ' ಯಿಂದ ಕ್ರಿಯಾಪದಗಳು ಅಂತ್ಯವಾಗುತ್ತದೆ. ಉದಾ: ಪುತ್ತೂರು–ದಾನೆ ಬತ್ತ್‌ನೆ? ಉಡುಪಿ –ದಾನೆ ಬತ್ತ್‌ನಿ?. ಇಲ್ಲಿನ ತುಳು ಬಳಕೆಯಲ್ಲಿ ಬಹಳ ತೀವ್ರವಾಗಿಲ್ಲ, ವೇಗವಾಗಿಲ್ಲ ಅದು ಸಹಜವಾಗಿ ಪ್ರಯೋಗಿಸಲ್ಪಡುತ್ತದೆ.

### ೩.೨.೧. ಪುತ್ತೂರಿನ ಬಳಕೆಯ ಭಾಷೆಗಳು / ಉಪಭಾಷೆಗಳು :

ಈ ಪ್ರದೇಶದಲ್ಲಿ ಬಳಕೆಯಲ್ಲಿರುವ ಪ್ರಮುಖ ಭಾಷೆಗಳು ತುಳು, ಕನ್ನಡ ಮತ್ತು ಕೊಂಕಣಿ. ಮಲೆಯಾಳಂ, ಮರಾಠಿ, ತಮಿಳು, ಉರ್ದು ಮಾತನಾಡುವ ಕೆಲ ನಿವಾಸಿಗಳೂ ಇದ್ದಾರೆ.

೧. **ಕನ್ನಡ** : ಪುತ್ತೂರು ಪರಿಸರದಲ್ಲಿ ಎಲ್ಲಾ ಜನರಿಗೂ ಕನ್ನಡ ಮಾತನಾಡಲು ಬರುತ್ತದೆ. ಸರಕಾರಿ ಕಛೇರಿಗಳಲ್ಲಿ ಶಾಲಾ–ಕಾಲೇಜಿನಲ್ಲಿ ವ್ಯಾವಹಾರಿಕವಾಗಿ ಕನ್ನಡವೇ ಬಳಕೆಯಲ್ಲಿದೆ. ಸಾರ್ವಜನಿಕ ಸಭೆ–ಸಮಾರಂಭಗಳೂ ಕನ್ನಡದಲ್ಲೇ ನಡೆಯುತ್ತವೆ. ಪುತ್ತೂರಿನಲ್ಲಿ ಕನ್ನಡವನ್ನು ಮನೆ ಮಾತಾಗಿ ಮಾತನಾಡುವವರಲ್ಲಿ ಹವ್ಯಕರು ಮತ್ತು ಗೌಡವರು ಪ್ರಮುಖರು. ಪುತ್ತೂರಿನಿಂದ ಪ್ರಕಟಗೊಳ್ಳುವ 'ಸುದ್ದಿ ಬಿಡುಗಡೆ', 'ಅಡಿಕೆ ಪತ್ರಿಕೆ' ಮತ್ತು ತಾಯ್ನಾಡ ಸುದ್ದಿ' ಪತ್ರಿಕೆಗಳೂ ಕನ್ನಡದಲ್ಲೇ ಪ್ರಕಟವಾಗುತ್ತವೆ.

೨. **ತುಳು** : ತುಳು ಭಾಷೆ ಇಲ್ಲಿ ಅನೇಕ ಮತೀಯರ ತಾಯ್ನುಡಿ, ಶಿವಳ್ಳಿ ಬ್ರಾಹ್ಮಣರು, ಬಂಟರು, ಗೌಡರು, ಜೈನರು, ಬಿಲ್ಲವರು, ಗಾಣಿಗರು, ಪ್ರೊಟೆಸ್ಟಂಟ್ ಕ್ರೈಸ್ತರು, ಮೇರರು, ನಲಿಕೆಯವರು, ಮನ್ಸರು ಇವರಲ್ಲಿ ಬಹುಜನ ತುಳು ಮನೆ ಮಾತುಳ್ಳವರು. ತುಳುವಿನಲ್ಲಿ ಅನೇಕ ಪ್ರಬೇಧಗಳಿವೆ. ಬ್ರಾಹ್ಮಣ ತುಳು, ಅಬ್ರಾಹ್ಮಣ ತುಳು, ಪುತ್ತೂರು ತುಳು, ಸುಳ್ಯ ತುಳು ಇತ್ಯಾದಿಯಾಗಿ ಜಾತಿ ಪ್ರದೇಶ ವ್ಯತ್ಯಾಸಗಳು. 'ತಲೆ'ಗೆ ಒಂದೆಡೆ ತುಳುವಿನಲ್ಲಿ 'ತರೆ' ಇನ್ನೊಂದೆಡೆ 'ಸರೆ' ಮತ್ತೊಂದೆಡೆ 'ಹರೆ' ಎಂಬುದಾಗಿಯೂ, 'ಬೇಲಿ'ಗೆ – ತಡಮೆ, ಸಡಮೆ, ಹಡಮೆ ಎಂಬುದಾಗಿ ಬ್ರಾಹ್ಮಣ ತುಳುವಿನಲ್ಲಿ 'ಏನು' ಎಂಬುದಕ್ಕೆ 'ಜಾನೆ' ಇತರರಲ್ಲಿ 'ದಾನೆ' ಎಂದು ಹೇಳುತ್ತಾರೆ. ಬ್ರಾಹ್ಮಣರ ತುಳುವಿನಲ್ಲಿ ಸಂಸ್ಕೃತದ ಎರವು ಹೆಚ್ಚು. ಅವರು 'ಊಟ ಆಯಿತೊ' ಎಂಬಲ್ಲಿ 'ಆಶನ ಆನೊ' ಎಂದರೆ ಇತರರು 'ಒಣಸ್ ಆಂಡೊ' ಎನ್ನುತ್ತಾರೆ.

ತುಳು ಬಹಳ ನಾಜೂಕಾದ ಭಾಷೆ, ಎಂಥ ಗಹನ ವಿಷಯವನ್ನಾದರೂ ಶಬ್ದ ದಾರಿದ್ರ್ಯವಿಲ್ಲದೆ ಸುಲಭವಾಗಿ ತುಳುವಿನಲ್ಲಿ ಹೇಳಲು ಬರುತ್ತದೆ. ಅನೇಕ ಜನಪದ ಗೀತೆಗಳೂ ಕತೆಗಳೂ ತುಳುವಿನಲ್ಲಿವೆ. ರಸವತ್ತಾದ ಯಕ್ಷಗಾನ ಪ್ರಸಂಗಗಳು ತುಳುವಿನಲ್ಲಿ ರಚಿತವಾಗಿವೆ. ತುಳುವನ್ನು ಬರೆಯಲು ಕನ್ನಡ ಲಿಪಿಯನ್ನು ಬಳಸುತ್ತಾರೆ.

೩. **ಕೊಂಕಣಿ** : ರೋಮನ್ ಕಥೋಲಿಕರು, ಗೌಡ ಸಾರಸ್ವತರು, ಸಾರಸ್ವತರು, ಮುಖ್ಯವಾಗಿ ಕೊಂಕಣಿ ಭಾಷೆಯನ್ನಾಡುತ್ತಾರೆ. ಈ ಮೂರು ಪಂಗಡಗಳಾಡುವ ಕೊಂಕಣಿಗಳೊಳಗೆ ಅಲ್ಪಸ್ವಲ್ಪ ವ್ಯತ್ಯಾಸ ಗಳಿರುವುವು. ಸಾರಸ್ವತರು ಏನು ಎಂಬಲ್ಲಿ 'ಕಸಲೆ' ಎಂದರೆ ಕಥೋಲಿಕರು 'ಕಹಲೆ' ಎನ್ನುತ್ತಾರೆ. ಇಂಥ ಕೆಲವು ಶಬ್ದರೂಪ ವ್ಯತ್ಯಾಸಗಳುಂಟು. ಇಲ್ಲಿಯ ಕೊಂಕಣಿಯ ಮೇಲೆ ಕನ್ನಡದ ಪ್ರಭಾವವಿದೆ. ಕೊಂಕಣಿ ಮಾತನಾಡುವಾಗ ಹೆಚ್ಚಾಗಿ ಸಂಖ್ಯೆಗಳನ್ನು ಕನ್ನಡದಲ್ಲೇ ಹೇಳುತ್ತಾರೆ.

ಕೊಂಕಣಿಯಲ್ಲಿ ಸಾಹಿತ್ಯ ರಚನೆಯಾಗುತ್ತಿದೆ. ವೃತ್ತ ಪತ್ರಿಕೆಗಳಿವೆ. ಪುತ್ತೂರಿನಿಂದ ಪ್ರಕಟಗೊಳ್ಳುವ, 'ನೆಕೆತ್ರ್', 'ಆವಯ್', ಮುಂತಾದ ಮಾಸಿಕ ಪತ್ರಿಕೆಗಳಿವೆ. ಕೊಂಕಣಿ ಲೇಖಕರೂ ಪುತ್ತೂರಿನಲ್ಲಿ ಹಲವು ಮಂದಿ ಇದ್ದಾರೆ.

**೪. ಮಲೆಯಾಳಂ :** ಬಹಳ ವರ್ಷಗಳಿಂದ ಪುತ್ತೂರು ಪ್ರದೇಶದಲ್ಲಿ ನೆಲೆಸಿರುವ ಬ್ಯಾರಿಗಳೆಂಬ ಮುಸ್ಲಿಂ ಪಂಗಡದವರು ಮಲೆಯಾಳಂ ಭಾಷೆಯನ್ನಾಡುತ್ತಾರೆ. ಇತ್ತೀಚಿನ ವರ್ಷಗಳಲ್ಲಿ ಹಲವು ಕ್ರೈಸ್ತ ಕುಟುಂಬಗಳೂ ಮಲೆಯಾಳಂ ಮಾತನಾಡುವವರಿದ್ದಾರೆ. ಇವರೆಲ್ಲರೂ ಕೇರಳದಿಂದ ಇತ್ತ ವಲಸೆ ಬಂದವರು. ಬ್ಯಾರಿ ಜನಾಂಗದವರ ಮುಖ್ಯ ಉದ್ಯೋಗ ವ್ಯಾಪಾರ. ವ್ಯಾಪಾರಿಗಳಾದುದರಿಂದ 'ವ್ಯಾಪಾರಿ' ಪದದ ತದ್ಭವ 'ಬ್ಯಾರಿ' ಬಂದಿರಬೇಕು[೨].

ಇವರಾಡುವ ಮಲೆಯಾಳ ಕೇರಳ ಮಲೆಯಾಳದಿಂದ ಒಂದಷ್ಟು ಭಿನ್ನವಾಗಿದೆ. ಇವರು 'ತಾಯಿ' ಎಂಬ ಪದಕ್ಕೆ 'ಉಮ್ಮ' ಎಂದರೆ, ಕೇರಳದವರು 'ಅಮ್ಮ' ಎನ್ನುವರು.

**೫. ಮರಾಠಿ :** ಮರಾಠಿ ಮನೆಮಾತಾಗಿ ಆಡುವವರು ಸ್ವಲ್ಪ ಸಂಖ್ಯೆಯಲ್ಲಿ ಇಲ್ಲಿ ಇದ್ದಾರೆ. ಕರಾಡ, ಚಿತ್ಪಾವನರು ಹಾಗೂ ಮರಾಠಿಗಳೆಂದೆನಿಸಿಕೊಳ್ಳುವ ಕೆಲವು ಜನರು ಮರಾಠಿ ಭಾಷೆಯನ್ನು ಮಾತನಾಡುತ್ತಾರೆ.

**೬. ಉರ್ದು :** ಪುತ್ತೂರು ಪ್ರದೇಶದಲ್ಲಿ ಉರ್ದು ಅಥವಾ ಹಿಂದೂಸ್ಥಾನಿ ಭಾಷೆಯ್ನನಾಡುವವರು ಮುಸ್ಲಿಮರು. ಇವರನ್ನು 'ಸಾಯಿಬ'ರೆನ್ನುವುದೂ ಉಂಟು[೩]. ಇವರು ಹೆಚ್ಚಾಗಿ ವಿದೇಶದಲ್ಲಿ ಉದ್ಯೋಗದಲ್ಲಿದ್ದಾರೆ. ಕೆಲವರು ಊರಿನಲ್ಲೇ ವ್ಯಾಪಾರ ಮಾಡುವವರೂ ಇದ್ದಾರೆ .

ಹೀಗೆ ಪುತ್ತೂರು ಪ್ರದೇಶದಲ್ಲಿ ಆರು ಭಾಷೆಗಳು ಚಾಲ್ತಿಯಲ್ಲಿವೆ. ಇಲ್ಲಿ ಅನೇಕರು 'ಆರು ಭಾಷೆ'ಗಳಲ್ಲಿ ಮಾತನಾಡುವ ಸಾಮರ್ಥ್ಯ ಹೊಂದಿದ್ದಾರೆ. ಎರಡು ಮೂರು ಭಾಷೆಯನ್ನಂತೂ ಎಲ್ಲರೂ ಮಾತನಾಡುತ್ತಾರೆ.

**೩.೩.೨. ಉಪ ಭಾಷೆಗಳು :** ಪುತ್ತೂರಿನಲ್ಲಿ ಬಳಕೆಯಾಗುವ ಭಾಷೆಗಳಲ್ಲಿ ತುಳುವಿಗೆ ಪ್ರಥಮ ಸ್ಥಾನ. ಇಂತಹ ತುಳುವಿನಲ್ಲಿ ಕೆಲವು ಸಾಮಾಜಿಕ ಪ್ರಬೇಧಗಳನ್ನು ಗುರುತಿಸಬಹುದು. ತುಳುವರಲ್ಲಿ ಬ್ರಾಹ್ಮಣ, ಜೈನ, ಬಂಟ, ಬಿಲ್ಲವ, ಗೌಡ, ಕುಂಬಾರ, ಮೇರ, ಮನ್ಸ, ಹರಿಜನ ಮೊದಲಾದ ಸಾಮಾಜಿಕ ಭಾಷಾ ಪ್ರಭೇದಗಳು ಪ್ರಚಲಿತವಾಗಿವೆ. ಹಿಂದಿನ ಕಾಲದಲ್ಲಿ (ಇತ್ತೀಚಿನವರೆಗೂ) ಈ ವರ್ಗಗಳೊಳಗೆ ಬಹಳ ಕಟ್ಟುನಿಟ್ಟಾದ ಸಂಪರ್ಕ ನಿಷೇದವಿದ್ದುದರಿಂದ ಪರಸ್ಪರ ಒಡನಾಡುವ ಅವಕಾಶವಿರಲಿಲ್ಲ. ಹಾಗಾಗಿ ತುಳುವಿನಲ್ಲಿ ಸಾಮಾಜಿಕ ಪ್ರಭೇದಗಳೂ ಉಂಟಾದವು. ಮಾತ್ರವಲ್ಲದೆ, ಈ ವಿವಿಧ ವರ್ಗಗಳ ಜನರ ಸಾಮಾಜಿಕ ಸಂಸ್ಥೆಗಳು, ವಾಡಿಕೆಗಳು, ಅಭ್ಯಾಸಗಳು, ಸಾಮಾಜಿಕ–ಸಾಂಸ್ಕೃತಿಕ ಕಟ್ಟುಕಟ್ಟಳೆಗಳು, ಧಾರ್ಮಿಕ ಆಚರಣೆಗಳು ಮೊದಲಾದುವೆಲ್ಲ ಸಹಜವಾಗಿ ಅವರ ಆಡುನುಡಿಗಳಲ್ಲಿ ಪ್ರತಿಫಲಿತವಾದುವು. ಪ್ರತಿಯೊಂದು ಸಾಮಾಜಿಕ ವರ್ಗವೂ ಅದರದೇ ಆದ ಭಾಷಾ ಸ್ಪರ್ಧೆಯನ್ನು ಬೆಳೆಸಿತು.

ತುಳುವಿನಲ್ಲಿ ಹೀಗೆ ಉಂಟಾದ ಹಲವಾರು ಸಾಮಾಜಿಕ ಪ್ರಬೇಧಗಳನ್ನು ಸ್ಥೂಲವಾಗಿ ಈ ಕೆಳಗಿನಂತೆ ವರ್ಗೀಕರಿಸಬಹುದು.

ಅ) **ಬ್ರಾಹ್ಮಣ ತುಳು ಭಾಷಾ ಭೇದ** : ಈ ವಿಭಾಗದಲ್ಲಿ ಶಿವಳ್ಳಿ ಹಾಗೂ ಶಿವ (ಸ್ಥಾನಿಕ) ಬ್ರಾಹ್ಮಣರ ಆಡುನುಡಿ ಸೇರುತ್ತದೆ.

ಆ) **ಜೈನ ತುಳು ಭಾಷಾ ಭೇದ** : ಇದು ಜೈನರ ಆಡುನುಡಿ

ಇ) **ಸಾಮಾನ್ಯ ತುಳು ಭಾಷಾ ಭೇದ** : ಈ ಗುಂಪಿನಲ್ಲಿ ಬಂಟ, ಬಿಲ್ಲವ, ಗೌಡ, ಮೊಗವೀರ, ಕುಂಬಾರ ಮತ್ತು ಬೇರೆ ವಿಭಾಗಗಳಲ್ಲಿ ಸೇರದ ಇತರ ವರ್ಗದ ಆಡುನುಡಿಗಳು ಒಳಗೊಳ್ಳುತ್ತವೆ.

ಈ) **ಹರಿಜನ, ಗಿರಿಜನರ ತುಳು ಭಾಷಾ ಬೇಧ** : ಮೇರ, ಮನ್ಸ ಮತ್ತಿತರ ಹರಿಜನ ವರ್ಗದವರು ಆಡುನುಡಿಗಳು ಈ ಗುಂಪಿನಲ್ಲಿ ಸೇರುತ್ತವೆ.

**ಅ) ಬ್ರಾಹ್ಮಣ ತುಳು** : ತುಳುವನ್ನು ಮಾತೃಭಾಷೆಯಾಗುಳ್ಳ ಬ್ರಾಹ್ಮಣರಲ್ಲಿ (ಶಿವ ಅಥವಾ ಸ್ಥಾನಿಕ ಬ್ರಾಹ್ಮಣರಿಗಿಂತ) ಶಿವಳ್ಳಿ ಬ್ರಾಹ್ಮಣರ ಸಂಖ್ಯೆಯೇ ಅತ್ಯಧಿಕವಾಗಿರುವ ಕಾರಣ, ಬ್ರಾಹ್ಮಣ ತುಳು ಭಾಷಾ ಭೇದವನ್ನು 'ಶಿವಳ್ಳಿತುಳು'ವೆಂದೂ ಕರೆಯುತ್ತಾರೆ. ಈ ತುಳುವಿನ ಮೇಲೆ ಸಂಸ್ಕೃತದ ಪ್ರಭಾವ ಅತ್ಯಧಿಕವಾಗಿದೆ. ಪರಂಪರಾಗತ ಶಿಕ್ಷಣ ಪದ್ಧತಿ, ಶಾಸ್ತ್ರೋಕ್ತ ಧಾರ್ಮಿಕ ಆಚರಣೆಗಳಲ್ಲಿ ತೊಡಗಿರುವಿಕೆ ಮೊದಲಾದ ಕಾರಣಗಳಿಂದ ಇವರು ತಮ್ಮ ಆಡುನುಡಿಯಲ್ಲಿ ತಮ್ಮದೇ ಆದ ಸಂಸ್ಕೃತ ಶೈಲಿಯೊಂದನ್ನು ಅಭಿವೃದ್ಧಿ ಪಡಿಸುವಂತಾಯಿತು. ಕಟ್ಟುನಿಟ್ಟಿನ ಜಾತಿ ನಿರ್ಬಂಧಗಳಿಂದಾಗಿ ಇವರ ತುಳು ಪ್ರಭೇದದಲ್ಲಿ ಇನ್ನೊಂದು ವರ್ಗದವರ ತುಳುವಿನ ಅಂಶಗಳು ಮಿಶ್ರಣಗೊಳ್ಳುವುದು ಕಡಿಮೆಯಾಯಿತು.

ಬಹಳ ಗಮನಾರ್ಹ ಪ್ರಮಾಣದಲ್ಲಿ ಸಂಸ್ಕೃತ ಶಬ್ದಗಳು ಈ ತುಳುವಿನಲ್ಲಿ ಯಥಾವತ್ತಾಗಿ ಅಥವಾ ಅಲ್ಪಸ್ವಲ್ಪ ವ್ಯತ್ಯಾಸಗಳೊಂದಿಗೆ ಉದಾರವಾಗಿ ಬಳಕೆಗೊಳ್ಳುತ್ತಿವೆ. ಕೆಲವೊಮ್ಮೆ ಇತರ ವರ್ಗದವರಿಗೆ ಇವರ ತುಳುವನ್ನು ಅರ್ಥ ಮಾಡಿಕೊಳ್ಳುವುದು ಸ್ವಲ್ಪ ಕಷ್ಟಕರವಾಗುತ್ತದೆ. ಶಿವಳ್ಳಿಯವರು ತಮ್ಮ ತುಳುವಿನಲ್ಲಿ ಬಳಸುವ ಅನ್ಯಭಾಷೆಯ ಶಬ್ದಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಅದರ ಮೂಲರೂಪದಲ್ಲೇ ಉಚ್ಚರಿಸಲು ಪ್ರಜ್ಞಾಪೂರ್ವಕ ಪ್ರಯತ್ನಿಸುತ್ತಾರೆ. ಉದಾ : ಸಂಸ್ಕೃತದ ಮಹಾಪ್ರಾಣ ಅಕ್ಷರಗಳನ್ನು ಅದೇ ರೀತಿಯಲ್ಲಿ ಉಚ್ಚರಿಸುತ್ತಾರೆ. ಆದರೆ ಅನೌಪಚಾರಿಕ ಸಂದರ್ಭಗಳಲ್ಲಿ ಈ ಪ್ರಯತ್ನ ಸ್ವಲ್ಪಮಟ್ಟಿಗೆ ಸಡಿಲವಾಗುತ್ತದೆ. ಮಾತ್ರವಲ್ಲದೆ ದೇಶ್ಯ ಶಬ್ದಗಳನ್ನು ಉಚ್ಚರಿಸುವಲ್ಲಿ ಸಹ ಮೂರ್ಧನ್ಯ ಮತ್ತು ಮೂರ್ಧನ್ಯೇತರ ಧ್ವನಿಗಳೊಳಗೆ ಸ್ಪಷ್ಟ ವ್ಯತ್ಯಾಸವನ್ನು ಕಾಪಾಡಿಕೊಳ್ಳುತ್ತಾರೆ. ಹೀಗೆ ಅಸಂಖ್ಯಾತ

ಸಂಸ್ಕೃತ ಪದಗಳ ಬಳಕೆ ಲ–ಳ, ನ–ಣ, ಶ–ಷ–ಸ ಗಳೊಡನೆ ಸ್ಪಷ್ಟ ವ್ಯತ್ಯಾಸ, ಅಲ್ಪಪ್ರಾಣ ಮಹಾಪ್ರಾಣಗಳ ವ್ಯತ್ಯಾಸ ಇತ್ಯಾದಿಗಳು ಬ್ರಾಹ್ಮಣ (ಶಿವಳ್ಳಿ) ತುಳುವಿನ ಪ್ರಮುಖ ಲಕ್ಷಣಗಳು.

**ಆ) ಜೈನ ತುಳು** : ತೌಲನಿಕವಾಗಿ ಜೈನರ ಜನಸಂಖ್ಯೆ ಕಡಿಮೆಯಾಗಿರುವುದಾದರೂ ಕೆಲವು ವಿಶಿಷ್ಟಲಕ್ಷಣಗಳಿಂದಾಗಿ ಇವರ ತುಳುವು ಇತರರ ತುಳುವಿಗಿಂತ ಪ್ರತ್ಯೇಕವಾಗಿ ನಿಲ್ಲುತ್ತದೆ[೪]. ಇವರು ಜೈನಮತಾವಲಂಭಿಗಳಾಗಿರುವುದರಿಂದ ಅದಕ್ಕೆ ಸಂಬಂಧಪಟ್ಟ ಕೆಲವು ಪಾರಿಭಾಷಿಕ ಪದಗಳು ಇವರ ತುಳುವಿನಲ್ಲಿ ಅನಿವಾರ್ಯವಾಗಿ ಸೇರ್ಪಡೆಗೊಂಡಿವೆ. ಉದಾ: 'ಪೊಸೊ' (ರಾತ್ರಿಯಾಗುವ ಮೊದಲು ಸೇವಿಸು ಆಹಾರ) ಇತ್ಯಾದಿ. ಅವಲ್ಲದೆ, ಇತರ ವರ್ಗದವರು ತುಳುವಿನಲ್ಲಿ ಬಳಕೆಯಾಗುವ 'ತ' ಕಾರ, 'ಸ' ಕಾರಾದಿಯಾಗುವ ಕೆಲವು ಪದಗಳ ಆದಿಯ 'ಸ' ಗಳು ಇವರ ತುಳುವಿನಲ್ಲಿ 'ಹ' ಕಾರಾದಿಯಾಗಿರುವುದು ಕಂಡುಬರುತ್ತವೆ.

ಉದಾ :

| | | | | |
|---|---|---|---|---|
| ತರೆ | – | ತರೆ | – | 'ತಲೆ' |
| ತಿಗಲೆ | – | ಹಿಗಲೆ | – | 'ಎದೆ' |
| ತಡ್ಪೆ | – | ಹಡ್ಪೆ | – | 'ಮೊರ, ಗೆರಸೆ' |
| ಸಪ್ಪು/ತಪ್ಪು | – | ಹಪ್ಪು | – | 'ಎಲೆ' |
| ತಡಮೆ | – | ಹಡಮೆ | – | 'ತೊಡಂಬೆ, ದಾಟುಬೇಲಿ' |
| ಸಾರ್ | – | ಹಾರ್ | – | 'ಚಿಕ್ಕ ತೋಡು' |
| ಸಾದಿ | – | ಹಾದಿ | – | 'ದಾರಿ' |
| ಸಾರಗೆ | – | ಹಾರಗೆ | – | 'ತೆಂಗಿನಕಾಯಿ' |

ಇತ್ಯಾದಿ ಜೈನರಾಡುವ ತುಳುವಿನ ಇಂತಹ ವೈಲಕ್ಷಣಗಳೇ ಈ ಪ್ರಭೇದಕ್ಕೆ ಒಂದು ಪ್ರತ್ಯೇಕ ಸ್ಥಾನವನ್ನು ಕಲ್ಪಿಸಲಿಕ್ಕೆ ಮುಖ್ಯ ಕಾರಣ.

**ಇ) ಜನಸಾಮಾನ್ಯ ತುಳು** : ಈ ಪ್ರಭೇದವು ಬಂಟ, ಬಿಲ್ಲವ, ಮೊಗವೀರ, ಗೌಡ, ಕುಂಬಾರ ಮೊದಲಾದ ಐದಾರು ವರ್ಗದವರು ತುಳು ಭಾಷಾಬೇಧಗಳ ಒಂದು ಗುಂಪೆಂದು ಪರಿಗಣಿಸಲಾಗಿದೆ[೫]. ಈ ವರ್ಗದವರ ಆಡುನುಡಿಗಳೊಳಗೆ ಬಹಳ ಸಾಮ್ಯ ಹಾಗೂ ಸಮಾನ ಲಕ್ಷಣಗಳಿರುವುದರಿಂದ ಅವುಗಳನ್ನೆಲ್ಲ ಒಟ್ಟಾಗಿ 'ಸಾಮಾನ್ಯ ತುಳು' ಎಂದು ಪರಿಗಣಿಸಲಾಗಿದೆ. ಸಾರ್ವಜನಿಕ ಭಾಷಣಗಳಲ್ಲಿ ಸಮೂಹ ಮಾಧ್ಯಮ ಗಳಲ್ಲಿ ಈ ಪ್ರಬೇಧವು ಬಹು ಸಾಮಾನ್ಯವಾಗಿ

ಬಳಕೆಗೊಳ್ಳುತ್ತಿದೆ. ಅದರಿಂದಾಗಿಯೇ ಇದಕ್ಕೆ 'ಸಾಮಾನ್ಯ ತುಳು' ಎಂಬ ನಾಮಧೇಯ. ಈ ಪ್ರಭೇದವು ಅನ್ಯದೇಶ, ಮುಖ್ಯವಾಗಿ ಸಂಸ್ಕೃತ ಪದಗಳನ್ನು ಸ್ವೀಕರಿಸಿದುದು ಬಹಳ ಕಡಿಮೆ. ಒಂದು ವೇಳೆ ಎರವಲು ಪದಗಳನ್ನು ಬಳಸಬೇಕಾದ ಸಂದರ್ಭ ಬಂದರೆ ಅದನ್ನು ತನ್ನ ಸ್ವಭಾವಕ್ಕೆ ತಕ್ಕಂತೆ ಮಾರ್ಪಡಿಸಿಕೊಂಡು ಸ್ವೀಕರಿಸುವುದು ಈ ತುಳು ಪ್ರಬೇದದ ವೈಶಿಷ್ಟ್ಯ.

ಉದಾ: 'ಕಲ್ಜಿಗೊ' (ಸಂ. 'ಕಲಿಯುಗ')

'ಆಲ್ಂಬವೊ' – ಸಂಸ್ಕೃತ – ಅನುಭವ

'ಸೀಯನೋ/ಚೀಯನೋ' – ಕನ್ನಡ – 'ಸಿಹಿಅನ್ನ' = ಪಾಯಸ

ಇತ್ಯಾದಿ ಲ–ಳ, ನ–ಣ, ಶ–ಷ–ಸ ಗಳೊಳಗಿನ ವ್ಯತ್ಯಾಸ ಈ ಪ್ರಭೇದದಲ್ಲಿ ಸ್ವಲ್ಪ ಕಡಿಮೆ ಯೆನ್ನಬಹುದು. ಆದರೂ ತುಳುನಾಡಿನ ಭಾಗದಲ್ಲಿರುವ ಈ ತುಳು ಪ್ರಭೇದವು ಈ ಧ್ವನಿಗಳೊಳಗೆ ಸ್ವಲ್ಪ ಮಟ್ಟಿಗೆ ವ್ಯತ್ಯಾಸವನ್ನು ಕಾಯ್ದುಕೊಂಡು ಬಂದಿದೆ.

ತುಳುವಿನ ಅತ್ಯಂತ ಪ್ರಮುಖವಾಗಿರುವ ಬಾಯ್ದೆರೆ ಸಾಹಿತ್ಯವು ರಚನೆಯಾಗಿರುವುದು ಸಾಮಾನ್ಯ ತುಳುವಿನಲ್ಲಿ ಎಂಬುದು ಗಮನಾರ್ಹ ಸಂಗತಿ .

**ಈ) ಹರಿಜನ ಗಿರಿಜನ ತುಳು :** ಹರಿಜನ ಗಿರಿಜನ ವರ್ಗದವರಿಂದ ಆಡಲ್ಪಡುವ ಆಡುಮಾತು ತುಳುವಿನ ಮತ್ತೊಂದು ಪ್ರಭೇದ. ಈ ವರ್ಗದವರು ತುಳುನಾಡಿನೆಲ್ಲೆಡೆ ಇರುವವರಾದರೂ ಪುತ್ತೂರು ಭಾಗದಲ್ಲಿ ನೆಲೆಸಿರುವ ಹರಿಜನ, ಗಿರಿಜನ ತಮ್ಮ ತುಳುವಿನಲ್ಲಿ ಗಮನಾರ್ಹವಾದ ವೈಶಿಷ್ಟ್ಯಗಳನ್ನು ಕಾಯ್ದುಕೊಂಡು ಬಂದು ಭಾಷಾ ಪ್ರತ್ಯೇಕತೆಯನ್ನು ಉಳಿಸಿಕೊಂಡಿದ್ದಾರೆ. ಇತರ ಪ್ರಬೇಧಗಳ ಕೆಲವು ಪದಗಳ ಆದಿಯಲ್ಲಿರುವ 'ತ'ಕಾರ, 'ಸ'ಕಾರ, 'ಚ'ಕಾರಗಳ ಸ್ಥಾನದಲ್ಲಿ (ಜೈನ ತುಳುವಿನಲ್ಲಿ 'ಹ' ಕಾರವಿರುವಂತೆ) ಈ ತುಳು ಪ್ರಭೇದದಲ್ಲಿ 'ಜ' ಕಾರವು ಕಂಡುಬರುತ್ತದೆ.

ಉದಾಹರಣೆ :–

| | | | | |
|---|---|---|---|---|
| ತರೆ | – | ಚರೆ | – | 'ಚರೆ' |
| ತಡ್ಪೆ | – | ಚಡ್ಪೆ | – | 'ಗೆರಸೆ, ಮೊರ' |
| ಸಪ್ಪು/ತಪ್ಪು | – | ಚಪ್ಪು | – | 'ಸೊಪ್ಪು' |
| ಸಾದಿ | – | ಚಾದಿ | – | 'ದಾರಿ' |
| ಸಮ್ಮನೊ | – | ಚಮ್ಮನೊ | – | 'ಸಮ್ಮಾನ, ಔತಣ' |
| ಬರ್ಸೊ | – | ಬರ್ಜೊ | – | 'ಮಳೆ' |
| ಮುಂಡಾಸ್ | – | ಮುಂಡಾಞ್ | – | 'ಮುಂಡಾಸು' |

ಒಣಸ್ – ಒಣಚ್ – 'ಊಟ'

ಇತ್ಯಾದಿ, ಹಾಗೆಯೇ ಈ ವರ್ಗಕ್ಕೆ ಸೇರಿದವರು ನ–ಲಗಳ ಸಹಜ ಧ್ವನಿಗಳೊಂದಿಗೆ ಮೂರ್ಧನ್ಯಾಕ್ಷರಗಳಾದ ಣ–ಳ ಗಳನ್ನು ಸಹ ಪರ್ಯಾಯವಾಗಿ ಬಳಸುವುದನ್ನು ಕಾಣಬಹದು. ಉದಾ :

ಎಲ್ಲೆ – ಎಳ್ಳೆ – 'ನಾಳೆ'

ಕೋಲೋ – ಕೋಳೊ – 'ಭೂತ ಕೋಲ, ದೈವಗಳ ಆರಾಧನೆ'

ಆನಿ – ಆಣಿ – 'ಅಂದು ಆವೊತ್ತು'

ಇನಿ – ಇಣಿ – 'ಇಂದು, ಇವೊತ್ತು'

ಬಾನೊ – ಬಾಣೊ – 'ಬಾನು, ಆಕಾಶ' ಇತ್ಯಾದಿ ಈ ಧ್ವನಿ ವ್ಯತ್ಯಾಸಗಳಲ್ಲದೆ ಇವರ ವರ್ಗಕ್ಕೆ ವಿಶಿಷ್ಟವಾಗಿರುವ ಅನೇಕ ಸಾಮಾಜಿಕ–ಸಾಂಸ್ಕೃತಿಕ ಪಾರಿಭಾಷಿಕ ಪದಗಳನ್ನು ಈ ಪ್ರಭೇದದಲ್ಲಿ ಕಾಣಬಹುದು.

ಉದಾಹರಣೆ.

ದಿಕ್ಕೆ, ಮೇರೆ, ಕೊರಗೆ – 'ಗಂಡ,

ದಿಕ್ಕಳ್, ಮೇರ್ತಿ, ಕೊರಪ್ಪೊಳು – 'ಹೆಂಡತಿ'

ಜೇರ್ಕುಳು/ಜೇಲ್ರು – 'ಮಕ್ಕಳು'

ತುಳ್ಳೆಲ್ – 'ಮದುವೆ'

ಬಾಣಾರ್ – 'ಬ್ರಾಹ್ಮಣ ಗಂಡಸು'

ಬಾಣಾರೆ ದೆತ್ತಿ – 'ಬ್ರಾಹ್ಮಣ ಸ್ತ್ರೀ'

ಮುಳ್ಳು ಮುಟ್ಟುನೆ – 'ಮೈ ನೆರೆಯುವುದು'. ಇತ್ಯಾದಿ

ಹೀಗೆ ತುಳುವಿನಲ್ಲಿ ನಾಲ್ಕು ರೀತಿಯ ಪ್ರಭೇದಗಳನ್ನು ಇಲ್ಲಿ ಕಾಣಬಹುದು.

**೩.೨.೩. ಪುತ್ತೂರಿನ ಭಾಷಾವಿದ್ವಾಂಸರು :**

ಭಾಷೆಯ ಕುರಿತಾಗಿ ಪುತ್ತೂರಿನ ವಿದ್ವಾಂಸರು ವಿಶೇಷವಾದ ಅಧ್ಯಯನ ಕೈಗೊಂಡಿದ್ದಾರೆ. ಅವರಲ್ಲಿ ಪ್ರಮುಖರಾದವರು ಬಡೆಕ್ಕಿಲ ವೆಂಕಟರಮಣ ಭಟ್, ಡಿ.ಎನ್.ಶಂಕರ ಭಟ್ಟ, ಸೇಡಿಯಾಪು ಕೃಷ್ಣ ಭಟ್, ಪ್ರೊ. ಮರಿಯಪ್ಪ ಭಟ್, ಮುಳಿಯ ತಿಮ್ಮಪ್ಪಯ್ಯ ಮತ್ತು ಅಮೃತ ಸೋಮೇಶ್ವರ ಮುಂತಾದವರು.

ಡಿ.ಎನ್.ಶಂಕರ ಭಟ್ ಕನ್ನಡ ಭಾಷೆ ಕುರಿತಾಗಿ ಹಲವು ಗ್ರಂಥಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಪ್ರಮುಖವಾದವು 'ಕನ್ನಡ ವಾಕ್ಯಗಳು ಆಂತರಿಕ ರಚನೆ ಮತ್ತು ಅರ್ಥವ್ಯವಸ್ಥೆ', 'ಕನ್ನಡ ಭಾಷೆಯ ಕಲ್ಪಿತ ಚರಿತ್ರೆ', 'ಕನ್ನಡ ಪದಗಳ ಒಳರಚನೆ', 'ಕನ್ನಡದ ಸರ್ವನಾಮಗಳು', 'ಕನ್ನಡ ವಾಕ್ಯಗಳ ಒಳರಚನೆ', 'ನಿಜಕ್ಕೂ ಹಳೆಗನ್ನಡ ವ್ಯಾಕರಣ ಎಂತಹುದು?' 'ಕನ್ನಡ ಬರಹವನ್ನು ಸರಿಪಡಿಸೋಣ' ಮತ್ತು 'ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ'.

ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ ಕೃತಿಯಲ್ಲಿ ಡಿ.ಎನ್.ಶಂಕರ ಭಟ್ ಅವರು ಪ್ರಾರಂಭದಲ್ಲಿ ಕನ್ನಡ ವ್ಯಾಕರಣದ ಪರಂಪರೆಯನ್ನು ಹೇಳುತ್ತಾ ಕನ್ನಡ ವ್ಯಾಕರಣ ಕಲಿಕೆಗೆ ಒಂದು ಸಾವಿರ ವರ್ಷಗಳಿಗಿಂತಲೂ ಹೆಚ್ಚು ಹಿಂದಿನ ಚರಿತ್ರೆಯಿದೆ ಎನ್ನುತ್ತಾರೆ. ಈ ಸಮಯದಲ್ಲಿ ಬೇರೆ ಬೇರೆ ರೀತಿಯ ನೂರಕ್ಕೂ ಹೆಚ್ಚು ಪುಸ್ತಕಗಳನ್ನು ಮತ್ತು ಬಿಡಿ ಬರಹಗಳನ್ನು ಹೊರತರಲಾಗಿದೆ. ಇವು ಕನ್ನಡದಲ್ಲಿ ಮಾತ್ರವಲ್ಲದೆ ಇಂಗ್ಲಿಷ್, ಸಂಸ್ಕೃತ, ಮರಾಠಿ, ಹಿಂದಿ, ರಷ್ಯನ್ ಮೊದಲಾದ ಬೇರೆ ಕೆಲವು ಭಾಷೆಗಳಲ್ಲೂ ಕೃತಿಗಳು ಬಂದಿವೆ. ಇವುಗಳನ್ನು ಮೂರು ಮುಖ್ಯ ವ್ಯಾಕರಣ ಪರಂಪರೆಯಾಗಿ ವಿಂಗಡಿಸಬಹುದು ಎನ್ನುತ್ತಾರೆ.

ಒಂದು ಭಾಷೆಯಲ್ಲಿ ಬರುವ ಪದಗಳ, ಪದಕಂತೆಗಳ ಮತ್ತು ವಾಕ್ಯಗಳ ರಚನೆಯೆಂತಹುದು ಎಂಬುದನ್ನು ವಿವರಿಸಿ ಹೇಳುವುದೇ ಆ ಭಾಷೆಯ ಮೇಲೆ ನಾವು ಬರೆಯಬಹುದಾದ ವ್ಯಾಕರಣದ ಮುಖ್ಯ ಉದ್ದೇಶ. ಈ ರಚನೆ ಬೇರೆ ಬೇರೆ ಭಾಷೆಯಲ್ಲಿ ಬೇರೆ ಬೇರೆ ತೆರನಾಗುವುದು ಅತ್ಯವಶ್ಯ ಎಂಬುದು ಡಿ. ಎನ್.ಶಂಕರ ಭಟ್‌ರವರ ಅಭಿಪ್ರಾಯ. ನಿಜಕ್ಕೂ ಕನ್ನಡಕ್ಕೆ ಅದರದೇ ಆದ ಒಂದು ವ್ಯಾಕರಣವಿದೆ. ಇದು ಹಳೆಗನ್ನಡದ ವ್ಯಾಕರಣಕ್ಕಿಂತ ಬಹಳ ಮಟ್ಟಿಗೆ ಭಿನ್ನವಾಗಿದೆ. ಈ ವ್ಯಾಕರಣ ಕನ್ನಡವನ್ನು ಸರಿಯಾಗಿ ಆಡಬಲ್ಲ ಮತ್ತು ಅದರಲ್ಲಿ ತಪ್ಪಿಲ್ಲದೆ ಬರೆಯಬಲ್ಲ ಎಲ್ಲಾ ವ್ಯಕ್ತಿಗಳ ಮಿದುಳಿನಲ್ಲೂ ಅವರ ಅರಿವಿಗೆ ಎಟುಕದ ರೂಪದಲ್ಲಿ ಅಡಗಿರುತ್ತದೆ. ಸಂಸ್ಕೃತ ಮತ್ತು ಕನ್ನಡ ವ್ಯಾಕರಣಗಳ ನಡುವೆ ಎಂತಹ ವ್ಯತ್ಯಾಸಗಳೆಲ್ಲ ಇವೆ ಮತ್ತು ಈ ವ್ಯತ್ಯಾಸಗಳನ್ನು ಸರಿಯಾಗಿ ಗಮನಿಸದುದರಿಂದಾಗಿ ಕನ್ನಡದ ವೈಯಾಕರಣಿಗಳು ಕನ್ನಡದ ವ್ಯಾಕರಣ ನಿಯಮಗಳನ್ನು ಸ್ಪಷ್ಟವಾಗಿ ತಿಳಿಸಿ ಹೇಳುವಲ್ಲಿ ಹೇಗೆ ಅಸಮರ್ಥರಾಗಿದ್ದಾರೆ ಎಂಬುದನ್ನು ಉದಾಹರಣೆಗಳ ಮೂಲಕ "ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ" ಎಂಬ ಕೃತಿಯಲ್ಲಿ ಡಿ.ಎನ್.ಶಂಕರ ಭಟ್ ತೋರಿಸಿಕೊಟ್ಟದ್ದಾರೆ.

ಸಂಸ್ಕೃತದಲ್ಲಿ ತೃತೀಯ ಮತ್ತು ಪಂಚಮೀ ಎಂಬ ಎರಡು ವಿಭಕ್ತಿ ಪ್ರತ್ಯಯಗಳಿದ್ದು, ಕನ್ನಡದಲ್ಲಿ ಇವಕ್ಕೆ ಅನುಗುಣವಾಗಿ 'ಇಂದ' ಎಂಬ ಒಂದೇ ವಿಭಕ್ತಿ ಪ್ರತ್ಯಯ ಬಳಕೆಯಲ್ಲಿದೆ. ಕನ್ನಡದ ಕೆಲವು ವೈಯಾಕರಣಿಗಳು 'ದೆಸೆಯಿಂದ' ಎಂಬುದನ್ನು ಪಂಚಮೀ ವಿಭಕ್ತಿ ಪ್ರತ್ಯಯವೆಂದು ಕರೆದಿದ್ದಾರೆ. ಆದರೆ ಇದು ಒಂದು ನಾಮಪದವಲ್ಲದೆ ಪ್ರತ್ಯಯವಲ್ಲ[1].

ಸೇಡಿಯಾಪು ಕೃಷ್ಣ ಭಟ್ಟರು ಹೇಳುವ ಹಾಗೆ ದೆಸೆಯಿಂದ ಎಂಬುದು 'ಇಂದ' ಪ್ರತ್ಯಯವನ್ನು ಅಂಟಿಸಿಕೊಮಡಿರುವ 'ದಿಶಾ' ಎಂಬ ಸಂಸ್ಕೃತ ಪದದ ತದ್ಭವ ರೂಪ ಮಾತ್ರ. ರಾಮನ ದೆಸೆಯಿಂದ ಎಂಬಂತಹ ಬಳಕೆಯಲ್ಲಿ ಒಂದು ಪದಕಂತೆ ಬಂದಿದೆಯಲ್ಲದೆ ರಾಮ ನಾಮಪದದ ವಿಭಕ್ತಿರೂಪ ಬಂದಿಲ್ಲ.

ಕನ್ನಡದಲ್ಲಿ ಸಹಜವಾಗಿ ಪಂಚಮೀ ವಿಭಕ್ತಿಯಾಗಲೀ ವಿಭಕ್ತಿ ಪ್ರತ್ಯಯವಾಗಲೀ ಇಲ್ಲವೆನ್ನುತ್ತಾರೆ[6]. ಆಡುಮಾತಿನಲ್ಲಿ ಮತ್ತು ಸಾಹಿತ್ಯದಲ್ಲಿ ತೃತೀಯೆ ಪಂಚಮಿಯ ಅರ್ಥದಲ್ಲಿ ಬರುವುದು ಇದಕ್ಕೊಂದು ಕಾರಣ. ಪಂಚಮೀ ವಿಭಕ್ತಿಯೆಂಬುದು ಸಂಸ್ಕೃತ ವ್ಯಾಕರಣ ಮಾರ್ಗಾನುಸರಣೆಯಿಮದ ಕಲ್ಪಿತವಾದದ್ದು[7] ಎಂದು ಅಭಿಪ್ರಾಯವನ್ನು ಸಂಶೋಧನ ರತ್ನಮಾಲಿಕೆಯಲ್ಲಿ ನೀಡಲಾಗಿದೆ.

ಹೊಸಗನ್ನಡದಲ್ಲಿ ಪಂಚಮಿಯಾಗಿ 'ಮರದ ದೆಸೆಯಿಂದ' ಎಂದು ಪ್ರಯೋಗಿಸುವುದು ಪದ್ಧತಿ. ಇಲ್ಲಿ 'ದೆಸೆಯಿಂದ' ಎಂಬುದನ್ನೊಂದು ಪ್ರತ್ಯಯವಾಗಿ ಎಣಿಸಬಹುದೇ ಎಂಬಲ್ಲೇ ಸಂದೇಹವಿದೆ. ಅದು ಇತರ ಪ್ರತ್ಯಯಗಳಂತೆ ಪ್ರಕೃತಿಗೆ ಸೇರಿಕೊಳ್ಳುವುದಿಲ್ಲ. 'ಮರದ' ಎಂಬುದು ಷಷ್ಠೀ ಯಕ್ತ ಪೂರ್ವ ಪದವಾಗಿಯೂ 'ದೆಸೆಯಿಂದ' ಎಂಬುದು ತೃತೀಯೆಯನ್ನುಳ್ಳ ಒಂದು ಸ್ವತಂತ್ರ ಪರಪದವಾಗಿಯೂ ಕಾಣಿಸುವುದು. ಇದು ಕನ್ನಡದಲ್ಲಿ ಸಂಸ್ಕೃತ ಪಂಡಿತರ ದೆಸೆಯಿಂದ ವ್ಯವಹಾರಕ್ಕೆ ಬಂದುದಾಗಿ ಕಾಣುತ್ತಗೆ. ಸ್ವತಃ ಕವಿ ಕೇಶಿರಾಜನು ಸಂಸ್ಕೃತದಲ್ಲಿ ಬಂದ ಪಂಚಮಿಯ ಅರ್ಥದಲ್ಲಿ ತೃತೀಯೆಯನ್ನೇ ಬಳಸಿದ್ದಾನೆ, ಎಂಬುದು ಟಿ.ಕೇಶವ ಭಟ್ಟ ಅವರ ಅಭಿಪ್ರಾಯ.

ತುಳು ಭಾಷೆಯಲ್ಲಿ 'ಅಲ್ಲಿಂದ' ಎಂಬ ಅರ್ಥವನ್ನುಳ್ಳ'ಅಳ್' ಎಂಬುದೇ ಪಂಚಮೀ ವಿಭಕ್ತಿಯ ಪ್ರತ್ಯಯವಾಗಿದೆ. ಉದಾಹರಣೆಗೆ 'ಇಲ್ಲಳ್ತ್ ಬತ್ತೆ' (ಮನೆಯಿಂದ ಬಂದೆ). ಮರಿಯಪ್ಪ ಭಟ್ಟರು ಕನ್ನಡ ಹಾಗೂ ಇತರ ದ್ರಾವಿಡ ಭಾಷೆಗಳ ಕೆಲವೊಂದು ಭಾಷಿಕ ಅಂಶಗಳ ಕುರಿತು ವೈಜ್ಞಾನಿಕ ಚಿಂತನೆ ಮಾಡಿದ ದ್ರಾವಿಡ ಭಾಷಾ ವಿಜ್ಞಾನಿ. ಭಾಷಾ ಶಾಸ್ತ್ರ ಮತ್ತು ವ್ಯಾಕರಣ ಒಂದಕ್ಕೊಂದು ಪೂರಕ. ಒಂದು ಇನ್ನೊಂದನ್ನು ಉಪಯೋಗ ಮಾಡಿಕೊಳ್ಳುತ್ತದೆ ಎಂಬ ಅಭಿಪ್ರಾಯ ಅವರದು[8]. ಮರಿಯಪ್ಪ ಭಟ್ಟರು ವ್ಯಾಕರಣ ವಿಷಯಗಳ ಕುರಿತು ಬರೆದ ಸಂಶೋಧನ ಲೇಖನಗಳು ದ್ರಾವಿಡ ಭಾಷಾವಿಜ್ಞಾನಕ್ಕೆ ಅಮೂಲ್ಯ ವಾದ ಕೊಡುಗೆಗಳಾಗಿವೆ.

ದ್ರಾವಿಡ ಭಾಷೆಗಳ ವಿಭಕ್ತಿ ಪ್ರತ್ಯಯಗಳನ್ನು ಕುರಿತು ಮರಿಯಪ್ಪ ಭಟ್ಟರು 'A Study of cases in Dravidion Language' ಎಂಬ ಲೇಖನದಲ್ಲಿ ವಿವರಿಸಿದ್ದಾರೆ. ಇದರಲ್ಲಿ ಲೇಖಕರು ಕನ್ನಡ, ತಮಿಳು, ತೆಲುಗು, ಮಲಯಾಳ ಮತ್ತು ತುಳು ಭಾಷೆಗಳ ವಿಭಕ್ತಿ ಪ್ರತ್ಯಯಗಳ ಪಟ್ಟಿ ಮಾಡಿ ಅವುಗಳ ತೌಲನಿಕ ಸಮೀಕ್ಷೆ ನಡೆಸಿದ್ದಾರೆ. ಅವರ ಪ್ರಕಾರ

೧) ದ್ರಾವಿಡ ಭಾಷೆಗಳ ವಿಭಕ್ತಿ ಪ್ರತ್ಯಯಗಳಲ್ಲಿ ಲಿಂಗ–ವಚನ ಬೇದವಿಲ್ಲ, ಸಂಸ್ಕೃತದಲ್ಲಿ ಭೇದವಿದೆ.

೨) ವಿಭಕ್ತಿ ಪಲ್ಲಟ ಬಹಳ ಪ್ರಾಚೀನ ಕಾಲದಿಂದಲೇ ಬಂದುದು. ದ್ರಾವಿಡ ಭಾಷೆಗಳಲ್ಲಿ ಒಂದು. ವಿಭಕ್ತ್ಯರ್ಥವನ್ನು ಕೊಡುವುದಕ್ಕೆ ಬೇರೆ ಬೇರೆ ವಿಭಕ್ತಿ ಪ್ರತ್ಯಯಗಳು ಬಳಕೆಯಾಗುತ್ತವೆ. ಇವೆಲ್ಲ ಸಂಧರ್ಭಕ್ಕೆ ತಕ್ಕಂತೆ ವಿಭಕ್ತ್ಯರ್ಥವನ್ನು ಗ್ರಹಿಸಲಾಗುತ್ತದೆ.

೩) ದ್ರಾವಿಡ ಭಾಷೆಗಳಲ್ಲಿ ಪ್ರಥಮಾ ವಿಭಕ್ತಿ ಪ್ರತ್ಯಯವಿಲ್ಲ.

೪) ದ್ರಾವಿಡ ಭಾಷೆಗಳಲ್ಲಿ ಅಪಾದಾನಾ ಕಾರಕದ ಅಭಿವ್ಯಕ್ತಿ ಇದೆ. ಆದರೆ ವಿಭಕ್ತಿ ಪ್ರತ್ಯಯವಿಲ್ಲ 'ಇದು ತೃತೀಯೆ, ಇದು ಪಂಚಮಿ' ಎಂಬ ನಿಶ್ಚಿತ ವ್ಯವಸ್ಥೆಯಿಲ್ಲ. ಕನ್ನಡದ ಕೆಲವು ಉಪಭಾಷೆಗಳಲ್ಲಿ 'ಇಂದ' ಇಲ್ಲವೇ 'ಇನ್' ಎಂಬುದು 'ಇಲ್'ನಿಂದ ಬಂದಿರಬೇಕು. 'ಇಲ್' ಎಂದರೆ 'ಮನೆ' ಅಥವಾ 'ಇಲ್ಲಿ' ಎಂಬರ್ಥವಾಗುವುದರಿಂದ ಅಪಾದಾನದೊಡನೆ ಸ್ವಾಭಾವಿಕವಾಗಿ ಅದರ ಸಂಬಂಧ ಏರ್ಪಡುತ್ತದೆ.

೫) ದ್ರಾವಿಡ ಭಾಷೆಗಳ ವಿಭಕ್ತಿ ಪ್ರತ್ಯಯಗಳು ಮೂಲದಲ್ಲಿ ಸ್ವತಂತ್ರವಾದ ಶಬ್ದಗಳಾಗಿದ್ದವು ಎಂಬ ಭಾಷಾ ವಿಜ್ಞಾನಿಗಳ ಅಭಿಪ್ರಾಯ ಒಪ್ಪತಕ್ಕದು. ಸಪ್ತಮೀ ಪ್ರತ್ಯಯಗಳಾದ ಒಳ್, ಉಳ್, ಇಲ್ ಮುಂತಾದವು ಇಂದಿಗೂ ಅರ್ಥವತ್ತಾದ ಪದಗಳಾಗಿವೆ. ಮೊದಲು ಸ್ವತಂತ್ರ ಪದಗಳಾಗಿದ್ದ ಇವು ಪ್ರತ್ಯಯಗಳಂತೆ ಬಳಕೆಗೊಂಡು ಕಾಲಾಂತರದಲ್ಲಿ ಪ್ರತ್ಯಯಗಳೇ ಆಗಿ ಮಾರ್ಪಟ್ಟಿರಬೇಕು ಎಂಬ ಅಭಿಪ್ರಾಯ ಮರಿಯಪ್ಪ ಭಟ್ಟರದು.

ಪುತ್ತೂರು ತಾಲೂಕು ಭಾಷಾ ಸಾಮರಸ್ಯಕ್ಕೆ ಹೆಸರಾಗಿದೆ. ಇಲ್ಲಿ ಜನರು ಬಳಸುವ ಭಾಷೆಗಳು ಹಲವು. ಕನ್ನಡದ ಜೊತೆಗೆ ತುಳು, ಕೊಂಕಣಿ, ಮಲಯಾಳಂ, ಹವ್ಯಕ, ಅರೆಗನ್ನಡ, ಶಿವಳ್ಳಿತುಳು, ಕರ್ಹಾಡ, ಮರಾಠಿ ಮುಂತಾದ ಭಾಷೆಗಳು ಇಲ್ಲಿ ಬಳಕೆಯಲ್ಲಿವೆ. ಆದರೆ ಭಾಷೆಯ ಹೆಸರಿನಲ್ಲಿ ಯಾರೂ ಜಗಳ ವಾಡುವುದಿಲ್ಲ. ಸಾಮರಸ್ಯದ ಜೀವನ ಇಲ್ಲಿನ ವಿಶೇಷ. ಡಾ. ಡಿ. ಸದಾಶಿವ ಭಟ್ಟರು ಬಹುಭಾಷಾ ವಿದ್ವಾಂಸ ರಾಗಿದ್ದು, ಕನ್ನಡ, ತುಳು, ಕೊಂಕಣಿ, ಕರ್ಹಾಡ, ಹಿಂದಿ, ಇಂಗ್ಲೀಷ್, ಸಂಸ್ಕೃತ ಭಾಷೆಗಳಲ್ಲಿ ಕೃತಿ ರಚಿಸಿದ್ದಾರೆ.

# ಅಡಿ ಟಿಪ್ಪಣಿ

೧. ಪಾಲ್ತಾಡಿ ರಾಮಕೃಷ್ಣ ಆಚಾರ್ ನೀಡಿದ ಮಾಹಿತಿ

೨. ತುಳು ಸಾಹಿತ್ಯ ಚರಿತ್ರೆ – ಪುಟ ೨೨೩

೩. ಅದೇ – ಪುಟ ೨೨೩

೪. ಅದೇ – ಪುಟ ೨೨೩

೫. ಅದೇ – ಪುಟ ೨೨೪

೬. ಕನ್ನಡಕ್ಕ ಬೇಕು ಕನ್ನಡದ್ದೇ ವ್ಯಾಕರಣ– ಡಿ.ಎನ್.ಶಂಕರ ಭಟ್ ಪುಟ–೧೮೨

೭. ಕನ್ನಡ ಕೈಪಿಡಿ– ಡಿ.ಎನ್.ಶಂಕರ ಭಟ್ ಪುಟ ೩೩೮.

೮. ಸಂಶೋಧನ ರತ್ನಮಾಲಿಕೆ– ಡಿ.ಎನ್.ಶಂಕರ ಭಟ್ ಪುಟ ೬೮.

೯. ಕನ್ನಡ ಸಂಸ್ಕೃತಿ– ಎಂ. ಮರಿಯಪ್ಪ ಭಟ್ ಪುಟ ೩೩೩'

## ಅಧ್ಯಾಯ – ೪

# ಸಾಹಿತ್ಯ ಕ್ಷೇತ್ರ

೪. ೧. ಹಿನ್ನೆಲೆ

೪. ೨. ಸ್ವಾತಂತ್ರ್ಯ ಪೂರ್ವ ಕಾಲ

೪. ೩. ಸ್ವಾತಂತ್ರ್ಯೋತ್ತರ ಕಾಲ

೪. ೪. ಸಾಹಿತಿಗಳು

# ಅಧ್ಯಾಯ – ೪

# ಸಾಹಿತ್ಯ ಕ್ಷೇತ್ರ

## ೪.೧.೦. ಹಿನ್ನೆಲೆ :

ಸಾಹಿತ್ಯವನ್ನು ಒಂದು ಸಾಂಸ್ಕೃತಿಕ ಬದುಕಿನ ಉತ್ಪನ್ನ ಎಂದು ಪರಿಗಣಿಸಿದರೆ, ಒಂದು ಪ್ರದೇಶದ, ಒಂದು ಕಾಲದ ಸಾಂಸ್ಕೃತಿಕ ಸಾಮಾಜಿಕ ದಾಖಲೆಯಾಗಿ ಸಾಹಿತ್ಯವನ್ನು ನೋಡಲು ಸಾಧ್ಯವಿದೆ. ಚಾರಿತ್ರಿಕ ದಾಖಲೆಗಳು ಹೇಳುವಷ್ಟು ನಿಖರವಾಗಿ ಅಲ್ಲದಿದ್ದರೂ ಒಂದು ಪ್ರದೇಶದ ಸಾಮಾಜಿಕ, ಸಾಂಸ್ಕೃತಿಕ ಪಲ್ಲಟಗಳನ್ನು ಸಾಹಿತ್ಯ ಹೇಳಬಹುದು. ಪುತ್ತೂರಿನಂತಹ ಒಂದು ತಾಲೂಕನ್ನು ಕೇಂದ್ರವಾಗಿಟ್ಟುಕೊಂಡು ಇಲ್ಲಿಯ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಬೆಳವಣಿಗೆಗಳನ್ನು ಗುರುತಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಪುತ್ತೂರು ಎಂಬ ಭೌಗೋಳಿಕ ರಚನೆಯಲ್ಲಿ ಅದರದ್ದೇ ಆದ ಒಂದು ವಿಶಿಷ್ಟ ಸಾಮಾಜಿಕ ಸಂರಚನೆಯನ್ನಾಗಲೀ ಒಂದು ಸಾಂಸ್ಕೃತಿಕ ಅನನ್ಯತೆಯನ್ನು ಗುರುತಿಸುವುದು ಸಾಧ್ಯವಿಲ್ಲ. ಯಾಕೆಂದರೆ ಸಾಮಾಜಿಕ, ಭೌಗೋಳಿಕ, ಭಾಷಿಕ ಪರಿಸರಗಳು ಇಲ್ಲಿ ಬಹು ಸಂಸ್ಕೃತಿಯ ಸಂರಚನೆಯನ್ನು ಹಿಂದಿನಿಂದಲೂ ಗಟ್ಟಿಗೊಳಿಸಿದೆ. ಹಲವು ಉಪಭಾಷೆಗಳನ್ನು ಮಾತನಾಡುವ ಜನ, ಹಲವು ಕಸುಬುಗಳನ್ನು ಅವಲಂಬಿಸಿರುವ ಜನ, ಬಹುಪಾಲು ಪರಕೀಯ ಆಡಳಿತಕ್ಕೆ ಒಳಪಟ್ಟಿರುವುದರಿಂದಲೋ ಏನೋ ಆಗಾಗ ಕಾಣಿಸಿಕೊಳ್ಳುತ್ತಿದ್ದ ಅನಿವಾಸಿ ಜನ–ಇವರೆಲ್ಲ ಅಲ್ಲಿನ ಸಾಮಾಜಿಕ ಸಂರಚನೆಯ ಭಾಗವಾಗಿ ಹೋಗಿದ್ದಾರೆ. 

ಸುಮಾರು ನಡುಗನ್ನಡದ ಆರಂಭದಿಂದಲೇ, ಅಂದರೆ ಸುಮಾರು ೭೦೦–೮೦೦ ವರ್ಷಗಳ ಹಿಂದಿನಿಂದಲೇ ಪುತ್ತೂರಿನಲ್ಲಿ ಕಾವ್ಯದ ಇತಿಹಾಸವನ್ನು ಗುರುತಿಸಲಾಗಿದೆ. ವಸಾಹತುಶಾಹಿಯು ತಂದ ಆಧುನಿಕತೆಯನ್ನು ಸ್ವೀಕರಿಸುತ್ತಲೇ ಅದರ ಕ್ರೌರ್ಯದ ವಿವಿಧ ವಿನ್ಯಾಸಗಳನ್ನು ಇಲ್ಲಿನ ಕತೆಗಳು ಸಮರ್ಥವಾಗಿ ನಿರೂಪಿಸಿವೆ.

ಭಾಷೆಯ ಬಗೆಗಿನ ಅಧ್ಯಯನ ಎನ್ನುವುದು ಪುತ್ತೂರಿನ ಸಾಹಿತ್ಯ ಮತ್ತು ಭಾಷೆಗಳ ವಿಶೇಷ ಆಸಕ್ತಿಯ ಕ್ಷೇತ್ರವಾಗಿತ್ತು. ಅದರ ಫಲವಾಗಿಯೇ ಭಾಷೆ, ವ್ಯಾಕರಣ, ಛಂದಸ್ಸು ಇತ್ಯಾದಿಗಳ ಬಗ್ಗೆ ಗಂಭೀರ ಅಧ್ಯಯನ ನಡೆಸಿದ ಪಂಡಿತವರ್ಗವೊಂದು ಇಲ್ಲಿ ಬೆಳೆದು ಬಂದು ಒಟ್ಟು ಕನ್ನಡ ಅಧ್ಯಯನಕ್ಕೆ ಬಹು ಮುಖ್ಯ ಕೊಡುಗೆಯನ್ನು ನೀಡುವಂತಾಯಿತು. ಮುಳಿಯ ತಿಮ್ಮಪ್ಪಯ್ಯ, ಸೇಡಿಯಾಪು ಕೃಷ್ಣ

ಭಟ್, ಮರಿಯಪ್ಪ ಭಟ್ ಹೀಗೆ ಮುಂದುವರಿದ ಈ ಪಂಡಿತವರ್ಗವು ಇಲ್ಲಿ ದೊಡ್ಡ ಶಿಷ್ಯವರ್ಗವೊಂದನ್ನು ಸೃಷ್ಟಿಸಿತ್ತು. ವ್ಯಾಕರಣ, ಛಂಧಸ್ಸು, ಕಾವ್ಯಮೀಮಾಂಸೆಗಳ ಬಗ್ಗೆ ಇಂದಿನ ಸಾಹಿತ್ಯ ವಲಯವು ಅಷ್ಟಾಗಿ ಆಸಕ್ತಿ ತೋರಿಸದೆ ಇರುವಾಗಲೂ ಅವುಗಳ ಬಗ್ಗೆ ಆಸಕ್ತಿಯಿಟ್ಟು ಅಧ್ಯಯನ ನಡೆಸುವ, ಅಧಿಕೃತವಾಗಿ ಮಾತನಾಡಬಲ್ಲ ಒಂದಷ್ಟು ಮಂದಿ ಈ ಪ್ರದೇಶದಲ್ಲಿದ್ದಾರೆ. ಎನ್ನುವುದು ಗಮನಿಸಬೇಕಾದ ಸಂಗತಿ.

ಪುತ್ತೂರಿನ ಜನರಿಗೂ ಯಕ್ಷಗಾನಕ್ಕೂ ಇರುವ ಸಂಬಂಧವು ತುಂಬಾ ಆತ್ಮೀಯವಾದದ್ದು. ಕೇವಲ ಮನರಂಜನೆಗೆ ಸೀಮಿತವಾಗದೆ. ಇಲ್ಲಿನ ಸಂವೇದನಾಶೀಲ ಮನಸ್ಸುಗಳಿಗೆ ಹಲವು ರೀತಿಯಲ್ಲಿ ಯಕ್ಷಗಾನವು 'ಆಪ್ತ ಸಮಾಲೋಚನೆ' ನೀಡಿದೆ. ಇಲ್ಲಿನ ಪೌರಾಣಿಕ ಹಿನ್ನಲೆಯ ಭ್ರಾಮಕ ಜಗತ್ತು ದೇವ – ಅಸುರ ಸಂಘರ್ಷಗಳು, ಪುತ್ತೂರನ್ನು ಸಂವೇದನೆಯಲ್ಲೂ ಪ್ರಭಾವಿಸಿದೆ. ಸಾಹಿತ್ಯ ಮಾತ್ರವಲ್ಲದೆ ರಂಗಭೂಮಿ, ಕುಣಿತಗಳು, ಮಾತುಗಾರಿಕೆ ಪ್ರತಿಯೊಂದಲ್ಲೂ ಯಕ್ಷಗಾನದ ಛಾಪು ಇದೆ. ಹೊಲಗಳಿಂದ ಕೇಳಿ ಬರುವ 'ಓ ಬೇಲೆ....' ಪದ್ಯಗಳು ಭೂತದ ಗಗ್ಗರದ ಸದ್ದು, ಯಕ್ಷಗಾನದ ಚೆಂಡೆ ಸದ್ದುಗಳು ಇಲ್ಲಿನ ಸಾಹಿತ್ಯಿಕ ಸಾಂಸ್ಕೃತಿಕ ಪರಿಸರದಲ್ಲಿ ಸದಾ ಅನುರಣಿತವಾಗುತ್ತಲೇ ಬಂದಿವೆ.

ಸೇಡಿಯಾಪು ಕೃಷ್ಣಭಟ್ಟ ಅವರಂತಹ ಕನ್ನಡ ಅಧ್ಯಯನದ ಸೂಕ್ಷ್ಮ ಪ್ರತಿಭೆ, ಶಿವರಾಮ ಕಾರಂತರಂತಹ ಕನ್ನಡದ ದೈತ್ಯಪ್ರತಿಭೆಗಳು ಓಡಾಡಿದ ಪ್ರದೇಶವಿದು. ಕಾರಂತರು ಪುತ್ತೂರಿನಲ್ಲಿ ಸ್ಥಾಪಿಸಿದ ಕರ್ನಾಟಕ ಸಂಘ, ದಸರಾ ನಾಡಹಬ್ಬ ಇಂದೂ ಮುಂದುವರಿದು ಬರುತ್ತಿದೆ.

ಉಗ್ರಾಣ ಮಂಗೇಶರಾಯರು, ಕಡವ ಶಂಭುಶರ್ಮ, ಜಿ.ಎನ್. ಲಕ್ಷ್ಮಣ ಮತ್ತು ಮಚ್ಚಿಮಲೆ ಶಂಕರನಾರಾಯಣ ರಾವ್, ಬೊಳಂತಕೋಡಿ ಈಶ್ವರ ಭಟ್ಟ, ಬೆಳ್ಳಿ ರಾಮಚಂದ್ರರಾವ್, ನಾರಾಯಣ ಕಿಲ್ಲೆ, ಮಚ್ಚಿಮಲೆ ಶಂಕರನಾರಾಯಣ ರಾವ್, ಮರಿಯಪ್ಪ ಭಟ್, ಸೇಡಿಯಾಪು ಕೃಷ್ಣಭಟ್ ಮುಂತಾದ ಮಹನೀಯರ ಸಾಹಿತ್ಯ ಚಟುವಟಿಕೆಗಳು ಪ್ರಸಿದ್ಧವಾಗಿವೆ.

ನವ್ಯೋತ್ತರ ಸಂದರ್ಭದ ಪ್ರಮುಖ ಬೆಳವಣಿಗೆಯಾದ ಮುಸ್ಲಿಂ ಸಂವೇದನೆಯನ್ನು ಕನ್ನಡ ಸಾಹಿತ್ಯದಲ್ಲಿ ಮೂಡಿಸಿದವರು ಪುತ್ತೂರಿನ ಬೊಳುವಾರು ಮಹಮ್ಮದ್ ಕುಂಞ, ಬಿ. ಎಂ. ಬಶೀರ್ ಮುಂತಾದವರ ಕಥೆ, ಕಾದಂಬರಿಗಳು ಕನ್ನಡ ಸಾಹಿತ್ಯಕ್ಕೆ ಹೊಸ ಲೋಕವೊಂದನ್ನು ತೆರೆದು ತೋರಿಸಿತು. ಉಪಭಾಷೆ ಎಂದು ಗುರುತಿಸಲಾಗಿದ್ದ ಬ್ಯಾರಿ ಭಾಷೆಯು ಸ್ವತಂತ್ರ ಭಾಷೆಯಾಗಿ ಬೆಳೆದು ಅದರಲ್ಲೂ ಸಾಹಿತ್ಯ ರಚನೆಗಳು ಪ್ರಾರಂಭವಾದಾಗ ಪುತ್ತೂರಿನ ಪ್ರತಿಭೆಗಳೂ ಅದರಲ್ಲಿ ಕಾಣಿಸಿಕೊಂಡದ್ದು ಗಮನಿಸ ಬೇಕಾದ ಅಂಶವಾಗಿದೆ.

ಸಾಹಿತ್ಯ–ಸಂಶೋಧನೆಯ ಕ್ಷೇತ್ರದಲ್ಲಿ ಪುತ್ತೂರಿನ ಶ್ರೀಕೃಷ್ಣ ಭಟ್, ಟಿ. ಕೇಶವ ಭಟ್ ಮತ್ತು ತಾಳ್ತಜೆ ವಸಂತ ಕುಮಾರರದ್ದು ದೊಡ್ಡ ಹೆಸರು ಮೂರು ದಶಕಗಳಿಂದ ಹೊರ ರಾಜ್ಯದ ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ನೇತೃತ್ವ ವಹಿಸಿದ್ದ ತಾಳ್ತಜೆ ಅವರು ಕರ್ನಾಟಕದ ಸಾಹಿತ್ಯಿಕ – ಶೈಕ್ಷಣಿಕ ರಂಗದಲ್ಲಿ ಸಾಕಷ್ಟು ಪ್ರಸಿದ್ಧಿ ಗಳಿಸಿರುತ್ತಾರೆ. ಕನ್ನಡ ಸಾಹಿತ್ಯ ಸಂಶೋಧನಾ ರಂಗದಲ್ಲಿ 'ಸಾಂಸ್ಕೃತಿಕ ಸಂಶೋಧನೆ' ಎಂಬ ಪರಿಕಲ್ಪನೆಯನ್ನು ಹುಟ್ಟು ಹಾಕಿ ಅದಕ್ಕೊಂದು ಶಿಸ್ತನ್ನು ರೂಪಿಸಿದವರು ತಾಳ್ತಜೆಯವರು. ಅವರ 'ಬೌದ್ಧ ಸಂಸ್ಕೃತಿ' 'ಮುತ್ತಿನ ಸತ್ತಿಗೆ'ಮುಂತಾದ ಇಪ್ಪತ್ತಕ್ಕೂ ಹೆಚ್ಚಿನ ಕೃತಿಗಳು ತೀರಾ ಸ್ಥಳೀಯ ಹಂತದಿಂದ 'ಭಾರತೀಯ' ಹಂತದವರೆಗೆ ಸಂಸ್ಕೃತಿಯ ವಿವಿಧ ಮಜಲುಗಳನ್ನು ವಿಶ್ಲೇಷಣೆ ಮಾಡುತ್ತವೆ. ಶ್ರೀಕೃಷ್ಣ ಭಟ್ ಅವರ 'ಹವ್ಯಕ ಗಾದೆಗಳು', ಕನ್ನಡದಲ್ಲಿ ಶತಕ ಸಾಹಿತ್ಯ ಮುಂತಾದ ಇಪ್ಪತ್ತೈದಕ್ಕೂ ಅಧಿಕ ಕೃತಿಗಳು ಮುದ್ರಿಸಲ್ಪಟ್ಟಿವೆ.

ಹನಿಗವನದಿಂದ ಹಿಡಿದು ಷಟ್ಪದಿ ಕಾವ್ಯಗಳ ತನಕ ಬೇರೆ ಬೇರೆ ತರಹದ ಕಾವ್ಯ ಪ್ರಯೋಗಗಳನ್ನು ಮಾಡಿದ, ಕಾದಂಬರಿಗಳನ್ನು ಬರೆದು ಪ್ರಕಟಿಸುತ್ತಿರುವ ಉತ್ಸಾಹಿಗಳು ಪುತ್ತೂರಿನಲ್ಲಿ ಇದ್ದಾರೆ. ಯಕ್ಷಗಾನ ಪ್ರಸಂಗ ಕರ್ತರೂ ತುಳು ನಾಟಕ ಕರ್ತೃಗಳು ಇಲ್ಲಿದ್ದಾರೆ.

ಪುತ್ತೂರು ತಾಲೂಕು ಮಟ್ಟದ ಹದಿಮೂರು ಸಾಹಿತ್ಯ ಸಮ್ಮೇಳನಗಳು ನಡೆದಿವೆ. ಹಿರಿಯ ಸಾಹಿತಿಗಳಾದ ಕೆದಂಬಾಡಿ ಜತ್ತಪ್ಪ ರೈ, ತಾಳ್ತಜೆ ಕೃಷ್ಣ ಭಟ್, ಬೋಳಂಕೋಡಿ ಈಶ್ವರ್‌ಭಟ್, ಲೀಲಾ ಭಟ್, ವಿ. ಬಿ. ಮೊಳೆಯಾರ್, ಶಂಕರ ಖಂಡೇರಿ, ಶಂಪಾ ದೈತೋಟ, ಬಿ. ಪುರಂದರ ಭಟ್, ಕುದ್ಕಾಡಿ ವಿಶ್ವನಾಥ ರೈ, ಪಾಲ್ತಾಡಿ ರಾಮಕೃಷ್ಣ ಆಚಾರ್, ಎ. ಪಿ. ಮಾಲತಿ, ವಿ. ಬಿ. ಅರ್ತಿಕಜೆ, ಡಿ. ಸದಾಶಿವ ಭಟ್, ಮಂತಾದವರು ಈ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷರಾಗಿ ಈ ಪರಿಸರದ ಸಾಹಿತ್ಯ ಚಟುವಟಿಕೆಗಳಿಗೆ ಉತ್ತಮ ಪ್ರೇರಣೆ ನೀಡಿದ್ದಾರೆ. ಕನ್ನಡದ ಹಲವಾರು ಹಿರಿಯ ಸಾಹಿತಿಗಳಲ್ಲದೆ ಜಿಲ್ಲೆಯ ಅನೇಕ ಹಿರಿಯ, ಕಿರಿಯ ಸಾಹಿತಿಗಳು ಪುತ್ತೂರಿನ ವಿವಿಧ ಕಾರ್ಯಕ್ರಮಗಳಿಗೆ ಭೇಟಿ ನೀಡಿ ಇಲ್ಲಿನ ಸಾಹಿತ್ಯ ಚಟುವಟಿಕೆಗಳಲ್ಲಿ ಭಾಗಿಯಾಗಿದ್ದಾರೆ.

ಪುತ್ತೂರಿಗೂ ಪತ್ರಿಕಾರಂಗಕ್ಕೂ ವಿಶೇಷವಾದ ನಂಟು. ಅನಂತರಾಯರು ಈ ಕ್ಷೇತ್ರದಲ್ಲಿ ಪ್ರಥಮರಾಗಿದ್ದು, ಅವರು ೧೯೨೮ರ ಹೊತ್ತಿಗೆ ಪುತ್ತೂರಿನಿಂದ 'ಕನ್ನಡ ಕೇಸರಿ' ಎಂಬ ಮಾಸಪತ್ರಿಕೆಯನ್ನು ಪ್ರಕಟಿಸುತ್ತಿದ್ದರು. ಮುಂದೆ ಶಿವರಾಮ ಕಾರಂತರು "ವಿಚಾರವಾಣಿ" ಎಂಬ ವಾರಪತ್ರಿಕೆಯನ್ನು ೧೯೫೦ರಲ್ಲಿ ಆರಂಭಿಸಿದರು. ಪ್ರಸ್ತುತ "ಅಡಿಕೆ ಪತ್ರಿಕೆ" ಎಂಬ ಮಾಸಪತ್ರಿಕೆ "ಸುದ್ದಿಬಿಡುಗಡೆ" ಎಂಬ ದಿನಪತ್ರಿಕೆ ಪ್ರಕಟಗೊಳ್ಳುತ್ತಿವೆ. ಸ್ಥಳೀಯ ಪತ್ರಿಕೆಗಳಿಂದ ತೊಡಗಿ ರಾಜ್ಯಮಟ್ಟದ ಪತ್ರಿಕೆಗಳವರೆಗೆ ಇಲ್ಲಿಯ ಪತ್ರಕರ್ತರು ಕ್ರಿಯಾಶೀಲರಾಗಿದ್ದಾರೆ. ಪುತ್ತೂರಿನ ಸಾಹಿತ್ಯ

ವಲಯವು ಜೀವಂತವಾಗಿರಲು ಈ ಪತ್ರಕರ್ತರ ಕೊಡುಗೆಗಳೂ ಮುಖ್ಯವಾಗಿವೆ. ಹೀಗೆ ಪುತ್ತೂರನ್ನು ಸಾಂಸ್ಕೃತಿಕ ಕೇಂದ್ರವೆಂದು ಕರೆದರೆ ತಪ್ಪಾಗಲಾರದು.

**೪.೨.೦. ಸ್ವಾತಂತ್ರ್ಯ ಪೂರ್ವ ಕಾಲ :**

ಕನ್ನಡನಾಡಿನಲ್ಲಿ 'ಪುತ್ತೂರಿ'ನ ಇರುವಿಕೆಯನ್ನು ಎತ್ತಿತೋರಿಸುವ ಮತ್ತು ಭಾರತ ದೇಶದ ಉದ್ದಗಲಕ್ಕೂ ಅದರ ಮೇಲ್ಮೈಯನ್ನು ಸಾರಿಹೇಳುವ ಕಾರ್ಯದಲ್ಲಿ ಇಲ್ಲಿನ ಸಾಹಿತ್ಯಿಕ ಲೋಕದ ಸಾಧನೆ ಅನನ್ಯವಾದುದು. ಒಂದೊಮ್ಮೆ ದಕ್ಷಿಣಕನ್ನಡ ಜಿಲ್ಲೆಯಲ್ಲಿಯೇ ಅತ್ಯಂತ ದೊಡ್ಡ ತಾಲೂಕಾಗಿದ್ದ ಪುತ್ತೂರಿನಲ್ಲಿ, ಪ್ರಾಚೀನ ಕಾಲದಿಂದ ಈಗಿನ ಆಧುನಿಕ ಕಾಲದ ತನಕ ಸಾಹಿತ್ಯ ಸಮೃದ್ಧವಾಗಿ ಬೆಳೆದು ಬಂದಿದೆ.

ಸ್ವಾತಂತ್ರ್ಯ ಪೂರ್ವದಲ್ಲಿಯೇ ಅನೇಕ ಪ್ರಸಿದ್ಧ ಕವಿಗಳಿದ್ದ ಊರು ಪುತ್ತೂರು. ಪುತ್ತೂರನ್ನು ತನ್ನ ಕಾರ್ಯಕ್ಷೇತ್ರವನ್ನಾಗಿಸಿ ಸಾಹಿತ್ಯ ಲೋಕದಲ್ಲಿ ಅಮೋಘ ಸೇವೆ ಸಲ್ಲಿಸಿದವರಲ್ಲಿ ಕೆ. ಶಿವರಾಮಕಾರಂತರ ಹೆಸರು ಪ್ರಥಮವಾಗಿ ಬಂದು ನಿಲ್ಲುತ್ತದೆ[೧]. ಕುಂದಾಪುರದ ಕೋಟದಲ್ಲಿ ಜನಿಸಿ. ೧೯೩೧ರಲ್ಲಿ ಪುತ್ತೂರಿಗೆ ಬಂದು ೧೯೭೪ರವರೆಗೆ ಇಲ್ಲಿ ನೆಲೆಸಿದ ಕಾರಂತರು ಕಥೆ, ಕಾದಂಬರಿ, ನಾಟಕ ಪಠ್ಯಪುಸ್ತಕಗಳ ರಚನೆಯ ಮೂಲಕ ಸಾಹಿತ್ಯ ವಲಯದಲ್ಲಿ ಪುತ್ತೂರಿಗೆ ರಾಷ್ಟ್ರೀಯ ಮನ್ನಣೆಯನ್ನು ಗಳಿಸಿಕೊಟ್ಟವರು. ಹಾವು, ಹಸಿವು, ತೆರೆಮರೆಯಲ್ಲಿ ಇತ್ಯಾದಿ ಕವನ ಸಂಕಲನಗಳನ್ನು, ಹಳ್ಳಿಯ ಸಮಸ್ತರು, ನಗರದ ನವ ನಾಯಕರು, ಚಿಕ್ಕ – ದೊಡ್ಡವರು ಎಂಬ ವ್ಯಕ್ತಿ ಚಿತ್ರಗಳನ್ನು, ಬೆಟ್ಟದ ಜೀವ, ಕನ್ಯಾಬಲಿ, ಮರಳಿ ಮಣ್ಣಿಗೆ, ಮುಗಿಯದ ಯುದ್ಧ, ಕುಡಿಯರ ಕೂಸು, ಮೂಕಜ್ಜಿಯ ಕನಸು ಇತ್ಯಾದಿ ಕಾದಂಬರಿಗಳು ಕಾರಂತರು ಪುತ್ತೂರಿನಲ್ಲಿ ಇದ್ದಾಗ ರಚಿತವಾದದ್ದಾಗಿದೆ.

ಕುಂದಾಪುರದಲ್ಲಿ ಹುಟ್ಟಿ ಪುತ್ತೂರಿನಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಿದ ಉಗ್ರಾಣ ಮಂಗೇಶ ರಾಯರು ಕನ್ನಡದ ಸಾಹಿತ್ಯದ ಉಗ್ರಾಣವನ್ನು ತಮ್ಮ ಕೃತಿಗಳಿಂದ ತುಂಬಿ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತ ಗೊಳಿಸಿದವರು[೨]. ರತ್ನಾಕರವರ್ಣಿಯ 'ಭರತೇಶ ವೈಭವ'ವನ್ನು ಮೊತ್ತ ಮೊದಲಿಗೆ ಸಮಗ್ರವಾಗಿ ಪರಿಶೋಧಿಸಿ ಪ್ರಕಟಿಸಿದ ಅವರು 'ತಾಳೆ ಓಲೆ ೧೮' ಅಧ್ಯಯನ, ಮತ್ತು 'ಕೌತುಕ ರಾಮಾಯಣ' ಇತ್ಯಾದಿ ಕೃತಿಗಳನ್ನು 'ಕೋಳೂರು ಕೊಡಗೂಸು' ನಂತಹ ಮಕ್ಕಳ ಕಥೆ ಹರಿಶ್ಚಂದ್ರನ ರಾಜ್ಯದಾನ, ಬಾಲ್ಯಸ್ನೇಹಿತರು, ಸೊಹ್ರಾಬ್ ರಸ್ತುಂ, ಮೂರು ಕಾಗೆ ಕಾರಿದರು ಎಂಬ ಮಕ್ಕಳ ನಾಟಕಗಳನ್ನು, 'ಪಂಜರದ ಗಿಳಿ' ಮತ್ತು 'ಜೋಗುಳದ ಹಾಡು' ಎಂಬ ಮಕ್ಕಳ ಕವಿತೆಗಳನ್ನು ರಚಿಸಿದ್ದಾರೆ.

ಸಹಕಾರಿ, ಶಿಕ್ಷಣ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತನ್ನ ಅಪಾರವಾದ ಸೇವೆಯ ಮೂಲಕ ಗುರುತಿಸಲ್ಪಡುವ ಮೊಳಹಳ್ಳಿ ಶಿವರಾಯರು ಸಹಕಾರಿ ಪತ್ರಿಕೆಯನ್ನು ಹೊರಡಿಸಿದ್ದು ಮಾತ್ರವಲ್ಲದೆ ಸಾಹಿತ್ಯಿಕ ಕಾರ್ಯಗಳಿಗೆ ಪ್ರೋತ್ಸಾಹ ನೀಡಿದರು. ಅವರ ಹಿರಿಯ ಮಗಳು ಪಡುಕೋಣೆ ಸೀತಾದೇವಿ ಯವರು–'ಕಟುಕರೋಹಿಣಿ', 'ಸಂವತ್ಸರದಲ್ಲಿ ಹೀಗಾಗಬಾರದೇಕೆ?' 'ವೇಣುಮಾವ' ಮುಂತಾದ ಕೃತಿಗಳನ್ನು ರಚಿಸಿದ್ದಾರೆ.

ಸ್ವಾತಂತ್ರ್ಯ ಹೋರಾಟಗಾರರಾದ ಎನ್.ಎಸ್. ಕಿಲ್ಲೆಯವರು 'ಕಾನಿಗೆ' ಎಂಬ ಕವನ ಸಂಕಲನವನ್ನು ಬರೆದಿರುವುದಲ್ಲದೆ, ಪುತ್ತೂರಿನ ಯಕ್ಷಗಾನ ರಂಗಕ್ಕೆ ಹೊಸ ಆಯಾಮವನ್ನು ನೀಡಿದರು. ಅವರ ಪತ್ನಿ ಇಂದಿರಾ ಕಿಲ್ಲೆಯವರು 'ಮುರಲಿ' ಎಂಬ ಕವನ ಸಂಕಲನವನ್ನು ರಚಿಸಿದ್ದಾರೆ. ಅಲ್ಲದೆ ಇಬ್ಬರು ಸಂಯುಕ್ತವಾಗಿ 'ಕನ್ನಡ ಪದಗಳ ಸಂಗ್ರಹ', 'ನಾ ಕಂಡ ಬಾಪು' ಎಂಬ ಯಕ್ಷಗಾನ ಕೃತಿಗಳನ್ನು ಬರೆದಿದ್ದಾರೆ. ಇದಲ್ಲದೇ ಎನ್.ಎಸ್.ಕಿಲ್ಲೆಯವರು ಪೊಳಲಿ ಶೀನಪ್ಪ ಹೆಗ್ಗಡೆಯವರೊಂದಿಗೆ ಸೇರಿಕೊಂಡು 'ಪ್ರಾಚೀನ ತುಳುನಾಡು' ಎಂಬ ಸಂಶೋಧನಾತ್ಮಕ ಕೃತಿಯನ್ನು ರಚಿಸಿದ್ದಾರೆ.

ಪುತ್ತೂರನ್ನು ತನ್ನ ಜೀವನ ಕ್ಷೇತ್ರವನ್ನಾಗಿಸಿಕೊಂಡ ಮಂಜೇಶ್ವರ ಅನಂತರಾಯರು (೧೮೮೯–೧೯೪೯) ಇಲ್ಲಿಯ ಒಬ್ಬ ಹಿರಿಯ ಮಕ್ಕಳ ಸಾಹಿತಿ ಪುತ್ತೂರಿನಲ್ಲಿ ಉಗ್ರಾಣ ಮಂಗೇಶ ರಾಯರ ಒಡನಾಡಿಯಾಗಿ, ಜೊತೆ ಜೊತೆಯಾಗಿ ಕನ್ನಡ ಸಾಹಿತ್ಯದ ಕುರಿತು ಚರ್ಚಿಸತೊಡಗಿದರು[೩]. ಅನೇಕ ಮಕ್ಕಳ ಕವನಗಳನ್ನು ರಚಿಸಿದರು. ಜೋಗಳ ಹಾಡು, ಸುಖ ಜೀವನ, ಮಗುವಿನ ನಗು, ಭೂಮಾತೆ, ಮುಗಿಲು ಮೊದಲಾದವು ಮಕ್ಕಳ ಮನ ಗೆದ್ದ ಕವಿತೆಗಳು.

ಪುತ್ತೂರಿನ ಸಾಂಸ್ಕೃತಿಕ ವಲಯದಲ್ಲಿ ದುಡಿದ ಬೆಳ್ಳೆ ರಾಮಚಂದ್ರ ರಾಯರು ಷೇಕ್ಸ್‌ಪಿಯರ್‌ನ ನಾಟಕವನ್ನು ಕನ್ನಡಕ್ಕೆ ಅನುವಾದಿಸಿದ್ದು 'ಚಿರವಿರಹಿ' ಮತ್ತು 'ರಾಯರು ಕಂಡ ರಂಗು' ಎಂಬ ಕಾದಂಬರಿಗಳನ್ನು ರಚಿಸಿದ್ದಾರೆ[೪]. ಬಾಲ ಸಾಹಿತ್ಯದ ಲೇಖಕರಲ್ಲಿ ಜಿ.ಎನ್. ಲಕ್ಷ್ಮಣ ಪೈ ಯವರು (೧೯೦೪–೧೯೭೫) ಅಗ್ರಗಣ್ಯರು. 'ಪದ್ಯರತ್ನಾವಳಿ', 'ಅಭಿನಯ ಗೀತಾವಳಿ', 'ಅಭಿನಯ ಗೀತಮಂಜರಿ', 'ಶಿಶುಗೀತಮಾಲೆ' ಎಂಬ ಶಿಶು ಗೀತೆಗಳ ಸಂಕಲನಗಳು ಅಲ್ಲದೆ ಕೀರ್ತನಾಂಜಲಿ ಮತ್ತು 'ದಾಮಾಜಿಪಂತ' (ನಾಟಕ) ಅವರ ಮುಖ್ಯ ಕೃತಿಗಳಾಗಿವೆ.

ಸ್ವಾತಂತ್ರ್ಯ ಪೂರ್ವದ ಶಿಶು ಸಾಹಿತ್ಯ ಕ್ಷೇತ್ರದಲ್ಲಿ ಬೋಳಂತಕೋಡಿ ಶಂಕರಭಟ್ಟರ (೧೯೦೫–೭೨) ಹೆಸರು ಗಣನೀಯವಾದದ್ದು ತಮ್ಮ ಕೃತಿಗಳನ್ನು ಪ್ರಕಟಿಸಲು 'ಮಕ್ಕಳ ಮಂಟಪ', ಕನ್ನಡ ಪ್ರಪಂಚ ಪ್ರಕಾಶನಗಳನ್ನು ತೆರೆದ ಅವರು, ಅದರ ಮೂಲಕ 'ಅಮೆರಿಕಾದ ಕಥೆಗಳು', 'ಜಪಾನಿನ ಕತೆಗಳು', 'ಯುರೂಪಿನ ಕಥೆಗಳು' 'ದ್ವಿಪಾಂತರದ ಕತೆಗಳು' ಇತ್ಯಾದಿ ನೂರಕ್ಕೂ ಹೆಚ್ಚು

ಕೃತಿಗಳನ್ನು ರಚಿಸಿದ್ದಾರೆ. ಬಡೆಕ್ಕಿಲ ಕೃಷ್ಣಭಟ್‌ರವರು 'ಗೀತಾಸಾರ', 'ಭಾರತ ರಾಜ್ಯಾಭಾರಂ', 'ಯವನಶ್ವ ವಿಜಯ' ಮತ್ತು 'ಭೀಮ ವಿಜಯ' ಎಂಬ ಯಕ್ಷಗಾನ ಕೃತಿಗಳನ್ನು ಬರೆದಿದ್ದಾರೆ.

ರಾಮನ್ ನಂಬಿಯಾರ್‌ರವರು 'ಪ್ರೌಢ ಪಾಠ ಮಾಲಿಕೆ', ಮೂರ್ತಿ ಪೂಜಾ ಮಹತ್ವ ಎಂಬ ಕೃತಿಗಳನ್ನು ಶಾರದಾಪ್ರಭುರವರು 'ಮಾನಸ ಪೂಜೆ', 'ಪದ್ಯ ರತ್ನಾವಳಿ', 'ಬಾಲಭಾಷಾ ರಾಮಾಯಣ'ಗಳನ್ನು ಗಣಪತಿ ಮೊಳೆಯಾರರು 'ಪೂರ್ವ ಪುಣ್ಯ', 'ರಘುವಂಶ'ದ ಕಥೆಗಳು, ಪುರಸ್ಕಾರ ಮತ್ತು 'ಭಾರತದ ಬೆಳಕು' ಎಂಬ ಕೃತಿಗಳನ್ನು, ಕೈಂತಜೆ ಗೋವಿಂದ ಭಟ್ಟರು 'ಚಿರ ಪರಿಚಿತರು' ಎಂಬ ಕೃತಿಯನ್ನು, ನಾರಾಯಣ ಭಟ್ಟರು 'ಭಾರತ ದರ್ಪಣ'ವನ್ನು ಕೊಳಂಬೆ ಪುಟ್ಟಣ್ಣ ಗೌಡರು 'ಕಾಲೂರ ಚೆಲುವೆ'ಯನ್ನು, ಮುಳಿಯ ತಿಮ್ಮಪ್ಪಯ್ಯನರು 'ನಾಡೋಜ ಪಂಪ' ಎಂಬ ಕೃತಿಯನ್ನು, ಮೊಳೆಯಾರ ಶಂಕರ ನಾರಾಯಣ ಭಟ್ಟರು ಭೀಷ್ಮ, ಪಾಶುಪತ ಮುಂತಾದ ಕೃತಿಗಳನ್ನು ಟಿ. ನಾಗೇಶ ರಾವ್‌ರವರು 'ಚಾಂಗದೇವ ಭೋದ', 'ನಾಮ ಮಹಿಮಾ' 'ಪರಮಾಮೃತ', 'ಮನೋಬೋಧ', ಸಂತ ಜ್ಞಾನೇಶ್ವರಿ, ಹರಿಪಾಠ, ಅಮೃತಾನುಭವ ಇತ್ಯಾದಿ ಕೃತಿಗಳನ್ನು ದಾಮೋದರ ಬಾಳಿಗರು 'ನಮ್ಮ ಭೂಮಿ', 'ಗಡಗಡ ಗಡಿಗೆ', 'ಕರ ಕೌಶಲ್ಯದ ಹೊತ್ತಗೆ', ಕಾಗದ ಕತ್ತರಿ', 'ಜ್ಯೋತಿ ಮಹಾತ್ಮಾ, ಕಾವ್ಯ ನಿಧಿ ಮುಂತಾದ ಕೃತಿಗಳನ್ನು, ಯರ್ಮುಂಜ ಶಂಕರ ಜೋಯಿಸರು (೧೮೯೨ – ೧೯೬೪) 'ಗುರುಪೀಠಗಳ ಅವನತಿ', ಆರ್ಷ ಸಿದ್ಧಾಂತ ರಹಸ್ಯ ವಿಚಾರ, ಹೆಂಡತಿಯ ಕರ್ತವ್ಯ, ಇತ್ಯಾದಿ ಕೃತಿಗಳನ್ನು ಶ್ರೀಕಂಠ ಪುತ್ತೂರುರವರು 'ಪಯಣ' ಎಂಬ ಕಾದಂಬರಿಯನ್ನು ಹಾಗೂ ಇತರ ಸಣ್ಣಕಥೆಗಳನ್ನು, ಯರ್ಮುಂಜ ರಾಮಚಂದ್ರರು 'ವಿದಾಯ'ವೆಂಬ ಕವನ ಸಂಕಲನ, 'ಆಶ್ರುಂಜೆ' 'ಬಾಳಬೆಳಕು' ಚಿಕಿತ್ಸೆಯ ಹುಚ್ಚು ಇತ್ಯಾದಿ ಕಥಾ ಸಂಕಲನವನ್ನು, ಪಿ. ಕೆ. ನಾರಾಯಣರು 'ಮೊದಲಮೊಗ್ಗೆ'ಯೆಂಬ ಕವಿತಾ ಸಂಗ್ರಹವನ್ನು, ಮಹಾತ್ಯಾಗಿ ಪುರಂದರದಾಸ, ಪ್ರಿಯದರ್ಶಿನಿ ಇತ್ಯಾದಿ ನಾಟಕಗಳನ್ನು, ಬೋಳಂತಕೋಡಿ ಮಹಾಬಲೇಶ್ವರ ಶರ್ಮರು 'ವಡ್ಡಾರಾಧನೆಯ ಕಥೆಗಳು, 'ದಂಡಿಯ ದಶಧೀರರು', 'ಕಾಳಿದಾಸನ ಮೂರು ನಾಟಕಗಳು', 'ಬುದ್ಧನು ತೋರಿದ ದಾರಿ', 'ವೊಲ್ಗಾ ಗಂಗಾ' ಎಂಬ ಕೃತಿಗಳನ್ನು ರಚಿಸಿದ್ದಾರೆ.

ಕನ್ನಡನಾಡಿನ ಶ್ರೇಷ್ಠ ವಿದ್ವಾಂಸರು ಮತ್ತು ಸಂಶೋಧಕರಾದ ಸೇಡಿಯಾಪು ಕೃಷ್ಣಭಟ್ಟರು 'ತರುಣಧಮನಿ', 'ಪಳಮೆಗಳು', 'ಚಂದ್ರಖಂಡ' ಮತ್ತು ಇತರ ಕವನಗಳು, 'ಕೆಲವು ದೇಶ ನಾಮಗಳು', 'ಕನ್ನಡ ವರ್ಣಗಳು', 'ಛಂದೋಗತಿ', 'ಕನ್ನಡ ಛಂದಸ್ಸು' ಇತ್ಯಾದಿ ಕೃತಿಗಳನ್ನು ರಚಿಸಿದ್ದಾರೆ[೫].

'ನಿರಂಜನ' ಕಾವ್ಯನಾಮದ ಶಿವರಾಯರು ಹುಟ್ಟಿದ್ದು ಕುಲ್ಕುಂದ (ಕುಳಕುಂದ)ದಲ್ಲಿ ಅವರ ಸಾಹಿತ್ಯದ ಕೃಷಿ ಆರಂಭಗೊಂಡುದು ಕಾರಂತರ ಬಾಲವನದ ಪ್ರೇರಣೆಯಲ್ಲಿ 'ಕಿಶೋರ ಕಾವ್ಯನಾಮ', 'ಚಿರಸ್ಮರಣೆ', 'ಮೃತ್ಯುಂಜಯ' ಇತ್ಯಾದಿ ೨೫ ಕಾದಂಬರಿಗಳು, ೯ ಕಲಾ ಸಂಕಲನ, ೩ ನಾಟಕ, ೧೦

ಭಾಷಾಂತರ, ಜ್ಞಾನ ಗಂಗೋತ್ರಿ, ಕಿರಿಯರ ವಿಶ್ವಕೋಶ ೭ ಸಂಪುಟ ಸಂಪಾದನೆ ಹೀಗೆ ನಿರಂಜನರ ಸಾಹಿತ್ಯ ಕೃಷಿಯೂ ವಿಪುಲ.

ಹಿರಿಯ ಸ್ವಾತಂತ್ರ್ಯ ಸೇನಾನಿಯಾಗಿದ್ದು ೧೯೪೨ರ 'ಭಾರತ ಬಿಟ್ಟು ತೊಲಗಿ ಚಳುವಳಿಯಲ್ಲಿ ತನ್ನನ್ನು ಸಕ್ರಿಯವಾಗಿ ತೊಡಗಿಸಿಕೊಂಡಿದ್ದು, ಕೊಯ್ಲದ ವೆಂಕಟ್ರಾವ್ ಕೊಯ್ಲೂರ್‌ಕರ್‌ರವರು 'ಭಾರತ ಶಕ್ತಿ'ಯೆಂಬ ಗೀತರೂಪಕವನ್ನು ಕಲ್ಯಾಣಿ, ನಾಟ್ಯ ಸರಸ್ವತಿ, ಬೀದಿಯ ದೀಪ ಇತ್ಯಾದಿ ಕೃತಿಗಳನ್ನು ರಚಿಸಿದ್ದಾರೆ.

ಹೀಗೆ ಸ್ವಾತಂತ್ರ್ಯಪೂರ್ವದಲ್ಲೇ ಪುತ್ತೂರು ಪರಿಸರದಲ್ಲಿ ಸಾಕಷ್ಟು ಕವಿಗಳಿದ್ದು ಸಾಹಿತ್ಯದ ಸೃಷ್ಟಿ ಸಮೃದ್ಧವಾಗಿ ನಡೆದಿದೆ.

### ೪.೩.೦. ಸ್ವಾತಂತ್ರ್ಯೋತ್ತರ ಕಾಲ :

ಪುತ್ತೂರಿನ ಪರಿಸರದಲ್ಲಿ ಸ್ವಾತಂತ್ರ್ಯ ಪೂರ್ವದಲ್ಲೇ ಬೆಳೆದ ಸಾಹಿತ್ಯ ಸ್ವಾತಂತ್ರ್ಯನಂತರವೂ ಮುಂದುವರಿಯಿತು. ಸ್ವಾತಂತ್ರ್ಯ ನಂತರವೂ ಹಲವು ಪ್ರಮುಖ ಸಾಹಿತಿಗಳು ಪುತ್ತೂರಿನಲ್ಲಿದ್ದು ಅವರಲ್ಲಿ ಪ್ರಮುಖರಾದವರೆಂದರೆ,

ಪುತ್ತೂರು ತಾಲೂಕಿನ 'ಸಾಹಿತ್ಯ ಕ್ಷೇತ್ರದ ಮುತ್ತು' ತುಳು, ಕನ್ನಡ ಸಾಹಿತ್ಯ ಕ್ಷೇತ್ರಗಳು ಎರಡರಲ್ಲಿಯೂ 'ಸವ್ಯಸಾಚಿ'ಗಳೆನಿಸಿರುವ ಸಾಹಿತಿ ಕೆದಂಬಾಡಿ ಜತ್ತಪ್ಪ ರೈಗಳು[6] 'ಬೇಟೆಯ ಉರುಳು', 'ಬೆಟ್ಟದ ತಪ್ಪಲಿನಿಂದ ಕಡಲ ತಡಿಗೆ', 'ಬೇಟೆಯ ನೆನಪುಗಳು', 'ಈಡೊಂದು ಹುಲಿಯೆರಡು', ಇತ್ಯಾದಿ 'ಬೇಟೆ ಸಾಹಿತ್ಯ ಕೃತಿ'ಗಳನ್ನು, 'ಕಾಬೂಲಿವಾಲಾ', 'ಸೂದ್ರ ಏಕಲವ್ಯ' ಎಂಬ ಮಕ್ಕಳ ನಾಟಕ ಕೃತಿಗಳನ್ನು ರಚಿಸಿದ್ದಾರೆ.

ಭಾಷಾ ಶಾಸ್ತ್ರಜ್ಞರಾದ ಮರಿಯಪ್ಪ ಭಟ್ಟರು 'ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ', 'ಕಾವ್ಯಶ್ರೀ' ಎಂಬ ಹೊಸಗನ್ನಡ ಗ್ರಂಥವನ್ನು 'ಹವ್ಯಕಕೋಶ' ಮತ್ತು 'ಕಿಟ್ಟೆಲ್' ಎಂಬ ಕೃತಿಯನ್ನು ಬರೆದಿದ್ದಾರೆ. ಇವರು ಪುತ್ತೂರಿನವರಾದರೂ ಮದ್ರಾಸಿಗೆ ಹೋಗಿ ಅಲ್ಲಿ ಮದರಾಸು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗಲದಲ್ಲಿ ದುಡಿದಿದ್ದಾರೆ. ಅದೇ ವಿಭಾಗದ ವಿ. ಶಂಕರ ಕೆದಿಲಾಯ 'ಪೆರಿಯ ಪುರಾಣ' ಇಳಂಗೋ ಅಡಿಗಳ್ ಮತ್ತು ಕುಮಾರನ್ ಆಶಾನ್' ಎಂಬ ಕೃತಿಗಳನ್ನು ರಚಿಸಿದ್ದಾರೆ. ಅಂತೆಯೇ ಅದೇ ವಿಭಾಗದಲ್ಲಿ ಕಾರ್ಯ ನಿರ್ವಹಿಸಿದ ಪುತ್ತೂರಿನ ಇನ್ನೋರ್ವ ವ್ಯಕ್ತಿ ಶ್ರೀಕೃಷ್ಣಭಟ್ ಅರ್ತಿಕಜೆಯವರೂ ಹೊರನಾಡಿನಲ್ಲಿದ್ದೇ ಕನ್ನಡ ಸಾಹಿತ್ಯದಲ್ಲಿ ಕೈಯಾಡಿಸಿದ್ದಾರೆ. 'ಜಾನಪದ ಜೀವನ', 'ಹವ್ಯಕರ ಗಾದೆಗಳು', 'ಸಹಸ್ರಾರ್ಧ ತುಳು ಗಾದೆಗಳು', 'ಗಾನಮಂಜರಿ' 'ಕನ್ನಡದಲ್ಲಿ ಶತಕ ಸಾಹಿತ್ಯ' ಮುಂತಾದ ಕೃತಿಗಳನ್ನು ಬರೆದಿದ್ದಾರೆ. ಪುತ್ತೂರಿನವರಾಗಿದ್ದು ಬೊಂಬಾಯಿ ವಿಶ್ವವಿದ್ಯಾನಿಲಯದಲ್ಲಿ

ಕಾರ್ಯನಿರ್ವಹಿಸಿದ ವಸಂತಕುಮಾರ್ ತಾಳ್ತಜೆ ವಿಮರ್ಶಾ ಕೃತಿಗಳನ್ನು, 'ಮರೀಚಿಕೆ' ಎಂಬ ಕಾದಂಬರಿ, 'ಸಾರಸ', 'ಬೇರು' 'ಬಿಳಲು' ಮುಂತಾದ ಕೃತಿಗಳನ್ನು ಬರೆದಿದ್ದಾರೆ.

ಶಂಪಾ ದೈತೋಟರೆಂದೇ ಹೆಸರುವಾಸಿಯಾದ ಶಂಕರನಾರಾಯಣ ಪಾಣಾಜೆಯವರ 'ಅಭಾವ ಗೀತೆ', 'ಮನೆಮದ್ದು', 'ಒಂದಿಷ್ಟು ಕುಟುಕುಟು', 'ತ್ರಿಕೂಟು' ಇತ್ಯಾದಿ ಕೃತಿಗಳನ್ನು ಬರೆದಿದ್ದಾರೆ. ಬೊಳುವಾರು ಮಾಧವ ನಾಯಕರು 'ವ್ಯಕ್ತಿ ವಿಚಾರ', 'ಶತಮಾನಕೊಬ್ಬ ಕಾರಂತ' ಕೃತಿಗಳನ್ನು, ರಂಗ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವ ಐ.ಕೆ. ಬೊಳುವಾರರು 'ಕಪ್ಪು ಕಾಗೆಯ ಹಾಡು', 'ಹಕ್ಕಿ ಮತ್ತು ಬೆಕ್ಕು', 'ಕಾಡು ಕಾಡೆಂದರೆ', 'ಕೆಂಪಾದ ಹೂವು', 'ತುಂಗಾಯಣ', 'ತಿರುಕನ ಕನಸು', 'ಬಿಳಿಯಾನೆ' ಇತ್ಯಾದಿ ನಾಟಕಗಳನ್ನು ಬರೆದಿದ್ದಾರೆ. ವಿ. ಬಿ. ಮೊಳೆಯಾರರು 'ನಕ್ಕುಬಿಡಿ', 'ಪರಿವರ್ತನೆ', 'ಸಮುಚ್ಚಯ', 'ಕಾರಂತ ಚಿಂತನ ಸಂಗ್ರಹ', 'ಫರ್ಡಿನೆಂಡ್ ಕಿಟ್ಟೆಲ್' ಮುಂತಾದ ಕೃತಿಗಳನ್ನು ಬರೆದಿದ್ದಾರೆ.

ಜಾನಪದ ವಿದ್ವಾಂಸರಾದ ಪಾಲ್ತಾಡಿ ರಾಮಕೃಷ್ಣ ಆಚಾರ್‌ರವರು 'ಬಾಂಗ್ಲಾ ವಿಜಯ' (ಯಕ್ಷಗಾನ) 'ಕಿರಣ' (ಶಿಶು ಗೀತೆಗಳ ಸಂಕಲನ) 'ಅಂತರ್ಭೂತ' (ಕಥಾ ಸಂಕಲನ) 'ಮೆಲುಕಾಡಿದಾಗ' (ಕವನ ಸಂಕಲನ) ಆಟಿ, ಪಂಚಶಿಲ್ಪಿ, ಗ್ರಾಮೀಣ ಉಡುಗೆ ತೊಡುಗೆಗಳು, ಗ್ರಾಮೀಣ ವೃತ್ತಿಗಳು, ಅಕ್ಷರ, ಜನವೈದ್ಯ ಇತ್ಯಾದಿ ಕೃತಿಗಳನ್ನು ಬರೆದಿದ್ದಾರೆ.

ಪ್ರಕಾಶನ ಕ್ಷೇತ್ರಕ್ಕೆ ಅಪೂರ್ವ ಕೊಡುಗೆ ಸಲ್ಲಿಸಿರುವ ಬೋಳಂತಕೋಡಿ ಈಶ್ವರಭಟ್ಟರು 'ಸೋಡಿ ಪಳ್ಳಿಯ ಕಪ್ಪು ಚಿರತೆ', 'ಅಡುಗೆಯ ಸೌಭಾಗ್ಯ', 'ಚಿಕಿತ್ಸಕರು' (ಕಾದಂಬರಿ), 'ಹಿಂದೂ ವಿವಾಹ ಕಾನೂನು', 'ಹಿಂದೂ ದತ್ತು ಮತ್ತು ಜೀವನಾಂಶ ಕಾನೂನು', 'ಮಾನವ ಹಕ್ಕು' ಮುಂತಾದ ಅನೇಕ ಅನುವಾದಿತ ಕೃತಿಗಳನ್ನು ರಚಿಸಿದ್ದಾರೆ. ಹರಿನಾರಾಯಣ ಮಾಡಾವುರವರು 'ಅಂಗರಾಗ' ಮತ್ತು 'ಮರಳು' ಎಂಬ ಕವನ ಸಂಕಲನವನ್ನು ಸಿದ್ಧಿಮೂಲೆ ಶಂಕರನಾರಾಯಣ ಭಟ್ಟರವರು 'ಕುಮಾರನ ಜನನ ವಿಜಯ' 'ಅದ್ಭುತ ರಾಮಾಯಣ', 'ನಳ ಚರಿತ್ರೆ', 'ನವೋದಯ ವ್ಯಾಕರಣ', 'ಕೊಡವ ವ್ಯಾಕರಣ', 'ವಾಸ್ತುಶಾಸ್ತ್ರ', ಮುಂತಾದ ಕೃತಿಗಳನ್ನು 'ಶಂಕರಖಂಡೇರಿ ವಿಧಿವಿಲಾಸ', 'ವಿಪರ್ಯಾಸ', 'ಅನಾವರಣ', 'ನಿಷ್ಠೆ', 'ನಿರೂಪ', 'ತುಮುಲ', 'ಅವಳ ಮನಸ್ಸು', 'ಕೈದಿ', 'ಕಪ್ಪು ಡೈರಿ', 'ವಿಕಲ್ಪ' ಇತ್ಯಾದಿ ಕಾದಂಬರಿಗಳನ್ನು ಬರೆದಿದ್ದಾರೆ.

ಯಕ್ಷಗಾನ ಮತ್ತು ನಾಟಕರಂಗದಲ್ಲಿ ತಮ್ಮನ್ನು ಗುರುತಿಸಿಕೊಂಡಿರುವ ಕುದ್ಕಾಡಿ ವಿಶ್ವನಾಥ ರೈಯವರು 'ದೇವಿ', ಅಬ್ಬಕ್ಕರಾಣಿ, ಸತ್ಯಮ್ಮದೆಯ್ಯಾರ್, ಅಬ್ಬಕ್ಕ, ಅಬ್ಬಕಬ್ಬೆ, ಯುಗಧರ್ಮ, ಸಂಕ್ರಾಂತಿ (ತುಳು), 'ಪುಂಜದ ಕಾಪಡೆ' (ತುಳು), ಇತ್ಯಾದಿ ನಾಟಕಗಳನ್ನು ಲಂಕಾದರ್ಶನ (ಪ್ರವಾಸ ಕಥನ), ಅಮ್ಮಾ (ಕಾದಂಬರಿ) ಮತ್ತು 'ಜೋಕಾಲೆ ಸಂಜೆ' ಎಂಬ ಕೃತಿಗಳನ್ನು, ಕಡಬ ಗೋಪಾಲರಾವ್‌ರವರು 'ಸುಪ್ರಭಾತ', ಭಕ್ತಾಂಜಲಿ (ಶಿಶುಗೀತೆ), ಪ್ರತಿಧ್ವನಿ ಮತ್ತು 'ಬಾಲಗೋಪಾಲ'

ವಚನಗಳು ಎಂಬ ಕಿರು ನಾಟಕಗಳನ್ನು, ಗಂಗಾಧರ ಬೆಳ್ಳಾರೆಯವರು 'ತಬ್ಬಲಿಯು ನೀನಲ್ಲ ಮಗಳೆ', 'ಬಾಜಿನ ತೇರು' ಮುಂತಾದ ಕಥಾ ಸಂಕಲನಗಳನ್ನು 'ಹೂವಿನ ಬುಟ್ಟಿ' ಎಂಬ ಮಕ್ಕಳ ನಾಟಕವನ್ನು, ನರೇಂದ್ರ ರೈ ದೇರ್ಲರವರು 'ಕನ್ನಡದಲ್ಲಿ ಬೇಟೆ ಸಾಹಿತ್ಯ', 'ತೇಜಸ್ವಿಯೊಳಗೊಬ್ಬ ಕಲಾವಿದ', 'ಲಂಕೇಶ್ ನೆನಪು', 'ಕಾಂಕ್ರೀಟ್ ಕಾಡಿನ ಪುಟ್ಟ ಕಿಟಕಿ' ಮತ್ತು 'ಬೆಳ್ಳಿ ಗುರುತು' ಇತ್ಯಾದಿ ಕೃತಿಗಳನ್ನು ವಿಠಲ ಕಬಕರವರು 'ಗೋಂಧೂಳು' (ತುಳುನಾಟಕ) 'ಮಂತ್ರಿಯ ತಂತ್ರ', 'ರಂಗು ರಂಗಿನ ರಿಂಗಣ' ಇತ್ಯಾದಿ ನಾಟಕಗಳನ್ನು ಬರೆದಿದ್ದಾರೆ.

ಭಗವದ್ಗೀತೆ ಮತ್ತು ಸೌಂದರ್ಯ ಲಹರಿಗಳ ವ್ಯಾಖ್ಯಾನ ಉಪನ್ಯಾಸಗಳನ್ನು ನೀಡುತ್ತಿರುವ ಲಕ್ಷ್ಮೀಶ ತೋಳ್ಪಾಡಿಯವರು 'ಮಹಾಯುದ್ಧಕ್ಕೆ ಮುನ್ನ' ಎಂಬ ಕೃತಿಯ ಕರ್ತೃ. ಬೊಳುವಾರು ಮಹಮ್ಮದ್ ಕುಂಞಯವರು 'ಮುತ್ತೇಚ್ಚರ' 'ಅತ್ತಇತ್ತಗಳ ಸುತ್ತಮುತ್ತ', 'ದೇವರುಗಳ ರಾಜ್ಯದಲ್ಲಿ', 'ಆಕಾಶಕ್ಕೆ ನೀಲಿ ಪರದೆ', 'ಒಂದು ತುಂಡು ಗೋಡೆ', ಇತ್ಯಾದಿ ಕಥಾ ಸಂಕಲನಗಳನ್ನು ಬರೆದಿದ್ದು, 'ತಟ್ಟು ಚಪ್ಪಾಳೆ ಪುಟ್ಟಮಗು' ಎಂಬ ಕೃತಿಯನ್ನು ಸಂಪಾದಿಸಿದ್ದಾರೆ. ಇದಲ್ಲದೆ 'ಪುನ್ನಾವ್ ವಯಲಾರ್ ಸಮರ' ಎಂಬ ಐತಿಹಾಸಿಕ ವಿಚಾರಗಳಿಗೆ ಸಂಬಂಧಪಟ್ಟ ಕೃತಿಯನ್ನು ಬರೆದಿದ್ದಾರೆ.

ಸ್ವಾತಂತ್ರ್ಯಾನಂತರದಲ್ಲಿ ಪುತ್ತೂರು ಪರಿಸರದಲ್ಲಿ ಮಹಿಳಾ ಸಾಹಿತಿಗಳೂ ಹೆಸರು ಮಾಡಿದ್ದಾರೆ. ಅವರಲ್ಲಿ ಲೀಲಾ ಭಟ್ಟರು 'ಉಗ್ರಾಣ' ಎಂಬ ಎರಡು ಸಂಪುಟಗಳನ್ನು, ಎಂ.ಎನ್. ಕಾಮತ್‌ರ ಬಗ್ಗೆ ಐದು ಸಂಪುಟ ಕೃತಿಗಳನ್ನು 'ಉಳ್ಳಾಲ್ತಿಯಮ್ಮ', 'ಭೂತ ನಾಗರ ನಡುವೆ' (ಜಾನಪದ ಕೃತಿ) 'ಏಷ್ಯಾದ ಬೆಳಕು', 'ಲೀಲಾ ಕಾರಂತರ ನೆನಪು', ಮಾರ್ತಾರವರ ಜೀವನ ಚರಿತ್ರೆ ಇನ್ನಿತರ ಕೃತಿಗಳನ್ನು ಬರೆದಿದ್ದಾರೆ.

ಎ. ಪಿ. ಮಾಲತಿಯವರು 'ಹೊಸ ಹೆಜ್ಜೆ', 'ಆಘಾತ', 'ಅನಿಶ್ಚಯ', 'ಸರಿದ ತೆರೆ', 'ಅರ್ಧಾಂಗಿ', 'ಸೋಲಿನಲ್ಲಿ ಗೆಲುವು', 'ಮಿನುಗದ ಚುಕ್ಕೆ', 'ಸುಖದ ಹಾದಿ', 'ಪುನರ್ಮಿಲನ', 'ಬದಲಾಗದವರು', 'ನೂಪುರಗಾನ', 'ಅಂಜನ ಮಂದಾರ', 'ದೇವ' ಇತ್ಯಾದಿ ೨೨ಕ್ಕಿಂತ ಹೆಚ್ಚು ಕಾದಂಬರಿಗಳನ್ನು, ಗ್ರಾಮೀಣ ಮಹಿಳೆಯರು, ಹಳ್ಳಿಗೆ ಬಂದ ಎಳೆಯರು, ಮಕ್ಕಳ ಪಾಲನೆ, ಮುಂತಾದ ಮಾನವಿಕ ಹಾಗೂ ಮಕ್ಕಳ ಸಾಹಿತ್ಯವನ್ನು ರಚಿಸಿದ್ದಾರೆ.

ಬನಾರಿ ಪರಮೇಶ್ವರಿ ಅಮ್ಮನವರು ಸೋಬಾನ ಹಾಡುಗಳ ಸಂಗ್ರಹ ಮಾಡಿದ್ದು 'ಆರತಿ' ಎಂಬ ಕೃತಿ ರಚಿಸಿದ್ದಾರೆ. ಪ್ರೌಢ ಸಾಹಿತ್ಯದೊಂದಿಗೆ ಜೊತೆ ಜೊತೆಯಾಗಿ ಮಕ್ಕಳ ಸಾಹಿತ್ಯವೂ ಬೆಳವಣಿಗೆ ಕಂಡಿದೆ. ಈ ಕ್ಷೇತ್ರದಲ್ಲಿ ಲಕ್ಷ್ಮಣ ಪೈಯವರು ಅಗ್ರಗಣ್ಯರು. ಅಲ್ಲದೇ ಮಚ್ಚಿಮಲೆ ಶಂಕರನಾರಾಯಣ ಭಟ್‌ರವರು 'ಬಾಲ ಪದ್ಯಾವಳಿ', ತುಣುಕು, ಮಿಣುಕು ಇತ್ಯಾದಿ ಕೃತಿಗಳನ್ನು ಬರೆದಿದ್ದಾರೆ.

ಯಕ್ಷಗಾನ ಸಾಹಿತ್ಯದ ಬೆಳವಣಿಗೆಯಲ್ಲಿ ಅಮೃತ ಸೋಮೇಶ್ವರವರ ಕೊಡುಗೆ ಅಪೂರ್ವ. ಡಿ. ಸದಾಶಿವ ಭಟ್‌ರವರು 'ಕಂಸವಧೆ' ಎಂಬ ಕೃತಿ ಹಿಂದಿಯಲ್ಲಿ 'ವೀರ ಸುಷೇಣ' ಹಾಗೂ ಇಂಗ್ಲಿಷ್‌ನಲ್ಲಿ 'ಪ್ಲೇಯಿಂಗ್ ಆಫ್ ಸುಧನ್ವ' ಎಂಬ ಯಕ್ಷಗಾನ ಕೃತಿಗಳನ್ನು ಕೆ.ಸಿ. ಪಾಟಾಳಿಯವರು 'ಅಯ್ಯಪ್ಪ ಸ್ವಾಮಿ ಚರಿತ್ರೆ', 'ಪಡುಮಲೆ ಕ್ಷೇತ್ರ ದರ್ಶನ', 'ಬಾಲ ರಶ್ಮಿ', 'ಅಕ್ಷರ ದೀಪ', 'ಶ್ರೀ ರಣ ಮಂಗಲ ಕ್ಷೇತ್ರ ಮಹಾತ್ಮೆ', ಎಂಬ ಕೃತಿಯನ್ನು ನಾ ಕಾರಂತ ಪೆರಾಜೆಯವರು 'ಹಾಸ್ಯಗಾರನ ಅಂತರಂಗ', 'ಶ್ರೇಣಿ ದರ್ಶನ', 'ಚಿಂತನ' ಮುಂತಾದ ಕೃತಿಗಳನ್ನು ಬರೆದಿದ್ದಾರೆ.

ಸಾಹಿತ್ಯದ ಹುಟ್ಟು ಬೆಳವಣಿಗೆಯಲ್ಲಿ ಪುತ್ತೂರಿನ ಹಲವು ಸಂಘಗಳು ಮತ್ತು ಪ್ರಕಾಶನ ಸಂಸ್ಥೆಗಳು ಕೂಡ ಬಹಳ ಹಿರಿದಾದ ಪಾತ್ರ ವಹಿಸಿದೆ. ಪುತ್ತೂರು ಕರ್ನಾಟಕ ಸಂಘ, ಫಿಲೋಮಿನಾ ಕಾಲೇಜು ಕನ್ನಡ ಸಂಘ ಮತ್ತು ವಿವೇಕಾನಂದ ಕಾಲೇಜು ಕನ್ನಡ ಸಂಘಗಳು ಇವುಗಳಲ್ಲಿ ಪ್ರಮುಖ. ಆಯುರ್ವೇದ ಪ್ರಕಾಶನ ಪಾಣಾಜೆ, ಸಮೀರ ಪ್ರಕಾಶನ, ಅರ್ತಿಕಜೆ ಪ್ರಕಾಶನ, ಬಡೆಕ್ಕಿಲ ಪ್ರಕಾಶನ ಮುಂತಾದವು ಪ್ರಕಾಶನ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿವೆ. ಪುತ್ತೂರು ತಾಲೂಕು ಸಾಹಿತ್ಯ ಪರಿಷತ್ತು ಹಲವು ಸಾಹಿತ್ಯಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದೆ. ಕನ್ನಡದೊಂದಿಗೆ ತುಳು, ಕೊಂಕಣಿ, ಬ್ಯಾರಿ ಸಾಹಿತ್ಯ ಮತ್ತು ಜಾನಪದ ಕ್ಷೇತ್ರದಲ್ಲಿ ಕೂಡ ಪುತ್ತೂರು ಗಮನಾರ್ಹ ಸಾಧನೆ ದಾಖಲಿಸಿದೆ.

### ೪.೪.೦ ಪುತ್ತೂರಿನಲ್ಲಿ ಸಾಹಿತ್ಯ :

ಪುತ್ತೂರಿನಲ್ಲಿ ಪ್ರಾಚೀನ ಕಾಲದ ಸಾಹಿತ್ಯ ಕೃತಿಗಳು ಲಭ್ಯವಿಲ್ಲ. ಇಲ್ಲಿ ಸಾಹಿತ್ಯವೆಂದರೆ ಅದು ಹೊಸಗನ್ನಡಸಾಹಿತ್ಯ ಚರಿತ್ರೆಯೇ. ಪುತ್ತೂರು ತಾಲೂಕಿಗೆ ಸಂಬಂಧಪಟ್ಟಂತೆ ಸಾಹಿತ್ಯದ ಚರ್ಚೆ ಕಷ್ಟಕರವಾದದ್ದು. ಪುತ್ತೂರು ಉಪ್ಪಿನಂಗಡಿ ತಾಲ್ಲೂಕಿನ ಒಂದು ಹೋಬಳಿ ಕೇಂದ್ರವಾಗಿದ್ದು ೧೯೨೭ರಲ್ಲಿ ತಾಲೂಕು ಕೇಂದ್ರವಾಗಿ ಮಾರ್ಪಟ್ಟಿತ್ತು. ೧೯೬೬ರಲ್ಲಿ ಸುಳ್ಯ ತಾಲೂಕು ನಿರ್ಮಾಣವಾದಾಗ ಪುತ್ತೂರಿನ ಕೆಲವು ಭಾಗಗಳನ್ನು ಸುಳ್ಯಕ್ಕೆ ಬಿಟ್ಟುಕೊಡಲಾಯಿತು. ೧೮೪ ಗ್ರಾಮಗಳು ೩೧೨೭ ಚ.ಮೀ ವಿಸ್ತೀರ್ಣವಿದ್ದ ಪುತ್ತೂರು, ೬೮ ಗ್ರಾಮಗಳಿಂದ ಕೂಡಿ ೧೧೦೪ ಚ.ಮೀ ವಿಸ್ತೀರ್ಣಕ್ಕೆ ಇಳಿದಿದೆ. ಪುತ್ತೂರಿನ ಸಾಹಿತ್ಯಕ ಇತಿಹಾಸವನ್ನು ಕೇವಲ ಈಗಿನ ಕಂದಾಯ ವಲಯಕ್ಕೆ ಸೀಮಿತಗೊಳಿಸಿಕೊಳ್ಳದೆ ಬಂಟ್ವಾಳ, ಸುಳ್ಯ, ಬೆಳ್ತಂಗಡಿ ತಾಲ್ಲೂಕುಗಳ ಕೆಲವು ಪ್ರದೇಶಗಳನ್ನು ಒಳಗೊಂಡಂತೆ ಮಾತನಾಡಬೇಕಾಗುತ್ತದೆ.

ಪುತ್ತೂರಿನ ಹೊಸಗನ್ನಡ ಇತಿಹಾಸವನ್ನು ನೋಡುವಾಗ ಪುತ್ತೂರಿನಲ್ಲಿ ಹುಟ್ಟಿದ, ಪುತ್ತೂರನ್ನು ಕಾರ್ಯ ಕ್ಷೇತ್ರವಾಗಿಸಿಕೊಂಡ (ಬೇರೆಡೆ ಹುಟ್ಟಿದ) ಜನರ ಸಾಹಿತ್ಯ ಕಾರ್ಯಗಳನ್ನೂ ಕುರಿತು

ಮಾತನಾಡಬೇಕಾಗುತ್ತದೆ. ಹೀಗೆ ಸಾಹಿತ್ಯವನ್ನು ಭೌಗೋಳಿಕ ವಲಯಕ್ಕೆ ಸೀಮಿತಗೊಳಿಸಿ ಮಾತನಾಡುವುದು ಕಷ್ಟಕರವಾದದ್ದು.

ಪುತ್ತೂರು ಪ್ರದೇಶದಲ್ಲಿ ಹುಟ್ಟಿಬೆಳೆದ ಕೆಲವು ಸಾಹಿತಿಗಳು ವರ್ತಮಾನದಲ್ಲಿ ಸುಳ್ಯ ತಾಲೂಕಿಗೆ ಸೇರುತ್ತಾರೆ. ಕೊಳಂಬೆ ಪುಟ್ಟಣ್ಣ ಗೌಡ, ಸುಬ್ರಾಯ ಚೊಕ್ಕಾಡಿ, ಕಂಜರ್ಪಣೆ, ರಾಮಚಂದ್ರ ದೇವ ಮುಂತಾದವರು. ಇನ್ನು ಕೆಲವರು ಬಂಟ್ವಾಳ ತಾಲೂಕಿಗೆ ಸೇರುತ್ತಾರೆ. ಮುಳಿಯ ಮಹಾಬಲ ಭಟ್ಟ, ಮುಳಿಯ ಕೇಶವ ಭಟ್ಟ ಇತ್ಯಾದಿ. ಪುತ್ತೂರು ತಾಲ್ಲೂಕಿನಲ್ಲಿ ಹುಟ್ಟಿ ಇಲ್ಲಿಯೇ ಬೆಳೆದವರು ಹಲವರಿದ್ದಾರೆ. ಪುತ್ತೂರಿನಲ್ಲಿ ಶಾಲೆ ಪ್ರಾರಂಭವಾದದ್ದು ೧೯೦೨ರಲ್ಲಿ ಕಾಲೇಜು ವಿದ್ಯಾಭ್ಯಾಸ ೧೯೫೮ರಲ್ಲಿ. ಈ ನಡುವಿನ ಕಾಲದಲ್ಲಿ ಪ್ರಾಥಮಿಕ, ಪ್ರೌಢಶಾಲಾ ಶಿಕ್ಷಣವನ್ನು ಪಡೆದವರು(ಮುಖ್ಯವಾಗಿ ಪುತ್ತೂರು ಬೋರ್ಡ್ ಹೈಸ್ಕೂಲ್) ತಮ್ಮ ಮುಂದಿನ ವಿದ್ಯಾಭ್ಯಾಸಕ್ಕಾಗಿ ಅಥವಾ ಉದ್ಯೋಗಕ್ಕಾಗಿ ಮಂಗಳೂರಿನ ಕಡೆ ನೋಡುತ್ತಿದ್ದರು. ಇನ್ನು ಕೆಲವರು ಹೊರನಾಡಿಗೆ ಹೋದರು ಎಂ. ಮರಿಯಪ್ಪ ಭಟ್ಟ, ಜಿ.ಎನ್.ಲಕ್ಷ್ಮಣ ಪೈ, ತಾಳ್ತಜೆ ವಸಂತಕುಮಾರ್, ಮುಳಿಯ ಶಂಕರ ಭಟ್ಟ, ಶ್ರೀಕೃಷ್ಣ ಭಟ್ ಅರ್ತಿಕಜೆ, ಹರಿಕೃಷ್ಣ ಭರಣ್ಯ, ಸೇಡಿಯಾಪು ಕೃಷ್ಣ ಭಟ್ ಮುಂತಾದವರನ್ನು ಹೆಸರಿಸಬಹುದು. ಈ ದೃಷ್ಟಿಯಿಂದ ಪುತ್ತೂರಿನಲ್ಲಿ ಸಾಹಿತ್ಯದ ಬೆಳವಣಿಗೆಯನ್ನು ಗುರುತಿಸುವುದು ಕಷ್ಟ. ಆದರೆ ಪುತ್ತೂರಿನ ಒಟ್ಟು ಮನೋಧರ್ಮವನ್ನು ಗುರುತಿಸಲು ಸಾಧ್ಯವಾಗಬಹುದು.

ನವೋದಯ, ನವ್ಯ, ಪ್ರಗತಿಶೀಲ, ಬಂಡಾಯ, ಸ್ತ್ರೀವಾದಿ ಕಾವ್ಯ, ಇತ್ಯಾದಿಯಾಗಿ ಗುರುತಿಸುವ ಕಾವ್ಯ ಮಾರ್ಗಗಳು ಕನ್ನಡದಲ್ಲಿ ಬಂದು ಹೋಗಿವೆ. ಇದಾವುದಕ್ಕೂ ಪುತ್ತೂರು ಪ್ರಧಾನ ಕೇಂದ್ರವಾಗಲಿಲ್ಲ. ನವೋದಯದ ದಕ್ಷಿಣಕನ್ನಡ ಜಿಲ್ಲೆಯ ಪ್ರಮುಖ ಕವಿಗಳು ಮಂಗಳೂರು ಕೇಂದ್ರದಲ್ಲಿದ್ದರು. ಪಂಜೆ ಮಂಗೇಶರಾಯ, ಕಡೆಂಗೋಡ್ಲು, ಮುಳಿಯ ತಿಮ್ಮಪ್ಪಯ್ಯ ಇತ್ಯಾದಿ ಖ್ಯಾತ ನಾಮಾಂಕಿತರ ಕ್ಷೇತ್ರ ಮಂಗಳೂರೇ ಆಗಿತ್ತು. ನವ್ಯದ ಪ್ರಮುಖರಾಗಿದ್ದ ಗೋಪಾಲಕೃಷ್ಣ ಅಡಿಗರು ಉಡುಪಿಯಲ್ಲಿ ಕೆಲಕಾಲ ಇದ್ದದ್ದು ಹೊರತಾದರೆ ಉಳಿದಂತೆ ಅವರು ಮೈಸೂರಿನಲ್ಲಿದ್ದು ತಮ್ಮ ಕಾವ್ಯ ರಚಿಸುತ್ತಿದ್ದರು. ಪ್ರಗತಿಶೀಲ ಮಾರ್ಗದ ಪ್ರಮುಖರಾದ ನಿರಂಜನರು ಪುತ್ತೂರಿನವರಾದರೂ, ಅವರು ಪುತ್ತೂರಿನಲ್ಲಿ ಹೆಚ್ಚುಕಡಿಮೆ ಇರಲೇ ಇಲ್ಲ. ಒಂದು ರೀತಿಯ ಅಲೆಮಾರಿಯಾಗಿದ್ದರು. ಬಂಡಾಯ ದಲಿತ ಕಾವ್ಯಗಳ ಭರಾಟೆ ದಕ್ಷಿಣ ಕನ್ನಡದಲ್ಲಿ ಹೆಚ್ಚಾಗಿ ಇರಲಿಲ್ಲ. ಚೊಕ್ಕಾಡಿಯನ್ನು ಕೇಂದ್ರವಾಗಿಟ್ಟು ಸುಬ್ರಾಯ ಚೊಕ್ಕಾಡಿ ಸ್ಥಳೀಯರಾಗಿದ್ದರು. ಅವರ ಒಡನಾಟದಲ್ಲಿ ಕೆಲವು ಯುವಕವಿಗಳು ಕಾವ್ಯ ಬರೆದದ್ದಿದೆ. ನವ್ಯದ ಮತ್ತೊಬ್ಬ ಕವಿ ರಾಮಚಂದ್ರ ದೇವ ಕೂಡ ತಮ್ಮ ಕೊನೆಕಾಲದಲ್ಲಿ ಮಾತ್ರ ತಮ್ಮ ಊರಾದ ಕಲ್ಮಡ್ಕದಲ್ಲಿದ್ದರು. ಹೀಗಾಗಿ ಸಾಹಿತ್ಯ ಮಾರ್ಗಗಳ ಸುಳಿಗೆ ಪುತ್ತೂರು ಒಳಗಾಗಲೇ ಇಲ್ಲ.

ನವೋದಯ ಮಾರ್ಗದ ಕವಿಗಳೇ ಇಂದಿಗೂ ಈ ಭಾಗದ ಪ್ರಮುಖ ಸಾಹಿತಿಗಳಾಗಿದ್ದಾರೆ. ಮುಸ್ಲಿಂ ಸಂವೇದನೆಯ ಪ್ರಮುಖ ಕತೆಗಾರರಾದ ಬೊಳುವಾರು ಕೂಡ ಪುತ್ತೂರಿನ ಹೊರಗೇ ಇದ್ದರು.

ದಕ್ಷಿಣ ಕನ್ನಡದಲ್ಲಿ ಈಗಲೂ ಉಡುಪಿ, ಮಂಗಳೂರು ಮತ್ತು ಪುತ್ತೂರು ಪ್ರಮುಖ ಸಾಂಸ್ಕೃತಿಕ ಕೇಂದ್ರ್ರಗಳಾಗಿವೆ. (ಇತ್ತೀಚಿನ ದಶಕದಲ್ಲಿ ಮೂಡಬಿದ್ರೆ ಮತ್ತೊಂದು ಕ್ಷೇತ್ರವಾಗಿ ಸೇರುತ್ತದೆ.) ಪುತ್ತೂರು ಹೀಗೆ ಸಾಹಿತ್ಯಿಕ ಕೇಂದ್ರವಾಗಲು ಪ್ರಮುಖ ಕಾರಣ ಶಿವರಾಮ ಕಾರಂತರ ಪ್ರಯೋಗಗಳು ಮತ್ತು ಉತ್ಸವಗಳು. ಕಾರಂತರಿಂದ ಪ್ರಾರಂಭವಾದ ಈ ಸಾಂಸ್ಕೃತಿಕ ಚಟುವಟಿಕೆ ಇಂದಿಗೂ ಮುಂದುವರೆದು ಬರುತ್ತಿದೆ. ಫಿಲೋಮಿನಾ ಕಾಲೇಜು ಮತ್ತು ವಿವೇಕಾನಂದ ಕಾಲೇಜುಗಳ ಪ್ರಾರಂಭದ ನಂತರ ಈ ಚಟುವಟಿಕೆಗಳು ಸಾಂಸ್ಥಿಕವಾಗಿ, ಅಕಡಮಿಕಲ್ ಆಗಿ ಪ್ರಚಾರಕ್ಕೆ ಬರುತ್ತಿದೆ. ಪತ್ತೂರಿನಲ್ಲಿ ನಡೆಯುತ್ತಿದ್ದ ಚರ್ಚೆಗಳು ಆಕಾಲಕ್ಕೆ ಅತ್ಯಂತ ಪ್ರಭಾವಯುತವಾಗಿದ್ದವು. ಪುತ್ತೂರಿನ ಒಂದು ವಿಚಾರ ಸಂಕಿರಣದ ಮಹಿಳಾ ಗೋಷ್ಠಿ ದಕ್ಷಿಣ ಕನ್ನಡದ ಕರಾವಳಿ ಲೇಖಕಿಯರ ಸಂಘದ ಸ್ಥಾಪನೆಗೆ ಕಾರಣವಾದದ್ದು ಇತಿಹಾಸ. ಪುತ್ತೂರಿನಲ್ಲಿ ನಡೆದ ವಿಚಾರ ಸಂಕಿರಣಗಳು ಹಳೆಯದನ್ನು ನೆನಪಿಸುವ ಹೊಸದನ್ನು ಚರ್ಚಿಸುವ ಸಂಕಿರಣಗಳಾಗಿದ್ದವು. ಪಟ್ಟಭದ್ರ ಹಿತಾಸಕ್ತಿಗಳು ಇಂತಹ ಸಂಕಿರಣಗಳನ್ನು ವಿರೋಧಿಸುವ ಕಾರ್ಯಗಳು ನಡೆದದ್ದು ಈಗ ಇತಿಹಾಸ. ಇಂದಿಗೂ ಪುತ್ತೂರು ಮತ್ತು ಸುತ್ತಮುತ್ತಲು ನಡೆಯುವ ಸಾಹಿತ್ಯ ಸಮ್ಮೇಳನಗಳು ತೀವ್ರವಾದ ವಾಗ್ವಾದಗಳನ್ನು ತಮ್ಮ ಸಂಕಿರಣದ ವಸ್ತುವನ್ನಾಗಿ ಇಡುವುದಿಲ್ಲ ಎಂಬುದನ್ನು ಗಮನಿಸಬೇಕಾಗಿದೆ. ಇಷ್ಟೆಲ್ಲ ವಿಚಾರ ಸಂಕಿರಣಗಳ ನಡುವೆಯೂ ಪುತ್ತೂರಿನಿಂದ ಹೊಸ ಬರಹಗಾರರು ಹೊರಬರುತ್ತಿಲ್ಲ ಎಂಬುದನ್ನು ಗಮನಿಸಬೇಕಾಗಿದೆ.

೪.೪.೦ **ಸಾಹಿತಿಗಳು;**

ಪುತ್ತೂರಿನಲ್ಲಿ ಹುಟ್ಟಿ ಇಲ್ಲಿಯೇ ಸಾಹಿತ್ಯ ಚಟುವಟಿಕೆಯಲ್ಲಿ ತೊಡಗಿಕೊಂಡಿರುವ ಮತ್ತು ಪುತ್ತೂರಿನಲ್ಲಿ ಹುಟ್ಟಿ ಹೊರನಾಡಿನಲ್ಲಿದ್ದುಕೊಂಡು ಸಾಹಿತ್ಯ ಚಟುವಟಿಕೆಯಲ್ಲಿ ತೊಡಗಿಕೊಂಡಿರುವ ಹಾಗೂ ಹೊರನಾಡಿನಲ್ಲಿ ಹುಟ್ಟದರೂ ಪುತ್ತೂರಿಗೆ ಕಾರ್ಯನಿಮಿತ್ತ ಬಂದು ಇಲ್ಲಿ ಸಾಹಿತ್ಯ ಚಟುವಟಿಕೆಗಳಲ್ಲಿ ತೊಡಗಿಕೊಂಡಿರುವವರನ್ನು ಪುತ್ತೂರಿನ ಸಾಹಿತಿಗಳೆಂದು ಇಲ್ಲಿ ಪರಿಗಣಿಸಲಾಗಿದೆ. ಇವರಲ್ಲಿ ಪ್ರಮುಖ ಸಾಹಿತಿಗಳು,

**೪.೪.೧ ಮೊಳಹಳ್ಳಿ ಶಿವರಾವ್ (೧೮೮೧ – ೧೯೬೭)**

ಪುತ್ತೂರಿನ ಶಿಕ್ಷಣ, ಸಹಕಾರಿ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ದಿ। ಮೊಳಹಳ್ಳಿ ಶಿವರಾಯರ ಹೆಸರು ಸ್ಮರಣೀಯವಾದುದು. ಅವರು ಸಲ್ಲಿಸಿದ ನಿಸ್ವಾರ್ಥ ಸೇವೆ, ತೋರಿದ

ಧುರೀಣತ್ವ, ಬದುಕಿದ ಸರಳ ರೀತಿ, ಸದಾ ಸರಿಕಂಡುದನ್ನು ಬೆಂಬಲಿಸುವ ಮನೋಧರ್ಮ ವಿಶಿಷ್ಟವಾಗಿತ್ತು.

ಮೊಳಹಳ್ಳಿ ಶಿವರಾಯರ ತಂದೆ ಮೊಳಹಳ್ಳಿ ರಂಗಪ್ಪಯ್ಯ ಮತ್ತು ತಾಯಿ ಮೂಕಾಂಬಿಕೆ. ಇವರ ಮೂರನೆಯ ಮಗ ಶಿವರಾಯರು ೦೪-೦೮-೧೮೮೦ರಲ್ಲಿ ಪುತ್ತೂರು ಬಸ್ ನಿಲ್ದಾಣದ ಬಳಿಯ ಮನೆಯಲ್ಲಿ ಜನಿಸಿದರು. ಬಾಲ್ಯದ ಶಿಕ್ಷಣವನ್ನು ಪುತ್ತೂರಿನಲ್ಲಿ ಮುಗಿಸಿ, ಅನಂತರ ಮಂಗಳೂರಿನಲ್ಲಿ ಎಫ್.ಎ.ಯನ್ನು ಅತ್ಯುತ್ತಮ ದರ್ಜೆಯಲ್ಲಿ ಮುಗಿಸಿದರು. ಹದಿನಾರನೆಯ ವಯಸ್ಸಿನಲ್ಲಿ ಉಮಾದೇವಿ ಯವರನ್ನು ವಿವಾಹವಾದರು. ಅ ಕಾಲದಲ್ಲೇ 'ಪ್ಲೀಡರ್' ಪರೀಕ್ಷೆ ಮುಗಿಸಿ ವಕೀಲರಾದರು. ಅದಕ್ಕೂ ಮೊದಲು ಸ್ವಲ್ಪ ಕಾಲ ಮಡಿಕೇರಿಯಲ್ಲಿ ಮಾಸ್ತರರಾಗಿದ್ದರು.

ಶಿವರಾಯರು ಪುತ್ತೂರಿನ ಸಾಂಸ್ಕೃತಿಕ ಬದುಕಿಗೆ ನೀಡಿದ ಕೊಡುಗೆ ಅನನ್ಯವಾದುದು. ಪುತ್ತೂರು ಸದಾನಂದ ಸಹಕಾರಿ ಛಾಪಖಾನೆ (೧೯೩೧) ಸ್ಥಾಪಿಸಿ ತನ್ಮೂಲಕ 'ಸಹಕಾರಿ' ಪತ್ರಿಕೆಯನ್ನು ಪ್ರಕಟಿಸಲು ಶಿವರಾಯರು ಕಾರಣರಾಗಿದ್ದಾರೆ. ಮಂಜೇಶ್ವರ ಅನಂತರಾಯರ ಸಂಪಾದಕತ್ವದಲ್ಲಿ ಈ ಪತ್ರಿಕೆ ಅನೇಕ ವರ್ಷ ನಡೆದಿದೆ. ಸಹಕಾರ ತತ್ವ, ಸಾಮಾಜಿಕ ಮತ್ತು ಸಾಹಿತ್ಯಗಳಿಗೆ ಸಂಬಂಧಿಸಿದ ಅನೇಕ ಲೇಖನಗಳು ಈ ಪತ್ರಿಕೆಯಲ್ಲಿ ಪ್ರಕಟವಾಗಿವೆ. ಶಿವರಾಮ ಕಾರಂತರ 'ಬಾಲವನ' ಮತ್ತು ದಸರಾ ಕಾರ್ಯಕ್ರಮಗಳಿಗೆ ಮೊಳಹಳ್ಳಿ ಶಿವರಾಯರ ಪೂರ್ಣ ಬೆಂಬಲ ಲಭಿಸುತ್ತಿತ್ತು. ಪುತ್ತೂರಿನ ಜನರಿಗೆ ಪ್ರಖ್ಯಾತ ಸಾಹಿತಿಗಳನ್ನು ನೋಡುವ, ಸಂಗೀತ, ನಾಟಕ, ನೃತ್ಯ ಕಾರ್ಯಕ್ರಮಗಳನ್ನು ವೀಕ್ಷಿಸುವ ಸುಯೋಗ ಈ ಕಾಲದಲ್ಲಿ ಲಭಿಸಿದುದು ಅಪೂರ್ವವಾಗಿತ್ತು. ಶಿವರಾಮ ಕಾರಂತರಿಗೆ ಬಾಲವನ ಮತ್ತು ದಸರಾ ಕಾರ್ಯಕ್ರಮಗಳಲ್ಲಿ, ಸಾಹಿತ್ಯ ಮತ್ತು ರಂಗ ಮಾಧ್ಯಮಗಳಲ್ಲಿ ವಿವಿಧ ಪ್ರಯೋಗಗಳನ್ನು ನಡೆಸಲು ಪ್ರೇರಣೆ ಮತ್ತು ಪೂರ್ಣ ಬೆಂಬಲ ನೀಡಿದರು.

ಅಸ್ಪೃಶ್ಯತಾ ನಿವಾರಣೆ, ಹರಿಜನೋದ್ಧಾರ ಕಾರ್ಯಕ್ರಮಗಳ ಅಧ್ವರ್ಯಗಳಾದ ಶಿವರಾಯರು ಮತ್ತು ಶಿವರಾಮ ಕಾರಂತರು ಹಳ್ಳಿಹಳ್ಳಿಗಳಲ್ಲಿ ಭಾಷಣಗಳನ್ನು ಮಾಡಿದರು, ನಾಟಕಗಳನ್ನು ಆಡಿದರ್ು. ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳಲ್ಲಿ ಶಿವರಾಯರಿಗೆ ಪ್ರಾವೀಣ್ಯವಿತ್ತು. ಕನ್ನಡದಲ್ಲಿ ಅವರು ಎರಡು ನಾಟಕಗಳನ್ನು ಬರೆದಿದ್ದಾರೆ. ಕೃತಿಗಳು ಲಭ್ಯವಾಗಿಲ್ಲ.

ಪುತ್ತೂರಿನ ಸಾಂಸ್ಕೃತಿಕ ಬದುಕಿಗೆ ಅರ್ಥಪೂರ್ಣ ಚಾಲನೆ ನೀಡಿದ ಮಹಾನುಭಾವ ಮೊಳಹಳ್ಳಿ ಶಿವರಾಯರು, ೧೯೬೭ರ ಜುಲೈ ೭ ರಂದು ದಿವಂಗತರಾದರು.

## ೪.೪.೨ ಬಡೆಕ್ಕಿಲ ವೆಂಕಟರಮಣ ಭಟ್ಟ (೧೮೮೭ - ೧೯೮೩)

ಪುತ್ತೂರು ಬಳಿಯ ಕೆದಿಲದಲ್ಲಿ ಬಡೆಕ್ಕಿಲ ಪುಟ್ಟಣ್ಣ (ಶಂಕರ ನಾರಾಯಣ) ಭಟ್ಟ - ಲಕ್ಷ್ಮೀ ದಂಪತಿಗಳಿಗೆ ೧೮೮೭ರಲ್ಲಿ ಜನಿಸಿದ ವೆಂಕಟರಮಣ ತಂದೆಯನ್ನು ಬಾಲ್ಯದಲ್ಲೇ ಕಳೆದುಕೊಂಡು, ಅಜ್ಜನ ಆಶ್ರಯದಲ್ಲಿ ಬೆಳೆದರು. ಕುಕ್ಕೆ ಮನೆಯಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ಮುಗಿಸಿದರು. ಇವರು ಬಾಲ್ಯವನ್ನು ಕಳೆದ ಅಜ್ಜನ ಮನೆಯಾದ ನೆಡ್ಲೆ ಮನೆಯ ಆಸುಪಾಸು ಯಕ್ಷಗಾನದ ಒಂದು ಕೇಂದ್ರದಂತಿದ್ದುದರಿಂದ ಯಕ್ಷಗಾನ ಪ್ರಸಂಗಗಳ ಅರ್ಥಜ್ಞಾನ ಮತ್ತು ಯಕ್ಷಗಾನ ಕಲೆಯ ಸ್ವರೂಪಜ್ಞಾನವು ಆ ಪ್ರತಿಭಾಶಾಲಿಗೆ ಬೇಗನೆ ಕರಗತವಾದವು.

ಪ್ರಾಥಮಿಕ ಶಿಕ್ಷಣ ಪೂರೈಸಿ ಬಡೆಕ್ಕಿಲಕ್ಕೆ ಹಿಂತಿರುಗಿದ ವೆಂಕಟರಮಣ ಭಟ್ಟರು ಅಂದಿನ ಸುಪ್ರಸಿದ್ಧ ಭಾಗವತ ಜತ್ತಿ ಈಶ್ವರಪ್ಪಯ್ಯನವರ ಕಾವ್ಯಶಾಸ್ತ್ರ ವಿನೋದಗಳಿಂದ ಪ್ರಭಾವಿತರಾಗಿ ಕನ್ನಡ ಗ್ರಂಥಗಳ ಅಭ್ಯಾಸ ನಡೆಸಿದರು. ಸಣ್ಣ ಪ್ರಾಯದಲ್ಲೇ ಸೋದರಮಾವ ಮಣಿಲ ಈಶ್ವರಶಾಸ್ತ್ರಿಗಳಿಂದ ಸ್ವಲ್ಪ ವೈದಿಕ ವಿದ್ಯೆ ಕಲಿತುಕೊಂಡರು. ಯಕ್ಷಗಾನ ರಂಗದಲ್ಲಿ ಹಾಡುಗಾರಿಕೆ, ಮದ್ದಳೆ ಬಾರಿಸುವಲ್ಲಿ ನುರಿತವರಾಗಿದ್ದರು, ಅರ್ಥಗಾರಿಕೆಯಲ್ಲಿ ಬಲವನ್ನು ಬೆಳೆಯಿಸಿಕೊಂಡರು.

ಸಾಹಿತ್ಯ ವಿಚಾರದಲ್ಲಿ ಭಟ್ಟರದು ಸಂಪ್ರದಾಯನಿಷ್ಠವಾದ ನಿಲುಮೆ. ಹಳೆಗನ್ನಡದಲ್ಲಿ ಅಪಾರ ಪ್ರೇಮ. ಬಡೆಕ್ಕಿಲರ ಕೃತಿಗಳಲ್ಲಿ ಬಹುಕಾಲ ನಿಲ್ಲತಕ್ಕದ್ದು 'ಗೀತಸಾರ' ಎನ್ನಬಹುದು. ಅಚ್ಚುಕಟ್ಟಾದ ನೈಜವಾದ, ಸರಳವಾದ ಕಾವ್ಯಾತ್ಮಕ ಕೃತಿಯಾಗಿದ್ದು ಭಾಷಾಂತರವೆಂದು ಕಾಣಿಸದೆ ಸ್ವತಂತ್ರ ಕೃತಿ ಯೆಂಬಂತೆ ಭಾಸವಾಗುತ್ತಿದೆ. 'ಕರ್ನಾಟಕ ಪರಿಸ್ಥಿತಿ' ಎಂಬ ಕೃತಿ ೧೯೨೦ಕ್ಕೂ ಹಿಂದೆ ಪ್ರಕಟವಾಗಿ ೧೯೭೦ರಲ್ಲಿ ಇತರ ಕಿರುಕೃತಿಗಳೊಂದಿಗೆ ಸೇರಿ ಮರು ಮುದ್ರಣ ಕಂಡಿತು.

'ಭಾರತ ರಾಜ್ಯ ಭಾರಂ' ಕೃತಿಯಲ್ಲಿ ಸ್ವಾತಂತ್ರ್ಯೋತ್ತರ ಭಾರತದ ಪರಿಸ್ಥಿತಿಯನ್ನು ವರ್ಣಿಸಿ ದುಷ್ಟರ ತುಷ್ಟೀಕರಣಂ. ನಿಷ್ಠರ ಯೋಚನೆಗೆ ಕಾಲಹರಣಂ ನೀತಿ. ಭ್ರಷ್ಟತೆಗೆ ಕಾರ್ಯಕರಣಂ, ದೃಷ್ಟಿ ಸಲೀತೆರಮ ರಾಜ್ಯಭಾರ ಕ್ರಮಣಂ' ಎಂದು ದುಃಖಿಸುತ್ತಾರೆ[೧೦]. ಎಂಬತ್ತೈದರ ಪ್ರಾಯದ ಸುಮಾರಿಗೆ ಬಡೆಕ್ಕಿಲರು ಬರೆದ 'ಸಮಾಜ ಸಂಗೀತ' ಒಂದು ವಿಶಿಷ್ಟ ಚಿಕಿತ್ಸಕ ಕಾವ್ಯ. ಧರ್ಮ, ಸಮಾಜ, ಗುರುಪೀಠ, ಕಂದಾಚಾರ ಇತ್ಯಾದಿಗಳ ಬಗೆಗೆ ಪ್ರಬುದ್ಧ ಮನಸ್ಸೊಂದು ನಡೆಸಿದ ನಿರ್ಭೀತ, ಮುಕ್ತ ವಿಚಾರಗಳ ಸಂಚಯವಿದು ಎಂಬುದು ಅಮೃತ ಸೋಮೇಶ್ವರರ ಅಭಿಪ್ರಾಯ.

೧೯೬೦ರಲ್ಲಿ ಪ್ರಕಟವಾದ 'ಸೂಕ್ತಿವಾದ'ದಲ್ಲಿ ಭಾರತದ ರಾಜಕೀಯ ಹಾಗೂ ಸಾಮಾಜಿಕ ಜೀವನದ ಸಮೀಕ್ಷೆಯಿದೆ. ರಾಷ್ಟ್ರದ ಬದುಕಿನ ಮುಖ್ಯ ಸಮಸ್ಯೆಗಳಾದ ಭಾರತದ ಗಡಿಸಮಸೆ, ಮೆರವಣಿಗೆ, ಗಲಭೆ, ಸುಲಿಗೆ, ದಾಂಧಲೆಗಳ ಚಿತ್ರಣವಿದೆ. ಬಡೆಕ್ಕಿಲದವರು ಹದಿನಾರರ ಪ್ರಾಯದಲ್ಲೇ ಬರೆದ 'ವಾಜಿ ಗ್ರಹಣ' ಹಾಗೂ ಉತ್ತರ ವಯಸ್ಸಿನಲ್ಲಿ ರಚಿಸಿದ 'ಭೀಮ ವಿಜಯ' ಇವೆರಡು ಯಕ್ಷಗಾನ ಪ್ರಸಂಗಗಳು. ಬಡೆಕ್ಕಿಲ ವೆಂಕಟರಮಣಭಟ್ಟರು 'ಸರಸ್ವತಿಲಿಪಿ' ಎಂಬ ಗ್ರಂಥ ಬರೆದಿದ್ದಾರೆ.

ಕನ್ನಡದ ಲಿಪಿ ಸಮಸ್ಯೆಯನ್ನು ಸರಳೀಕರಿಸಿಸುವ ಪ್ರಯತ್ನ ಇಲ್ಲಿದೆ. ಉದಾ: ಚ–ಛ ಎರಡೂ ಬೇರೆ ರೂಪ ಇದೆ. ಡ–ಢ ಎರಡೂ ಒಂದೇ ರೂಪದಲ್ಲಿದೆ ಇದರಿಂದ ಅಲ್ಪಪ್ರಾಣ ಮಹಾಪ್ರಾಣಗಳಿಗೆ ಏಕರೂಪ ತರುವ ಪ್ರಯತ್ನ ಮಾಡಿದ್ದಾರೆ. ಹೀಗೆ ಕನ್ನಡ ಸಾಹಿತ್ಯಕ್ಕೆ ಅಪಾರ ಕೊಡುಗೆ ನೀಡಿದ ಕವಿ ಬಡೆಕ್ಕಿಲ ವೆಂಕಟರಮಣ ಭಟ್ಟರು ೪–೯–೧೯೮೩ರಂದು ಬದುಕಿಗೆ ವಿದಾಯ ಹೇಳಿದರು.

**೪.೪.೩ ಮುಳಿಯ ತಿಮ್ಮಪ್ಪಯ್ಯ (೧೮೮೮ – ೧೯೫೦)**

ಹಿಂದಿನ ಪುತ್ತೂರು ತಾಲೂಕಿಗೆ ಸೇರಿದ ಅಳಿಕೆ ಗ್ರಾಮದ ಒಂದು ಮನೆತನದ ಹೆಸರು ಮುಳಿಯ. ವಿಟ್ಲದ ಅರಸರಿಗೆ ಸರಿಮಿಗಿಲೆನ್ನುವಂತೆ ಬದುಕಿ ಮುಳಿಯದರಸುಗಳೆಂದು ಕರೆಸಿಕೊಂಡು ಬಾಳಿದ ಮುಳಿಯದ ಮನೆ, ತಿಮ್ಮಪ್ಪಯ್ಯ ಅವರ ಹಿರಿಯರು ವಾಸವಿದ್ದ ಮನೆ. ದಾನ–ಧರ್ಮಕ್ಕೆ, ಆದರಾತಿಥ್ಯಕ್ಕೆ ಹೆಸರಾದ ಮನೆ ಇಂತಹ ಮನೆಯಲ್ಲಿ ೩–೩–೧೮೮೮ ರಲ್ಲಿ ಕೇಶವ ಭಟ್ಟ – ಮೂಕಾಂಬಿಕೆಯರೆಂಬ ದಂಪತಿಗಳ ಹಿರಿಯ ಮಗನಾಗಿ ತಿಮ್ಮಪ್ಪಯ್ಯ ಅವರ ಜನನ. ತಾಯಿ ಮೂಕಾಂಬಿಕೆಯವರ ತವರು ಮನೆ ಕಡೆಂಗೊಡ್ಲು.

ತಿಮ್ಮಪ್ಪಯ್ಯನವರ ಮೊದಲ ಗುರು ವಾಮನ ಮಾಸ್ತರರು. ಅವರು ಮುಳಿಯರನ್ನು ನಾಲ್ಕನೆಯ ತರಗತಿಯ ಪರೀಕ್ಷೆಗೆ ಕುಳಿತು ಕೊಳ್ಳುವುದಕ್ಕೆ ಅಣಿಗೊಳಿಸಿದರು. ಕಟ್ಟಿದ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಇಲ್ಲಿಗೆ ಇವರ ವಿದ್ಯಾಭ್ಯಾಸವೂ ಕೊನೆಗೊಂಡಿತು. ಆದರೆ ಮುಳಿಯರ ಜ್ಞಾನದಾಹ ಹಿಂಗಿರಲಿಲ್ಲ. ವಿಟ್ಲದ ಅರಮನೆಯ ಮಂದಿಗೆ ಗುರುಸ್ಥಾನದಲ್ಲಿ ಇದ್ದ ಕಲ್ಲಜೆ ಸುಬ್ಬರಾಯ ಶಾಸ್ತ್ರಿಗಳಲ್ಲಿ ಸಂಸ್ಕೃತ ಪಾಠ ಹೇಳಿಸಿಕೊಂಡರು. ಪಾಠ ಹೇಳಿಸಿಕೊಳ್ಳಲು ಮುಳಿಯದಿಂದ ಆರೆಂಟು ಮೈಲು ನಡೆದೇ ಬರುತ್ತಿದ್ದರು. ಒಂದು ದಿನ ಮನೆಯಲ್ಲಿ ಯಾರಿಗೂ ತಿಳಿಸದೆ ೧೯೦೯ರಲ್ಲಿ ತಿರುವನಂತಪುರಕ್ಕೆ ಹೊರಟು ಹೋದರು. ಸಂಗೀತ, ಸಂಸ್ಕೃತಾಭ್ಯಾಸಕ್ಕೆ ಅಲ್ಲಿ ಅವಕಾಶವಿದೆ ಎಂದು ನಂಬಿ, ಅಲ್ಲಿ ಅಭ್ಯಾಸ ಮುಂದುವರಿಸಿದರು. ವಾಸುದೇವಾಚಾರ್ಯರಲ್ಲಿ ಸಂಗೀತ ಕಲಿತರು. ಸಂಗೀತಾಭ್ಯಾಸ ಸಂಸ್ಕೃತದ ವ್ಯಾಸಂಗಕ್ಕೆ ಅಡ್ಡಿಯಾಗಿ ನಿಲ್ಲಲಿಲ್ಲ. ೧೯೧೦ರಲ್ಲಿ ಅಲ್ಲಿಂದ ಊರಿಗೆ ಮರಳಿ ಬಂದರು.

ಹಳ್ಳಿಗೆ ಬಂದ ಅವರು ಹಳ್ಳಿಯ ಜನರೊಡನೆ ಬೆರೆಯಲಾರಂಭಿಸಿದರು. ವಿದ್ಯಾ–ವಿನಯ ಸಂಪನ್ನತೆಯನ್ನು ಮೆರೆದರು. ತಾಳಮದ್ದಳೆಯ ಕೂಟಗಳಲ್ಲಿ ಅರ್ಥಧಾರಿಗಳಾದರು. ತಾಯಿಯಿಂದ ಬಳುವಳಿಯಾಗಿ ಬಂದ ಕಂಠಶ್ರೀಯಿತ್ತು. ಭಾಗವತಿಕೆ ಮಾಡಿದರು. ಪ್ರವಚನಕ್ಕೆ ತೊಡಗಿದರು. ಪಾರ್ತಿಸುಬ್ಬನ ಯಕ್ಷಗಾನ ಕೃತಿಗಳನ್ನು ಬಹುವಾಗಿ ಮೆಚ್ಚಿಕೊಂಡರು. ತಾವೇ ಒಂದು "ಸೂರ್ಯಕಾಂತಿ ಕಲ್ಯಾಣ" ಎಂಬ ಯಕ್ಷಗಾನ ಕೃತಿಯನ್ನು ಬರೆದರು. ಅದು ಅಚ್ಚಿನ ಮನೆ ಕಾಣಲಿಲ್ಲ. ಅದಕ್ಕೆ ಜನ ಮನ್ನಣೆ ಸಿಗಲಿಲ್ಲ.

ಮುಳಿಯರ ಕಾವ್ಯವಾಚನದ ಸವಿ ಸೊಗಸನ್ನು ಕಂಡುಂಡ ಕವಿಭೂಷಣ ವೆಂಕಪ್ಪ ಶೆಟ್ಟರು ಮುಳಿಯರ ವಾಚನದ ವೈಖರಿಯನ್ನು ಅಮ್ಮೆಂಬಳ ಶ್ರೀನಿವಾಸ ಪೈಗಳ ಗಮನಕ್ಕೆ ತಂದರು. ಪೈಗಳು

ಆಗ ಮಂಗಳೂರಿನ ಪ್ರಸಿದ್ಧ ವಕೀಲರು ಕೆನರಾ ಸಂಸ್ಥೆಗಳೊಡನೆ ಸಂಬಂಧವಿರಿಸಿಕೊಂಡವರು. ಅವರ ಮನೆಯಲ್ಲಿ ತಿಮ್ಮಪ್ಪಯ್ಯನವರ ಕಾವ್ಯ ವಾಚನದ ಏರ್ಪಾಡು ನಡೆಯಿತು[೧೧]. ಮಂಗಳೂರಿನ ಕೆಲವು ಪ್ರಮುಖರಿಗೂ ಕರೆಹೋಗಿತ್ತು. ವಾಚನದ ವೈಖರಿಯನ್ನು ಮಾತ್ರವಲ್ಲ, ಅವರ ವ್ಯಕ್ತಿತ್ವವನ್ನೂ ಪೈ ಮೆಚ್ಚಿಕೊಂಡರು. ಅವರ ಶಿಫಾರಸ್ಸಿನ ಮೇಲೆ ತಿಮ್ಮಪ್ಪಯ್ಯ ಕೆನರಾ ಹೈಸ್ಕೂಲಿನಲ್ಲಿ ಕನ್ನಡ ಪಂಡಿತರಾಗಿ ನೇಮಕಗೊಂಡರು.

ಮಂಗಳೂರು ಅವರಿಗೆ ಮಂಗಳವನೊದಗಿಸಿತು. ಅಧ್ಯಯನ ಅಧ್ಯಾಪನ ಜೊತೆ ಜೊತೆಗೆ ಮುಂದುವರಿಯಿತು. ವಿದ್ವಜ್ಜನರ, ಸಜ್ಜನರ, ಸಾಹಿತ್ಯ ಪ್ರಿಯರ ಪರಿಚಯ ಲಾಭ ದೊರಕಿಸಿಕೊಟ್ಟಿತು. ೧೯೪೩ರಲ್ಲಿ ಅವರ ಗದ್ಯ ಕಾವ್ಯ "ಚಂದ್ರಾವಲೀ ವಿಲಾಸ" ಪ್ರಕಟಗೊಂಡಿತು. ಪ್ರಕಟಣೆಯ ವೆಚ್ಚವನ್ನು ವಿದ್ಯಾರ್ಥಿಗಳೇ ಭರಿಸಿದರು. ಮುದ್ದಣನ ಅದ್ಭುತ ರಾಮಾಯಣ ರಾಮಾಶ್ವಮೇದಗಳ ಅಭ್ಯಾಸಕ್ಕೆ ಅವರ ಕೃತಿ ಪ್ರವೇಶದ್ವಾರವಾಯಿತು.

೧೯೧೬ರಲ್ಲಿ ಪೇಜಾವರ ಭೋಜರಾಯರ ಜೊತೆ ಸೇರಿ "ಕನ್ನಡ ಕೋಗಿಲೆ" ಎಂಬ ಮಾಸ ಪತ್ರಿಕೆಯನ್ನು ಪ್ರಾರಂಭಿಸಿದರು. ಆ ಪತ್ರಿಕೆಯಲ್ಲಿ ಅವರ ಗದ್ಯ ಕಾವ್ಯ "ನಡತೆಯ ನಾಡು", "ಕಥನ ಕವನ", "ಬಡ ಹುಡುಗಿ" ನಾಟಕ "ಹಗಲಿರುಳು" ಬೆಳಕು ಕಂಡವು. "ಪ್ರೇಮ ಪಾಶ" ವೆಂಬ ಕೃತಿ ಮೈಸೂರಿನಲ್ಲಿ ಪ್ರಕಟಗೊಂಡಿತು.

೧೯೧೮ರಲ್ಲಿ ಸೈಂಟ್ ಅಲೋಸಿಯಸ್ ಕಾಲೇಜಿನಲ್ಲಿ ರಾಮನ್ ನಂಬಿಯಾರ್ ರಾಜೀನಾಮೆಯಿಂದ ಕನ್ನಡ ಪಂಡಿತನ ಸ್ಥಾನ ತೆರವಾಯಿತು. ಆ ಸ್ಥಾನಕ್ಕೆ ಮುಳಿಯರನ್ನು ನೇಮಿಸಿಕೊಳ್ಳಲಾಯಿತು. ಶಾಲಾ – ಕಾಲೇಜುಗಳ ನಾಲ್ಕು ಗೋಡೆಗಳ ಮಧ್ಯ ಕುಳಿತು ಕ್ರಮಬದ್ಧವಾಗಿ ಅಭ್ಯಸಿಸಿದ ಮುಳಿಯರು ಕಾಲೇಜಿನ ಪ್ರೌಢ ವಿದ್ಯಾರ್ಥಿಗಳಿಗೆ ಬೋಧಕರಾಗಿ ನೇಮಕಗೊಂಡುದು ಅರ್ಹತೆಯ ಆಧಾರದ ಮೇಲೆ ತಮ್ಮ ಮೇಲಿರಿಸಿದ ವಿಶ್ವಾಸವನ್ನು ಅವರು ಸಮರ್ಥವಾಗಿಯೇ ೧೯೪೮ರಲ್ಲಿ ನಿವೃತ್ತರಾಗುವ ತನಕವೂ ನಿಭಾಯಿಸಿದರು.

ಮುಳಿಯರ "ಪಶ್ಚಾತ್ತಾಪ" ಕಾದಂಬರಿ ೧೯೩೪ರಲ್ಲಿ ಅಚ್ಚಿನ ಮನೆಯಿಂದ ಹೊರ ಬಂತು. ನಂತರ "ಕವಿರಾಜಮಾರ್ಗ", "ನಾಡೋಜ ಪಂಪ" ಕೃತಿಯನ್ನು ಪ್ರಕಟಿಸಿದರು. ನಾಡೋಜ ಪಂಪ ಒಂದು ಆಚಾರ್ಯ ಕೃತಿ. ಪಂಪನನ್ನು ಕುರಿತ ಸಮಗ್ರವಾದ ಐತಿಹಾಸಿಕ ಮತ್ತು ಸಾಹಿತ್ಯಿಕ ಅಧ್ಯಯನ ಇಲ್ಲಿದೆ. ಪಂಪನನ್ನು ಕುರಿತ ಮೊದಲ ಸಂಶೋಧನ ಗ್ರಂಥ ಇದಾಗಿದೆ.ಮುಳಿಯರ ಗಂಡು ಶೈಲಿ, ಸಂಶೋಧಕ ದೃಷ್ಟಿ, ಗಾದೆಗಳನ್ನು ಬಳಸುವ ತಂತ್ರಗಾರಿಕೆ, ದೇಸಿಯನ್ನು ಉಪಯೋಗಿಸುವ ರೀತಿ. ಅವರ ಪಾಂಡಿತ್ಯದ ಆಳ–ಅಗಲಗಳ ಪರಿಚಯಕ್ಕೆ ಕೃತಿಯ ಅವಲೋಕನ ಸಹಾಯವಾಗುತ್ತದೆ. ಅವರ ಇತರ ಕೃತಿಗಳಾದ "ರಾವುತ ರಂಗಪ್ಪ" "ಶಿವರಾಮ ಚರಿತೆ" "ತ್ರಿಪುರ ದಾಹ" ಮುಂತಾದ ಕೃತಿಗಳೂ

ಪ್ರಕಟವಾದವು. ನಿವೃತ್ತಿಯ ನಂತರ ಮುಳಿಯರಿಗೆ ಮಂಗಳೂರಿನಲ್ಲಿ ಇರಲು ಸಾಧ್ಯವಾಗದೆ ಪೆರ್ಲಕ್ಕೆ ಹೋದರು. ಕೊನೆಗೆ ಹಿರಿಯ ಮಗನ ಮನೆಯಲ್ಲಿ ೧೯-೧-೧೯೫೦ರಂದು ಅಸ್ತಂಗತರಾದರು.

**೪.೪.೪ ಮಂಜೇಶ್ವರ ಅನಂತರಾಯರು(೧೮೮೯-೧೯೫೨)**

ಅನಂತರಾಯರು ೧೮೮೯ ನೆಯ ಸಪ್ಟೆಂಬರ ತಿಂಗಳಿನಲ್ಲಿ ಜನಿಸಿದರು. ಇವರು ಬಾಲ್ಯವನ್ನು ಅಜ್ಜನ ಮನೆಯಾದ ಮಡಿಕೇರಿಯಲ್ಲೇ ಕಳೆದರು. ಮಡಿಕೇರಿಯ ಸೆಂಟ್ರಲ್ ಹೈಸ್ಕೂಲಿನಲ್ಲಿ ಎಸ್.ಎಸ್.ಎಲ್.ಸಿ. ಉತ್ತೀರ್ಣರಾದರು. ಆಮೇಲೆ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ. ಪದವೀಧರರಾಗಿ ಮದರಾಸಿನ ಲಾ ಕಾಲೇಜಿನಲ್ಲಿ ಬಿ.ಎಲ್. ಪದವಿಯನ್ನು ಪಡೆದರು.

ಇವರು ಮುಖ್ಯವಾಗಿ ಕನ್ನಡ ಸಾಹಿತ್ಯ, ಪತ್ರಿಕೋದ್ಯಮ ಮತ್ತು ಸಹಕಾರಿ ರಂಗದಲ್ಲಿ ದುಡಿದರು. ಇವರು ಪುತ್ತೂರಿನಲ್ಲಿ ಕವಿ ಉಗ್ರಾಣ ಮಂಗೇಶರಾಯರ ಓಗರೆಯ ಸಹವಾಸಿಯಾಗಿ ಕನ್ನಡ ಸಾಹಿತ್ಯವನ್ನು ವ್ಯಾಸಂಗ ಮಾಡಿದರು. ಇಬ್ಬರೂ ಸಂಜೆಯ ವಾಯುವಿಹಾರವನ್ನು ಜೊತೆ ಜೊತೆಯಾಗಿ ನಡೆಸುತ್ತಾ ಕನ್ನಡ ಸಾಹಿತ್ಯದ ಕುರಿತು ಚರ್ಚಿಸುತ್ತಿದ್ದರು. ಇದರಿಂದಾಗಿ, ಇವರು ಕನ್ನಡದಲ್ಲಿ ಕವನ ರಚನೆಗೆ ತೊಡಗಿದರು. ಅವುಗಳು 'ಕನ್ನಡ ಸಹಕಾರಿ', 'ಕನ್ನಡ ಕೇಸರಿ', ಮಾಸಪತ್ರಿಕೆಯಲ್ಲಿ ಪ್ರಕಟವಾದವು.

ಅವರ ಬಿಡಿ ಕವನಗಳು 'ಕಲಸು ಮೇಲೋಗ' ಎಂಬ ಹೆಸರಿನಿಂದ ಸಂಕಲನಗೊಂಡು ೧೯೪೮ರಲ್ಲಿ ಪ್ರಕಟವಾಯಿತು. ಅವರು ಭಗವದ್ಗೀತೆಯ ವ್ಯಾಸಂಗಕ್ಕೆ ತೊಡಗಿ, ಅದನ್ನು ಸುಲಭವಾದ ಪದ್ಯವಾಗಿ ಭಾಷಾಂತರಿಸಿ 'ಕನ್ನಡ ಪದ್ಯಗೀತೆ' ಎಂದು ಪ್ರಕಟಿಸಿದರು.

**೪.೪.೫ ಮುಳಿಯ ಶಂಕರ ಭಟ್ಟ (೧೮೯೧ – ೧೯೩೪)**

೧೮೯೧ರಲ್ಲಿ ಮುಳಿಯ ಶಂಕರಭಟ್ಟರ ಜನನ. ತಂದೆ ಮುಳಿಯ ಕೇಶವ ಭಟ್ಟ. ತಾಯಿ ಮೂಕಾಂಬಿಕೆ, ಅಣ್ಣ ಪ್ರಖ್ಯಾತ ಸಾಹಿತಿ ಪಂಡಿತ ಮುಳಿಯ ತಿಮ್ಮಪ್ಪಯ್ಯ, ಬಾಲ್ಯ ಕಳೆದುದು ಪೆರುವಾಯಿ ಗ್ರಾಮದ ಕುಂಬಳಕೋಡಿಯಲ್ಲಿ, ಅಲ್ಲಿಯ ಶಾಲೆಯಲ್ಲಿ ನಾಲ್ಕನೆಯ ತರಗತಿಯವರೆಗೆ ವಿದ್ಯಾಭ್ಯಾಸ, ಮನೆಯಲ್ಲಿ ಸುಶ್ರಾವ್ಯವಾಗಿ ರಾಮಾಯಣ, ಮಹಾಭಾರತಗಳನ್ನು ಹಾಡುತ್ತಿದ್ದ ತಾಯಿಯಿಂದ ಮತ್ತು ಸಾಹಿತಿಯಾದ ಅಣ್ಣನಿಂದ ಹುಟ್ಟು ಪ್ರತಿಭಾವಂತ ಶಂಕರಭಟ್ಟರಿಗೆ ಸಾಹಿತ್ಯ ಸೇವೆಯ ಪ್ರೇರಣೆ, ಪ್ರಚೋದನೆ ಲಭಿಸಿದವು. ಅಣ್ಣ ಮುಳಿಯ ತಿಮ್ಮಪ್ಪಯ್ಯನವರು ಮಂಗಳೂರಲ್ಲಿ ಮನೆ ಮಾಡಿದ ಮೇಲೆ ಶಂಕರ ಭಟ್ಟರೂ ಅಣ್ಣನೊಂದಿಗೆ ತೆರಳಿದರು. ಅಲ್ಲಿ ಖಾಸಗಿಯಾಗಿ ಕನ್ನಡ

ವಿದ್ವಾನ್ ಪರೀಕ್ಷೆಗೆ ಕುಳಿತು ತೇರ್ಗಡೆಯಾದರು. ಮಂಗಳೂರಿನ ಮಿಶನ್ ಹೈಸ್ಕೂಲಿನಲ್ಲಿ ಕನ್ನಡ ಪಂಡಿತರಾಗಿ ಹಲವಾರು ವರ್ಷ ದುಡಿದರು. ಸಂತ ಎಲೋಶಿಯಸ್ ಹೈಸ್ಕೂಲಿನಲ್ಲಿ ಒಂದು ವರ್ಷ ಕನ್ನಡ ಅಧ್ಯಾಪಕರಾಗಿದ್ದರು. ತಮ್ಮ ಜೀವಿತದ ಕೊನೆಗಾಲದಲ್ಲಿ ಕುಂದಾಪುರದ ಬೋರ್ಡ್ ಹೈಸ್ಕೂಲಿನಲ್ಲಿ ಹತ್ತು ತಿಂಗಳ ಕಾಲ ಸೇವೆ ಸಲ್ಲಿಸಿ, ಅನಾರೋಗ್ಯದಿಂದ ತಮ್ಮ ನಲ್ವತ್ಮೂರನೆಯ ವಯಸ್ಸಿನಲ್ಲಿ ಕಾಲವಶರಾದರು.

ಬಡತನ, ಕಷ್ಟ ಸಂಕಷ್ಟಗಳಲ್ಲೂ ಪ್ರೀತಿಯ ಅಣ್ಣನ ಬೆಚ್ಚನೆಯ ಸಹವಾಸ ಮತ್ತು ಸಾಹಿತ್ಯ – ಯಕ್ಷಗಾನಗಳ ರಸಸ್ಪರ್ಶಗಳು ಶಂಕರ ಭಟ್ಟರನ್ನು ಕೃತಿ ರಚನೆಯತ್ತ ತೊಡಗಿಸಿದುವು. ಬಾಲ್ಯದಲ್ಲೇ ಅವರು ವಾರ್ಧಕ ಷಟ್ಪದಿಯ ‘ತಿಲಕ ಪುರಾಣ’ ಎಂಬ ಕಾವ್ಯವನ್ನು ಬರೆದಿದ್ದರು[೧೨]. ‘ಚಾಣಕ್ಯ ತಂತ್ರ’ ಎಂಬ ಕಾದಂಬರಿಯನ್ನೂ ‘ರಾಮಾಶ್ವಮೇಧದ ಹೊಸಗನ್ನಡ ಅನುವಾದ’ ಕೃತಿಯನ್ನೂ ರಚಿಸಿದ್ದಾರೆ. ಮಂಗಳೂರಿನ ಬಾಲ ಸಾಹಿತ್ಯ ಮಂಡಳಿಯವರು ಈ ಕೃತಿಗಳನ್ನು ಪ್ರಕಟಿಸಿದ್ದಾರೆ. ‘ಚಾಣಕ್ಯ ತಂತ್ರ ೨೪ ಪರೀಚ್ಛೇದಗಳ ೧೫೯ ಪುಟ ವಿಸ್ತಾರದ, ಪ್ರೌಢ ಲೇಖನಗಳನ್ನು ಬರೆಯುತ್ತಿದ್ದರು. ಅವರ ‘ದೇಹಾರೋಗ್ಯ’ ‘ಸಂಘರಚನೆ’ ಮುಂತಾದ ಲೇಖನಗಳು ಅಮೂಲ್ಯವಾಗಿವೆ. ‘ಚಂಡಭೀಮ ಕಾವ್ಯ’ ಅವರ ಅಪ್ರಕಟಿತ ಕೃತಿ.

ಶಂಕರ ಭಟ್ಟರು ಸಾಹಿತ್ಯಕ್ಷೇತ್ರಕ್ಕೆ ಸಲ್ಲಿಸಿದ ಸೇವೆ ಹಿರಿದು. ಸರಳ ಸಜ್ಜನ ವಿದ್ವಾಂಸರೂ, ಉತ್ತಮ ಅಧ್ಯಾಪಕರೂ ಆಗಿದ್ದ ಮುಳಿಯ ಶಂಕರ ಭಟ್ಟರ ಸಾಹಿತ್ಯ ಕೈಂಕರ್ಯ ಮುಳಿಯ ಮನೆತನದ ವಿದ್ವತ್ತಿಗೆ, ಹೃದಯವಂತಿಕೆಗೆ ಉತ್ತಮ ಪುರಾವೆಗಳಾಗಿವೆ.

### ೪.೪.೬ ಉಗ್ರಾಣ ಮಂಗೇಶರಾವ್ (೧೮೯೩ – ೧೯೭೪)

ಹಳೆಗನ್ನಡ ಸಾಹಿತ್ಯದ ಉಗ್ರಾಣವೆಂದೇ ಪ್ರಸಿದ್ಧರಾದವರು ಉಗ್ರಾಣ ಮಂಗೇಶರಾಯರು. ದಕ್ಷಿಣಕನ್ನಡದ ಈ ಶತಮಾನದ ಪೂರ್ವಾಚಾರ್ಯ ಪರಂಪರೆಯಲ್ಲಿ ಕನ್ನಡದ ಉಳಿವು ಬೆಳವಿಗೆ ಕಾರಣರಾದ ಸಾರಸ್ವತ ಸಮಾಜದ ಅಧ್ಯಾಪಕ ಸಾಹಿತಿಗಳಾದ ಪಂಜೆ, ಉಳ್ಳಾಲ, ತೋನ್ಸೆ, ಉಗ್ರಾಣ ಮಂಗೇಶರಾಯರುಗಳಲ್ಲಿ ಉಗ್ರಾಣರೇ ವಯಸ್ಸಿನಲ್ಲಿ ಕಿರಿಯರು ಮತ್ತು ಪದವೀಧರರಲ್ಲದ ಉಪಾಧ್ಯಾಯರು[೭]. ಆದರೆ ಇತರ ಮೂವರು ಹಿರಿಯರಂತೆಯೇ ಇವರು ಇಂಗ್ಲಿಷ್, ಕನ್ನಡ ಕಾವ್ಯಗಳನ್ನು ತುಲನಾತ್ಮಕವಾಗಿ ವಿಮರ್ಶಿಸಬಲ್ಲವರು. ಷೇಕ್ಸ್‌ಪಿಯರನಂತೆ ಕವಿ ಕುಂಜರ, ರತ್ನಾಕರವರ್ಣಿ ಇವರಿಗೆ ಪ್ರಿಯರಾದ ಕವಿಗಳು. ಇವರೊಬ್ಬ ಸಮರ್ಥ ಶಿಕ್ಷಕ, ಶಿಕ್ಷಣ ತಜ್ಞ, ಸರಸ ಕಥಾ ನಿರೂಪಕ, ಉತ್ತಮ ವಾಗ್ಮಿ, ವೈಯಾಕರಣಿ, ಸಂಶೋಧಕ, ಗದ್ಯಪದ್ಯ ಲೇಖಕ ಪ್ರವಾಸ ಸಾಹಿತಿ

ರಸಿಕ ಸಹೃದಯಿಯಾಗಿದ್ದರು. ವೃತ್ತಿಯಲ್ಲಿ ಅಧ್ಯಾಪಕ ರಾಗಿದ್ದ ಇವರು ಶಾಲೆಯ ಸರ್ವಾಂಗೀಣ ಅಭಿವೃದ್ಧಿ, ಸಾರ್ವಜನಿಕ ಹಿತಾಸಕ್ತಿ ಕೆಲಸಗಳಿಂದ ಕೂಡಿದ ಇವರ ಬದುಕು ಬಹುಮುಖ ಸೇವೆಗಳಿಂದ ಸಾರ್ಥಕವಾಯಿತು.

ಉಗ್ರಾಣ ಮಂಗೇಶರಾಯರು ೧೮೮೩ರಲ್ಲಿ ಕುಂದಾಪುರದಲ್ಲಿ ಹುಟ್ಟಿದರೂ ಅವರು ೧೯೧೬ರಲ್ಲಿ ಆರಂಭವಾದ ಪುತ್ತೂರು ಬೋರ್ಡ್ ಶಾಲೆಯಲ್ಲಿ ಪ್ರಾರಂಭದಿಂದಲೇ ಅಧ್ಯಾಪಕರಾಗಿ ಸೇರಿದರು. ೧೯೪೮ರ ವರೆಗೆ ೩೨ ವರ್ಷಗಳ ಉಪಾಧ್ಯಾಯ ವೃತ್ತಿಯಲ್ಲಿ ಉಗ್ರಾಣರೂ ಬೆಳೆದರು. ಶಾಲೆಯೂ ಬೆಳೆಯಿತು. ಶಾಲೆಯ ಕ್ರೀಡಾಂಗಣ, ಹೆಸರಾಂತ ಪುಸ್ತಕ ಭಂಡಾರ, ಅನೇಕ ಹೊಸ ಶಾಲಾ ಕೊಠಡಿಗಳು ಉಗ್ರಾಣರ ಕರ್ತೃತ್ವ ಶಕ್ತಿಯ ದ್ಯೋತಕವಾಗಿದೆ.

ಉಗ್ರಾಣರು ಸುಮಾರು ೫೦ ಕವನಗಳನ್ನು ರಚಿಸಿದ್ದಾರೆ. ಬಾಲಸಾಹಿತಿಯಾಗಿ ಅವರು ಬರೆದ ಅನೇಕ ಶಿಶುಗೀತೆಗಳು, ನವೋದಯದ ಗೀತಗಳು, ಇಂಗ್ಲಿಷ್ ಕವನದ ಭಾಷಾಂತರಗಳು ಸಾಮಾನ್ಯವಾಗಿ ಎಲ್ಲ ಕನ್ನಡ ಪಠ್ಯಗಳಲ್ಲಿ ಕಾಣಸಿಗುತ್ತದೆ. ಹಕ್ಕಿಯ ಜಗತ್ತು, ಉದಯ ಕಾಲದ ಮುನ್ನ, ಅಲೆಗಳಾಟ ಹುಟ್ಟುಗುಣ, ತನ್ನ ಮನೆ, ನನ್ನ ಹಾಸಿಗೆ, ಮಾಯಾ ಪುಷ್ಪಂ, ಡೊಂಬರಾಟ, ಕನಕಾಂಗಿ, ಕಲಾ ಮಹಿಮೆ ಮೊದಲಾದವು ಉತ್ತಮ ಕವನಗಳು. "ಬಾರೆನ್ನ ಮುದ್ದಿನರಗಿಣಿ" ಸ್ನೇಹ ವಾತ್ಸಲ್ಯ ಪೂರಿತ ಅಪೂರ್ವವಾದ ಕವನ ಇದಕ್ಕೆ ಅವರ ಮುದ್ದುಮಗಳೇ ಸ್ಫೂರ್ತಿ ಎನ್ನುತ್ತಾರೆ.

ಹಳೆ ಹೊಸ ಸಾಹಿತ್ಯಗಳ ಸಂಘರ್ಷದಲ್ಲಿ ಸೇತುವೆಯಂತಿದ್ದು "ಹೊಸತೇನು? ಹಳತೇನು? ರಸವನೊಸರುವ ಕಬ್ಬ ರಸದಾಳಿ ಕಬ್ಬವಹುದು" ಎಂಬ ನಿರ್ಣಯದ "ಆವುದೌ ಹಿತ ನಿನಗೆ ದೇವಿ ಭಾರತಿ ಪೇಳು" ಎಂಬ ಕವನ ಅತ್ಯುತ್ತಮವಾದುದು. "ಕಾವ್ಯ ರತ್ನಾಕರ"ವೆಂಬ ನವೋದಯ ಕವನಗಳ ಸಂಕಲನ, "ಸಾಹಿತ್ಯ ಮಣಿಮಾಲೆ" ಎಂಬ ಪೂರ್ವ ಕವಿಗಳಿಂದ ಆಯ್ದ ಕಾವ್ಯ ಭಾಗಗಳ ಸಂಕಲನವೂ ಪಠ್ಯಗಳಾಗಿ ಅನೇಕ ಆವೃತ್ತಿಗಳನ್ನು ಕಂಡಿದೆ. ಉಗ್ರಾಣರ ವ್ಯಕ್ತಿತ್ವ ಸಿದ್ಧಿಯ ಹೆಗ್ಗುರುತೆಂದರೆ ಅವರು ೮ ತಾಳೆ ಓಲೆಗಳ ಪರಿಶೀಲನದಿಂದ ೧೯೨೧ರಿಂದ ೧೯೨೮ರ ವರೆಗೆ ಸಂಪಾದಿಸಿದ ಸಮಗ್ರ ಭರತೇಶ ವೈಭವ ಗ್ರಂಥ. ಕಾವ್ಯ ರಚನೆಯಲ್ಲಿ ಅವರದು ಸಾಂಪ್ರದಾಯಿಕ ದೃಷ್ಟಿ, "ವೀರ ಚೌಪದಿ" ಎಂಬ ಛಂದೋಬಂಧ ಅವರದೇ ಆವಿಷ್ಕಾರ.

ಉಗ್ರಾಣ ಮಂಗೇಶರಾಯರ ಅಗಾಧ ಪಾಂಡಿತ್ಯವನ್ನು ಕಾಣುವುದು ಅವರ 'ನೇಮಿನಾಥ ಪುರಾಣ', 'ಜಯನೃಪ ಕಾವ್ಯ', 'ಕುಮಾರವ್ಯಾಸ ಭಾರತ', 'ಅದ್ಭುತ ರಾಮಾಯಣ' ಮೊದಲಾದ ಹಳಗನ್ನಡ ಕಾವ್ಯಗಳ ಮಿವರ್ಶೆಗಳಲ್ಲಿ. ಬಸವೇಶ್ವರ, ಗೊಮ್ಮಟ, ಆಂಧ್ರಕುಲದ ರಾಮರಾಜ, ಕವಿಶಿಷ್ಯ

ಮೊದಲಾದ ವ್ಯಕ್ತಿಚಿತ್ರಗಳೂ, "ಕಾವ್ಯಕ್ಕೆ ಅಲಂಕಾರದ ಅವಶ್ಯಕತೆ" ಎಂಬ ತರ್ಕಬದ್ಧವಾದ ಪ್ರಬಂಧವೂ, ಬಾಹುಬಲಿಯ ಕುರಿತಾಗಿ ಬರೆದ ದೀರ್ಘ ಲೇಖನವೂ ಮುಖ್ಯವಾಗಿವೆ.

ಉಗ್ರಾಣರು ಪಂಜೆಯವರಂತೆ ಆರಂಭದ ಕತೆಗಾರರು, 'ಚಿಕ್ಕಪ್ಪನ ಚಿಕ್ಕ ಕಥೆಗಳು', 'ಎಚ್ಚಣ್ಣನ ಕೀರ್ತಿಯ ನಿಚ್ಚಣಿಕೆ' ಸ್ವತಂತ್ರ ಸತ್ವವುಳ್ಳ ಕಥೆಗಳಾದರೆ, ಕುರುಡನಿಗೆ ಕಣ್ಣು ಬರುವುದೇ, ಕಾಮರೂಪ, ಚಿಕ್ಕೊಡೆಯರು ಮೊದಲಾದ ಅನುವಾದಗಳು ಹೊಸಗನ್ನಡಕ್ಕೆ ಅವರ ಕೊಡುಗೆಗಳು. ಧರ್ಮಾಮೃತ, ವಡ್ಡಾರಾಧನೆಗಳಿಂದಲೂ ಹಲವು ಕಥೆಗಳನ್ನು ಹೊಸಗನ್ನಡದಲ್ಲಿ ರೂಪಾಂತರಿಸಿರುವರು. "ಡಾನ್ ಕ್ವಿಕ್ಸೋಟ್" ಎಂಬ ಕಾದಂಬರಿಯನ್ನು ಮಕ್ಕಳಿಗಾಗಿಯೇ ಭಾಷಾಂತರಿಸಿರುವರು. ಜೀವನ್ಮೃತ, ಲೋಭಿಪ್ರಹಸನ, ಮೂರು ಕಾಗೆ ಕಾರಿದರು ಎಂಬ ನಾಟಕಗಳನ್ನು ಮಕ್ಕಳಿಗಾಗಿಯೇ ಬರೆದು ಅವರಿಂದ ಆಡಿಸಿದರು. ರಾಮನ್ ನಂಬಿಯಾರ್, ದಾಮೋದರ ಬಾಳಿಗಾ, ಶ್ರೀನಿವಾಸ ಕಿಣಿ ಇವರ ಸಹಭಾಗಿತ್ವದಲ್ಲಿ ಅವರು ಸಂಪಾದಿಸಿದ ನೂತನ ಪ್ರೌಢ ಪಾಠ ಮಾಲಿಕೆಗಳು, ಕನ್ನಡ ಪಾಠ ಪುಸ್ತಕಾವಳಿಗಳು ಕನ್ನಡದ ಕಲಿಕೆಯಲ್ಲಿ ಇತಿಹಾಸವನ್ನೇ ಸೃಷ್ಟಿಸಿದುವು. ಈ ಜಿಲ್ಲೆಯಲ್ಲಿ ಅವರೊಬ್ಬ ಖ್ಯಾತ, ಸಮರ್ಥ ಪಠ್ಯ ಪುಸ್ತಕ ಸಂಪಾದಕ ರೆನಿಸಿದ್ದರು. ಮಕ್ಕಳ ಮನವನ್ನರಿತ ಅವರಿಂದ ರಚಿತವಾದ ನೂತನ ಬಾಲ ವ್ಯಾಕರಣ ಮತ್ತು ನೂತನ ಶಾಲಾ ವ್ಯಾಕರಣಗಳು ಸರಳವಾಗಿದ್ದು ಮಕ್ಕಳಿಗೆ ಅತ್ಯಂತ ಉಪಯುಕ್ತವಾಗಿದ್ದವು. ಶಬ್ದಶುದ್ಧತೆ, ಅರ್ಥ ಖಚಿತತೆ, ಅಪೂರ್ವ ಶಬ್ದ ಪ್ರಯೋಗಗಳ ಬಗ್ಗೆ ಅವರಿಗೆ ಎಷ್ಟೊಂದು ಕಾಳಜಿ ಇದ್ದಿತೆಂದರೆ ಕಿಟ್ಟೆಲ್ ಶಬ್ದಕೋಶದಲ್ಲಿ ಅನೇಕ ಶಬ್ದಗಳನ್ನು ನಿರ್ದಿಷ್ಟ ಪ್ರಯೋಗಗಳನ್ನು ಹಳೆಗನ್ನಡ ಸಾಹಿತ್ಯದ 'ಆ'ಕಾರದಿಂದ ಪುಷ್ಟಗೊಳಿಸಿ ತಿದ್ದಿದುದನ್ನು ಕಾಣಬಹುದು[೮]. ಉಗ್ರಾಣರು ತಮ್ಮ ೭೧ನೆಯ ವಯಸ್ಸಿನಲ್ಲಿ ೧೯೭೪ರಲ್ಲಿ ಅಸ್ತಂಗತರಾದರು.

### ೪.೪.೭ ಕಡವ ಶಂಭುಶರ್ಮ (೧೮೯೫ – ೧೯೬೪)

ಪುತ್ತೂರಿಗೆ ಸಮೀಪದ ಕಬಕ ಗ್ರಾಮದ ಕಡವ ಮನೆಯಲ್ಲಿ ಕೃಷ್ಣ ಭಟ್ಟ ಮತ್ತು ಗುಣವತಿ ದಂಪತಿಗಳಿಗೆ ದಿನಾಂಕ ೮-೮-೧೮೯೫ರಲ್ಲಿ ಶಂಭುಶರ್ಮರು ಜನಿಸಿದರು. ಆರಂಭದ ಶಿಕ್ಷಣವನ್ನು ತಂದೆಯವರಿಂದ ಪಡೆದು ಅನಂತರ ನೆರೆಗ್ರಾಮದ ಮಿತ್ತೂರು ರಾಮ ಜೋಯಿಸರಿಂದ ಕಾವ್ಯ, ವ್ಯಾಕರಣ ಗಳನ್ನು ಅಭ್ಯಸಿಸಿದರು. ಎಳವೆಯಿಂದಲೇ ಚುರುಕು ಬುದ್ಧಿಯ ಶಂಭುಶರ್ಮರು ಪ್ರಶ್ನಿಸುವ ಮತ್ತು ಚರ್ಚಿಸುವ ಆಸಕ್ತಿಯುಳ್ಳವರಾಗಿದ್ದರು. ಸಾಮಾಜಿಕ ನ್ಯೂನಾತಿರಿಕ್ತಗಳನ್ನು ಸದಾ ವಿರೋಧಿಸುತ್ತಿದ್ದ ಅವರು ಒಮ್ಮೆ ಮುಖಂಡರೊಬ್ಬರ ಸಣ್ಣತನವನ್ನು ಖಂಡಿಸಿದ ನಿಮಿತ್ತ. ಅನೇಕರ ಅಂಧಾನುಕರಣೆಗೆ ಹೇಸಿ ಹುಟ್ಟೂರನ್ನು ಬಿಟ್ಟು ಮದ್ರಾಸಿಗೆ ತೆರಳಿದರು[೧೩]. ಸದಾ ಕಾಡುತ್ತಿದ್ದ ಬಡತನಕ್ಕೆ

ಬಾಗದ ಶರ್ಮರು ಮೈಲಾಪುರದ ಸಂಸ್ಕೃತ ಮಹಾವಿದ್ಯಾಲಯದಲ್ಲಿ ಅಧ್ಯಯನ ನಡೆಸಿ ಅದ್ವೈತ ವೇದಾಂತ ಶಿರೋಮಣಿ ಪದವಿಯನ್ನು ೧೯೨೦ರಲ್ಲಿ ಗಳಿಸಿದರು. ಅದರೊಂದಿಗೆ ತಮಿಳು, ತೆಲುಗು, ಇಂಗ್ಲಿಷ್, ಹಿಂದಿ ಭಾಷೆಗಳನ್ನು ಕಲಿತುಕೊಂಡರು.

ಅನಂತರ ನಾಲ್ಕು ವರ್ಷಗಳ ಕಾಲ ಮದ್ರಾಸಿನ ಪ್ರಾಚ್ಯ ಸಂಶೋಧನಾ ಗ್ರಂಥ ಭಂಡಾರದಲ್ಲಿ ಉದ್ಯೋಗಿಗಳಾಗಿದ್ದ ಶರ್ಮರು ಹಳೆಯ ತಾಡಪತ್ರ ಗ್ರಂಥಗಳ ಪರಿಶೀಲನೆ ಮತ್ತು ಸಂಶೋಧನೆಯ ಕಾರ್ಯದಲ್ಲಿ ನಿರತರಾಗಿದ್ದರು. ಆ ಅವಧಿಯಲ್ಲಿ ಮದ್ರಾಸಿನ ಡಾಕ್ಟರೊಬ್ಬರ ಪ್ರಚೋದನೆಯಿಂದ ಆಯುರ್ವೇದದಲ್ಲಿ ಆಸಕ್ತರಾಗಿ ಅಷ್ಟಾಂಗ ಹೃದಯ, ಚರಕ, ಶುಶ್ರುತರನ್ನು ಕುರಿತು ಆಳವಾದ ಅಧ್ಯಯನ ನಡೆಸಿದರು. ಗಾಂಧೀಜಿಯವರ ತತ್ವಗಳು ಮತ್ತು ಸ್ವಾತಂತ್ರ್ಯ ಸಂಗ್ರಾಮಗಳ ಪ್ರಭಾವವೂ ಶಂಭುಶರ್ಮರಲ್ಲಿ ಆ ಕಾಲದಲ್ಲೇ ಚಿಗುರೊಡೆಯಲು ತೊಡಗಿತ್ತು. ಗೃಹಸ್ಥರಾಗಿದ್ದ ಶಂಭುಶರ್ಮರ ಮೊದಲ ಪತ್ನಿ ಹವಾವೈಪರೀತ್ಯದ ಪರಿಣಾಮವಾಗಿ ಮಡಿದಾಗ ವ್ಯಥಿತರಾದ ಶರ್ಮರು ಮದ್ರಾಸಿನ ಉದ್ಯೋಗವನ್ನು ತ್ಯಜಿಸಿ ಪುತ್ತೂರು ಸೇರಿದರು. ಊರು ಸೇರಿದ ಆರಂಭದಲ್ಲಿ ಕಾಸರಗೋಡಿನ ಬೋರ್ಡ್ ಹೈಸ್ಕೂಲಿನಲ್ಲಿ ಕೆಲವು ತಿಂಗಳ ಕಾಲ ಅಧ್ಯಾಪಕರಾಗಿದ್ದು, ೧೯೨೫ರಲ್ಲಿ ಸಂಸ್ಕೃತ ಪದವಿ ಗಳಿಸಿದ ಶಂಭುಶರ್ಮರು ಪುತ್ತೂರು ಬೋರ್ಡ್ ಹೈಸ್ಕೂಲಿನಲ್ಲಿ ಕನ್ನಡ ಪಂಡಿತರಾಗಿ ಅಧ್ಯಾಪನವನ್ನಾರಂಭಿಸಿದರು. ಕೆಲವು ವರ್ಷಗಳ ಅನಂತರ ಕನ್ನಡ 'ವಿದ್ವಾನ್' ಪದವಿಗಳಿಸಿದರು. ಈ ವಿದ್ಯಾಸಂಸ್ಥೆಯಲ್ಲಿ ಕನ್ನಡ ಬೋಧಕರಾಗಿ ೧೯೫೦ರಲ್ಲಿ ನಿವೃತ್ತರಾದರು. ೭೯ ವರ್ಷಗಳ ಸಾಧನೆಯ ಶಂಭುಶರ್ಮರ ಸಾರ್ಥಕ ಬದುಕು ದಿನಾಂಕ ೩-೫-೧೯೭೪ ರಂದು ಕೊನೆಗೊಂಡಿತು.

ಗಾಂಧೀಜಿಯವರ ಚಳವಳಿಗಳಿಂದ ಪ್ರಭಾವಿತರಾದ ಶರ್ಮರು ಪುತ್ತೂರಿನಲ್ಲಿ ದಲಿತರ ಶೋಷಣೆಯನ್ನು ಪ್ರತಿಭಟಿಸುವ ಮತ್ತು ಅವರ ಹಿತ ಸಾಧನೆಯ ಉದ್ದೇಶದಿಂದ 'ವಿಶ್ವಂಭರ ಸಂಘ' ಸ್ಥಾಪಿಸಿ ಶೋಷಣೆಯ ವಿರುದ್ಧ ಪದ್ಯರೂಪದ ಕರಪತ್ರಗಳನ್ನು ಹಂಚಿ ಸರಕಾರದ ವಕ್ರದೃಷ್ಟಿಗೆ ಗುರಿಯಾದರು. ದೃಢ ಶರೀರದ ಶಂಭುಶರ್ಮರು ಸದಾ ಖದ್ದರ್‌ಧಾರಿಗಳು. ಶ್ರೀತಾಳ ಕೊಡೆ ಹಿಡಿದೇ ನಡೆದಾಡಿದವರು. ವೈಯಕ್ತಿಕವಾಗಿ ಅತ್ಯಂತ ಸರಳ ಜೀವನ ನಡೆಸಿದವರು.

ಶಂಭುಶರ್ಮರು ಮದ್ರಾಸಿನಲ್ಲಿ ವಿದ್ಯಾರ್ಥಿಯಾಗಿದ್ದಾಗಲೇ ಶ್ರೀ ಹರ್ಷನ 'ನಾಗಾನಂದ ನಾಟಕಂ' (೧೯೧೩) ಮತ್ತು ಭಾಸನ 'ಪ್ರತಿಮಾ ನಾಟಕಂ'ಗಳನ್ನು ಭಾಷಾಂತರಿಸಿದ್ದರು. ಗಾಂಧೀ ಅಭಿಮಾನಿಗಳಾದ ಅವರು ಬರೆದ 'ಗಾಂಧೀ ನಿರ್ವಾಣಂ' ಖಂಡಕಾವ್ಯವು ದ್ವಿತೀಯಾಕ್ಷರ ಪ್ರಾಸವಿಲ್ಲದ ವಾರ್ಧಕ ಷಟ್ಪದಿಯಲ್ಲಿ ಗಾಂಧೀಜಿಯವರ ಕೊನೆಯನ್ನು ಚಿತ್ರಿಸುವ ಸುಂದರ ಕಾವ್ಯ. ಅಳಿಕೆಯ ಲೋಕಸೇವಾ ವೃಂದವು ಇದನ್ನು ೧೯೭೨ರಲ್ಲಿ ಪ್ರಕಟಿಸಿದೆ. 'ಗಾಂಧೀಲಹರಿ' ಮತ್ತು

'ಗಾಂಧೀವಿಜಯಂ' ವೃತ್ತಗಳಲ್ಲಿ ರಚಿತವಾದ ಹಸ್ತಪ್ರತಿ ರೂಪದಲ್ಲಿರುವ ಕಾವ್ಯಗಳು. ಪುತ್ತೂರು ದಸರಾ ಮಹೋತ್ಸವ ಸ್ವಾಗತ ಭಾಷಣದ ನೀಳ್ಗವನ (೧೯೨೪), ಮುಳಿಯ ತಿಮ್ಮಪ್ಪಯ್ಯನವರ 'ಶ್ರದ್ಧಾಂಜಲಿ'ಯ ೬೨ ಕಂದಗಳ 'ತಿಮ್ಮಪ್ಪಯ್ಯ ಸ್ಮಾರಕಂ' ಕೃತಿಗಳು ಶರ್ಮರ ಮನೋಧರ್ಮವನ್ನು ಸ್ಪಷ್ಟಪಡಿಸುತ್ತವೆ. 'ತುಳು ದೇಶ ಭಾಷಾ ವಿಚಾರವು' ಕಡವ ಶಂಭುಶರ್ಮರ ಸಂಶೋಧನ ಕೃತಿ. ನಲ್ಕೆಯವರಿಂದ ಸಂಗ್ರಹಿಸಿದ ಪಾಡ್ದನಗಳನ್ನು ಆಧರಿಸಿ, ತುಳುನಾಡಿನ ಅರಸರ ಸ್ಥಳನಾಮಗಳ, ಮತಧರ್ಮ ಗ್ರಂಥಗಳ ಪರಿಶೀಲನೆಯಿಂದ ರಚಿಸಿದ ಈ ಕೃತಿಗೆ ಮದ್ರಾಸು ಸರಕಾರದ ಬಹುಮಾನ ಲಭಿಸಿದೆ. ಅವರ ಪುತ್ರ ಕೆ. ವಿ. ಶರ್ಮರು ಈ ಪುಸ್ತಕವನ್ನು ಪ್ರಕಟಿಸಿದ್ದಾರೆ. ಅಶ್ವಘೋಷ ಕವಿಯ 'ಸೌಂದರನಂದ'ವನ್ನು ಮೂಲದ ಕ್ರಮಕ್ಕೆ ಅನುಗುಣವಾಗಿ ಹಳಗನ್ನಡ ಮತ್ತು ನಡುಗನ್ನಡಗಳಲ್ಲಿ ಪದ್ಯಾನುವಾದ ಮಾಡಿದ್ದಾರೆ.

ಭಾಷೆ, ಛಂದಸ್ಸು, ಬೌದ್ಧಧರ್ಮ ವಿವೇಚನೆಗಳ ಸೊಗಸಾದ ಈ ಕಾವ್ಯವನ್ನು ಕನ್ನಡ ಪ್ರಪಂಚ ಪ್ರಕಾಶನ ಪ್ರಕಟಿಸಿದೆ (೧೯೫೬) ಇದಕ್ಕೂ ಮದ್ರಾಸ್ ಸರಕಾರದ ಬಹುಮಾನ ದೊರಕಿದೆ. ಭಗವದ್ಗೀತೆ ಯನ್ನು ಕನ್ನಡ ಅನುಷ್ಟುಪ್ ಛಂದಸ್ಸಿನಲ್ಲಿ ಬರೆದ ವೃತ್ತಾನುವೃತ್ತ ಅನುವಾದ, ಉಪನಿಷತ್ತುಗಳ ಸಾರ ಸಂಗ್ರಹ 'ಮಹಾಕಾವ್ಯ ರತ್ನಾವಲಿ'ಯ ಕನ್ನಡಾನುವಾದ, 'ರಘುವಂಶ'ದ ಅನುವಾದ, ಕನ್ನಡ ನಿಘಂಟಿಗಾಗಿ ಬರೆದ ಶಬ್ದಾರ್ಥ ವಿಶ್ಲೇಷಣೆಯ ಹಸ್ತಪ್ರತಿಗಳು ಈಗಲೂ ಲಭ್ಯವಾಗಿವೆ. 'ಬುದ್ಧ ಚರಿತಂ', 'ತುಳಸೀದಾಸ ರಾಮಾಯಣಂ' ಕಾವ್ಯಗಳನ್ನು ಸ್ವಲ್ಪಭಾಗ ಅನುವಾದಿಸಿ ದಾಖಲೆಗಳಿವೆ. ಶರ್ಮರು ಉಗ್ರಾಣ ಮಂಗೇಶ ರಾಯರಿಗೆ 'ಭರತೇಶ ವೈಭವ'ದ ಸಂಪಾದನಾ ಕಾರ್ಯದಲ್ಲಿ ನೆರವು ನೀಡಿದ್ದರು.

ಸಂಸ್ಕೃತ ಭಾಷೆಯಲ್ಲಿ 'ಶ್ರೀ ಗಾಂಧಿ ನಿರ್ವಾಣಮ್', 'ಶ್ರೀ ಗೋರಕ್ಷ ರಕ್ಷಾ ಸ್ತೋತ್ರಂ'. 'ಕದಲೀ ಯೋಗಿ–ರಾಜ–ಚರಿತ್ರಂ' (೧೯೫೭), ಸಾಹಿತ್ಯ ಅಕಾಡಮಿ, ನವದೆಹಲಿ ಪ್ರಕಟಿಸುತ್ತಿದ್ದ ದ್ವೈವಾರ್ಷಿಕ ಸಂಚಿಕೆ 'ಪ್ರತಿಭಾ'ದಲ್ಲಿ ಶರ್ಮರು ಡಿ.ವಿ.ಜಿ. ಯವರ 'ಮಂಕುತಿಮ್ಮನ ಕಗ್ಗಂ' ಎಂಬ ಶೀರ್ಷಿಕೆಯಲ್ಲಿ ಪ್ರಕಟಿಸಿದ್ದಾರೆ. ಖುರಾನುವಿನ ಮಾತುಗಳಿಗೆ ಉಪನಿಷತ್ತು ಮತ್ತು ಭಗವದ್ಗೀತೆಗಳ ಸಮಾನಾರ್ಥಕ ಶ್ಲೋಕಗಳನ್ನು ಅವರು ಉದಾಹರಿಸುತ್ತಿದ್ದರು.

'ಕದಲೀ ಮಂಜುನಾಥ ಮಹಾತ್ಮಂ' (೧೯೫೪), ಸಿದ್ಧ ಸಂಪ್ರದಾಯದ ಯೋಗಶಾಸ್ತ್ರ ರಹಸ್ಯ ಗ್ರಂಥ 'ಸಿದ್ಧ ಸಿದ್ಧಾಂತ ಪದ್ಧತಿ', 'ನವನಾಥ ಕಥಾ', 'ಚರ್ಪಟನಾಥ ಶತಕಂ', 'ಸಿದ್ಧ ಸಿದ್ಧಾಂತ ಸಂಗ್ರಹ', 'ಅಮರ ರೌಘ ಶಾಸನಂ', 'ಯೋಗ ಬೀಜಂ ಮತ್ತು ಗೋರಕ್ಷ ಪದ್ಧತಿ', 'ಅಮರ ಕಥಾ' – ಅಮರಾಲೋಕ ಕಾವ್ಯಂ' 'ಆತ್ಮವಾದ' – ಮುಂತಾದ ಸಂಸ್ಕೃತ ಗ್ರಂಥಗಳನ್ನು ಕನ್ನಡದಲ್ಲಿ ಸರಳವಾಗಿ ಅನುವಾದಿಸಿ, ವಿವರಣೆಗಳನ್ನು ಒದಗಿಸಿ ಕನ್ನಡಿಗರಿಗೆ ನಾಥಪಂಥದ ಪರಿಚಯವನ್ನು ಮಾಡಿದ್ದಾರೆ.

ಕಡವ ಶಂಭು ಶರ್ಮರು ಏಕಾಂಗ ಸಾಹಸಿಗಳು, ಸಾಮಾಜಿಕ ಚಟುವಟಿಕೆಗಳು ಮತ್ತು ಸಾಹಿತ್ಯ ಕೈಂಕರ್ಯಗಳು ಸ್ವಪ್ರತಿಷ್ಠೆಯಿಲ್ಲದ, 'ಬಹುಜನ ಹಿತಾಯ ಬಹುಜನ ಸುಖಾಯ' ದೃಷ್ಟಿಯ ಪ್ರಯೋಗಗಳಾಗಿದ್ದುವು. ಸ್ವಾರ್ಥದ ಲಾಭದಾಯಕ ಉದ್ದೇಶ ಅವರಿಗೆ ಮುಖ್ಯವಾಗಿರಲಿಲ್ಲ. ಪುತ್ತೂರಿನಲ್ಲಿ 'ಹಿತ್ತಲ ಗಿಡವಾಗಿ' ಬಡತನದಿಂದ ಬಡವಾಗದೆ, ಸಮಕಾಲೀನ ಬದುಕಿಗೆ ಸ್ಪಂದಿಸಿದ, ದೂರದೃಷ್ಟಿಯ ಚಿಂತನೆಗಳ ಸಾಕಾರವಾಗಿದ್ದ ಪಂಡಿತ ಕಡವ ಶಂಭು ಶರ್ಮರ ಪ್ರಯೋಗಶೀಲ ಬದುಕು ಸಾಹಿಸಿಯೊಬ್ಬನ ವೀರಗಾಥೆಯಾಗಿದೆ. ಅವರ ಕೃತಿಗಳು ಪಂಡಿತ ಪರಂಪರೆಯ ವಿದ್ವಾಂಸನೊಬ್ಬನ ಪ್ರೌಢಿಮೆಗೆ ಸಾಕ್ಷಿಗಳಾಗಿವೆ.

**೪.೪.೮ ಎ. ಪಿ. ಸುಬ್ಬಯ್ಯ (೧೯೦೧ – ೧೯೭೭)**

ಪುತ್ತೂರಿನಲ್ಲಿ ಕನ್ನಡ ಕಟ್ಟಿ ಬೆಳೆಸಿದ ಹಿರಿಯರ ಸಾಲಿನಲ್ಲಿ ಅಡಮನೆ ಪಳತಡಕ  ಸುಬ್ಬಯ್ಯ ನವರದು ಗಣ್ಯಸ್ಥಾನ. ಲೇಖಕರಾಗಿ, ಭಾಷಾಂತರಕಾರರಾಗಿ, ಸಂಘಟಕರಾಗಿ, ಪುತ್ತೂರು ಕರ್ನಾಟಕ ಸಂಘದ ಅಧ್ಯಕ್ಷರಾಗಿ ದುಡಿದ ಕೀರ್ತಿ ಎ.ಪಿ. ಸುಬ್ಬಯ್ಯನವರದು.

ಪುತ್ತೂರು ಸನಿಹದ ಆರ್ಯಾಪಿನ ಮರಿಕೆಯಲ್ಲಿ ತಮ್ಮ ಪಾಲಿಗೆ ಬಂದ ಪಿತ್ರಾರ್ಜಿತ ಆಸ್ತಿಯಲ್ಲಿ ನೆಲೆಸಿದ ಇವರಿಗೆ ಮೊಳಹಳ್ಳಿ ಶಿವರಾವ್ ಬೀರಿದ ಪ್ರಭಾವಗಳು ಇವರ ಜೀವನ ಪಥವನ್ನು ಬದಲಾಯಿಸಿದವು ಚಾರ್ಲ್ಸ್ ಡಿಕನ್ಸ್‌ನ David Copperfield ಕಾದಂಬರಿಯನ್ನು ಸುಬ್ಬಯ್ಯನವರು ಕನ್ನಡಕ್ಕೆ ಅನುವಾದಿಸಿ 'ಡೇವಿಡ್ ಕಾಪರ್ ಫೀಲ್ಡ್' ಎಂಬ ಹೆಸರಿನಿಂದ ಪ್ರಕಟಿಸಿದ್ದಾರೆ.

ಕನ್ನಡದಲ್ಲಿ ಮುಖ್ಯವಾಗಿ ಇವರ ಇನ್ನೆರಡು ಕೃತಿಗಳನ್ನು ಕಾಣಬಹುದು. ಮೊದಲನೆಯದು ರಾಜಾಜಿಯವರ ಭಾಷಣಗಳು, ಎರಡನೆಯದು ಗುರುಗಳೊಡನೆ ಸಂವಾದ ಹಾಗೂ ಅನುವಾದಗಳು.

ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳಲ್ಲಿ ಸ್ವತಂತ್ರವಾಗಿ ಬರೆಯಬಲ್ಲವರಾದ ಎ. ಪಿ. ಸುಬ್ಬಯ್ಯನವರು ಶೈಲಿಯಲ್ಲಿ ಸ್ಫುಟತೆಗೆ ಪ್ರಾಧಾನ್ಯವಿತ್ತವರು[೧೮]. ಫ್ರೆಂಚ್ ಕಾದಂಬರಿಕಾರ ವಿಕ್ಟರ್ ಹ್ಯೂಗೋನ Les - Miserables ಇವರ ಮೇಲೆ ಗಾಢ ಪ್ರಭಾವ ಬೀರಿತ್ತು. ಈ ಕೃತಿ ಕನ್ನಡಿಗರಿಗೆ ತಲುಪಲೇಬೇಕೆಂಬ ಅದಮ್ಯ ತುಡಿತದಿಂದ 'ದುಃಖಾರ್ತರು' ಎಂಬ ಹೆಸರಿನಲ್ಲಿ ೧೯೫೭ರಲ್ಲಿ ಅನುವಾದಿಸಿದರು.

ಶೃಂಗೇರಿಯ ಜಗದ್ಗುರುಗಳಾದ ಶ್ರೀ ಚಂದ್ರಶೇಖರ ಭಾರತೀಯರ ಬಗ್ಗೆ ಎ. ಪಿ. ಸುಬ್ಬಯ್ಯ ನವರಿಗೆ ಭಕ್ತಿ ಗೌರವಗಳಿತ್ತು. ಶ್ರೀ ಕೃಷ್ಣಸ್ವಾಮಿ ಅಯ್ಯರ್ ಬರೆದ 'ಡಯಾಲಾಗ್ಸ್ ವಿತ್ ದಿ

ಗುರು' ಎಂಬ ಪುಸ್ತಕವನ್ನು 'ಗುರುಗಳೊಡನೆ ಸಂವಾದ' ಎಂಬ ಹೆಸರಿನಲ್ಲಿ ಅನುವಾದಿಸಿದರು. ರಾಜಾಜಿಯವರ ದೂರದರ್ಶಿತ್ವದ ಚಿಂತನೆಗಳುಳ್ಳ ಇಂಗ್ಲಿಷ್ ಪುಸ್ತಕವನ್ನು 'ಭಾರತಕ್ಕೆ ಬೇಕಾದ ಕೃಷಿ ಯೋಜನೆ' ಎಂಬ ಹೆಸರಿನಲ್ಲಿ ಪ್ರಕಟಿಸಿದರು. ರಾಜಾಜಿಯವರ ಭಾಷಣ ಮತ್ತು ಲೇಖನಗಳನ್ನು ಸಂಗ್ರಹಿಸಿ ಅನುವಾದಿಸಿದ ಪುಸ್ತಕ 'ಸತ್ಯಮೇವ ಜಯತೇ'. ಎ. ಪಿ. ಸುಬ್ಬಯ್ಯನವರು ೧೯೭೭ರ ಡಿಸೆಂಬರ್ ತಿಂಗಳಲ್ಲಿ ಕೊನೆಯುಸಿರೆಳೆದರು.

**೪.೪.೯ ಮಚ್ಚಿಮಲೆ ಶಂಕರನಾರಾಯಣ ರಾವ್** (೧೯೦೧ – ೧೯೬೩)

ಪುತ್ತೂರಿನ ದಕ್ಷಿಣಕ್ಕಿರುವ ಪರ್ಲಡ್ಕದ ಆಚೆಗಿನ ಪ್ರದೇಶವೇ ಮಚ್ಚಿಮಲೆ. ಅಲ್ಲಿಯ ಶ್ರೀಮಂತ ಶಿವಳ್ಳಿ ಬ್ರಾಹ್ಮಣ ಮನೆತನದಲ್ಲಿ ವೆಂಕಟರಮಣ ಉಂಗ್ರುಪುಳಿತ್ತಾಯ ಕಾವೇರಿ ಅಮ್ಮ ದಂಪತಿಗಳ ದ್ವಿತೀಯ ಪುತ್ರನಾಗಿ ೧೯೦೧ರಲ್ಲಿ ಶಂಕರನಾರಾಯಣ ರಾಯರು ಜನಿಸಿದರು. ಪುತ್ತೂರಲ್ಲಿ ಆರಂಭದ ವಿದ್ಯಾಭ್ಯಾಸದ ಬಳಿಕ ಮಂಗಳೂರಿನ ಕೆನರಾ ಪ್ರೌಢ ಶಾಲೆ ಮತ್ತು ಸರಕಾರಿ ಕಾಲೇಜಿನಲ್ಲಿ ಇವರ ವ್ಯಾಸಂಗ ಮುಂದುವರಿಯಿತು.

ಮೊದಲು ಪಂಚಾಯತ್ ಮೇಲ್ವಿಚಾರಕ ಆಗಿ ಕೆಲಸಕ್ಕೆ ಸೇರಿದ ಶ್ರೀ ಶಂಕರನಾರಾಯಣ ರಾಯರು ಬಳಿಕ ದಕ್ಷಿಣ ಕನ್ನಡ ಜಿಲ್ಲಾ ಬೋರ್ಡಿನಲ್ಲಿ ಪ್ರಥಮ ದರ್ಜೆ ಗುಮಾಸ್ತನಾಗಿ ಹಲವು ವರ್ಷ ದುಡಿದರು. ೧೯೫೭ರ ಸುಮಾರಿಗೆ ಭಾರತೀಯ ಜೀವ ವಿಮಾ ನಿಗಮದಲ್ಲಿ ಕ್ಷೇತ್ರಾಧಿಕಾರಿ ಆಗಿ ಉದ್ಯೋಗ ಹಿಡಿದರು. ೧೯೬೩ರಲ್ಲಿ ಕಛೇರಿಗೆಂದು ಸಿದ್ಧರಾಗಿ ಹೊರಟವರು ಹೃದಯಾಘಾತದಿಂದ ಅಸುನೀಗಿದರು[೯].

ಚಿಕ್ಕಂದಿನಲ್ಲಿ ಕಾಲ್ನಡಿಗೆಯಿಂದ ಸಂಚರಿಸುವಾಗ ಸುತ್ತಲಿನ ಪ್ರಕೃತಿಯ ಚೆಲುವಿಗೆ ಶಂಕರನಾರಾಯಣ ರಾಯರು ಕೆಲವೊಮ್ಮೆ ಭಾವಪರವಶರಾಗುತ್ತಿದ್ದರು. ಪುರಾಣ, ಯಕ್ಷಗಾನ, ಸಾಹಿತ್ಯದ ಬಗ್ಗೆ ವಿಶೇಷ ಒಲವಿದ್ದ ಇವರು ಯಕ್ಷಗಾನ ಕಾರ್ಯಕ್ರಮಕ್ಕಾಗಿ ತನ್ನ ಸಹೋದರರು ಹಾಗೂ ಆಳುಗಳೊಂದಿಗೆ ೮-೧೦ ಮೈಲು ನಡೆದೇ ಹೋಗಿ ಬರುತ್ತಿದ್ದರು.

ಇವರ ಮೊದಲ ಉದ್ಯೋಗದಲ್ಲಿ ಸಂಚಾರಕ್ಕೆ ವಿಪುಲ ಅವಕಾಶವಿತ್ತು. ಜೀವವಿಮಾ ನಿಗಮದಲ್ಲಿ ಉದ್ಯೋಗಿಯಾಗಿದ್ದಾಗ ಸ್ವಂತ ಮೋಟಾರ್ ಕಾರನ್ನು ಹೊಂದಿದ್ದ ಇವರು ಹಲವಾರು ಪ್ರೇಕ್ಷಣೀಯ ಸ್ಥಳಗಳನ್ನು ಸಂದರ್ಶಿಸುತ್ತಿದ್ದರು. ಮೊಳಹಳ್ಳಿ ಶಿವರಾಯರ ಮತ್ತು ಶಿವರಾಮ ಕಾರಂತರ ನೇತೃತ್ವದಲ್ಲಿ ನಡೆಯುತ್ತಿದ್ದ ಪುತ್ತೂರಿನ ನಾಡಹಬ್ಬದಲ್ಲಿ ಭಾಗವಹಿಸುತ್ತಿದ್ದ ಇವರಿಗೆ ಸಾಹಿತಿಗಳ ಒಡನಾಟ ದೊರೆಯುತ್ತಿತ್ತು. ಇವರು ಪುತ್ತೂರನ್ನು ಬಿಟ್ಟು ಮಂಗಳೂರಿನ ಕದ್ರಿಯಲ್ಲಿ ನೆಲೆನಿಂತಾಗಲೂ

ಕಡೆಂಗೋಡ್ಲು ಶಂಕರಭಟ್, ಸೇಡಿಯಾಪು ಕೃಷ್ಣ ಭಟ್, ಕಯ್ಯಾರ ಕಿಂಞಣ್ಣ ರೈ ಮೊದಲಾದ ಸಾಹಿತಿಗಳ ಗೆಳೆತನವಿತ್ತು.

ಸಹಜ ಕವಿ ಹೃದಯದ ಮಚ್ಚಿಮಲೆಯವರು ತನ್ನ ಅನುಭವವನ್ನು ಸರಳವಾದ ಪದ್ಯ ಹಾಗೂ ಲೇಖನಗಳಲ್ಲಿ ವ್ಯಕ್ತಪಡಿಸಿದ್ದಾರೆ. ಜಯ ಕರ್ನಾಟಕ, ರಾಷ್ಟ್ರಬಂಧು, ನವಯುಗ, ಕಂಠೀರವ ಪತ್ರಿಕೆಗಳಲ್ಲಿ ಕವಿತೆ, ಲೇಖನಗಳನ್ನು ಬರೆದಿದ್ದಾರೆ. ೧೯೨೮ರಲ್ಲಿ ದುಂಡುಮಲ್ಲಿಗೆ ಗ್ರಂಥಮಾಲೆಯನ್ನು ಆರಂಭಿಸಿ ಎರಡು ತಿಂಗಳಿಗೆ ಒಂದರಂತೆ ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಇವರು ನಾವೂರುಕರ್ ಮತ್ತು ಸೇಡಿಯಾಪು ಕೃಷ್ಣ ಭಟ್ಟರೊಂದಿಗೆ ೭ – ೮ ತಿಂಗಳು ಕೆಲಸಮಾಡಿ ಸಿದ್ಧಪಡಿಸಿದ ಕನ್ನಡ ನಿಘಂಟು ೧೯೫೫ರಲ್ಲಿ ಶಾರದಾ ಪ್ರೆಸ್ಸಿನಿಂದ ಪ್ರಕಟವಾಗಿದೆ.

'ಮ.ಶ.ರಾ.' ಎಂಬ ಕಾವ್ಯನಾಮದಲ್ಲಿ ಇವರು ನೀಡಿದ ಮಕ್ಕಳ ಸಾಹಿತ್ಯ ತುಂಬ ಗಣನೀಯ. 'ಚಿಕ್ಕಮಕ್ಕಳಲ್ಲಿ ಕಾವ್ಯ ಪ್ರೀತಿಯನ್ನು ಉಂಟು ಮಾಡಲು ಅನುಕೂಲವಾದ ಕವಿತೆಗಳು ಕನ್ನಡದಲ್ಲಿ ಕಡಿಮೆ. ಕನ್ನಡದೊಳಗಣ ಬಾಲ ಸಾಹಿತ್ಯವು ಅಭಿವೃದ್ಧಿಯಾಗುವುದು ಅತಿ ಅಗತ್ಯವೆಂದು ನಂಬಿದ ಇವರು, ಇಂತಹ ಸ್ಪಷ್ಟ ವಿಚಾರದೊಂದಿಗೆ ಶಿಶು ಗೀತೆಗಳನ್ನು ರಚಿಸತೊಡಗಿದರು. 'ಚುಂ–ಚುಂ', 'ಮಿಣುಕು–ತುಣುಕು', 'ಕಂದನ ಕವನ ಮಾಲೆ' ಭಾಗ – ೧ ಮತ್ತು ೨, 'ಬಾಲ ಪದ್ಯಾವಳಿ', 'ಹರಿಗೋಲು' ಹಾಗೂ 'ಹೊಸ ಕನ್ನಡ ಜೋಗುಳ' ಎಂಬ ಏಳು ಪದ್ಯ ಪುಸ್ತಕಗಳನ್ನು ನೀಡಿದ್ದಾರೆ.

ಶರ, ಕುಸುಮ, ಭಾಮಿನಿ ಎಂಬ ಮೂರು ಷಟ್ಪದಿಗಳನ್ನಲ್ಲದೆ, ದ್ವಿಪದಿ ಸಾಂಗತ್ಯ, ಚೌಪದಿ, ವೀರಚೌಪದಿ, ಲಲಿತರಗಳೆ ಮತ್ತು ಗೋವಿನ ಕತೆಯ ಮಟ್ಟಿನಲ್ಲಿ ಪ್ರಾಸಬದ್ಧವಾದ ಕವಿತೆಗಳನ್ನು ಅವರು ರಚಿಸಿದ್ದಾರೆ. ಪುತ್ತೂರಿನ ಪ್ರಸಿದ್ಧ 'ಬಿರುಮಲೆ' ಗುಡ್ಡಕ್ಕೆ ಆ ಹೆಸರು ಬಂದುದನ್ನು ವಿವರಿಸುವ 'ಬಿರುಮಲೆ ಹಾಗೂ ಎಂಕು ಪಣಂಬೂರಿಗೆ ಹೋದದ್ದು' ಎಂಬ ಕವಿತೆಗಳು ಕಾಲ್ಪನಿಕತೆಗೆ ಕನ್ನಡಿ ಹಿಡಿದಂತಿವೆ. ಮಕ್ಕಳು ಅಭಿನಯಿಸಲು ಯೋಗ್ಯವಾದ ಗೀತೆಗಳನ್ನೂ ಅವರು ಬರೆದಿದ್ದಾರೆ. ವಿದೇಶದಲ್ಲಿನ ಶಿಶು ಪ್ರಾಸಗಳನ್ನು ಹೋಲುವ ಶಿಶು ಗೀತೆಗಳು 'ತುಣುಕು ಮಿಣುಕು'ನಲ್ಲಿ ತುಂಬಿವೆ.

೧೯೫೦ರ ದಶಕದಲ್ಲಿ ರಾಮನ್ ನಂಬಿಯಾರ್, ಉಗ್ರಾಣ ಮಂಗೇಶರಾವ್ ಮತ್ತು ದಾಮೋದರ ಬಾಳಿಗರು ನಿರ್ಮಿಸಿದ ಕನ್ನಡ ನೂತನ ಪಾಠ ಮಾಲೆಯ ೧ನೇ ಪುಸ್ತಕದಲ್ಲಿ 'ಸೌದೆ ತಾರೊ ಮಲ್ಲ' ಎಂಬ ದಡ್ಡನ ಹಾಡು ಹಾಗೂ 'ಹುಣ್ಣಿಮೆ ಮಾಮ' ೨ನೇ ಪುಸ್ತಕದಲ್ಲಿ 'ಮೈನಾ ಹಕ್ಕಿ' ಮತ್ತು ೩ನೇ ಪುಸ್ತಕದಲ್ಲಿ 'ಮಂಗನ ಉಪವಾಸ' ಎಂಬ ಮ.ಶ.ರಾ. ಪದ್ಯಗಳು ಸ್ಥಾನ ಪಡೆದಿವೆ[೨೦]. ತಾಯಿಯ ಕುರಿತು ಅವರ ಭಾವನೆ.

ಮಾತೆಯ ಹೃದಯದೊಳಕ್ಷಯವಾದೊಂದು
ಪ್ರೀತಿಯ ಹೊನಲಿರುತಿಹುದು
ಮಾತೆಯ, ಮಾತೆಯ ಮಮತೆಯ ಒರತೆಯ

ಮಾತೆಯೆ ದೇವತಾ ಮೂರ್ತಿ ॥  (ಆಯ್ಕೆ – ತಾಯಿ ಕವನದಿಂದ)

*ಸಮಯದ ಬಗ್ಗೆ –*

ಕಳೆದು ಹೋಯಿತು ನಿಮಿಷ! ಹಾರಿತರೆ ನಿಮಿಷ ।
ಗಳಿಗೆ ದಿನಗಳು ಕೂಡಿ ಹೋಗುವುದು ವರುಷ ।
ವೇಳೆಯೆಂಬುದು ಬಹಳ ಬೆಲೆಯುಳ್ಳ ರತ್ನ ।
ಬಾಳುವೆಗೆ ಮೂಲವಿದು ಸುಗುಣ ಸಂಪನ್ನ ।

(ಆಯ್ಕೆ – ವೇಳೆ ಕವನದಿಂದ)

ಅನಾಥನೊಬ್ಬನ ಬಗ್ಗೆ ರಾಯರ ಸ್ವಗತ ಹೀಗಿದೆ –

ಪರಮಾತ್ಮನೇ ತಂದೆ, ಜನ್ಮಭೂಮಿಯೆ ತಾಯಿ ।
ಧರೆಯೊಳಗೆ ಬೇರೆ ತಾಯ್ತಂದೆಯರನರಿಯೆ ॥
ಮರದಡಿಯ ಮೃದು ಹುಲ್ಲ ತೊಟ್ಟಿಲಲಿ ಮಲಗಿಸುತ ।
ಕರುಣೆಯಿಂ ಲಾಲಿಸಿದಳಾ ಪ್ರಕೃತಿ ದೇವಿ ॥

(ಆಯ್ಕೆ – ಅನಾಥ ಕವಿತೆಯಿಂದ)

ಮಚ್ಚಿಮಲೆ ಶಂಕರನಾರಾಯಣರ 'ಹರಿಗೋಲು' ಕವನ ಸಂಕಲನ ಪ್ರೌಢವಾಗಿದ್ದರೂ ಸರಸ ಸುಂದರವಾಗಿದೆ. ಅದರಲ್ಲಿ ಹರಿಗೋಲಿನ ಬಗ್ಗೆಯೇ ಮೊದಲ ಕವಿತೆ.

ತೇಲುತಿವೆ ಕಡಲಿನಲಿ ಎನಿತು ಹರಿಗೋಲುಗಳು ।
ಕಡಲೆದೆಯ ಸೀಳಿ ಅಲೆಗಳ ನಡುವೆ ಅಲೆಯುತಿವೆ ॥

ಮಚ್ಚಿಮಲೆಯವರು ಬರೆದ ಬಾಪೂಜಿ, ಜವಾಹರಲಾಲ್ ನೆಹರು ಮತ್ತು ಡಾ। ರಾಜೇಂದ್ರ ಪ್ರಸಾದ್ – ಇವು ಶಾಲೆಗಳಲ್ಲಿ ಉಪ ಪಠ್ಯಗಳಾಗಿದ್ದವು. ಅವರ ಇತರ ಗದ್ಯ ಕೃತಿಗಳೆಂದರೆ ಚೆನ್ನಮ್ಮ, ದೇವಳಾದೇವಿ, ಗೊಂಚಲು, ಮುರುಕು ಮುತ್ತು, ಶ್ರೀಮುಡಿ, ಧರ್ಮಜೀವನ, ಜಹಗೀರದಾರನ ಕೊಲೆ ತಾಯಿ, ನಿಸ್ಸಹಕಾರ ಧ್ವಜ ಮತ್ತು ಸ್ವರಾಜ್ಯ ಚಕ್ರ, 'ತಾಯಿ'ಯಲ್ಲಿ ಬೆಳ್ಳೆ ರತ್ನಾಬಾಯಿ ಬರೆದ ಕಥೆಯೊಂದಿಗೆ ರಾಯರದೂ ಒಂದು ಕಥೆ ಇದೆ. ತನ್ನ ದೀರ್ಘಕಾಲದ ಆಲೋಚನೆಯಿಂದ ಮೂಡಿಬಂದ ವಿಚಾರಗಳನ್ನು ಅವರು 'ಧರ್ಮ ಜೀವನ' ಎಂಬ ಕಿರು ಹೊತ್ತಿಗೆಯಲ್ಲಿ ಸಂಗ್ರಹಿಸಿದ್ದಾರೆ. ಅದರಲ್ಲಿ ಧರ್ಮ–ಜೀವನ, ಮತ ವಿಚಾರ, ಕುರುಡು ಆಚಾರ ಹಾಗೂ ಅಂದಾನುಸರಣೆಗಳನ್ನು ಸೂಕ್ಷ್ಮವಾಗಿ ವಿವೇಚಿಸಿಸಲಾಗಿದೆ. ಹೀಗೆ ಕನ್ನಡ ಸಾಹಿತ್ಯಕ್ಕೆ ಮಚ್ಚಿಮಲೆ ಶಂಕರನಾರಾಯಣರಾವ್ ಅವರ ಕೊಡುಗೆ ವಿಶೇಷ.

## ೪.೪.೧೦ ಸೇಡಿಯಾಪು ಕೃಷ್ಣ ಭಟ್ಟ (೧೯೦೨ - ೧೯೯೬)

ಸೇಡಿಯಾಪು ಕೃಷ್ಣ ಭಟ್ಟರು ಹುಟ್ಟಿದ್ದು ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲೂಕಿನ ಪಡ್ನೂರು ಗ್ರಾಮದ ಸೇಡಿಯಾಪು ಎಂಬಲ್ಲಿ. ಅವರ ತಂದೆ ರಾಮಭಟ್ಟರು, ತಾಯಿ ಮೂಕಾಂಬಿಕೆ. ಕೃಷ್ಣಭಟ್ಟರು ಸೇಡಿಯಾಪಿನಲ್ಲಿ ಹೆಚ್ಚು ದಿನ ನೆಲಸದಿದ್ದರೂ ಪುತ್ತೂರು ಸಮೀಪದ ಒಂದು ಮೂಲೆಯ ಆ ಊರು ಇವರ ಹೆಸರಿನಿಂದಲೇ ಪ್ರಸಿದ್ಧಿಗೊಂಡಿದೆ.

ಕೃಷ್ಣಭಟ್ಟರು ತಮ್ಮ ಅಜ್ಜನಾದ ಕುಕ್ಕಿಲ ಕೃಷ್ಣಭಟ್ಟರ ಆಶ್ರಯದಲ್ಲೇ ಬೆಳದರು. ಅಜ್ಜ ಕೃಷ್ಣಭಟ್ಟರು ವಿದ್ಯಾವಂತ ಮತ್ತು ಯಕ್ಷಗಾನದಲ್ಲಿ ಆಸಕ್ತಿ ಹೊಂದಿದವರು. ಅನೇಕ ಯಕ್ಷಗಾನ ಪ್ರಸಂಗಗಳನ್ನು ಕಾವ್ಯಗಳನ್ನು ಪ್ರತಿ ಮಾಡಿ ಇರಿಸಿಕೊಂಡಿದ್ದರು. ಓಲೆಗರಿಗಳಲ್ಲಿ ಚಂದವಾಗಿ ಬರೆಯುತ್ತಿದ್ದರು. ಮಕ್ಕಳಿಗೆ ಶ್ಲೋಕ, ಪದ್ಯ ಮೊದಲಾದವುಗಳನ್ನು ಬಾಯಿಪಾಠ ಮಾಡಿಸುತ್ತಿದ್ದ ಈ ಅಜ್ಜ ಅನಂತರ ಮನೆಯಲ್ಲಿಯೇ ಮಕ್ಕಳಿಗೆ ಉಪಾಧ್ಯಾಯರನ್ನಿರಿಸಿ ಪಾಠ ಹೇಳಿಸಿದರು[೪೪]. ಮುಂದೆ ಸೇಡಿಯಾಪು ಅವರು ಮನೆಯ ಸಮೀಪದಲ್ಲಿ ಸ್ಥಾಪಿತವಾದ ಶಾಲೆಯೊಂದರಲ್ಲಿಯೂ ಆ ಮೇಲೆ ಸೇಡಿಯಾಪುವಿನ ಶಾಲೆಯಲ್ಲಿಯೂ ಓದಿ ಮುಂದೆ ಪುತ್ತೂರಿನಲ್ಲಿ ಸ್ಥಾಪಿತವಾದ (೧೯೧೬) ಹೊಸ ಸೆಕೆಂಡರಿ ಶಾಲೆಗೆ ಸೇರಿದರು. ಥರ್ಡ್ ಫಾರ್ಮ್ (ಈಗಿನ ಎಂಟನೆ ತರಗತಿ) ವರೆಗೆ ಆ ಶಾಲೆಯಲ್ಲಿ ಓದುವಾಗಲೇ ಆನೇಕ ಹಳೆಯ ಗ್ರಂಥಗಳನ್ನು ಕರ್ನಾಟಕ ಕವಿಚರಿತ್ರೆಯಂತಹ ಕೃತಿಗಳನ್ನು ನಾಗವರ್ಮನ ಛಂದೋಂಬುಧಿಯಂತಹ ಶಾಸ್ತ್ರ ಕೃತಿಗಳನ್ನು ಅವರು ಓದಿ ಮುಗಿಸಿದರು.

ಮುಂದಿನ ಓದಿಗೆ ಪುತ್ತೂರಿನಲ್ಲಿ ಅವಕಾಶವಿಲ್ಲದ್ದರಿಂದ ಸೇಡಿಯಾಪು ಅವರು ಮಂಗಳೂರಿನ ಎಲೋಶಿಯಸ್ ಹೈಸ್ಕೂಲಿಗೆ ಸೇರಿಕೊಂಡು ಊಟಕ್ಕೆ ಹೋಟೆಲ್‌ನಲ್ಲಿ ಮತ್ತು ವಾಸಕ್ಕೆ ಸಾಹುಕಾರ ಬಡೆಕಿಲ ವೆಂಕಟರಮಣ ಭಟ್ಟರ ಮನೆಯಲ್ಲಿ ವ್ಯವಸ್ಥೆ ಮಾಡಿಕೊಂಡರು. ಆದರೆ ಅಲ್ಲಿ ಮೂರು ನಾಲ್ಕು ತಿಂಗಳು ಕಲಿಯುವಾಗ ಅನಾರೋಗ್ಯವುಂಟಾಗಿ ಊರಿಗೆ ಮರಳಬೇಕಾಯಿತು, ವಿದ್ಯಾಭ್ಯಾಸ ನಿಂತುಹೋಯಿತು. ಒಂದೆರಡು ವರ್ಷಗಳಲ್ಲಿ ಪುತ್ತೂರಿನಲ್ಲಿ ಹೈಸ್ಕೂಲ್ ಸ್ಥಾಪಿತವಾದಾಗ ಬಹಳ ಕಷ್ಟದ ಸ್ಥಿತಿಯಲ್ಲಿ ಸೇಡಿಯಾಪು ಅವರು ಶಾಲೆಗೆ ಸೇರಿಕೊಂಡರು. ಶಾಲಾ ಶುಲ್ಕದ ಹಣಕ್ಕಾಗಿ ಅವರಿವರಲ್ಲಿ ಬೇಡಬೇಕಾಯಿತು. ಸಾಲ ಮಾಡಬೇಕಾಯಿತು. ವಿದ್ಯಾಭ್ಯಾಸ ಮುಂದುವರಿಸುವುದು ಬಹಳ ಕಷ್ಟವಾಗಿಯೂ ಪರಿಣಮಿಸಿತು. ಅದೇ ಸಮಯಕ್ಕೆ ಗಾಂಧೀಜಿಯವರ ಅಸಹಕಾರ ಚಳವಳಿ ಪ್ರಾರಂಭವಾಯಿತು. ಸೇಡಿಯಾಪು ಅವರು ಶಾಲೆ ಬಿಟ್ಟರು.

ಗಾಂಧೀಜಿಯವರ ಚಿಂತನೆಗಳನ್ನು ಆಗಲೇ ಸೇಡಿಯಾಪು ಓದಿದ್ದರು. ಅವರ ಮೇಲೆ ಗಾಂಧೀ ಬೋಧನೆಗಳ ಪ್ರಭಾವವಾಗಿತ್ತು. ಗಾಂಧೀಜಿಯವರು ಹೇಳಿದ ಅನೇಕ ರಚನಾತ್ಮಕ ಕಾರ್ಯಗಳಲ್ಲಿ ಖಾದಿ ತಯಾರಿಸುವುದು, ಖಾದಿ ಬಟ್ಟೆಯನ್ನು ಮನೆಮನೆಗೆ ತೆಗೆದುಕೊಂಡು ಹೋಗಿ ಮಾರುವುದು

ಸ್ವದೇಶಿ ಪ್ರಚಾರ, ಅಸ್ಪೃಶ್ಯತಾ ನಿವಾರಣೆ ಇತ್ಯಾದಿ ಕೆಲಸಗಳನ್ನು ಹಳ್ಳಿ ಹಳ್ಳಿ ತಿರುಗಿ ಕೆಲವು ಕಾಲ ಮಾಡಿದರು. ಇವರ ಶಾಲಾ ವಿದ್ಯಾಭ್ಯಾಸ ಇಲ್ಲಿಗೆ ಕೊನೆಗೊಂಡು ಅವರೇ ಹೇಳಿಕೊಂಡಂತೆ 'ಫೋರ್ತ್ ಫಾರ್ಮ್ ಪೋಸ್ಟ್ ಗ್ರಾಜ್ಯುಯೇಟ್' ಆಗಿಯೇ ಉಳಿದರು[೧೫].

ಸೇಡಿಯಾಪು ಅವರ ಅಧ್ಯಯನ ಪ್ರವೃತ್ತಿ ಕಾವ್ಯ ಜ್ಞಾನ, ಕನ್ನಡ, ಸಂಸ್ಕೃತ, ಹಿಂದಿ ಭಾಷೆಗಳ ಪರಿಚಯದ ಕಾರಣಗಳಿಂದಾಗಿ ಅವರಿಗೆ ಅಧ್ಯಾಪಕನಾಗಿ ಕೆಲಸ ಮಾಡುವ ಸಂದರ್ಭ ತಾನಾಗಿ ಒದಗಿ ಬಂತು. ವೀರಕಂಬ ಎಂಬಲ್ಲಿ ಒಂದು ಹೊಸ ಶಾಲೆಯನ್ನು ಊರಿನ ಕೆಲವು ಮಹನೀಯರು ಸ್ಥಾಪಿಸಿದಾಗ ಅವರ ವಿನಂತಿಯಂತೆ ಸೇಡಿಯಾಪು ಅವರು ಅಲ್ಲಿ ಅಧ್ಯಾಪಕರಾಗಿ ಸೇರಿಕೊಂಡರು. ಈ ವೇಳೆಗಾಗಲೇ ಅವರು ಸಾಕಷ್ಟು ಹೆಸರು ಗಳಿಸಿದ್ದರು.

ಪುತ್ತೂರಿನ ಶಾಲೆಯಲ್ಲಿರುವಾಗಲೇ ಅವರು ಪದ್ಯರಚನೆಗೆ ತೊಡಗಿದ್ದರು. ಸುಮಾರು ೧೯೧ಳರಲ್ಲಿ ಛಂದಸ್ಸಿನ ಮೇಲೆ ಹಿಡಿತ ಸಾಧಿಸಿದ್ದರು. ವಿದ್ಯಾರ್ಥಿಗಳಿಗಾಗಿ ಮಂಜೇಶ್ವರ ಗೋವಿಂದ ಪೈಗಳು ಏರ್ಪಡಿಸಿದ್ದ ಆಶುಕವಿತಾ ಸ್ಪರ್ಧೆಯಲ್ಲಿ ಕಡಂಗೋಡ್ಲು ಶಂಕರಭಟ್ಟರಿಗೆ ಪ್ರಥಮ ಬಹುಮಾನ ಬಂತೆಂಬುದನ್ನು ತಿಳಿದು ಅವರನ್ನು ನೋಡಲಿಕ್ಕಾಗಿಯೇ ಸೇಡಿಯಾಪು ಅವರು ತಮ್ಮಿಬ್ಬರು ಉಪಾಧ್ಯಾಯರೊಡನೆ ಮಂಗಳೂರಿಗೆ ಹೋಗಿದ್ದರು. ಆಗ ಶಂಕರ ಭಟ್ಟರು ಪಂಡಿತ ಮುಳಿಯ ತಿಮ್ಮಪ್ಪಯ್ಯನವರಲ್ಲಿಯೇ ವಾಸವಾಗಿದ್ದರು. ಅಲ್ಲಿ ಶಂಕರ ಭಟ್ಟರನ್ನು ಕಂಡು ಆ ಕವಿತೆಯನ್ನು ಓದಿ ವಿಮರ್ಶಿಸಿದರು.

ಉಗ್ರಾಣ ಮಂಗೇಶರಾಯರು ಪುತ್ತೂರಿನ ಶಾಲೆಯಲ್ಲಿ ಸೇಡಿಯಾಪು ಅವರ ಗುರುಗಳಾಗಿದ್ದರು. ಅವರು ಕನ್ನಡ ಇಂಗ್ಲಿಷ್ ಎರಡನ್ನೂ ಚೆನ್ನಾಗಿ ಬಲ್ಲವರಾಗಿದ್ದುದಲ್ಲದೆ ಹೊಸ ಬರವಣಿಗೆಯನ್ನು ಪ್ರೋತ್ಸಾಹಿಸುವವರಾಗಿದ್ದರು. ಆ ಕಾಲದಲ್ಲಿ ಸೇಡಿಯಾಪು ಅವರ ಮೇಲೆ ಮಹಾಕಾವ್ಯಗಳ ಪ್ರಭಾವವಾಗಿದ್ದು ಆ ಮಾದರಿಯಲ್ಲಿಯೇ ಮಹಾಕಾವ್ಯವೊಂದನ್ನು ಬರೆಯ ಹೊರಟಿದ್ದರು. ೧೯೨೨ರಲ್ಲಿ 'ಕರ್ನಾಟಕ ಕವಿತಾ ಪ್ರಪಂಚ' ವೆಂಬ ಲೇಖನವೊಂದನ್ನು ಬರೆದರು. ಇದೇ ಅವರ ಮೊದಲ ಗದ್ಯಲೇಖನ.

ಹೈಸ್ಕೂಲಿನಲ್ಲಿ ಕನ್ನಡ ಪಂಡಿತನಾಗಲು ವಿದ್ವಾನ್ ಪದವಿ ಪಡೆಯಬೇಕೆಂದು ನಿಯಮವೊಂದು ಆಗ ಜಾರಿಯಾದುದರಿಂದ ಸೇಡಿಯಾಪು ಅವರು ಈ ಪದವಿ ಪಡೆಯಲು ತೀರ್ಮಾನಿಸಿ ಅದಕ್ಕಾಗಿ ಕನ್ನಡದ ಅಧ್ಯಯನವನ್ನು ವಿಶೇಷವಾಗಿ ಮಾಡತೊಡಗಿದರು. ಹೆಚ್ಚಿನ ಕನ್ನಡ ಕಾವ್ಯಗಳನ್ನು ಮತ್ತು ಶಾಸ್ತ್ರ ಗ್ರಂಥಗಳನ್ನು ಅವರು ಆಗಲೇ ಓದಿದ್ದರು. ಆದರೂ ಕಾವ್ಯಶಾಸ್ತ್ರಗಳ ಅಧ್ಯಯನಕ್ಕೆ ಅವಶ್ಯವಿದ್ದಲ್ಲಿ ಮುಳಿಯ ತಿಮ್ಮಪ್ಪಯ್ಯನವರ ಮಾರ್ಗದರ್ಶನ ಪಡೆದರು. ೧೯೨೯ರಲ್ಲಿ ಮದ್ರಾಸ್ ವಿಶ್ವವಿದ್ಯಾನಿಲಯದ ವಿದ್ವಾನ್ ಪದವಿ ಪಡೆದರು. ಅದೇ ವರ್ಷ ಜೂನ್ ತಿಂಗಳಲ್ಲಿ

ಎಲೋಶಿಯಸ್ ಹೈಸ್ಕೂಲ್‌ನಲ್ಲಿ ಕನ್ನಡ ಪಂಡಿತರಾಗಿ ನೇಮಕಗೊಂಡರು. ೧೯೨೯ರಿಂದ ೧೯೫೦ರ ವರೆಗೆ ಅವರು ಹೈಸ್ಕೂಲ್ ವಿಭಾಗಲದಲ್ಲಿಯೇ ದುಡಿದರು. ಕಾಲೇಜು ವಿಭಾಗಕ್ಕೆ ಅವರು ಬಡ್ತಿ ಹೊಂದಿದುದು ೧೯೫೦ರಲ್ಲಿ.

ಕನ್ನಡ ಛಂದಸ್ಸಿನ ಸಂಶೋಧನೆಯಲ್ಲಿ ಹೆಸರಾದ ಸೇಡಿಯಾಪು ವ್ಯಾಕರಣ ಕ್ಷೇತ್ರದಲ್ಲಿ ಗಣ್ಯರೆಂದು ಗುರುತಿಸಲ್ಪಟ್ಟರು. 'ಪಂಚಮಿ ವಿಭಕ್ತಿ' ಎಂಬ ಲೇಖನದಿಂದ ೧೯೪೪ರ ಪ್ರಬುದ್ಧ ಕರ್ನಾಟಕದ ದೀಪಾವಳಿ ಸಂಚಿಕೆಯಲ್ಲಿ ಈ ಲೇಖನ ಪ್ರಕಟಗೊಂಡಿತು[೧]. ಕನ್ನಡದಲ್ಲಿ ಪಂಚಮೀ ವಿಭಕ್ತಿ ಸಹಜವಾಗಿ ಇದೆಯೇ ಇಲ್ಲವೇ ಎಂಬ ಪ್ರಶ್ನೆಗೆ ಇಲ್ಲಿ ಉತ್ತರಿಸಿದ್ದಾರೆ. ಸೇಡಿಯಾಪು ಅವರು ವಿದ್ವಾನ್ ಪದವಿಗಾಗಿ ಅಧ್ಯಯನ ಮಾಡುವಾಗ ಭಟ್ಟಾಕಳಂಕನ ಶಬ್ದಾನುಶಾಸನವನ್ನು ಆಳವಾಗಿ ಅಧ್ಯಯನ ಮಾಡಿರಲಿಲ್ಲ. ಶಬ್ದಾನುಶಾಸನವನ್ನು ತನಗೆ ಪಾಠ ಹೇಳಬೇಕೆಂದು ವ್ಯಾಕರಣಾಸಕ್ತರೊಬ್ಬರು ಅವರಲ್ಲಿ ವಿನಂತಿಸಿಕೊಂಡಾಗ ಸೇಡಿಯಾಪು ಅದನ್ನೊಪ್ಪಿಕೊಂಡು ಶಬ್ದಾನುಶಾಸನದ ಅಧ್ಯಯನಕ್ಕೆ ತೊಡಗಿದರು. ವ್ಯಾಕರಣ ಛಂದಸ್ಸುಗಳೆಂಬ ಶಾಸ್ತ್ರಗಳ ಗಹನವಾದ ಸಮಸ್ಯೆಗಳ ಪರಿಶೀಲನೆ ಮಾಡಿದ ಸೇಡಿಯಾಪು ಅವರು ಕಾವ್ಯ ಸಾಹಿತ್ಯಕ್ಷೇತ್ರದಲ್ಲೂ ತಮ್ಮದೇ ಆದ ಸ್ಥಾನವನ್ನು ಪಡೆದವರು. ಚಿಕ್ಕ ಚಿಕ್ಕ ಕವಿತೆಗಳನ್ನು ಬರೆಯುತ್ತಿದ್ದ ಸೇಡಿಯಾಪು ಸಣ್ಣ ಕಾವ್ಯಗಳನ್ನು ಬರೆದುದು ೧೯೩೫ರಿಂದ ೧೯೩೯ರ ಅವಧಿಯಲ್ಲಿ ಕಾಲಾನುಕ್ರಮದಂತೆ ಮೊದಲು 'ತರುಣಧಮನಿ' (೧೯೩೫) ಆಮೇಲೆ 'ಶ್ವಮೇದ ಅಥವಾ ನಾಯನಡತೆ' ಅನಂತರ 'ಕೃಷ್ಣಕುಮಾರಿ' ಮತ್ತು 'ಪುಣ್ಯ ಲಹರಿ' 'ಶಬರಿ' ಮುಂತಾದವನ್ನು ಬರೆದರು.

ಪಳಮೆಗಳು ಎಂಬ ಹೆಸರಿನಲ್ಲಿ ಸೇಡಿಯಾಪು ಅವರು ನಾಲ್ಕು ಕಥೆಗಳನ್ನು ಬರೆದು ೧೯೪೭ರಲ್ಲಿ ಪ್ರಕಟಿಸಿದಾಗ ಅವರ ಕಥನ ಕಲೆಯ ಪರಿಚಯ ಕನ್ನಡಿಗರಿಗಾಯಿತು[೨]. ಚಿನ್ನದ ಚೇಳು, ಭೂತಪ್ರೇತ ಭಾಷೆಗಳ ಕಾಲದ ಕಥೆ ಇದರಲ್ಲಿ ಬರುವ ಹಾಸ್ಯ ಎಲ್ಲರಿಗೂ ಮೆಚ್ಚುಗೆಯಾಗುವಂತಹುದು. 'ಚೆನ್ನೆಮಣೆಯು' ಸುಖೀ ದಾಂಪತ್ಯ ಆಟದ ಕಾರಣದಿಂದ ಒಡೆದು ಹೋಗುವ ದುರಂತ ಚಿತ್ರ 'ನಾಗರಬೆತ್ತ' ಅಮಾನುಷ ಕ್ರೌರ್ಯದ ಪರಿಣಾಮವಾದ ಕರುಣ, ಧರ್ಮ ಹಾಗೂ ಮನುಷ್ಯ ಸ್ವಭಾವವನ್ನು ವಿಶ್ಲೇಷಣೆ ಮಾಡಿದ್ದಾರೆ.

ಸೇಡಿಯಾಪು ಅವರಿಗೆ ಹಲವಾರು ಗೌರವ ಪ್ರಶಸ್ತಿಗಳು ಸಂದಿವೆ. ಮರಣೋತ್ತರವಾಗಿ ಅತ್ಯುಚ್ಚ ಸಾಹಿತ್ಯ ಪ್ರಶಸ್ತಿಯಾದ 'ಪಂಪ ಪ್ರಶಸ್ತಿ' ಲಭಿಸಿದೆ. ಅವರ ಎರಡು ಕೃತಿಗಳಿಗೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿದೆ. ೧೯೫೯ರಲ್ಲಿ ಎಂದರೆ ಸೇಡಿಯಾಪು ನಿವೃತ್ತರಾದ ಎರಡು ವರ್ಷಗಳಲ್ಲಿ

ಮಂಗಳೂರಿನಲ್ಲಿ ಅವರನ್ನು ಗೌರವಿಸುವ ಕಾರ್ಯಕ್ರಮ ನಡೆದು ಅದರಲ್ಲಿ 'ಒಸಗೆ' ಎಂಬ ಅಭಿನಂದನಾ ಗ್ರಂಥವನ್ನು ಸಮರ್ಪಿಸಲಾಯಿತು.

ಸೇಡಿಯಾಪು ಕೃಷ್ಣಭಟ್ಟರು ನಮ್ಮ ನಾಡು ಇಪ್ಪತ್ತನೆಯ ಶತಮಾನದಲ್ಲಿ ಕಂಡ ಒಬ್ಬ ಧೀಮಂತ, ಸತ್ಯಸಾಧಕ, 'ಸತ್ಯಂಜ್ಞಾನಮನಂತಂ' ಅವರಿಗೆ ಪ್ರಿಯವಾದ ಸೋತ್ರ, ಸತ್ಯ ಜ್ಞಾನ ಮತ್ತು ಅನಂತ ಚೈತನ್ಯವನ್ನು ಅವರು ಅರ್ಥೈಸಲು ಮಾಡಿದ ಪ್ರಯತ್ನವು ಅವರ ಜೀವನ. ಆದರ್ಶ ಜೀವನ ನಡೆಸಿದ ಆ ಹಿರಿಯ ಜೀವ ದಿನಾಂಕ ೮-೬-೧೯೯೬ರ ಮಧ್ಯರಾತ್ರಿ ತನ್ನ ಯಾತ್ರೆಯನ್ನು ಕೊನೆಗೊಳಿಸಿದರು.

**೪.೪.೧೧ ಕೆ. ಶಿವರಾಮ ಕಾರಂತ (೧೯೦೨-೧೯೯೭)**

ಕೋಟ ಶಿವರಾಮ ಕಾರಂತರು ಕನ್ನಡ ನಾಡು ೨೦ನೇ ಶತಮಾನದಲ್ಲಿ ಕಂಡ ಅಪರೂಪದ ವಿಶಿಷ್ಟ ವ್ಯಕ್ತಿ. ಅವರೊಬ್ಬ ಧೀಮಂತ ಕನ್ನಡಿಗರಾಗಿದ್ದು ದೈತ್ಯ ಪ್ರತಿಭೆಯವರು, ಅವರೊಬ್ಬ ಮಹಾನ್ ಚಿಂತಕ, ಸಾಹಿತಿ, ಸಂಶೋದಕ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ - ಶೈಕ್ಷಣಿಕ ರಂಗದ ಖ್ಯಾತ ವಿಮರ್ಶಕ, ಪರಿಸರ ಪ್ರೇಮಿ, ಕಲಾ ತಜ್ಞ ಹಾಗೂ ಪ್ರಯೋಗಶೀಲ ವ್ಯಕ್ತಿ.

ಶಿವರಾಮ ಕಾರಂತರು ಕುಂದಾಪುರದ ಕೋಟದಲ್ಲಿ ೧೦-೧೦-೧೯೦೨ರಂದು ಹುಟ್ಟಿದರು. ತಂದೆ ಶೇಷ ಕಾರಂತ, ತಾಯಿ ಲಕ್ಷ್ಮೀ, ಕಾರಂತರು ಹುಟ್ಟಿದ್ದು ಕುಂದಾಪುರದ ಕೋಟದಲ್ಲಾದರೂ ಅವರ ಕಾರ್ಯಕ್ಷೇತ್ರ ಪುತ್ತೂರು, ೧೯೩೪ರಿಂದ ೧೯೭೪ರ ವರೆಗೆ ಪುತ್ತೂರಿನಲ್ಲಿ ನೆಲೆಸಿದ ಕಾರಂತರು ಇಲ್ಲೇ ಸಾಹಿತ್ಯ ಕೃಷಿ ಮಾಡಿದವರು.

ಕಾರಂತರು ಎಳೆಯ ವಯಸ್ಸಿನಿಂದಲೇ ಚಿತ್ರ ಬಿಡಿಸುವುದರಲ್ಲಿ, ನಾಟಕ ಯಕ್ಷಗಾನ ನೋಡುವಲ್ಲಿ, ಶ್ರೇಷ್ಠ ಸಾಹಿತಿಗಳ ಕೃತಿಗಳನ್ನು ಓದುವುದರಲ್ಲಿ ಹೆಚ್ಚಿನ ಆಸಕ್ತಿ ತಳೆದಿದ್ದರು. ಅವರ ತಂದೆಗೆ ಪ್ರಾಣಿ ಪಕ್ಷಿಗಳ ಬಗ್ಗೆ ಒಲವು ಇದ್ದು, ಮನೆಯಲ್ಲಿ ಗಿಳಿ, ಮೊಲ, ಪಾರಿವಾಳ, ನವಿಲು ಮುಂತಾದವುಗಳನ್ನು ಸಾಕಿದ್ದು, ಕಾರಂತರಿಗೆ ಬಾಲ್ಯದಲ್ಲೇ ಅವುಗಳ ಒಡನಾಟ ಸಿಕ್ಕಿತ್ತು.

ಇಂಟರ್ ಮೀಡಿಯೆಟ್ ಶಿಕ್ಷಣ ಪಡೆಯಲು ತಂದೆಯ ಅಲ್ಪಾಕ್ ಕರಿಯ ಕೋಟು ಧರಿಸಿ ಮಂಗಳೂರಿನ ಸರ್ಕಾರಿ ಕಾಲೇಜು ಸೇರಲು ಹೋದ ಕಾರಂತರಿಗೆ ಸುಲಭವಾಗಿ ಪ್ರವೇಶ ಸಿಕ್ಕಿತು (೧೯೨೦). ಅದೇ ಸಮಯದಲ್ಲಿ ಮಂಗಳೂರಿನಲ್ಲಿ ಸ್ವಾತಂತ್ರ್ಯ ಚಳುವಳಿ ತೀವ್ರಗೊಂಡಿದ್ದು, ಗಾಂಧೀಜಿ ವಿದ್ಯಾರ್ಥಿಗಳಿಗೆಲ್ಲ ಶಾಲಾ ಕಾಲೇಜು ಬಿಟ್ಟು ಹೊರಬರುವಂತೆ ಕರೆನೀಡಿದ್ದರು. ಅಲ್ಲದೇ ಅವರು ಕಾರ್ನಾಡು ಸದಾಶಿವರಾಯರ ಸ್ವಾತಂತ್ರ್ಯ ಹೋರಾಟದಿಂದ ಪ್ರೇರಿತರಾಗಿದ್ದು ಸ್ವದೇಶಿ ಚಳುವಳಿಯಲ್ಲಿ ಭಾಗವಹಿಸಲೇ ಬೇಕೆಂಬ ತುಡಿತ ಅವರಲ್ಲಿ ಉಂಟಾಯಿತು. ಆ ಸಂದರ್ಭದಲ್ಲೇ

ಕಾರಂತರು 'ನಾನು ಕಾಲೇಜಿನಿಂದ ಅಸಹಕಾರ ಮಾಡುತ್ತೇನೆ' ಎಂಬ ಪತ್ರವೊಂದನ್ನು ಪ್ರಿನ್ಸಿಪಾಲರಿಗೆ ಕೊಟ್ಟು, ಕಾಲೇಜಿನಿಂದ ಹೊರ ಬಂದರು (೧೯೨೧) ಅದೇ ಅವರ ಕಾಲೇಜು ಶಿಕ್ಷಣದ ಕೊನೆಯ ದಿನವಾಗುತ್ತದೆ. ಮುಂದೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿ ಗಾಂಧೀಜಿಯವರ ಚಿಂತನೆ ಗಳಿಂದಲೂ ಪ್ರಭಾವಿತರಾಗಿ ಗಾಂಧೀಜಿಯ ಅನೇಕ ವಿಚಾರಗಳ ಬಗ್ಗೆ ಕಾರಂತರು ಗಹನವಾಗಿ ಚಿಂತಿಸುವಂತೆ ಮಾಡಿತಲ್ಲದೆ ಮುಂದೆ ಇದು ಕಾರಂತರಲ್ಲಿ ಅನ್ವೇಷಣೆ ಪ್ರವೃತ್ತಿಗೆ ನಾಂದಿ ಹಾಡಿತು.

ಇದು ಕಾರಂತರಲ್ಲಿ ಚಿಕಿತ್ಸಕ ಮನೋಧರ್ಮ, ವೈಚಾರಿಕ ದೃಷ್ಟಿ ಪ್ರತಿಯೊಂದು ನಂಬಿಕೆ ಯನ್ನು ಪರೀಕ್ಷಿಸುವ, ತಳವನ್ನೇ ಶೋಧಿಸುವ ಹಠ–ಛಲ ಬೆಳೆಯುವಂತೆ ಮಾಡಿತು. ಇದು ಅವರಲ್ಲಿ ಕಲೆ, ಸಾಹಿತ್ಯ, ವಿಜ್ಞಾನ, ವಿಚಾರ, ಧರ್ಮ, ಸಂಸ್ಕೃತಿ, ಶಿಕ್ಷಣ, ರಾಜಕಾರಣ ಹೀಗೆ ಬದುಕಿನ ಎಲ್ಲ ರಂಗಗಳಲ್ಲಿ ಆಸಕ್ತಿ ತಳೆಯುವಂತೆ ಮಾಡಿತಲ್ಲದೆ ಎಲ್ಲದರಲ್ಲೂ ಪ್ರಯೋಗಶೀಲರಾಗುವಂತೆ ಮಾಡಿತು.

ಈ ಎಲ್ಲ ಚಿಂತನೆಯ ಫಲವಾಗಿ ಅವರಲ್ಲಿ ಸಾಹಿತ್ಯಾಸಕ್ತಿ ಬೆಳೆಯಿತು. ಪತ್ರಿಕೋದ್ಯಮವನ್ನು ಪ್ರವೇಶಿಸುವ ಮೂಲಕ ಬರಹಗಾರರಾಗುತ್ತಾರೆ. 'ವಸಂತ' ಪತ್ರಿಕೆ (೧೯೨೪) ಹಾಗೂ 'ವಿಚಾರ ಮಾಡಿ' (೧೯೫೦) ಎಂಬ ಎರಡು ಪತ್ರಿಕೆಗಳನ್ನು ಪ್ರಕಟಿಸಿದರು. ಪ್ರಾರಂಭದಲ್ಲಿ ಅವರ ಸಾಹಿತ್ಯ ಕೃತಿಗಳು ಪ್ರಕಟವಾದದ್ದು 'ವಸಂತ' ಪತ್ರಿಕೆಯಲ್ಲೇ, ಅವರ ಸಾಹಿತ್ಯ ಕೃಷಿಯು ಅತ್ಯಮೂಲ್ಯವಾದದ್ದು ಹಾಗೂ ಅಗಾಧವಾದದ್ದು.

ಸಾಹಿತ್ಯವು ವೈವಿಧ್ಯತೆಯಿಂದ ಕೂಡಿದ್ದು ಕವಿತೆ, ನಾಟಕ, ಸಣ್ಣಕಥೆ, ಕಾದಂಬರಿ ಹರಟೆ, ವ್ಯಂಗ್ಯ, ಪ್ರಬಂಧ, ವಿಚಾರ ಸಾಹಿತ್ಯ, ಕೋಶಗಳು, ಪ್ರವಾಸ ಸಾಹಿತ್ಯ, ಜೀವನ ಚರಿತ್ರೆ, ಅತ್ಮಕಥೆ, ಬಾಲಸಾಹಿತ್ಯ, ಮಕ್ಕಳಿಗೆ ಪಠ್ಯಪುಸ್ತಕಗಳು, ಕಲೆಯನ್ನು ಕುರಿತ ಕೃತಿಗಳು, ತಾತ್ವಿಕ ಕೃತಿಗಳು, ಅನುವಾದ, ಸಂಪಾದನೆ, ಇಂಗ್ಲಿಷ್ ಕೃತಿಗಳು ಸೇರಿದಂತೆ ವಿವಿಧ ಪ್ರಕಾರಗಳಲ್ಲಿ ೪೫೦ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ.

ಅವರ ಕೃತಿಗಳಲ್ಲಿ ಮುಖ್ಯವಾಗಿ, 'ರಾಷ್ಟ್ರಗೀತೆ ಸುಧಾಕರ' ಎಂಬ ಕವನ ಸಂಕಲನ (೧೯೨೪) ಪ್ರಥಮ ಪ್ರಕಟಿತ ಕೃತಿಯಾಗಿದ್ದು 'ವಿಚಿತ್ರ ಕೂಟ' ಇವರ ಪ್ರಥಮ ಕಾದಂಬರಿ (೧೯೨೪) 'ದೇವದೂತರು', 'ಗೊಂಡಾರಣ್ಯ', 'ಸನ್ಯಾಸಿಯ ಬದುಕು', 'ಭೂತ', 'ನಿರ್ಭಾಗ್ಯ ಜನ್ಮ', 'ಕನ್ಯಾ ಬಲಿ', 'ಚೋಮನ ದುಡಿ', 'ಸರಸಮ್ಮನ ಸಮಾಧಿ', 'ಮರಳಿ ಮಣ್ಣಿಗೆ', 'ಬೆಟ್ಟದ ಜೀವ', 'ಹೆತ್ತಳಾ ತಾಯಿ', 'ಮುಗಿದ ಯುದ್ಧ', 'ಔದಾರ್ಯದ ಉರುಳಲ್ಲಿ', 'ಮೊಗ ಪಡೆದ ಮನ', 'ಕರುಳಿನ ಕರೆ', 'ಕುಡಿಯರ ಕೂಸು', 'ಚಿಗುರಿದ ಕನಸು', 'ಜಾರುವ ದಾರಿಯಲ್ಲಿ', 'ಭತ್ತದ ತೊರೆ', 'ಒಡಹುಟ್ಟಿದವರು', 'ಸಮೀಕ್ಷೆ', 'ನಂಬಿದವರ ನಾಕ ನರಕ', 'ಜಗದೋದ್ಧಾರ... ನಾ', 'ಶನೀಶ್ವರನ ನೆರಳಲ್ಲಿ', 'ಅಳಿದ ಮೇಲೆ', 'ಆಳ ನಿರಾಳ', 'ಇದ್ದರೂ ಚಿಂತೆ', 'ಸ್ವಪ್ನದ ಹೊಳೆ', 'ಒಂಟಿ ದನಿ', 'ಇನ್ನೊಂದೇ ದಾರಿ', 'ಮೂಕಜ್ಜಿಯ

ಕನಸುಗಳು', 'ಮೈಮನಗಳ ಸುಳಿಯಲ್ಲಿ', 'ಉಕ್ಕಿದ ನೊರೆ', 'ಕೇವಲ ಮನುಷ್ಯರು', 'ಧರ್ಮರಾಯನ ಸಂಸಾರ', 'ಮೂಜನ್ಮ', 'ಇಳೆಯೆಂಬ', 'ಕನ್ನಡಿಯಲ್ಲಿ ಕಂಡಾತ', 'ಅದೇ ಊರು ಅದೇ ಮರ', 'ಗೆದ್ದ ದೊಡ್ಡಸ್ತಿಗೆ', 'ನಾವು ಕಟ್ಟಿದ ಸ್ವರ್ಗ', 'ಕಣ್ಣಿದ್ದರೂ ಕಾಣರು', 'ನಷ್ಟ ದಿಗ್ಗಜಗಳು', 'ಅಂಟಿದ ಅಪರಂಜಿ', ಇವರ ಇತರ ಕಾದಂಬರಿಗಳು.

ತೆರೆಮರೆಯಲ್ಲಿ, ಹಸಿವು ಮತ್ತು ಹಾವು-ಸಣ್ಣ ಕಥೆಗಳು, ಕಿಸಾಗೊತಮಿ, ಸೋಮಿಯ ಸೌಭಾಗ್ಯ, ಸಾವಿತ್ರಿ – ಸತ್ಯವಾನ್ ಇತ್ಯಾದಿ ಗೀತಾ ನಾಟಕಗಳು, ಕಟ್ಟೆ ಪುರಾಣ, ಗರ್ಭಗುಡಿ, ಗೆದ್ದವರ ಸಂಖ್ಯೆ ಕೆಲವು ನಾಟಕಗಳು, ಅಬೂವಿನಿಂದ ಬರ್ಮಾಕ್ಕೆ, ದಕ್ಷಿಣ ಹಿಂದೂಸ್ಥಾನ ಇತ್ಯಾದಿ ಪ್ರವಾಸ ಕಥನಗಳು.

ಹಳ್ಳಿಯ ಹತ್ತು ಸಮಸ್ತರು, ಮೈಗಳ್ಳತನ, ದಿನಚರಿಯಿಂದ, ಮೈಲಿಗಲ್ಲಿನೊಡನೆ ಮಾತುಕತೆ ಇತ್ಯಾದಿ ಪ್ರಬಂಧಗಳು. ಇವುಗಳಲ್ಲದೇ ಜಾನಪದ, ವಿಮರ್ಶೆ, ಕಲೆ ಹೀಗೆ ವಿವಿಧ ಪ್ರಕಾರಗಳಲ್ಲಿ ಸಾಹಿತ್ಯ ರಚನೆ ಮಾಡಿದ್ದಾರೆ.

'ಹುಚ್ಚು ಮನಸ್ಸಿನ ಹತ್ತು ಮುಖಗಳು' ಕಾರಂತರ ಆತ್ಮಕಥೆಯಾಗಿದ್ದು, ಮಕ್ಕಳಿಗಾಗಿ 'ಬಾಲ ಪ್ರಪಂಚ' ರಚಿಸಿದ್ದಾರೆ. 'ಅದ್ಭುತ ಜಗತ್ತು' ವಿನಂತ ಶ್ರೇಷ್ಠ ಕೃತಿಯನ್ನು ರಚಿಸಿರುವ ಅವರು ಅನೇಕ ಚಿತ್ರಕಥಾ ಪುಸ್ತಕಗಳನ್ನು ಕೂಡ ಅನುವಾದ ಮಾಡಿರುವರು. ಅವರು 'ವಿಜ್ಞಾನ ಪ್ರಪಂಚ' ಕೃತಿಯನ್ನು ನಾಲ್ಕು ಸಂಪುಟಗಳಲ್ಲಿ ರಚಿಸಿದ್ದು, ಅತ್ಯಮೂಲ್ಯ ಕೃತಿಯಾಗಿದೆ. ಅವರ 'ಸಿರಿಗನ್ನಡ ಅರ್ಥಕೋಶ'ವು ಕನ್ನಡದ ಶ್ರೇಷ್ಠ ನಿಘಂಟುಗಳಲ್ಲಿ ಒಂದಾಗಿದೆ.

ಕಾರಂತರ 'ಚೋಮನ ದುಡಿ' ಸುಧಾರಣಾವಾದಿ ಕಾದಂಬರಿಗಳಲ್ಲಿ ಪ್ರಮುಖವಾದ ಕೃತಿ ಎನಿಸಿದ್ದು, ಅದು ಇಂಗ್ಲಿಷ್‌ನಲ್ಲಿ ಪ್ರಸಿದ್ಧವಾಗಿರುವ ಮುಲ್ಕಿರಾಜ್ ಆನಂದ್ ಅವರ ಅನ್‌ಟಚೆಬಲ್ ಕೃತಿಗಿಂತ ಮೊದಲು (೧೯೩೧) ಪ್ರಕಟವಾದ ಕೃತಿ ಹಾಗೂ ಭಾರತದಲ್ಲಿ ದಲಿತ ಸಮಸ್ಯೆಯನ್ನು ಗಂಭೀರವಾಗಿ ವಿಶ್ಲೇಷಿಸಿದಂತ ಕಾದಂಬರಿ.

ಅವರ ಎಲ್ಲ ಕಾದಂಬರಿ, ನಾಟಕ ಮತ್ತಿತರ ಕೃತಿಗಳಲ್ಲಿ ಓದುಗರನ್ನು ಸೆಳೆಯುವ ಅಂಶಗಳೆಂದರೆ ಜೀವನ ಪ್ರೀತಿ, ಸ್ವತಂತ್ರ ಬದುಕಿನ ಛಲ ಮತ್ತು ಶ್ರದ್ಧೆಗಳು. ಜೊತೆಗೆ ಅದಮ್ಯವಾದ ಅನ್ವೇಷಣಾ ಶೀಲತೆ.

ಕರಾವಳಿಯ ಯಕ್ಷಗಾನದಂತ ಶ್ರೇಷ್ಠ ಕಲೆಗೆ ಹೊಸರೂಪು ನೀಡಿ ಹೊರಜಗತ್ತಿಗೆ ಪರಿಚಯಿಸಿ ದರಲ್ಲದೆ, ಅಂತರಾಷ್ಟ್ರೀಯ ಮಟ್ಟದಲ್ಲಿಯೂ ಆಡಿಸಿ, ತೋರಿಸಿದರು. ರಾತ್ರಿ ಇಡೀ ನಡೆಯುತ್ತಿದ್ದ ಯಕ್ಷಗಾನ ವನ್ನು ಕಡಿಮೆಗೊಳಿಸಿ ಕೆಲವೇ ಗಂಟೆಗೆ ಸೀಮಿತಗೊಳಿಸಿದರು.

೧೯೩೨ರಷ್ಟು ಹಿಂದೆಯೇ ಅವರು ಚಿತ್ರ ನಿರ್ಮಾಣದಲ್ಲಿಯೂ ಆಸಕ್ತಿ ತಳೆದಿದ್ದರು. ಚಿತ್ರ ತಯಾರಿಕೆಯಲ್ಲಿ ಯಾವುದೇ ವಿಧದ ಶಿಕ್ಷಣ ಪಡೆಯದಿದ್ದರೂ ಅವರು ಸ್ವತಃ ತಾವೇ ನಿರ್ಮಾಪಕರಾಗಿ, ಛಾಯಾ ಗ್ರಾಹಕರಾಗಿ, ನಟರಾಗಿ, ನಿರ್ದೇಶಕರಾಗಿ ಹಲವು ಪ್ರಯೋಗ ಮಾಡಿದರು. ಚಿತ್ರಕಲಾವಿದರೂ ಆಗಿ ತಮ್ಮ ಹಲವು ಕಾದಂಬರಿಗಳ ಮುಖಪುಟಕ್ಕೆ ತಾವೇ ಚಿತ್ರ ಬರೆದಿದ್ದರು.

ಅವರು ತಮ್ಮ ೩೦ನೇ ವಯಸ್ಸಿನಲ್ಲಿ(೧೯೩೨)ಯೇ 'ಡೊಮಿಂಗೊ' ಹಾಗೂ 'ಭೂತರಾಜ್ಯ' ಎಂಬ ಅಸ್ಪೃಶ್ಯತೆಯ ಕಥೆಯಿರುವ ಎರಡು ಮೂಕಿ ಚಿತ್ರಗಳನ್ನು ತೆಗೆದರು. ತೆಗೆದ ಚಿತ್ರವನ್ನು ವೀಕ್ಷಿಸುವ ಹಂತದಲ್ಲಿ ಫಿಲ್ಮಾ ಸುಟ್ಟುಹೋಯಿತು. ಎದೆಗುಂದದ ಕಾರಂತರು ಮತ್ತೆ ಸಿನಿಮಾ ತೆಗೆದು ಬೊಂಬಾಯಿಗೆ ಹೋಗಿ ನೆಗೆಟಿವ್‌ಗಳನ್ನು ಮುದ್ರಿಸಿ ಚಿತ್ರ ಮಾಡಿದರು.

ಹಲವು ವರ್ಷಗಳ ನಂತರ ಪುನಃ ಚಲನಚಿತ್ರ, ತಯಾರಿಕೆಗೆ ನಿಂತ (೧೯೭೭) ಅವರು ತಮ್ಮದೇ ಆದ 'ಕುಡಿಯರ ಕೂಸು' ಕಾದಂಬರಿ ಆಧರಿಸಿದ 'ಮಲೆಯ ಮಕ್ಕಳು' ಚಿತ್ರಕ್ಕೆ ಕಥೆ, ಸಂಭಾಷಣೆ ಬರೆದು ನಿರ್ದೇಶಿಸಿದರು. ಚಿತ್ರದಲ್ಲಿ ತಾರೆ ಕಲ್ಪನಾ ಪ್ರಮುಖ ಪಾತ್ರದಲ್ಲಿದ್ದು, ಪದ್ಮಚರಣ ಸಂಗೀತ ಒದಗಿಸಿದ್ದರು.

ಹೀಗೆ ಚಲನಚಿತ್ರರಂಗದೊಡನೆ ಸಕ್ರಿಯವಾಗಿ ತೊಡಗಿಸಿಕೊಂಡಿರುವ ಸಾಹಿತಿಗಳಲ್ಲಿ ಕಾರಂತರೇ ಮೊತ್ತಮೊದಲಿಗರು. ಅವರು ಕನ್ನಡ ವಾಕ್ಚಿತ್ರದ ಪ್ರಾರಂಭಕ್ಕೂ ಮೊದಲೇ ಚಿತ್ರ ನಿರ್ಮಾಣ ಸಾಹಸ ಕೈಗೊಂಡು ಯಶಸ್ವಿಯಾದಂತವರು. ಅವರ ಪ್ರಸಿದ್ಧ ಕಾದಂಬರಿ ಆಧಾರಿತ 'ಚೋಮನದುಡಿ' ಚಿತ್ರವು ಅಂತರಾಷ್ಟ್ರೀಯ ಮಟ್ಟದಲ್ಲಿ ಪ್ರಸಿದ್ಧಿಯಾಯಿತು.

**ಪ್ರಶಸ್ತಿ–ಪುರಸ್ಕಾರಗಳು :**

ತಮ್ಮ ಜೀವನ ಪರ್ಯಂತ ಸಾಮಾಜಿಕವಾಗಿ, ಸಾಹಿತ್ಯಕವಾಗಿ, ಸಾಂಸ್ಕೃತಿಕವಾಗಿ ವಿಶಿಷ್ಟ ಸೇವೆಯನ್ನು ಸಲ್ಲಿಸಿದ ಶಿವರಾಮಕಾರಂತರಿಗೆ ರಾಷ್ಟ್ರ ಮತ್ತು ರಾಜ್ಯ ಮಟ್ಟದಲ್ಲಿ ಹಲವು ಅತ್ಯುನ್ನತ ಪ್ರಶಸ್ತಿಗಳು ಸಂದಿದ್ದವು ಮುಖ್ಯವಾಗಿ–ವಿಶ್ವವಿದ್ಯಾನಿಲಯದ ಪದವಿಯನ್ನು ಅವರು ಹೊಂದಿರದಿದ್ದರೂ ಅವರ ವಿಶಿಷ್ಟ ಸೇವೆಯನ್ನು ಗಮನಿಸಿ ೮ ವಿಶ್ವವಿದ್ಯಾನಿಲಯಗಳು ಗೌರವ ಡಾಕ್ಟರೇಟ್ ನೀಡಿ ಗೌರವಿಸಿವೆ.

- ಮೈಸೂರಿನಲ್ಲಿ ನಡೆದ ೩೭ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಗೌರವಕ್ಕೂ ಪಾತ್ರರಾಗಿದ್ದವರು (೧೯೫೫).
- ಯಕ್ಷಗಾನ ಬಯಲಾಟ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ (೧೯೫೮)

❖ ಜಾನಪದ ನೃತ್ಯ ಕಲೆಗೆ ಸ್ವೀಡನ್ ಅಕಾಡೆಮಿ ಪ್ರಶಸ್ತಿ (೧೯೫೭)
❖ ಭಾರತ ಸರ್ಕಾರದ ಪದ್ಮಭೂಷಣ (೧೯೬೯)
❖ 'ಮೂಕಜ್ಜಿಯ ಕನಸುಗಳು' ಕೃತಿಗೆ ಜ್ಞಾನಪೀಠ ಪ್ರಶಸ್ತಿ (೧೯೭೮)
❖ 'ಮೈ ಮನಗಳ ಸುಳಿಯಲ್ಲಿ' ಕಾದಂಬರಿಗೆ ಪಂಪ ಪ್ರಶಸ್ತಿ (೧೯೯೦)

ಮೈಸೂರು ವಿಶ್ವವಿದ್ಯಾಲಯವು ಇಂಗ್ಲಿಷ್‌ನಲ್ಲಿ ಅವರ ಜೀವನ ಚರಿತ್ರೆಯನ್ನು ಪ್ರಕಟಿಸಿದ್ದು (೧೯೭೩). 'ಕಾರಂತ ಪ್ರಪಂಚ' ಎಂಬ ಅಭಿನಂದನ ಗ್ರಂಥವನ್ನು ಅರ್ಪಿಸಲಾಗಿದೆ (೧೯೬೯). ಕಾರಂತರು ತೀವ್ರ ಹೃದಯಾಘಾತದಿಂದ ತಮ್ಮ ೯೬ನೇ ವಯಸ್ಸಿನಲ್ಲಿ ೯-೧೨-೧೯೯೭ರಂದು ನಿಧನರಾದರು.

## ೪.೪.೧೨ ಕೊಳಂಬೆ ಪುಟ್ಟಣ್ಣ ಗೌಡರು(೧೯೦೩-೧೯೮೧)

ಮಲೆನಾಡಿನ ಮಡಿಲಾದ ಹಿಂದೆ ಪುತ್ತೂರು ತಾಲೂಕಿಗೆ ಸೇರಿದ್ದ ಚೊಕ್ಕಾಡಿಯಲ್ಲಿ ೧೫.೭.೧೯೦೩ರಲ್ಲಿ ಪುಟ್ಟಣ್ಣ ಗೌಡರ ಜನನ. ಅಮರಪಡ್ನೂರು ಗ್ರಾಮದ ಅಜ್ಜನಗದ್ದೆ ಶಾಲೆಯಲ್ಲಿ ಇವರು ಓದುತ್ತಿರುವಾಗಲೇ ಇವರ ಸೃಜನಶೀಲ ಪ್ರತಿಭೆ ವಿಕಸಿಸಲು ಪ್ರಾರಂಭ. ಆಗಲೇ ಓದುವ ಗೀಳು ಬಹಳ. ನಾಲ್ಕನೇ ತರಗತಿಯಲ್ಲಿ 'ದರ್ಬಾರು' ಎಂಬ ವಿಶಿಷ್ಟ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಬಹುಮಾನ ಗಳಿಸಿದ್ದರು. ಮುಂದೆ ಎಂಟನೆಯ ತರಗತಿಯ ವರೆಗಿನ ವಿದ್ಯಾಭ್ಯಾಸ ಖಾಸಗಿಯಾಗಿಯೇ ನಡೆಯಿತು.

೧೯೨೪ರಲ್ಲಿ ಅಧ್ಯಾಪಕ ತರಬೇತು ಪಡೆದು ೧೯೨೬ರಲ್ಲಿ ತಾವು ಕಲಿತ ಅಜ್ಜನಗದ್ದೆ ಶಾಲೆಯಲ್ಲಿ ತಿಂಗಳಿಗೆ ಹದಿನಾರು ರೂಪಾಯಿ ಪಗಾರದ ಅಧ್ಯಾಪಕರಾಗಿ ಸೇರಿದರು. ಕ್ರಮೇಣ ಅದೇ ಶಾಲೆಯಲ್ಲಿ ಮುಖ್ಯೋಪಾಧ್ಯಾಯರಾಗಿ ಬಡ್ತಿ ಪಡೆದರು. ಮುಂದೆ ಪಂಜ, ಕೋಟೆಮುಂಡುಗಾರು, ಬೊಬ್ಬೆಕೇರಿ, ಮಾಣಿ, ಪುತ್ತೂರು, ಉಪ್ಪಿನಂಗಡಿ ಮುಂತಾದ ಊರುಗಳ ಶಾಲೆಗಳಲ್ಲಿ ಅಧ್ಯಾಪಕರಾಗಿ ದುಡಿದು ೧೯೫೮ರಲ್ಲಿ ಸುಳ್ಯದ ಬೋರ್ಡ್ ಹೈಸ್ಕೂಲಿನಲ್ಲಿ ತಮ್ಮ ಸೇವೆಯಿಂದ ನಿವೃತ್ತಿ ಪಡೆದರು.

ಅಧ್ಯಾಪಕ ಕ್ಷೇತ್ರಕ್ಕೆ ಪಾದಾರ್ಪಣ ಮಾಡುವ ಕಾಲದಲ್ಲಿ ಮೊಳಹಳ್ಳಿ ಶಿವರಾಯ, ಎಂ.ಎನ್.ಕಾಮತ್, ಉಗ್ರಾಣ ಮಂಗೇಶರಾವ್ ಮೊದಲಾದ ಮಹನೀಯರ ಪ್ರೋತ್ಸಾಹ ದೊರಕಿದ ಪರಿಣಾಮವಾಗಿ ಅವರ ಸಾಹಿತ್ಯರಚನೆಯ ಪ್ರವೃತ್ತಿಗೆ ಗರಿಮೂಡಿತು. ಕವಿ ಕುವೆಂಪು ಅವರ ಬೀಗರು. ಕವನ, ಲೇಖನ, ನಾಟಕ ಇತ್ಯಾದಿಗಳನ್ನು ರಚಿಸತೊಡಗಿದರು. ಹಲವಾರು ಮಕ್ಕಳ ನಾಟಕಗಳನ್ನು ರಚಿಸಿ ಯಶಸ್ವಿಯಾಗಿ ಆಡಿಸಿದರು. ಯಕ್ಷಗಾನವಂತೂ ಅವರ ಮನೆತನಕ್ಕೇ ಬಂದ ಹವ್ಯಾಸ. ಉತ್ತಮ ಅರ್ಥದಾರಿಯೆಂದು ಖ್ಯಾತಿ ಪಡೆದವರು.

ಕೊಳಂಬೆಯವರು ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಕೃತಿರಚನೆ ಮಾಡಿದ್ದಾರೆ. ಅವರ ಪ್ರಥಮ ಪ್ರಕಟಿತ ಪುಸ್ತಕ 'ಅಂಧಕಾಸುರ ಕಾಳಗ' ಎಂಬ ಯಕ್ಷಗಾನ ಕೃತಿ(೧೯೨೬). 'ಹೂವೀಡು' ಮತ್ತು 'ಮಾತಿಲ್ಲಾ ಮಾತಿಲ್ಲಾ' ಇವು ಬಾಲಸಾಹಿತ್ಯ ಕೃತಿಗಳು. 'ಕಾಲೂರ ಚೆಲುವೆ', 'ನುಡಿವಣಿಗಳು' ಅವರ ಅಚ್ಚಗನ್ನಡದ ವಿಶಿಷ್ಟ ಕೃತಿಗಳು. 'ಅಡಗುವ ಆಟ', 'ಸಾಹಿತಿಗೆ ಮೆಚ್ಚು', 'ಒಕ್ಕಟ್ಟು', 'ಹೊನ್ನನ ನಾಯಿಗಳು' ಹಾಗೂ 'ಬೆರಳುಗಳಿಂದ ಅದೃಷ್ಟ' ಇವರ ಇತರ ಪ್ರಕಟಿತ ಕೃತಿಗಳು. ಇವರ ಮಕ್ಕಳಾದ ಶಿಲಾವತಿ ಕೊಳಂಬೆ, ಕೆ.ಚಿದಾನಂದ ಗೌಡ ಇವರೂ ಸಾಹಿತ್ಯಕ್ಷೇತ್ರದಲ್ಲಿ ಸೇವೆಸಲ್ಲಿಸಿದ್ದಾರೆ.

### ೪.೪.೧೩ ಜೆ. ಎನ್. ಲಕ್ಷ್ಮಣ ಪೈ (೧೯೦೪ – ೧೯೭೫)

ಪುತ್ತೂರು ದರ್ಬೆಯ ಸ್ವಗೃಹದಲ್ಲಿ ೧೧–೫–೧೯೦೪ರಂದು ಜನಿಸಿದ ಲಕ್ಷ್ಮಣ ಪೈಯವರು ಮೊದಲು ಪುತ್ತೂರಿನಲ್ಲೂ, ಪ್ರೌಢಶಾಲಾ ಶಿಕ್ಷಣವನ್ನು ಮಂಗಳೂರು ಕೆನರಾ ಹೈಸ್ಕೂಲಿನಲ್ಲಿ ಪೂರೈಸಿದರು. ಸಾಂಸಾರಿಕ ಸಂಕಷ್ಟಗಳ ನಡುವೆಯೇ ಈಜಾಟ ನಡೆಸುತ್ತ ಸಾಹಿತ್ಯದ ಆನಂದದಲ್ಲಿ ಜೀವನ ನಡೆಸಿದವರು ಲಕ್ಷ್ಮಣ ಪೈ. ನಿರಂತರ ಅಧ್ಯಯನಶೀಲತೆಯ ಫಲವಾಗಿ ವಿದ್ವಾನ್ ಮತ್ತು ಪಿ.ಓ.ಎಲ್. ಪದವಿಗಳನ್ನು ಪಡೆದರು. ಬಾಲಸಾಹಿತ್ಯದ ನಿರ್ಮಾತೃವಾಗಿ ಹೆಸರುಗಳಿಸಿದ ಲಕ್ಷ್ಮಣ ಪೈ ಎಪ್ಪತ್ತೊಂದು ವರ್ಷಗಳ ತುಂಬು ಬಾಳನ್ನು ಸಾಗಿಸಿ ದಿನಾಂಕ ೨೮–೭–೧೯೭೫ರಂದು ಪುತ್ತೂರು ಬೊಳುವಾರಿನ ತಮ್ಮ ಮನೆಯಲ್ಲಿ ಕೊನೆಯುಸಿರನ್ನು ಎಳೆದರು.

ಪುತ್ತೂರಿನಲ್ಲಿ ಬೋರ್ಡ್ ಹೈಸ್ಕೂಲಿನಲ್ಲಿ ವಿದ್ಯಾರ್ಥಿಯಾಗಿದ್ದಾಗ ಉಗ್ರಾಣ ಮಂಗೇಶರಾಯ ರಿಂದ ಕನ್ನಡ ಪಾಠಗಳನ್ನು ಕಲಿಯುವ ಸೌಭಾಗ್ಯ ಲಕ್ಷ್ಮಣ ಪೈಯರಿಗೆ ಪ್ರಾಪ್ತವಾಗಿತ್ತು. ಪಂಜೆ ಮಂಗೇಶ ರಾಯರ ಪ್ರಭಾವ ನಿಚ್ಚಳವಾಗಿ ಅವರ ಮೇಲಾಗಿತ್ತು[೨೨].

೧೯೨೮ರಲ್ಲಿ ಲಕ್ಷ್ಮಣ ಪೈಯವರಿಗೆ ಪತ್ರಿಕಾ ವ್ಯವಸಾಯದ ಹಂಬಲ ಉಂಟಾಗಿ 'ವಸಂತ' ಪತ್ರಿಕೆಯ 'ಬ್ಲಾಕ್' ತಯಾರಿಸಿದ್ದರು. ಬಳಿಕ ಅದನ್ನು ಕಾರಂತರಿಗೆ ಹಸ್ತಾಂತರಿಸಿದರು. ಸಾಹಿತ್ಯದ ಅಧ್ಯಯನ ವ್ಯವಸಾಯದಲ್ಲಿ ತೊಡಗಿದ ಹೊಸದರಲ್ಲಿ ಲಕ್ಷ್ಮಣ ಪೈಯವರು 'ದಾಮಾಜಿ ಪಂತ' ಎಂಬ ಭಕ್ತಿ ಪ್ರಧಾನವಾದ ನಾಟಕವನ್ನು ರಚಿಸಿದರು. ಸ್ಥಳೀಯ ಗೆಳೆಯರ ಗುಂಪಿನಲ್ಲಿ ಬೆರೆತು ಆ ನಾಟಕವನ್ನು ನಿರ್ದೇಶಿಸಿ, ದಾಮಾಜಿ ಪಂತನ ಪಾತ್ರವನ್ನು ಸ್ವತಃ ನಿರ್ವಹಿಸಿದರು. ಆ ನಾಟಕದ ಪ್ರದರ್ಶನ ಪೈಯವರಿಗೆ ಜನಪ್ರಿಯತೆಯನ್ನು ತಂದುಕೊಟ್ಟಿತು. ಮುಂದೆ ೧೯೨೬ರಲ್ಲಿ ಆ ನಾಟಕ ಅಚ್ಚಾಯಿತು. ಹಲವು ವರ್ಷಗಳ ಬಳಿಕ ಲಕ್ಷ್ಮಣ ಪೈಯವರು 'ಸತ್ಯವಾನ್–ಸಾವಿತ್ರಿ' ಎಂಬ ನಾಟಕವನ್ನು ತನ್ನ ಮಾತೃಭಾಷೆ ಕೊಂಕಣಿಯಲ್ಲಿ ರಚಿಸಿದ್ದರು.

ಲಕ್ಷ್ಮಣ ಪೈಯವರು ಮಕ್ಕಳಿಗಾಗಿ ರಚಿಸಿದ ಕವಿತೆಗಳಿಂದಲೇ ನಾಡಿನಾದ್ಯಂತ ಹೆಸರು ಗಳಿಸಿದರು[೨೩]. 'ಮಕ್ಕಳ ಕವಿ' ಎಂದೇ ಅವರು ವಿಶೇಷ ಪ್ರಸಿದ್ಧರಾಗಿದ್ದಾರೆ. ಮಂಗಳೂರಿನ ಕೆನರಾ ಹೈಸ್ಕೂಲಿನಲ್ಲಿ ಕಲಿಯುತ್ತಿದ್ದಾಗ ಶಾಲೆಯ ಭಿತ್ತಿಪತ್ರಿಕೆಯಲ್ಲಿ ಅವರ ಕವನಗಳು ಕಾಣಿಸಲಾರಂಭಿಸಿದವು. ಕೆಲವು ಬಿಡಿ ಕವನಗಳು 'ಸ್ವದೇಶಾಭಿಮಾನಿ' ಪತ್ರಿಕೆಯಲ್ಲೂ ಪ್ರಕಟಗೊಂಡವು. ಅವರ ಮೊದಲ ಕವನ ಸಂಕಲನ 'ಪದ್ಯರತ್ನಾವಳಿ' ೧೯೨೧ರಲ್ಲಿ ಅಚ್ಚಾದಾಗ ಅವರಿನ್ನೂ ಪ್ರೌಢಶಾಲಾ ವಿದ್ಯಾರ್ಥಿಯಾಗಿದ್ದರು. ಪದ್ಯ ರತ್ನಾವಳಿಯೂ ಸೇರಿದಂತೆ ಚಿಕ್ಕಚಿಕ್ಕ ಮಕ್ಕಳಿಗಾಗಿ ಪೈಯವರು ಐದು ಕವನಸಂಕಲನಗಳನ್ನು ಬರೆದಿದ್ದಾರೆ. ಅವುಗಳಲ್ಲಿ 'ಅಭಿನಯ ಗೀತಾವಳಿ' ಮತ್ತು 'ಅಭಿನಯ ಗೀತ ಮಂಜರಿ' ೧೯೩೩ರಲ್ಲಿ ಪ್ರಕಟವಾದವು. 'ಶಿಶು ಗೀತಮಾಲೆ' ೧೯೫೯ರಲ್ಲಿ ಬೆಳಕು ಕಂಡಿತು. 'ದಸರೆಯ ಕಾಣಿಕೆ' ೧೯೭೧ರಲ್ಲಿ ಪ್ರಕಟಗೊಂಡ ಮತ್ತೊಂದು ಕವನ ಸಂಕಲನ, ಇಷ್ಟಲ್ಲದೆ ಪೈಯವರ 'ಕೀರ್ತನಾಂಜಲಿ' ಎಂಬ ಕೀರ್ತನೆಗಳ ಸಂಗ್ರಹವೊಂದು ೧೯೬೪ರಲ್ಲಿ ಬೆಳಕು ಕಂಡಿತ್ತು. 'ಅಭಿನಯ ಗೀತಾವಳಿ' ಹಾಗೂ 'ಶಿಶುಗೀತಮಾಲೆ' ಸಂಕಲನಗಳು ವಿಮರ್ಶಕರ ವಿಶೇಷ ಮೆಚ್ಚುಗೆಗೆ ಪಾತ್ರವಾದುವಲ್ಲದೆ ಅವುಗಳಿಂದ ಆಯ್ದ ಕೆಲವು ಕವನಗಳು 'ನೂತನ ಕನ್ನಡ ಪಾಠಮಾಲೆ' ಎಂಬ ಪಠ್ಯಗಳಲ್ಲೂ ಸೇರ್ಪಡೆಯಾದುವು. ಪೈಯವರು ತಮ್ಮ ಕವಿತೆಗಳನ್ನು ಹಾವಭಾವಗಳಿಂದ, ಧ್ವನಿಯ ಏರಿಳಿತದಿಂದ ಸ್ವರಭಾರ ಸಹಿತವಾಗಿ, ನಾಟಕೀಯವಾಗಿ ಹಾಡುವಾಗ ಅಲ್ಲಿನ ಚಿತ್ರಣವು ನಮ್ಮ ಕಣ್ಣೆದುರಿಗೇ ನಡೆಯುತ್ತಿದೆಯೆಂಬ ಭಾವನೆಯುಂಟಾಗುತ್ತಿತ್ತೆಂದು ಅವರ ಮಗ ಶ್ರೀ ಜಿ. ವರದರಾಯ ಪೈ ನೆನಪು ಮಾಡಿಕೊಳ್ಳುತ್ತಾರೆ.

ಲಕ್ಷ್ಮಣ ಪೈಯವರ 'ಮಂಗನ ಮದುವೆ' ಬಿಸಿಲೂ ಮಳೆಯೂ ಕೂಡಿದ ವಿಚಿತ್ರ ಸನ್ನಿವೇಶದಲ್ಲಿ ಕೋತಿಗೂ ಕೋಳಿಗೂ ಮದುವೆಯಾದ ವಿಲಕ್ಷಣ ಚಿತ್ರಣವನ್ನು ನೀಡುತ್ತದೆ. 'ತೋಳನೂ ಕುರಿಮರಿಯೂ' ಕವಿತೆಯಲ್ಲಿ ದುಷ್ಟರು ಯಾವ ನ್ಯಾಯ ನೀತಿಯನ್ನೂ ಲೆಕ್ಕಿಸುವುದಿಲ್ಲ ಎಂಬ ನೀತಿಯಿದೆ. ಉಪ್ಪಿನಂಗಡಿಯಲ್ಲಿ ನೇತ್ರಾವತಿ ನದಿಯಲ್ಲಿ ನೆರೆಯುಕ್ಕಿದಾಗಿನ, ಕವಿಯ ಸ್ವಾನುಭವ 'ನೆರೆ' ಕವನದ ವಸ್ತು. 'ಆಟಿ ಕಳೆಂಜ' ಕವಿತೆಯಲ್ಲಿ ತುಳುನಾಡಿನ ಜಾನಪದ ವೇಷದ ಚಿತ್ರಣ ಕಣ್ಣಿಗೆ ಕಟ್ಟುವಂತಿದೆ. 'ತಿರುಪತಿ ದಾಸರು', 'ನವಿಲು' 'ಸ್ವರ್ಗ–ನರಕ', 'ಕೋಡುಬಳೆ' ಇತ್ಯಾದಿ ಕವನಗಳು ಮಕ್ಕಳು ಅಭಿನಯ ಪೂರ್ವಕ ಹಾಡಿ ಕುಣಿಯಲು ಯೋಗ್ಯವಾಗಿವೆ.

ಯಕ್ಷಗಾನ ಬಯಲಾಟದ ಕುರಿತು ಪೈಯವರು ಬರೆದ ಕವಿತೆ 'ಲಂಕಾದಹನ' ಪ್ರಸಂಗವನ್ನು ಸ್ವಾರಸ್ಯವಾಗಿ ಚಿತ್ರಿಸುತ್ತದೆ. ಜಾಗಟೆ, ಮದ್ದಳೆ, ಚೆಂಡೆಯ ಸದ್ದು, ರಕ್ಕಸನ ಆರ್ಭಟೆಯ ವಿವರೊಂದಿಗೆ ತೊಡಗುವ ಕವಿತೆ ಮುಕ್ತಾಯಗೊಳ್ಳುವ ಹೊತ್ತಿಗೆ ರಾವಣನ ಅಪ್ಪಣೆಯಂತೆ ಅವರ ದೂರ್ತರಾದ ಅನುಯಾಯಿಗಳು ಹನುಮಂತನ ಬಾಲಕ್ಕೆ ಬೆಂಕಿಯಿಟ್ಟ ವಿವರವಿದೆ.

ಏನು ಭಯಂಕರ

ಬೆಂಕಿಯ ಅಬ್ಬರ

ಮುಳಿ ಹುಲ್ಲುರಿಯುವ ಬಿರುನೋಟ

ಲಂಕೆಯ ಸುಟ್ಟನು

ಮಾರುತಿ ನೆಗೆದನು

ಸೋಜಿಗವಲ್ಲವೆ ಬಯಲಾಟ?

ಎಂದು ಪ್ರಶ್ನಿಸುತ್ತಾ ಕವಿತೆಯನ್ನು ಕೊನೆಗೊಳಿಸುತ್ತಾರೆ ಕವಿ ಪೈಯವರು. ಹೀಗೆ ಅವರ ಅನೇಕ ಕವಿತೆಗಳು 'ಮುಗ್ಧರ ಮನಸ್ಸನ್ನೆಳೆಯುವುದಲ್ಲದೆ ವಿದಗ್ಧರ ಪ್ರಶಂಸೆಗೂ ಪಾತ್ರವಾಗುವಂತಿವೆ' ಎಂದು ಡಾ. ವಿ. ಕೃ. ಗೋಕಾಕ್ ಹೇಳುತ್ತಾರೆ.

### ೪.೪.೧೪ ಎಂ. ಮರಿಯಪ್ಪ ಭಟ್ಟ (೧೯೦೬ – ೧೯೮೦)

ಪುತ್ತೂರು ತಾಲೂಕಿನ ಕಬಕ ಗ್ರಾಮದ ಮುಂಗ್ಲಿಮನೆಯಲ್ಲಿ ಹವ್ಯಕ ಕುಟುಂಬವೊಂದರಲ್ಲಿ ೧೯೦೬ ಜುಲೈ ತಿಂಗಳ ೨೮ರಂದು ಮರಿಯಪ್ಪ ಭಟ್ಟರು ಜನಿಸಿದರು. ಅವರ ತಂದೆ ಗೋವಿಂದ ಭಟ್ಟರು. ತಾಯಿ ಕಾವೇರಮ್ಮ, ಕಷ್ಟ ಸಹಿಷ್ಣುವಾದ ಮರಿಯಪ್ಪ ಭಟ್ಟರು ಎಲ್ಲವನ್ನು ಧೈರ್ಯದಿಂದ ಎದುರಿಸಿ ಪುತ್ತೂರು ಹಾಗೂ ಮಂಗಳೂರುಗಳಲ್ಲಿ ವಿದ್ಯಾಭ್ಯಾಸ ಮಾಡಿ ೧೯೨೮ರಲ್ಲಿ ಗಣಿತದಲ್ಲಿ ಪದವಿಯನ್ನು ಪಡೆದರು. ವಿದ್ಯಾರ್ಥಿ ದೆಸೆಯಲ್ಲಿ ಮರಿಯಪ್ಪ ಭಟ್ಟರಿಗೆ ಕನ್ನಡದಲ್ಲಿ ಆಸಕ್ತಿಯನ್ನು ಹುಟ್ಟಿಸಿದವರು ಉಗ್ರಾಣ ಮಂಗೇಶರಾಯರು, ಮುಳಿಯ ತಿಮ್ಮಪ್ಪಯ್ಯನವರು ಹಾಗೂ ಮುಳಿಯ ಶಂಕರ ಭಟ್ಟರು. ಓದು ಮುಗಿಸಿದರೂ ಊರಿನಲ್ಲಿ ಕೆಲಸ ದೊರೆಯದಿದ್ದರಿಂದ ಅವರು ಮದರಾಸಿಗೆ ಹೋದರು.

ಮದ್ರಾಸು ಕ್ರಿಶ್ಚಿಯನ್ ಕಾಲೇಜು ಹೈಸ್ಕೂಲ್‌ನಲ್ಲಿ ಎರಡು ತಿಂಗಳ ಕಾಲ ಪಂಡಿತರಾಗಿಯೂ ಬಳಿಕ ಗಣಿತದ ಅಧ್ಯಾಪಕರಾಗಿಯೂ ದುಡಿದರು. ಮುಂದೆ ತಮ್ಮ ಸ್ವಂತ ಪರಿಶ್ರಮದಿಂದ ಕಲಿತು ಮದರಾಸು ವಿಶ್ವವಿದ್ಯಾನಿಲಯದಿಂದ ಕನ್ನಡ ಎಂ.ಎ. ಮತ್ತು ಎಲ್.ಟಿ. ಪದವಿಯನ್ನೂ ವಿದ್ವಾನ್ ಪದವಿಯನ್ನೂ ಪಡೆದರು. ೧೯೩೩ರಲ್ಲಿ ಅವರಿಗೆ ಸತ್ಯಭಾಮಾ ಎಂಬವರೊದನೆ ವಿವಾಹವಾಯಿತು. ಮೂವರು ಗಂಡು ಹಾಗೂ ಐವರು ಹೆಣ್ಣು ಮಕ್ಕಳ ತುಂಬು ಸಂಸಾರವಾಗಿತ್ತು. ೧೯೪೦ರಲ್ಲಿ ಮರಿಯಪ್ಪ ಭಟ್ಟರು ಮದರಾಸು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಉಪನ್ಯಾಸಕರಾಗಿ ನೇಮಕಗೊಂಡು ಮುಂದೆ ರೀಡರ್ ಆಗಿ ಭಡ್ತಿ ಪಡೆದರು.

೧೯೫೫-೫೬ರಲ್ಲಿ ಮರಿಯಪ್ಪ ಭಟ್ಟರು ಬ್ರಿಟಿಷ್ ಕೌನ್ಸಿಲಿನ ನೆರವಿನಿಂದ ಇಂಗ್ಲೆಂಡಿಗೆ ಹೋಗಿ ಲಂಡನ್ನಿನ ಸ್ಕೂಲ್ ಆಫ್ ಆಫ್ರಿಕನ್ ಸ್ಟಡೀಸ್‌ನಲ್ಲಿ ಭಾಷಾ ವಿಜ್ಞಾನದ ಮೇಲೆ ಹಲವು ಉಪನ್ಯಾಸಗಳನ್ನು ನೀಡಿದರಲ್ಲದೆ, ಆ ಕ್ಷೇತ್ರದಲ್ಲಿ ವಿಶೇಷ ಅಧ್ಯಯನವನ್ನು ನಡೆಸಿದರು[೨೧]. ಇದರಿಂದ ಅವರು ಮುಂದೆ ನಮ್ಮ ದೇಶದ ಕೆಲವೇ ಶ್ರೇಷ್ಠ ಭಾಷಾಶಾಸ್ತ್ರಜ್ಞರಲ್ಲಿ ಒಬ್ಬರೆಂಬ ಕೀರ್ತಿಗೆ ಪಾತ್ರರಾದರು. ಇಂಗ್ಲೆಂಡಿನಿಂದ ಮರಳಿದೊಡನೆಯೇ ೧೯೫೬ರಲ್ಲಿ ಮದರಾಸು ವಿದ್ಯಾನಿಲಯದ ಕನ್ನಡ ವಿಭಾಗದಲ್ಲಿ ಪ್ರಾಧ್ಯಾಪಕರೂ, ಮುಖ್ಯಸ್ಥರೂ ಆಗಿ ನೇಮಕಗೊಂಡ ಪ್ರೊ. ಭಟ್ಟರು ೧೯೭೨ರಲ್ಲಿ ತಮ್ಮ ಅರುವತ್ತಾರನೆಯ ವಯಸ್ಸಿನಲ್ಲಿ ಆ ಹುದ್ದೆಯಿಂದ ನಿವೃತ್ತರಾದರು.

ಬಳಿಕ ಸ್ವಲ್ಪ ಸಮಯ ಅವರು ಕನ್ನಡ ಸಾಹಿತ್ಯ ಪರಿಷತ್ತು ನಿಘಂಟು ಸಮಿತಿಯ ಗೌರವ ಅಧ್ಯಕ್ಷರಾಗಿಯೂ, ಸಂಪಾದಕರಾಗಿಯೂ ಸೇವೆಸಲ್ಲಿಸಿದರು. ಅಂತೆಯೇ ಉಡುಪಿಯ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರದ ಸಂಶೋಧಕ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡುತ್ತಿದ್ದರು. ನಿಘಂಟುಕಾರರಾಗಿ ಮರಿಯಪ್ಪ ಭಟ್ಟರು ಮಾಡಿದ ಸೇವೆ ಗಣನೀಯವಾದುದು. ರೆ। ಫಾ। ಎಫ್. ಕಿಟ್ಟೆಲ್ ಅವರ ಕನ್ನಡ ನಿಘಂಟನ್ನು ಪರಿಷ್ಕರಿಸಿ ವಿಸ್ತೃತಗೊಳಿಸಿ ನಾಲ್ಕು ಭಾಗಗಳಲ್ಲಿ ಮದರಾಸು ವಿಶ್ವವಿದ್ಯಾಲಯದ ಮೂಲಕ ಪ್ರಕಟಿಸಿ "ಅಭಿನವ ಕಿಟ್ಟೆಲ್" ಎಂಬ ಮನ್ನಣೆಗೆ ಪಾತ್ರರಾದರು. ಕಿಟ್ಟೆಲ್ ಅವರಿಗೆ ದೊರೆಯದಿದ್ದ ಹಲವು ಪ್ರಾಚೀನ ಕನ್ನಡ ಕಾವ್ಯಗಳಿಂದ ಪದಗಳನ್ನು ಸಂಗ್ರಹಿಸಿ ಆ ನಿಘಂಟಿಗೆ ಸೇರಿಸಿ ಅದನ್ನು ಇನ್ನಷ್ಟು ಪರಿಪೂರ್ಣವೂ, ಉಪಯುಕ್ತವೂ ಆಗುವಂತೆ ಮಾಡಿದರು.

ಮರಿಯಪ್ಪ ಭಟ್ಟರು ತುಳು-ಇಂಗ್ಲಿಷ್ ನಿಘಂಟನ್ನೂ ಹವ್ಯಕ-ಇಂಗ್ಲಿಷ್ ನಿಘಂಟನ್ನೂ ರಚಿಸಿದಲ್ಲದೆ. ಇತರ ಭಾಷಾ ಪ್ರಾಧ್ಯಾಪಕರುಗಳೊಂದಿಗೆ ಸೇರಿ "ದ್ರಾವಿಡ ಜ್ಞಾತಿ ಪದಕೋಶ"ವನ್ನು ಸಿದ್ಧಪಡಿಸಿದರು. ಇದರ ಮೊದಲ ಸಂಪುಟ ಮಾತ್ರ ಪ್ರಕಟವಾಗಿದೆ. ಇವರು ಹಲವಾರು ನಿಘಂಟು ರಚನಾ ಸಮಿತಿಗಳ ಅಧ್ಯಕ್ಷರಾಗಿಯೂ ಸದಸ್ಯರಾಗಿಯೂ ದುಡಿದಿದ್ದಾರೆ. ತಾವೇ ಸ್ವತಃ ಹಾಗೂ ಇತರ ವಿದ್ವಾಂಸ ರೊಂದಿಗೆ ಸೇರಿ ಕೆಲವು ಅಪೂರ್ವವಾದ ಹಳೆಗನ್ನಡ ಕಾವ್ಯಗಳನ್ನು ಉಪಯುಕ್ತವಾದ ಇತರ ಕೆಲವು ಕೃತಿಗಳನ್ನೂ ಅವರು ಸಂಪಾದಿಸಿ ಅವುಗಳಿಗೆ ಸಂಶೋಧನಾತ್ಮಕ ಮತ್ತು ವಿಮರ್ಶಾತ್ಮಕ ಮುನ್ನುಡಿ ಹಾಗೂ ಪ್ರಸ್ತಾವನೆಗಳನ್ನು ಬರೆದಿದ್ದಾರೆ.

'ಅಭಿನವ ಮಂಗರಾಜ ನಿಘಂಟು', 'ಛಂದಸ್ಸಾರ', 'ವರ್ಧಮಾನ ಪುರಾಣ', 'ಪಾರ್ಶ್ವನಾಥ ಪುರಾಣ', 'ಜಾತಕ ತಿಲಕಂ', 'ವಿಷ್ಣು ಪುರಾಣ', 'ಸಂಗೀತ ರತ್ನಾಕರ', 'ವ್ಯವಹಾರ ಗಣಿತ ಸದ್ಗುರು ರಹಸ್ಯ' ಮುಂತಾದುವು ಅವರು ಸಂಪಾದಿಸಿದ ಹಳೆಗನ್ನಡದ ಕೃತಿಗಳು, ಹಳೆಗನ್ನಡ ನಡುಗನ್ನಡ ಕಾವ್ಯ ಸಂಗ್ರಹ, ಹೊಸಗನ್ನಡ ಕಾವ್ಯಶ್ರೀ, ಸರ್ವಜ್ಞನ ವಚನ ಸಂಗ್ರಹ ಮೊದಲಾದುವು ಇವರ ಇತರ

ಸಂಪಾದಿತ ಕೃತಿಗಳು, ಕನ್ನಡ ಸಂಸ್ಕೃತಿ, ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ, ಸಂತರ ಚರಿತೆ ಮುಂತಾದವು ಮರಿಯಪ್ಪ ಭಟ್ಟರ ಇತರ ಕೃತಿಗಳು.

ಹಲವಾರು ಸಂಘ, ಸಮಿತಿ, ಸಂಸ್ಥೆಗಳ ಸದಸ್ಯರಾಗಿ ಕೆಲವು ಕಾಲ ಕೇಂದ್ರ ಫಿಲಂ ಸೆನ್ಸಾರ್ ಮಂಡಳಿಯ ಕನ್ನಡ ಸಲಹಾ ಸಮಿತಿಯ ಸದಸ್ಯರಾಗಿ ಅನೇಕ ಪಠ್ಯ ಪುಸ್ತಕ ಸಮಿತಿ ಹಾಗೂ ಬೋರ್ಡ್ ಆಫ್ ಸ್ಟಡೀಸ್‌ಗಳ ಸದಸ್ಯರಾಗಿ ಹಲವು ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ವ್ಯಕ್ತಿ ಮರಿಯಪ್ಪ ಭಟ್ಟರು, ತಮ್ಮ ೭೪ನೇ ವಯಸ್ಸಿನಲ್ಲಿ ದಿನಾಂಕ ೨೩-೩-೧೯೮೦ರಂದು ದಿವಂಗತರಾದರು.

## ೪.೪.೧೫ ದಾಮೋದರ ಬಾಳಿಗಾ (೧೯೦೮-೧೯೮೫)

ದಾಮೋದರ ಬಾಳಿಗರು ಹುಟ್ಟಿದ್ದು ದಕ್ಷಿಣಕನ್ನಡ ಜಿಲ್ಲೆಯ ಪುತ್ತೂರಿನಲ್ಲಿ, ೭ ಸೆಪ್ಟೆಂಬರ್ ೧೯೦೮ ರಂದು. ತಂದೆ ಅಣ್ಣಪ್ಪಯಾನೆ ನಾರಾಯಣ ಬಾಳಿಗರು, ತಾಯಿ ಲಕ್ಷ್ಮೀದೇವಿಯವರು. ಬಾಳಿಗರ ವಿದ್ಯಾಭ್ಯಾಸ ಪ್ರೌಢಶಾಲೆಯವರೆಗೆ ಪುತ್ತೂರು ಬೋರ್ಡ್ ಹೈಸ್ಕೂಲಿನಲ್ಲಿ. ಇಂಟರ್ ಮೀಡಿಯೇಟ್ ಕಲಿತದ್ದು ಮಂಗಳೂರಿನ ಸರಕಾರೀ ಕಾಲೇಜಿನಲ್ಲಿ. ಬಿ.ಎ. ಪದವಿಗಾಗಿ ಓದಿದ್ದು ಸಂತ ಎಲೋಶಿಯಸ್ ಕಾಲೇಜಿನಲ್ಲಿ.

ಬಾಳಿಗರು ಪ್ರೌಢಶಾಲೆಯಲ್ಲಿ ಕಲಿಯುತ್ತಿರುವಾಗಲೇ ಬರೆದ ಕವನ 'ಕಾಫಿಯ ಗುಟುಕು'. ಇವರ ಇತರ ಕೃತಿಗಳು, 'ಅಳಿಲ ಸೇವೆ', ಅಜ್ಜಿಕತೆ', 'ಅತ್ತೆಯಕರಾರು ಮತ್ತು ಇತರ ಕಥೆಗಳು', 'ಇಲಿಮನೆ ಗಲಿಬಿಲಿ', ಉಂಡಾಡಿ ತೋಳ', 'ಗೋವಿನ ಕಥೆ', 'ಚಾಡಿ ಮೈನಾ ಮತ್ತು ಇತರ ಕಥೆಗಳು', 'ನೂಲುವ ತಕಲಿ', 'ಬೆಲ್ಲದ ಮಲ್ಲ ಮತ್ತು ಇತರ ಕಥೆಗಳು', 'ಸೀನಿನ ಸೀನ', ಮಾತಾಳಿ ಆಮೆ ಮತ್ತು ಇತರ ಕಥೆಗಳು', ಮತ್ತು 'ಹನಿಕಥೆಗಳು. ಇವರು ಬರೆದ 'ಗೋವಿನ ಕಥೆ'ಗೆ ಬಹುಮಾನವೂ ಬಂದಿದೆ.

## ೪.೪.೧೬ ಕೆಮ್ಮಿಂಜೆ ಸುಬ್ರಾಯ ಉಪಾಧ್ಯಾಯ(೧೯೧೧-೧೯೭೯)

ಕೆಮ್ಮಿಂಜೆ ಸುಬ್ರಾಯ ಉಪಾಧ್ಯಾಯ ಜನಿಸಿದ್ದು ೧೯೧೧ರಲ್ಲಿ ಪುತ್ತೂರು ತಾಲೂಕಿನ ಕೆಮ್ಮಿಂಜೆಯಲ್ಲಿ. ತಂದೆ ರಾಮ ಉಪಾಧ್ಯಾಯ, ತಾಯಿ ಕಾವೇರಮ್ಮ. ಸುಬ್ರಾಯ ಉಪಾಧ್ಯಾಯರ ಪ್ರಾಥಮಿಕ ವಿದ್ಯಾಭ್ಯಾಸ ಪುತ್ತೂರಿನಲ್ಲಿ ನಡೆಯಿತು. ಪುತ್ತೂರು ಬೋರ್ಡ್ ಹೈಸ್ಕೂಲಿನಲ್ಲಿ ಪ್ರೌಢಶಿಕ್ಷಣ ಪೂರೈಸಿದ ಅವರು,

ಶಿಕ್ಷಕ ತರಬೇತಿ ಪಡೆದ ಇವರು ೧೯೩೬ ರಲ್ಲಿ ಕನ್ಯಾನ ಪ್ರಾಥಮಿಕ ಶಾಲೆಯಲ್ಲಿ ಅಧ್ಯಾಪಕರಾಗಿ ವೃತ್ತಿ ಜೀವನವನ್ನು ಆರಂಭಿಸಿದರು. ಸುಮಾರು ೩೩ ವರ್ಷಗಳ ಕಾಲ ಸೇವೆ ಸಲ್ಲಿಸಿದ ಇವರು ಕಲ್ಲಡ್ಕ, ಉಪ್ಪಿನಂಗಡಿ, ಮಚ್ಚಿನ, ಬೆಳ್ತಂಗಡಿ, ಪುಂಜಾಲಕಟ್ಟೆ, ಬಂಟ್ವಾಳ ಮೊದಲಾದ ಊರುಗಳಲ್ಲಿ ಅಧ್ಯಾಪಕರಾಗಿದ್ದರು.

ಸುಬ್ರಾಯ ಉಪಾಧ್ಯಾಯರಿಗೆ ಯಕ್ಷಗಾನ, ನಾಟಕ ಹಾಗೂ ಸಾಹಿತ್ಯಗಳಲ್ಲಿ ಹೆಚ್ಚಿನ ಆಸಕ್ತಿ. ನಾಟಕಗಳಲ್ಲಿ ಪಾತ್ರ ವಹಿಸುತ್ತಿದ್ದರು. ಇವರ ಪ್ರಮುಖ ಕೃತಿಗಳು 'ಸಸ್ಯವಿಜಯ'(ಯಕ್ಷಗಾನ ಪ್ರಸಂಗ), 'ಅಡ್ಡಗೋಡೆ'(ಕಾದಂಬರಿ), 'ನಡಾವಳಿ'(ಕಾವ್ಯ), 'ಕಾಣಿಕೆ'(ಹಾಡುಗಳು), ಹಾಗೂ 'ಗಿರಿಗಿಟಿ'(ಮಕ್ಕಳ ಪದ್ಯಗಳು). ಇವುಗಳಲ್ಲಿ 'ನಡಾವಳಿ' ಹಾಗೂ 'ಗಿರಿಗಿಟಿ' ಕೃತಿಗಳು ಪ್ರಕಟಗೊಂಡಿವೆ.

### ೪.೪.೧೭ ಕುಕ್ಕಿಲ ಕೃಷ್ಣಭಟ್ (೧೯೧೧–೧೯೮೮)

೧೯೧೧ರಲ್ಲಿ ವಿಟ್ಲ ಪಡ್ನೂರಿನ ಕುಕ್ಕಿಲದಲ್ಲಿ ಜನಿಸಿದ ಕೃಷ್ಣಭಟ್ಟರು, ಅಜ್ಜ ಅಪ್ಪಯ್ಯ ಯಾನೆ ಕೃಷ್ಣಭಟ್ಟರಿಂದ ಸಂಸ್ಕೃತ, ಕನ್ನಡಗಳನ್ನು ಕಲಿತರು. ಅಂದಿನಿಂದಲೇ ಅವರಿಗೆ ಓಲೆ ಗ್ರಂಥಗಳ ನಂಟು. ವಿದ್ವಾಂಸ, ಕಲಾವಿದ ಬಡೆಕ್ಕಿಲ ಸಾಹುಕಾರ ವೆಂಕಟರಮಣ ಭಟ್ಟರು ಇವರ ಸೋದರ ಮಾವ. ಅವರು ಬಡೆಕ್ಕಿಲಕ್ಕೆ ಕರೆದುಕೊಂಡುಹೋಗಿ, ಶಾಲಾ ವಿದ್ಯಾಭ್ಯಾಸ ಮತ್ತು ಮನೆಯಲ್ಲಿ ಸಂಸ್ಕೃತ ಅಭ್ಯಾಸಕ್ಕೆ ವ್ಯವಸ್ಥೆ ಮಾಡಿದರು. ಬಳಿಕ ಪುತ್ತೂರು ಬೋರ್ಡು ಹೈಸ್ಕೂಲಿನಲ್ಲಿ ಕಲಿಕೆ. ಈ ಕಾಲದಲ್ಲಿ ಹಿರಿಯ ಪಂಡಿತರಾದ ಕಡವ ಶಂಬು ಶರ್ಮ, ಕನ್ನೆಪ್ಪಾಡಿ ಪರಮೇಶ್ವರ ಶಾಸ್ತ್ರಿ, ಮಿತ್ತೂರು ನಾರಾಯಣ ಶಾಸ್ತ್ರಿಗಳಂತಹವರ ಶಿಷ್ಯರಾಗಿ, ಗುಕುಲ ಪದ್ಧತಿಯಿಂದ ಶಾಸ್ತ್ರಗ್ರಂಥಗಳ ಅಧ್ಯಯನ, ನಾಟ್ಯಶಾಸ್ತ್ರ, ಸಂಗೀತಶಾಸ್ತ್ರ, ಅಧ್ಯಯನಕ್ಕೆ ಪ್ರೇರಣೆ ಒದಗಿತು.

ಅವರು ಸಂಪಾದಿಸಿದ 'ಛಂದೋಂಬುಧಿ' ಗ್ರಂಥ ಸಂಪಾದನೆಯಲ್ಲಿ ಒಂದು ಮಾದರಿ ಕೃತಿ. 'ಭಾರತೀಯ ಸಂಗೀತಶಾಸ್ತ್ರ' ಕುಕ್ಕಿಲರ ಇನ್ನೊಂದು ಗ್ರಂಥ. ಕುಕ್ಕಿಲರು ಇಡಿಯ ಬದುಕಿನಲ್ಲಿ ಆತುಕೊಂಡ ಒಂದು ಆಸಕ್ತಿ, ಪಾರ್ತಿಸುಬ್ಬನ ಯಕ್ಷಗಾನಗಳು. ಅವರ ಈ ಆಸಕ್ತಿಯ ಫಲವೇ ಅವರು ಸಂಪಾದಿಸಿದ 'ಪಾರ್ತಿಸುಬ್ಬನ ಯಕ್ಷಗಾನಗಳು'. ಇದು ಯಕ್ಷಗಾನ ಸಾಹಿತ್ಯದಲ್ಲೇ ಒಂದು ಮುಖ್ಯಗ್ರಂಥ. ಹಲವು ಮೌಖಿಕ ಲೇಖನಗಳನ್ನೂ ಕುಕ್ಕಿಲರು ಬರೆದಿದ್ದಾರೆ. 'ಬೆದಂಡೆಚತ್ತಾಣ', 'ದೇಶೀ ಛಂದಸ್ಸುಗಳ ಮೂಲ', 'ಸುಬ್ಬನ ಕಾಲ, ಕರ್ತೃತ್ವ', 'ಕರ್ನಾಟಕ ಆಂಧ್ರ ಯಕ್ಷಗಾನ ವಿವಾರ' 'ಯವನ–ಯವನಿಕಾ', 'ಸುಂದೋಪಸುಂದಾದಿ ಕಾಳಗ', 'ಯಕ್ಷಗಾನದ ಶಾಸ್ತ್ರೀಯತೆ', 'ಸಭಾಲಕ್ಷಣ ವಿಚಾರ', 'ಎಕ್ಕಲಗಾಣ' ಮುಂತಾದವು ಒಂದೊಂದು ಮಹಾಪ್ರಬಂಧದ ಬೀಜರೂಪದಲ್ಲಿರುವುವು.

ಘನ ವಿದ್ವಾಂಸ ಮತ್ತು ಶ್ರೇಷ್ಠ ಸಂಶೋಧಕರಾದ ಕುಕ್ಕಿಲರು ಪಡೆದ ಪ್ರಸಿದ್ಧಿ ಮತ್ತು ಮನ್ನಣೆಗಳು ತುಂಬಾ ಕಡಿಮೆ.

### ೪.೪.೧೮ ಕೆದಂಬಾಡಿ ಜತ್ತಪ್ಪ ರೈ(೧೯೧೬)

ಕೆದಂಬಾಡಿ ಜತ್ತಪ್ಪ ರೈಯವರು ಸಾಹಿತ್ಯ ಲೋಕದಲ್ಲಿ ವಿಶಿಷ್ಠ ಪ್ರಕಾರವೊಂದನ್ನು ಹುಟ್ಟು ಹಾಕಿದವರು. ೧೧.೨.೧೯೧೬ರಲ್ಲಿ ಜನಿಸಿದ ಕೆದಂಬಾಡಿ ಓದಿದ್ದು ಆರನೇ ತರಗತಿಯವರೆಗೆ. ವೃತ್ತಿಯಿಂದ ಬೇಸಾಯಗಾರನಾಗಿದ್ದರೂ ಪ್ರವೃತ್ತಿಯಿಂದ ನಿಪುಣ ಬೇಟೆಗಾರ ಹಾಗೂ ಪ್ರವಚನಕಾರರೆಂದು ಹೆಸರಾದವರು. 'ಬೇಟೆಯ ನೆನಪುಗಳು','ಈಡೊಂದು ಹುಲಿ ಎರಡು','ಬೇಟೆಯ ಉರುಳು','ಬೆಟ್ಟದ ತಪ್ಪಲಿಂದ ಕಡಲ ತಡಿಗೆ' ಅವರ ಪ್ರಮುಖ ಕೃತಿಗಳು. ತುಳು ಭಾಷೆಯಲ್ಲಿ ಪ್ರಮುಖ ಅನುವಾದಕರೂ ಆಗಿರುವ ಕೆದಂಬಾಡಿಯವರು ಶಿವರಾಮ ಕಾರಂತರ ಚೋಮನ ದುಡಿ, ಕುವೆಂಪು ಅವರ ಬೆರಳ್ಗೆಕೊರಳ್ ನಾಟಕವನ್ನು 'ಶೂದ್ರ ಏಕಲವ್ಯೆ' ಎಂಬುದಾಗಿ, ಉಮರನ ಒಸಗೆಯನ್ನು 'ಕುಜಿಲ್ ಪೂಜೆ' ಎಂಬ ಹೆಸರಿನಲ್ಲೂ ತುಳುವಿಗೆ ಅನುವಾದ ಮಾಡಿದ್ದಾರೆ. 'ಬೇಟೆಯ ನೆನಪುಗಳು' ರೈಯವರಿಗೆ ಕರ್ನಾಟಕ ಸಾಹಿತ್ಯ ಅಕಾಡಮಿ ಪ್ರಶಸ್ತಿಯನ್ನು ತಂದುಕೊಟ್ಟಿದೆ.

### ೪.೪.೧೯ ಪಿ. ಕೆ. ನಾರಾಯಣ (೧೯೨೪ – ೧೯೮೩)

'ದಕ್ಷಿಣ ಕನ್ನಡದ ಸುಪ್ರಸಿದ್ಧ ಕನ್ನಡ ಪಂಡಿತರುಗಳಾದ ಶ್ರೀಯುತ ಮುಳಿಯ ತಿಮ್ಮಪ್ಪಯ್ಯ, ಸೇಡಿಯಾಪು ಕೃಷ್ಣಭಟ್–ಇಂತಹ ಉನ್ನತ ಪರಂಪರೆಯ ಆಚಾರ್ಯ ಮಾಲೆಯಲ್ಲಿ ಶ್ರೀ ಪಿ.ಕೆ. ನಾರಾಯಣ ವಿರಾಜಮಾನರಾಗತಕ್ಕ ಕೊನೆಯ ಕೊಂಡಿಯಾಗಿ ಶೋಭಿಸುತ್ತಾರೆ' ಎಂಬುದು ಅವರ ದೀರ್ಘ ಹಾಗೂ ಸಾರ್ಥಕ ಅಧ್ಯಾಪನದ ಮಹತ್ತನ್ನು ಅರಿತ, ಅವರ ನೆಚ್ಚಿನ ಸ್ನೇಹಿತ ಕಯ್ಯಾರ ಕಿಞ್ಞಣ್ಣ ರೈ ಅವರ ಹೇಳಿಕೆ.

ಬಹಳ ಹಿಂದಿನ ಕಾಲದಿಂದಲೂ ಧಾರ್ಮಿಕ, ಸಾಂಸ್ಕೃತಿ, ಸಾಹಿತ್ಯಕ ಚಟುವಟಿಕೆಗಳಿಗೆ ತವರಾದ, ಈಗಲೂ ಆಗಿರುವ 'ಹತ್ತೂರು ಕೊಟ್ಟರೂ ಪುತ್ತೂರು ಬಿಡೆ' ಎಂಬ ವೈಶಿಷ್ಟ್ಯಕ್ಕೆ ಸಾಕ್ಷಿ ಆಗಿರುವ ಪುತ್ತೂರಲ್ಲಿ ಶ್ರೀ ಕರಿಯಪ್ಪ ಹಾಗೂ ಶ್ರೀಮತಿ ಲಕ್ಷ್ಮೀ ಅವರ ಮೂರನೇ ಮಗನಾಗಿ ೨೬–೩–೧೯೨೪ರಂದು ಜನಿಸಿದರು.

ತಮ್ಮ ಏಳನೇ ವಯಸ್ಸಿನಲ್ಲಿ ಅವರು ಇರುಳು ಶಾಲೆಗೆ ಸೇರಿದರು. ಇರುಳು ಶಾಲೆಯಿಂದ ಬಿಡಿಸಿ ಹಗಲು ಶಾಲೆಗೆ ಸೇರಿಸಿ ಪುತ್ತೂರಿಗೆ ಮಾತ್ರವಲ್ಲ ಕನ್ನಡ ಸಾಹಿತ್ಯಕ್ಕೆ ಒಬ್ಬ ಸಾಹಿತಿಯನ್ನು,

ಪತ್ರಿಕೋದ್ಯಮಿಯನ್ನು, ಕವಿಯನ್ನು ಕನ್ನಡ ಪಂಡಿತನನ್ನು ಸಮಾಜ ಸೇವಾಕರ್ತನನ್ನು ಕೊಡುಗೆಯಾಗಿ ನೀಡಿದ ಪುಣ್ಯ ಪುರುಷ ಶ್ರೀ ಮೊಳಹಳ್ಳಿ ಶಿವರಾಯರು.

ಅಧ್ಯಾಪಕರುಗಳ ಆಶೀರ್ವಾದ, ಪ್ರೋತ್ಸಾಹ ಹಾಗೂ ಸ್ವಪ್ರಯತ್ನ, ಸ್ವಂತಿಕೆಗಳ ಫಲವಾಗಿ ಮುಂದೆ ಬಂದರು. ಬರವಣಿಗೆಯ ಮೇಲಿನ ಆಸಕ್ತಿ ಸಾಹಿತಿಗಳ ಸಂಪರ್ಕ. ಸಾಹಿತ್ಯದ ಮೇಲಿನ ಒಲವು ಕನ್ನಡ ಪಂಡಿತರಾಗಲು ಒತ್ತಾಸೆ ನೀಡಿದವು. ೧೯೩೯ರಲ್ಲಿ ಮದ್ರಾಸು ವಿಶ್ವವಿದ್ಯಾನಿಲಯದ ಕನ್ನಡ ವಿದ್ವಾನ್ ಪರೀಕ್ಷೆಗೆ ಕಟ್ಟಿ ಪಾಸಾದರು. ೧೯೪೧ರ ಜುಲೈ ೧೮ರಂದು ಮಂಗಳೂರಿನ ಬೆಸೆಂಟ್ ಶಾಲೆಗೆ ಕನ್ನಡ ಪಂಡಿತರಾಗಿ ವೃತ್ತಿ ಜೀವನ ಆರಂಭ ಮಾಡಿದ ಅವರು ೧೯೪೨ರ ಫೆಬ್ರವರಿ ೨೫ರಂದು ವಿವಾಹವಾಗಿ ದೊಡ್ಡ ಸಂಸಾರದ ಹೊಣೆಯಲ್ಲಿ ಹೋರಾಟದೊಡನೆ ತೃಪ್ತಿಯಿತ್ತು. ಅಧ್ಯಾಪನದ ಜೊತೆಯಲ್ಲಿ ಪತ್ರಿಕೋದ್ಯಮ ಆರ್ಥಿಕ ನೆರವು ನೀಡಿತ್ತು.

ವೃತ್ತಿಯಲ್ಲಿ ಕನ್ನಡ ಪಂಡಿತರಾಗಿ, ಪ್ರವೃತ್ತಿಯಲ್ಲಿ ಸಾಹಿತಿಯಾಗಿ ಕೊನೆಯುಸಿರು ಇರುವವರೆಗೂ ಏನಾದರೂ ಬರೆಯುತ್ತಲೇ ಇದ್ದರು[೨೪]. ತಮ್ಮ ದಾಕ್ಷಿಣ್ಯ ಸಂಕೋಚ ಸ್ವಭಾವಗಳಿಂದಾಗಿ, ಸದ್ದುಗದ್ದಲವಿಲ್ಲದೇ ಪ್ರಶಸ್ತಿಗಳ ಹಂಬಲವಿಲ್ಲದೇ, ಪ್ರಚಾರದ ಆಸೆಯಿಲ್ಲದೆ ೧೯೨೮ರಿಂದ ೧೯೮೫ರ ವರೆಗೆ ಕವಿಯಾಗಿ, ನಾಟಕಕಾರರಾಗಿ, ಅನುವಾದಕರಾಗಿ, ಲೇಖಕನಾಗಿ, ಸಂಪಾದಕನಾಗಿ, ಪತ್ರಿಕೋದ್ಯಮಿಯಾಗಿ, ಸಂಶೋಧಕರಾಗಿ ಕನ್ನಡ ಸಾಹಿತ್ಯದ ಬೊಕ್ಕಸವನ್ನು ತುಂಬಿದ್ದಾರೆನ್ನುವುದು ನಿಜ.

### ೪.೪.೨೦ ಬಾಗಲೋಡಿ ಬೇವರಾಯ (೧೯೨೭-೧೯೮೫)

ಪುತ್ತೂರು ತಾಲೂಕಿನ ಬಾಗಲೋಡಿಯಲ್ಲಿ ೧೯೨೭ರಲ್ಲಿ ಜನಿಸಿದ ಇವರು, ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣವನ್ನು ಪುತ್ತೂರಿನಲ್ಲಿ ಪಡೆದರು. ಬಾಗಲೋಡಿಯವರು ಭಾರತದ ವಿದೇಶಾಂಗ ಇಲಾಖೆಯಲ್ಲಿ ವಿವಿಧ ಹುದ್ದೆಗಳಲ್ಲಿ ಸೇವೆ ಸಲ್ಲಿಸಿದವರು. ಹಲವು ದೇಶಗಳಲ್ಲಿ ಭಾರತದ ರಾಯಭಾರಿಯಾಗಿ ಕರ್ತವ್ಯನಿರ್ವಹಣೆ ಮಾಡಿದವರು.

ತಮ್ಮ ಇಪ್ಪತ್ತನೆಯ ವಯಸ್ಸಿನಿಂದಲೇ ಕಥೆಗಳನ್ನು ಬರೆಯಲಾರಂಭಿಸಿದರು. ೧೯೪೭ರಿಂದಲೇ ಅವರ ಕಥೆಗಳು ಮಾಸ್ತಿಯವರ 'ಜೀವನ' ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದವು. ೧೯೪೯ರಲ್ಲಿ ಅವರ ಮೊದಲನೆಯ ಕಥಾಸಂಕಲನ 'ಹುಚ್ಚ ಮುನಸೀಫ ಮತ್ತು ಇತರ ಕಥೆಗಳು' ಮಾಸ್ತಿಯವರಿಂದಲೇ – ಅವರ ಮುನ್ನುಡಿಯೊಂದಿಗೆ ಪ್ರಕಟವಾಯಿತು. ಮುಂದೆ ಅವರ 'ಆರಾಧನಾ' ಮತ್ತು 'ರುದ್ರಪ್ಪನ ರೌದ್ರ' ಕಥಾ ಸಂಕಲನಗಳು ಪ್ರಕಟವಾದವು. ಅವರು ತೀರಿಕೊಂಡ ನಂತರ ಅವರ 'ದೇವಸ್ಮರಣೆ' ಎಂಬ ಪುಸ್ತಕ ಪ್ರಕಟಗೊಂಡಿದೆ.

ಮಾಸ್ತಿಯವರಂತೆ ಇಂಗ್ಲೀಷ್ ಸಾಹಿತ್ಯದ ಸ್ನಾತಕೋತ್ತರ ಪದವೀಧರರಾದ ಬಾಗಲೋಡಿ ಯವರು ಭಾರತದ ಪಾರಂಪರಿಕ ಕಥನಕ್ರಮವನ್ನು ಮುಂದುವರಿಸಿದ್ದು ವಿಶೇಷವಾಗಿದೆ. ಬಾಗಲೋಡಿ ಯವರು ಕೂಡ ಮಾಸ್ತಿಯವರಂತೆ ಬದುಕಿನ ನಿಜವಾದ ಸತ್ತ್ವ, ನಿಜವಾದ ಧರ್ಮ ಯಾವುದು ಎಂಬುದರ ಪರಿಶೀಲನೆಯಲ್ಲಿ ಆಸಕ್ತರಾಗಿದ್ದರು. ಇತಿಹಾಸ, ಪುರಾಣ, ಐತಿಹ್ಯ, ವರ್ತಮಾನ, ನಿಜಜೀವನದ ಘಟನೆ ಎಲ್ಲವೂ ಅವರ ಕೈಯಲ್ಲಿ ಕತೆಗಳಾಗುತ್ತವೆ.

### ೪.೪.೨೧ ಕೆ. ಶ್ರೀಕಂಠ ಪುತ್ತೂರು (೧೯೨೭)

ಪುತ್ತೂರಿನಲ್ಲಿ ಜನಿಸಿದ ಕೆ. ಶ್ರೀಕಂಠ ಅವರು ವಿದ್ಯಾಭ್ಯಾಸ ಮತ್ತು ಉದ್ಯೋಗದ ನಿಮಿತ್ತ ಮದರಾಸಿ(ಚೆನ್ನೈ)ನಲ್ಲಿ ನೆಲೆಸಿದ್ದರು. ತಮ್ಮ ಹದಿನಾರನೆಯ ವಯಸ್ಸಿನಲ್ಲಿ ಇವರು ಬರೆದ 'ಹಳೆಯ ನೆನಹು' ಎಂಬ ಕತೆ ೧೯೫೪ ರಲ್ಲಿ 'ಅಂತರಂಗ' ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಅಲ್ಲಿಂದ ಮುಂದೆ ನೂರಾರು ಕತೆಗಳನ್ನು ಬರೆದಿದ್ದಾರೆ. ಕಾರಂತರು ಪ್ರಾರಂಭಿಸಿದ ಬಾಲವನದ ಒಡನಾಟ ಚಿಕ್ಕಂದಿನಲ್ಲಿ ಇವರಿಗಿತ್ತು. 'ದೇವರ ಸಾಮ್ರಾಜ್ಯ' (೧೯೫೦), 'ಹೊಸ ಸಮಯ' (೧೯೫೬), ಎಂಬ ಕಾದಂಬರಿಗಳನ್ನು, 'ಧಾರಾ' (೧೯೭೧), 'ಪಯಣ' (೨೦೦೨) 'ಈ ಕಥೆಗೆ ಏನೆಂದು ಹೆಸರಿಡಲಿ' (೨೦೦೬) ಎಂಬ ಕಥಾಸಂಕಲನಗಳನ್ನು ಪ್ರಕಟಿಸಿದ್ದಾರೆ.

### ೪.೪.೨೨ ಲಕ್ಷ್ಮೀಶ ತೋಳ್ಪಾಡಿ(೧೯೪೯)

ಲಕ್ಷ್ಮೀಶ ತೋಳ್ಪಾಡಿಯವರ ಹುಟ್ಟೂರು ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲೂಕಿನ ಶಾಂತಿಗೋಡಿನವರು. ೧೯೪೭ರಲ್ಲಿ ಪುತ್ತೂರು ಹಾಗೂ ಮಂಗಳೂರಿನ ಸರಕಾರಿ ಕಾಲೇಜುಗಳಲ್ಲಿ ವಿದ್ಯಾಭ್ಯಾಸ. ತೋಳ್ಪಾಡಿ ಖ್ಯಾತ ಚಿಂತಕ ಮತ್ತು ವಿಮರ್ಶಕ. 'ಮಹಾಯುದ್ಧಕ್ಕೆ ಮುನ್ನ' ಎಂಬ ಇವರ ಪ್ರಕಟಿತ ಕೃತಿ ಭಗವದ್ಗೀತೆಯ ಕುರಿತು ಹೊಸ ದೃಷ್ಟಿಯಿಂದ ಬರೆದ ವೈಚಾರಿಕ ಗ್ರಂಥ. ಇವರ 'ಸಮಗಾರ ಭೀಮವ್ವ' ಮತ್ತು 'ಮತ್ಸ್ಯಗಂಧಿಯ ಮಗನ ಒಡನಾಟ'ದಲ್ಲಿ ಎಂಬವುಗಳು ಕನ್ನಡ ಸಾಹಿತ್ಯ ಅಕಾಡಮಿ ಯವರು ಪ್ರಕಟಿಸಿದ ವಿಮರ್ಶಾಸಂಕಲನಗಳಲ್ಲಿ ಪ್ರಕಟವಾಗಿದೆ. ಅನಂತ ಮೂರ್ತಿಯವರು ಸಂಪಾದಿಸಿದ ಕಾವ್ಯ ಸಂಗ್ರಹದಲ್ಲಿ ಇವರ ಕವನಗಳು ಸೇರ್ಪಡೆಯಾಗಿವೆ. ತೋಳ್ಪಾಡಿಯವರು ವೃತ್ತಿಯಲ್ಲಿ ಪ್ರಗತಿಪರ ಕೃಷಿಕರು. ಸ್ವಲ್ಪ ಸಮಯ ಪತ್ರಿಕೋದ್ಯಮಿಯಾಗಿಯೂ ಕೆಲಸ ಮಾಡಿದ್ದಾರೆ. ಪರಿಸರ ಉಳಿಸುವ ಹೋರಾಟದಲ್ಲಿ ಸಕ್ರಿಯರಾಗಿ ದುಡಿದ ತೋಳ್ಪಾಡಿ ಅಪ್ಪಟ ಪರಿಸರ ಪ್ರೇಮಿ. ಪ್ರವಾಚಕ, ಉಪನಿಷತ್, ಗೀತೆಗಳ ಕುರಿತು ಪ್ರವಚನಗಳನ್ನೀಯುವುದು ಇವರ ಪ್ರಮುಖ ಹವ್ಯಾಸಗಳಲ್ಲಿ ಒಂದು.

**೪.೪.೨೩ ಕುದ್ಕಾಡಿ ವಿಶ್ವನಾಥ ರೈ (೧೯೩೨)**

ಪರ್ಮಲೆಯ ಕುದ್ಕಾಡಿ ಎಂಬಲ್ಲಿ ಯಕ್ಷಗಾನ ಮನೆತನದಲ್ಲಿ ದಿನಾಂಕ ೧೦–೫–೧೯೩೨ರಲ್ಲಿ ಕುದ್ಕಾಡಿ ವಿಶ್ವನಾಥ ರೈ ಜನಿಸಿದರು. ಬಡಗನ್ನೂರು ಶಾಲೆಯಲ್ಲಿ ೫ನೇ ತನಕ ಓದಿ, ಈಶ್ವರಮಂಗಲ ಗಜಾನನ ಶಾಲೆಯಲ್ಲಿ ೮ನೇ ಪಬ್ಲಿಕ್ ಪರೀಕ್ಷೆ ಮುಗಿಸಿ, ಪುತ್ತೂರಿನ ಫಿಲೋಮಿನಾ ಹೈಸ್ಕೂಲಿನಲ್ಲಿ ೧೯೫೩ರಲ್ಲಿ ಎಸ್.ಎಸ್.ಎಲ್.ಸಿ. ಪೂರೈಸಿ ಮಾಯಿಪ್ಪಾಡಿಯಲ್ಲಿ ಬುನಾದಿ ಶಿಕ್ಷಕರ ತರಬೇತಿಗೊಂಡು ತಾನು ಕಲಿತ ಫಿಲೋಮಿನಾ ಶಾಲೆಯಲ್ಲಿಯೇ ಶಿಕ್ಷಕನಾಗಿದ್ದುಕೊಂಡು ಕರ್ನಾಟಕ ವಿ.ವಿ.ಯಲ್ಲಿ ಬಿ.ಎ. ಮತ್ತು ಎಂ.ಎ. ಖಾಸಗಿಯಾಗಿ ಮಾಡಿ, ಮೈಸೂರು ವಿ.ವಿ.ಯಲ್ಲಿ ಬಿ.ಎಡ್.ನ್ನು ಡೆಪ್ಯುಟೇಶನ್‌ನಲ್ಲಿ ಮಾಡಿದ ಕುದ್ಕಾಡಿಯವರು ೧೯೯೦ರಲ್ಲಿ ೩೫ ವರ್ಷಗಳ ಶಿಕ್ಷಕ ವೃತ್ತಿಯನ್ನು ಪೂರೈಸಿ ನಿವೃತ್ತರಾಗಿದ್ದಾರೆ.

ವೃತ್ತಿ ನಿರತರಾಗಿರುವಾಗಲೇ ‘ಆಕ್ಸಿಲರಿ ಕೇಡೆಟ್ ಕೋರ್’ ನ್ಯಾಶನಲ್ ಫಿಟ್‌ನೆಸ್ ಕೋರ್’ನ ಆಫೀಸರರಾಗಿ, ಡ್ರಮೆಟಿಕ್ಸ್‌ನ ಶಿಕ್ಷಕರ ತರಬೇತಿಗೊಂಡು, ವಿದ್ಯಾರ್ಥಿಗಳಿಗೆ ಪಾಠೇತರ ವಿಷಯಗಳಲ್ಲಿ ಮಾರ್ಗದರ್ಶನ ನೀಡುವ ಕೆಲಸ ಮಾಡುತ್ತಿದ್ದ ವಿಶ್ವನಾಥ ರೈಗಳು ಚಿತ್ರಕಲೆ, ಸಂಗೀತ, ಕ್ರೀಡೆ, ಸಾಹಿತ್ಯ, ನಾಯಕತ್ವಗಳಲ್ಲಿಯೂ ಮುಂಚೂಣಿಯಲ್ಲಿದ್ದವರು.

೧೯೪೯ರಿಂದಲೇ ನೃತ್ಯಕಲೆಯಲ್ಲಿ ಆಸಕ್ತಿವಹಿಸಿ ವಿದ್ವಾನ್ ಎ.ಎನ್. ನಾಗರಾಜನ್, ರಾಜನ್ ಅಯ್ಯರ್, ನಾಟ್ಯಾಚಾರ್ಯ ಕೆ.ಎಸ್.ರಾಜಗೋಪಾಲ್ ನಟುವನ್ನಾರ್ ಕಾಂಚಿಪುರಂ ಜಿ. ಎಳ್ಳಪ್ಪನ್, ಪದ್ಮಭೂಷಣ ಕೆ. ವೆಂಕಟಲಕ್ಷ್ಮಮ್ಮ ಅವರಲ್ಲಿ ಭರತನಾಟ್ಯ ಅಭ್ಯಾಸ ಮಾಡಿ ೧೯೬೪ರಲ್ಲಿ ಸೀನಿಯರ್ ಪರೀಕ್ಷೆಯಲ್ಲಿ ಪ್ರಥಮ ರ್‍ಯಾಂಕ್ ಗಳಿಸಿ ೧೯೭೨ರಲ್ಲಿ ಭರತನಾಟ್ಯ ವಿದ್ವತ್ ಮಾಡಿದ ರೈಗಳು ಭಾರತ– ಸಿಂಹಳ ಸಾಂಸ್ಕೃತಿಕ ವಿನಿಮಯ ನೃತ್ಯ ಸ್ಕೋಲರ್ ಆಗಿ Govt. College of Ballet and Dancing, Colombo ಇಲ್ಲಿ ೧೯೬೮ – ೧೯೭೦ ಎರಡು ವರ್ಷ ಕೇಂಡಿಯನ್ ಮತ್ತು ರುಹುನು ನೃತ್ಯ ಹಾಗೂ ಕೊರಿಯೊಗ್ರಫಿ ಅಧ್ಯಯನ ಮಾಡಿದ ಕರ್ನಾಟಕದ ಅಪೂರ್ವ ಕಲಾವಿದರು.

೧೯೮೦ ರಿಂದ ೧೯೮೩ರ ವರೆಗೆ ಶಿಕ್ಷಣ ಇಲಾಖೆಯಿಂದ ನಿಯೋಜಿತರಾಗಿ ತುಳು – ಕನ್ನಡ – ಇಂಗ್ಲಿಷ್ ನಿಘಂಟಿನ ಸಂಯೋಜಕ ಸಂಶೋಧಕರಾಗಿ, ಗೋವಿಂದ ಪೈ ಸಂಶೋಧನಾ ಕೇಂದ್ರ ಎಂ.ಜಿ.ಎಂ ಕಾಲೇಜು ಉಡುಪಿ ಇಲ್ಲಿ ಸೇವೆ ಮಾಡಿದ್ದಾರೆ.

**ಸಾಹಿತಿಯಾಗಿ :**

ಲಂಕಾದರ್ಶನ ಪ್ರವಾಸ ಸಾಹಿತ್ಯ, ದೇವಿ ಅಬ್ಬಕ್ಕರಾಣಿ, ಅಬ್ಬಕ್ಕಬ್ಬೆ, ಯುಗಧರ್ಮ, ಮಂಜತಕಾಪಡೆ, ಸತ್ಯೊಮ್ಮ ದೈಯ್ಯಾರ್, ಸಂಕ್ರಾಂತಿ ಇವು ಪ್ರಕಟಿತ ತುಳು/ಕನ್ನಡ ನಾಟಕಗಳು. ಹಿಂದೂ ಸಮಾಜ ಸಂಘಟಕ ಬಸವೇಶ್ವರ, ತುಳು ಗಾದೆಗಳಿಗೊಂದು ಭಾಷ್ಯ ಭಾಗ– ೧. (೫೨೫ ತುಳು ಗಾದೆಗಳಿಗೆ ಕನ್ನಡದಲ್ಲಿ ವ್ಯಾಖ್ಯಾನ) ಭರತ ಮತ್ತು ಕನ್ನಡ ರಂಗಭೂಮಿ ವಿಮರ್ಶೆ, ಅಬ್ಬಕ್ಕ, ಜೋಗಿ ಪುರುಸೆರ್, ಜೋಕುಲೆ ಸಂಚಿ, ಇವು ಕುದ್ಕಾಡಿಯವರ ಮಕ್ಕಳ ಸಾಹಿತ್ಯ. 'ನರ್ತನ ಜಗತ್ತು', ಭರತನಾಟ್ಯ ಶಾಸ್ತ್ರ ಇವು ಜೂನಿಯರ್ ಸೀನಿಯರ್, ವಿದ್ವತ್ ನೃತ್ಯ ಪರೀಕ್ಷೆಗಳ ಹಳೆಯ ಮತ್ತು ಹೊಸ ಪಠ್ಯಕ್ರಮಗಳಿಗೆ ಅನುಸಾರವಾದ ಶಾಸ್ತ್ರ ಗ್ರಂಥಗಳು. ಲೆಕ್ಕಸಿರಿ (ತುಳು ಕಾದಂಬರಿ) ಇವು ಕುದ್ಕಾಡಿಯವರ ಪ್ರಕಾಶಗೊಂಡ ಸಾಹಿತ್ಯ ಕೃತಿಗಳು.

ಚುಲ್ಲೆರ್–ತುಲ್ಲೆರ್, ಕಾರ್ನಿಕೊದ ಚಂಡಿ ಚಾಮುಂಡಿ, ಕಾಪುನಕರ್ತು ಕಾರ್ತಿಕೆ, ಶಿವನ ಪಲ್ಲೆಂಕಿ ಸೇವೆ, ಪೊರಕ್ಕೊಲಿ ಕರ್ಣೆ, ಶಿವ ಪಾರ್ವತಿ ಇವು ನೃತ್ಯ ರೂಪಕಗಳು, ಪತ್ರಿಕೆಗಳಲ್ಲಿ ವಿಶೇಷ ಸಂಚಿಕೆ–ಸ್ಮರಣಿಕೆಗಳಲ್ಲಿ ಲೇಖನಗಳು, ಗೋಷ್ಠಿಗಳಲ್ಲಿ ಮಂಡಿಸಿದ ಪ್ರಬಂಧಗಳು, ತುಳು/ಕನ್ನಡ ಕವನಗಳ ಸಂಗ್ರಹ, ಬಹರೈನ್ ದರ್ಶನ ಪ್ರವಾಸ ಸಾಹಿತ್ಯ ಪ್ರಕಟಣೆಗೆ ಉಳಿದಿದೆ.

**ಗೋಷ್ಠಿ, ಕಮ್ಮಟ, ಶಿಬಿರಗಳಲ್ಲಿ :**

ಕೊಲಂಬೊ, ಬಹರೈನ್, ಡೆಲ್ಲಿ, ಗೋವಾ, ಮುಂಬಯಿ ಹೈದರಾಬಾದ್, ಮದ್ರಾಸು, ಮೈಸೂರು, ಬೆಂಗಳೂರು, ತಿರುವನಂತಪುರ, ಅಣ್ಣಾಮಲೈ, ಉಡುಪಿ, ಮೂಲ್ಕಿ ಮೊದಲಾದ ಕಡೆ ಜರುಗಿದ ಗೋಷ್ಠಿ. ಕಮ್ಮಟ, ಪ್ರಾತ್ಯಕ್ಷಿಕೆ, ಪ್ರದರ್ಶನ, ತರಬೇತಿ ಶಿಬಿರಗಳ ಅಧ್ಯಕ್ಷನಾಗಿ, ತರಬೇತಿದಾರನಾಗಿ, ಸಮನ್ವಯಕಾರನಾಗಿ, ಪ್ರಬಂಧಕಾರನಾಗಿ ಕವಿಯಾಗಿ, ನಿರ್ದೇಶಕನಾಗಿ, ಸಂಪನ್ಮೂಲ ವ್ಯಕ್ತಿಯಾಗಿ ಭಾಗವಹಿಸಿದ್ದಾರೆ.

**ಪತ್ರಿಕಾ ವ್ಯವಸಾಯ :**

ಪತ್ರಿಕೆಗಳಿಗೆ ವರದಿಗಾರನಾಗಿ, ಅಂಕಣಗಾರನಾಗಿ, ವಿಶೇಷ ಸಂಚಿಕೆಗಳ ಗೌರವ ಸಂಪಾದಕರಾಗಿ, ಸಂಪಾದಕರಾಗಿ, ತರಬೇತುದಾರನಾಗಿ ಕೆಲಸ ಮಾಡಿದ್ದಾರೆ.

**ಅಭಿನಯ :** ತುಳು, ಕನ್ನಡ, ಸಂಸ್ಕೃತ, ತೆಲುಗು, ತಮಿಳು, ಬಂಗಾಳಿ, ಸಿಂಹಳೀ, ಭಾಷೆಯ ನೃತ್ಯ – ನೃತ್ಯನಾಟಕಗಳಲ್ಲಿ, ಆಕಾಶವಾಣಿಯ ತುಳು/ಕನ್ನಡ ನಾಟಕಗಳಲ್ಲಿ ತುಳು/ಕನ್ನಡ ಚಲನಚಿತ್ರಗಳಲ್ಲಿ ಸಿಂಹಳೀ ಭಾಷೆಯ ಎರಡು ಸಾಕ್ಷ್ಯ ಚಿತ್ರಗಳಲ್ಲಿ ಅಭಿನಯಿಸಿದ್ದಾರೆ.

**ವಿಶ್ವಕಲಾನಿಕೇತನ ಸಂಸ್ಥೆ :**

೧೯೫೭ರಲ್ಲಿ ಪುತ್ತೂರಿನಲ್ಲಿ ಸ್ಥಾಪಿತವಾಗಿ, ಈಗ ಪರ್ಮಲೆಯ ಪದಡ್ಕ ಎಂಬಲ್ಲಿ ಕುದ್ಕಾಡಿ ಮನೆ ಕೇಂದ್ರವಾಗಿ ವಿಶ್ವಕಲಾನಿಕೇತನ ನೃತ್ಯಕಲಾ ಶಾಲೆಯ ಪ್ರದರ್ಶನ ಮಂದಿರವಿದೆ. ದೊಡ್ಡ ಕಾರ್ಯಕ್ರಮಗಳಿಗೆ ಒಂದು ಬಯಲು ರಂಗಮಂಟಪವೂ ಇದೆ. ಪ್ರದರ್ಶನಗಳು ಜರುಗುತ್ತಿವೆ.

ಭರತನಾಟ್ಯ ನೃತ್ಯ ಪರೀಕ್ಷೆಗಳ ತಯಾರಿಗೆ ವಿದ್ಯಾರ್ಥಿಗಳು ಇಲ್ಲಿಯೇ ವಸತಿಯಿದ್ದು ಅಭ್ಯಾಸ ಮಾಡುತ್ತಾರೆ. ಸಾಕಷ್ಟು ಗ್ರಂಥಗಳನ್ನೊಳಗೊಂಡ ಒಂದು ಪುಸ್ತಕ ಭಂಡಾರವೂ ಇದೆ. ಗ್ರಾಮೀಣ ಪ್ರದೇಶದಲ್ಲಿ ಇದೊಂದು ಮಾದರಿ ಕಲಾ ಸಂಸ್ಥೆಯಾಗಿ ಬೆಳೆಯಬೇಕೆಂಬುದು ಇವರ ಆಶಯ.

ವಿಶ್ವಕಲಾನಿಕೇತನದ ಸಹಕಾರಿ 'ಪ್ರಕಾಶನದಲ್ಲಿ ಕುದ್ಕಾಡಿಯರ ಮತ್ತವರ ಸ್ನೇಹಿತರ ಪುಸ್ತಕಗಳು ಪ್ರಕಟವಾಗಿವೆ. ಪ್ರತಿ ವರ್ಷ ಮೇ ೧೦ರಂದು 'ಸಾಂಸ್ಕೃತಿಕ ಸಂಗಮ'ವಾಗಿ ಹುಟ್ಟುಹಬ್ಬವನ್ನು ಆಚರಿಸುತ್ತಿದ್ದಾರೆ.

**ಸಂದ ಗೌರವಗಳು :**

೧. ೧೯೭೩ರಲ್ಲಿ ಕನ್ನಡ ರಂಗಭೂಮಿ ವಿಮರ್ಶನೆ, ಮೈಸೂರು ವಿ.ವಿ.ಯಿಂದ ಬಂಗಾರದ ಪದಕ.

೨. ೧೯೭೪ರಲ್ಲಿ ಅಬ್ಬಕ್ಕಬ್ಬೆ ನಾಟಕಕ್ಕೆ ತುಳುಕೂಟ ನವಭಾರತ ಪ್ರಶಸ್ತಿಗಳು.

೩. ೧೯೮೧ರಲ್ಲಿ ಸಂಕ್ರಾಂತಿ ನಾಟಕಕ್ಕೆ ತುಳುಕೂಟ ಬೆಂಗಳೂರು ಇವರಿಂದ ಪ್ರಥಮ ಪ್ರಶಸ್ತಿ.

೪. ಪುತ್ತೂರು ತಾಲೂಕು ಒಂಬತ್ತನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿ.

**೪.೪.೨೪ ಎನ್. ಸುಬ್ರಹ್ಮಣ್ಯಂ ಕೊಳತ್ತಾಯ (೧೯೩೩)**

ಸಾಹಿತ್ಯ, ಸಂಸ್ಕೃತಿ ಮತ್ತು ಸಾಮಾಜಿಕ ಕಾರ್ಯಗಳ ಸಂಘಟನೆಯಲ್ಲಿ ವೃತ್ತಿಯನ್ನು ಮರೆತು ಸದ್ದಿಲ್ಲದೆ ದುಡಿವ ಎನ್. ಸುಬ್ರಹ್ಮಣ್ಯಂ ಕೊಳತ್ತಾಯರು ಖ್ಯಾತ ವಕೀಲರು. ಪುತ್ತೂರು ಸಾಂಸ್ಕೃತಿಕ ಕ್ಷೇತ್ರವು ಮರೆಯದ ವ್ಯಕ್ತಿ. ೪-೧-೧೯೩೩ರಲ್ಲಿ ಇವರ ಜನನ. ತಂದೆ ಎನ್. ವಿ. ಕೊಳತ್ತಾಯ, ತಾಯಿ ಕಾವೇರಮ್ಮ. ಬೆಳಗಾಂ ಲಾ ಕಾಲೇಜಿನಲ್ಲಿ ಕಾನೂನು ಪದವಿ ಪಡೆದ ಬಳಿಕ ೧೯೫೮ರಿಂದ ನ್ಯಾಯವಾದಿ ಯಾಗಿ ವೃತ್ತಿ ಜೀವನ ಆರಂಭಿಸಿದ್ದರು.

ತನ್ನ ಚಿಕ್ಕಪ್ಪ ಸದಾನಂದ ಕೊಳತ್ತಾಯರು ನಡೆಸುತ್ತಿದ್ದ ಸಂಗೀತ ಶಾಲೆಯ ಪರಿಸರ ಸುಬ್ರಹ್ಮಣ್ಯಂ ಅವರಿಗೆ ಸಂಗೀತದ ಗುಂಗು ಹಿಡಿಸಿತು. ತಾಯಿ ವಯೋಲಿನ್‌ನಲ್ಲಿ ನಿಷ್ಣಾತೆ. ಶ್ರೀ ಬಾಬು

ರೈಗಳಿಂದ ಸ್ವತಃ ಮೃದಂಗಾಭ್ಯಾಸ, ಹೀಗೆ ಸುಬ್ರಹ್ಮಣ್ಯ ಅವರಿಗೆ ಸಂಗೀತದ ವಿವಿಧ ಮಜಲುಗಳ ನಂಟು.

ಹಲವಾರು ಪ್ರತಿಷ್ಠಿತ ಸಂಗೀತ, ನೃತ್ಯ, ನಾಟಕಗಳ ಸಂಯೋಜನೆಗಳಿಂದ ಕಲಾ ರಸದೌತಣ ನೀಡಿಸಿದ ಕೀರ್ತಿ ಕೊಳತ್ತಾಯರದ್ದು, ಉಷಾದಾತಾರ್ ರಾಧಿಕಾ ಮೊದಲಾದ ಖ್ಯಾತರ ನೃತ್ಯ ಕಾರ್ಯಕ್ರಮ ಗಳನ್ನು ನಡೆಸಿಕೊಟ್ಟಿದ್ದಾರೆ. ೧೯೫೮ರಿಂದ ಪುತ್ತೂರು ದಸರಾ ನಾಡಹಬ್ಬದ ಸಕ್ರಿಯ ಕಾರ್ಯಕರ್ತನಾಗಿ ನೃತ್ಯ, ಸಂಗೀತ, ಸಾಹಿತ್ಯ ಕಾರ್ಯಗಳನ್ನು ಅಳವಡಿಸಿ ಅರ್ಥವತ್ತಾಗಿ ನಾಡಹಬ್ಬ ಆಚರಿಸಿ ಎಲ್ಲರ ಪ್ರಶಂಸೆಗೆ ಒಳಗಾಗಿದ್ದಾರೆ. ಪುತ್ತೂರು ಕರ್ನಾಟಕ ಸಂಘದ ಕಾರ್ಯದರ್ಶಿ, ಅಧ್ಯಕ್ಷರಾಗಿ ಸೇವೆಸಲ್ಲಿಸಿದ್ದಾರೆ. ದ.ಕ. ಜಿಲ್ಲಾ ಸಾಹಿತ್ಯ ಸಮ್ಮೇಳನ ಪುತ್ತೂರಿನಲ್ಲಿ ನಡೆದಾಗ ಕಾರ್ಯದರ್ಶಿಯಾಗಿ ದುಡಿದಿದ್ದಾರೆ. ಲಯನ್ಸ್ ಕ್ಲಬ್ಬಿನ ಸಂಚಿಕೆ, ಕಾನೂನು ಮ್ಯಾಗಜೀನ್‌ಗಳಿಗೆ ಬಿಡಿಬರಹಗಳನ್ನು ಬರೆದಿದ್ದಾರೆ. ಹೀಗೆ ಸಾಹಿತ್ಯ ಕ್ಷೇತ್ರದಲ್ಲಿ ಅಪರೂಪದ ವ್ಯಕ್ತಿತ್ವ ಸುಬ್ರಹ್ಮಣ್ಯಂ ಅವರದು.

### ೪.೪.೨೫ ಡಿ. ಸದಾಶಿವ ಭಟ್ಟ (೧೯೩೩)

ಪುತ್ತೂರು ತಾಲೂಕಿನ ಬೆಟ್ಟಂಪಾಡಿ ಸಮೀಪದ ನಿಡ್ಪಳ್ಳಿ ಗ್ರಾಮದ ಪಳ್ಳು ಎಂಬಲ್ಲಿ ವಾಸವಾಗಿರುವ ಸದಾಶಿವ ಭಟ್ಟರು ೧೯೩೩ ಮೇ ೧೫ ರಂದು ಜನಿಸಿದರು. ತಂದೆ ದಿ। ನಾರಾಯಣ ಭಟ್ಟರು, ತಾಯಿ ಗೋದಾವರಿ ಅಮ್ಮ.

ಸದಾಶಿವ ಭಟ್ಟರು ೧೯೫೪ರಲ್ಲಿ ನೀರ್ಜಾಲಿನ ಸಂಸ್ಕೃತ ಮಹಾವಿದ್ಯಾಲಯದಲ್ಲಿ 'ಎ ವಿದ್ವಾನ್' ಮಾಡಿದರು. ಸಂಸ್ಕೃತ–ಕನ್ನಡ ಭಾಷೆಗಳಲ್ಲಿ ಪ್ರಾವೀಣ್ಯತೆಯನ್ನು ಪಡೆದರು. ಆಗಲೇ ಕರಾವಳಿಯ ಗಂಡುಕಲೆ ಯಕ್ಷಗಾನ ಅವರನ್ನು ಆಕರ್ಷಿಸಿತ್ತು. ಯಕ್ಷಗಾನ ಬಯಲಾಟಗಳಲ್ಲಿ ವೇಷ ಹಾಕಿ, ತಾಳಮದ್ದಳೆ ಕೂಟ ಗಳಲ್ಲಿ ಅರ್ಥಧಾರಿಳಾಗಿ ತಮ್ಮ ವಾಕ್ಚಾತುರ್ಯವನ್ನೂ, ಪ್ರತಿಭೆಯನ್ನೂ ಯೌವನಾವಸ್ಥೆಯಲ್ಲಿಯೇ ಅಭಿವ್ಯಕ್ತ ಗೊಳಿಸಲಾರಂಭಿಸಿದರು. ೧೯೬೩ರಲ್ಲಿ ಬೆಟ್ಟಂಪಾಡಿಯಲ್ಲಿ ನವೋದಯ ಪ್ರೌಢಶಾಲೆ ಆರಂಭವಾದಾಗ, ೧೯೬೪ರಲ್ಲಿ ಅಲ್ಲಿ ಕನ್ನಡ ಪಂಡಿತರಾಗಿ ವೃತ್ತಿ ಜೀವನವನ್ನು ಆರಂಭಿಸಿದರು. ಆದರೆ ಕನ್ನಡದ ಜೊತೆಗೆ ಹಿಂದಿಯನ್ನೂ ಕಲಿಸಬೇಕಾಗಿ ಬಂದುದರಿಂದ ಹಿಂದಿ ಅಧ್ಯಯನ ಅನಿವಾರ್ಯವಾಯಿತು. ಸ್ವ–ಅಧ್ಯಯನ ದಿಂದ ೧೯೬೫ರಲ್ಲಿ 'ಡಿ.ಬಿ.ಎಚ್. ಸಭಾ'ದಿಂದ ರಾಷ್ಟ್ರಭಾಷಾ ವಿಶಾರದ ಪದವಿ ಪಡೆದರು. ಇದರೊಂದಿಗೆ ಸಂಸ್ಕೃತ ಭಾಷೆಯನ್ನು ಕಲಿಸಲಾರಂಭಿಸಿದರು. ೧೯೭೬ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಬಿ. ಎ. ಪದವಿಯನ್ನು, ಬಳಿಕ ಬೆಂಗಳೂರು ವಿ.ವಿ.ಯಿಂದ ಬಿ.ಎಡ್. ಪದವಿಯನ್ನೂ ಪಡೆದರು. ಪ್ರೌಢ

ಶಾಲಾ ಅಧ್ಯಾಪಕರಿಗಿರಬೇಕಾದ ವಿದ್ಯಾರ್ಹತೆಯನ್ನು ಪಡೆದ ಬಳಿಕವೂ ವಿದ್ಯಾಸಕ್ತರಾಗಿದ್ದ ಭಟ್ಟರು ೧೯೭೯ರಲ್ಲಿ ಕರ್ನಾಟಕ ವಿಶ್ವವಿದ್ಯಾನಿಲದಿಂದ ಸ್ನಾತಕೋತ್ತರ ಪದವಿಯನ್ನು ಪಡೆದರು.

ಬಳಿಕ ೧೯೮೦ರಿಂದ ೧೯೮೬ರ ವರೆಗೆ ಗುಂಡ್ಮಿ ಚಂದ್ರಶೇಖರ ಐತಾಳರ ಮಾರ್ಗದರ್ಶನದಲ್ಲಿ ದಕ್ಷಿಣಕನ್ನಡ ಜಿಲ್ಲೆಯ ಪ್ರಸಿದ್ಧ ಸಾಹಿತಿ ಪಂಜೆ ಮಂಗೇಶರಾಯರ ಸಾಹಿತ್ಯ ಕೃತಿಗಳ ಬಗ್ಗೆ ಸಂಶೋಧನಾತ್ಮಕ ಅಧ್ಯಯನ ಮಾಡಿ ಮಂಗಳೂರು ವಿ. ವಿ. ಯಿಂದ ೧೯೮೬ರಲ್ಲಿ ಡಾಕ್ಟರೇಟ್ ಪದವಿಯನ್ನು ಪಡೆದರು. ಆ ಕಾಲದಲ್ಲಿ ಇಡೀ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರೌಢಶಾಲಾ ಶಿಕ್ಷಕರೊಬ್ಬರು ಪಿ.ಎಚ್.ಡಿ. ಪದವಿಯನ್ನು ಪಡೆದುದು ಪ್ರಥಮ ದಾಖಲೆಯಾಗಿತ್ತು. ತಮ್ಮ ೪೩ನೇ ಇಳಿವಯಸ್ಸಿನಲ್ಲಿ ಈ ಪದವಿಯನ್ನು ಪಡೆದಿದ್ದರು.

೧೯೮೭ರಲ್ಲಿ ಗುಂಡ್ಮಿಯವರ ಮಾರ್ಗದರ್ಶನದಲ್ಲಿ 'ಕರ್ಹಾಡ ಬ್ರಾಹ್ಮಣರು ಒಂದು ಅಧ್ಯಯನ' ದಕ್ಷಿಣ ಕ್ನನಡ ಮತ್ತು ಕಾಸರಗೋಡು ಜಿಲ್ಲೆ' ಎಂಬ ಅಧ್ಯಯನವನ್ನು ಆರಂಭಿಸಿದರಾದರೂ ಡಾ। ಗುಂಡ್ಮಿಯವರ ಅಕಾಲಿಕ ಮರಣದಿಂದ ಮಾನಸಿಕ ಆಘಾತಕ್ಕೊಳಗಾದ ಇವರ ಅಧ್ಯಯನ ತಾತ್ಕಾಲಿಕವಾಗಿ ಸ್ಥಗಿತವಾಯಿತು. ಬಳಿಕ ಸಮಾಜದ ಕೆಲವು ಹಿರಿಯರ ಒತ್ತಡದ ಮೇರೆಗೆ, ಬಹುಭಾಷಾಭಿಜ್ಞರೂ, ಹಿರಿಯ ಲೇಖಕರೂ, ಸಹೃದಯರೂ ಆದ ಮಂಜೇಶ್ವರ ಮುಕುಂದ ಪ್ರಭುಗಳ ಮಾರ್ಗದರ್ಶನದಲ್ಲಿ ಅಧ್ಯಯನವನ್ನು ಪುನರಾರಂಭಿಸಿ ಕರ್ಹಾಡ ಸಮಾಜದ ಬಗೆಗೆ ಸರ್ವ ಸಮಗ್ರ ಮಾಹಿತಿಯನ್ನು ಒಗ್ಗೂಡಿಸಿ ಪ್ರಕಟಿಸುವ ಮಹಾನ್ ಕಾರ್ಯವನ್ನು ಪೂರೈಸಿದರು.

ಸದಾಶಿವ ಭಟ್ಟರು ೧೯೬೪ ರಿಂದ ೧೯೯೨ರ ವರೆಗೆ ಸುಧೀರ್ಘ ೨೮ ವರ್ಷಗಳ ಶಿಕ್ಷಣ ಕ್ಷೇತ್ರಕ್ಕೆ ಸಲ್ಲಿಸಿದ ಕೊಡುಗೆ ಅಪಾರವಾದುದು. ಲೇಖನಗಳು, ವೈಚಾರಿಕ ಪ್ರಬಂಧಗಳು, ಸಭೆ–ಸಮ್ಮೇಳನ ಗಳಲ್ಲಿ ಉಪನ್ಯಾಸ, ಭಾಷಣಗಳು, ಈ ಮೂಲಕ ತಮ್ಮ ವಿಚಾರಧಾರೆಗಳನ್ನು ಸಮಾಜಕ್ಕೆ ಕಾಲಕಾಲಕ್ಕೆ ತಲುಪಿಸಿದ್ದಾರೆ. ಪ್ರಕಟಿಸಿದ್ದಲ್ಲದೆ ಮಕ್ಕಳಿಗಾಗಿ ಕನ್ನಡ, ತುಳು ಭಾಷೆಗಳಲ್ಲಿ ನಾಟಕಗಳನ್ನು, ಗೀತ ರೂಪಕ ಗಳನ್ನೂ ರಚಿಸಿ ಪ್ರದರ್ಶಿಸಿದರು. ಮಕ್ಕಳಿಗಾಗಿ ಯಕ್ಷಗಾನ ಪ್ರಸಂಗಗಳನ್ನು ರಚಿಸಿ, ತರಬೇತಿ ನೀಡಿ ಪ್ರದರ್ಶಿಸಿದರು. ಸುಮಾರು ೪೫ ವರ್ಷಗಳ ಹಿಂದೆಯೇ ಹೆಣ್ಣು ಮಕ್ಕಳಿಂದ ಮೊತ್ತಮೊದಲ ಯಕ್ಷಗಾನ ಪ್ರಸಂಗ ಪ್ರದರ್ಶಿಸಿದ ಕೀರ್ತಿ ಭಟ್ಟರಿಗೆ ಸಲ್ಲುತ್ತದೆ. ಈ ತಂಡ ಮೈಸೂರಿನವರೆಗೆ ಹೋಗಿ ಪ್ರದರ್ಶನ ನೀಡಿತು. ಇದಲ್ಲದೆ ಇವರ ಊರಾದ ನಿಡ್ವಳ್ಳಿ ಪರಿಸರದ ಯುವಕರನ್ನು ಒಟ್ಟು ಸೇರಿಸಿ 'ಶ್ರೀ ಸತ್ಯನಾರಾಯಣ ಯಕ್ಷಗಾನ ಕಲಾಕೂಟ' ಎಂಬ ಸಂಘವನ್ನು ಸ್ಥಾಪಿಸಿದ, ಮೂರು ದಶಕಗಳ ಕಾಲ ಇದನ್ನು ಯಶಸ್ವಿಯಾಗಿ ನಿರ್ವಹಿಸಿದರು.

ಸದಾಶಿವ ಭಟ್ಟರು ಈ ವರೆಗೆ ೨೦ಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದ್ದಾರೆ. ಇವರ ಕೃತಿಗಳ ೧೭ ಧ್ವನಿಸುರುಳಿಗಳು ಹೊರಬಂದಿವೆ. ೩೦ಕ್ಕೂ ಹೆಚ್ಚು ಪ್ರಕಟಿತ ಕೃತಿಗಳಿವೆ. ಇವರ

ಕೃತಿಗಳಲ್ಲಿ ತುಳು ಯಕ್ಷಗಾನ ಪ್ರಸಂಗಗಳು, ೬ ಗೀತ ರೂಪಕಗಳು, ೧೦ ತುಳು ನಾಟಕಗಳು, ೧೫ ಪೌರಾಣಿಕ ನಾಟಕಗಳು, ಹವ್ಯಕ ಹಾಗೂ ಕರ್‍ಹಾಡ ಭಾಷೆಯ ಕೃತಿಗಳು ಪ್ರಸಿದ್ಧವಾದವು.

**ಪ್ರಕಟಿತ ಕೃತಿಗಳು :**

೧. ದೀವಿಗೆ (ಕವನ ಸಂಕಲನ)

೨. ಸುಮಹಾರ (ಕವನ ಸಂಕಲನ)

೩. ಪ್ರೇಮ–ಕಾಮ (ಕವನ ಸಂಕಲನ)

೪. ಬಾಲವಾಡಿ (ಮಕ್ಕಳ ಪದ್ಯಗಳು)

೫. ಗೀತಿಕೆ (ಮಕ್ಕಳ ಪದ್ಯಗಳು)

೬. ಗುರು ಕೃಷ್ಣ (ಜೀವನ ಚರಿತ್ರೆ)

೭. ಸತ್ಯಮೂರ್ತಿ ಕರ್ಣ (ಗೀತ ರೂಪಕ)

೮. ಅಮೃತವರ್ಷಿಣಿ (ಕರ್‍ಹಾಡ ಭಾಷಾ ಕವನ ಸಂಕಲನ)

೯. ಕವನಾಂ ಸೋರು (ಕರ್‍ಹಾಡ ಭಾಷಾ ಕವನ ಸಂಕಲನ)

೧೦. ಸೃಗಾಲ ವಧೆ (ತುಳು ಯಕ್ಷಗಾನ ಅರ್ಥ ಸಹಿತ)

೧೧. ಸತ್ಯ ಸೇನಾ ವಧಃ (ಸಾರ್ಥ ಸಂಸ್ಕೃತ ಯಕ್ಷಗಾನಂ)

೧೨. ಊರ್ಮಿಳಾ (ಸಾರ್ಥ ಸಂಸ್ಕೃತ ಯಕ್ಷಗಾನಂ)

೧೩. ಕಂಸ ವಧಃ (ಸಾರ್ಥ ಸಂಸ್ಕೃತ ಯಕ್ಷಗಾನಂ)

೧೪. ಶಿವಲೀಲಾ (ಸಾರ್ಥ ಸಂಸ್ಕೃತ ಯಕ್ಷಗಾನಂ)

೧೫. ವೀರ ಸುಶೇಣ (ಹಿಂದಿ ಯಕ್ಷಗಾನ)

೧೬. ಭಕ್ತ ಧ್ರುವ (ಹಿಂದಿ ಯಕ್ಷಗಾನ)

೧೭. ಸ್ಲೇಯಿಂಗ್ ಆಫ್ ಸುಧನ್ವ (ಇಂಗ್ಲಿಷ್ ಯಕ್ಷಗಾನ)

೧೮. ಪುತ್ತೂರು ಶ್ರೀ ಮಹಾಲಿಂಗೇಶ್ವರ ಸುಪ್ರಭಾತ (ಕನ್ನಡ)

೧೯. ಕೊಲ್ಲೂರು ಶ್ರೀ ಮೂಕಾಂಬಿಕಾ ಸ್ತವಃ (ಸಂಸ್ಕೃತ)

೨೦. ಮಲ್ಲಿ ಶ್ರೀ ದುರ್ಗಾಪರಮೇಶ್ವರೀ ಸುಪ್ರಭಾತಂ (ಸಂಸ್ಕೃತ)

೨೧. ಕಟೀಲು ಶ್ರೀ ದುರ್ಗಾಪರಮೇಶ್ವರೀ ಸುಪ್ರಭಾತಂ (ಸಂಸ್ಕೃತ)

೨೨. ಬೆಟ್ಟಂಪಾಡಿ ಶ್ರೀ ಮಹಾಲಿಂಗೇಶ್ವರ ಸ್ತೋತ್ರಂ (ಸಂಸ್ಕೃತ)

೨೩. ಕೊಲ್ಯ ಶ್ರೀ ಮೂಕಾಂಬಿಕಾ ಸ್ತೋತ್ರಂ (ಸಂಸ್ಕೃತ)

೧೪. ಶ್ರೀ ಶಿಶಿಲೇಶ್ವರ ಸುಪ್ರಭಾತಂ (ಸಂಸ್ಕೃತ)

೧೫. ಭಜನ ಮಾಲಿಕ (ಭಜನೆ ಪದ್ಯಗಳು)

೨೬. ದಕ್ಷಿಣ ಕನ್ನಡ ಮತ್ತು ಕಾಸರಗೋಡಿನ ಕರ್ಹಾಡ ಬ್ರಾಹ್ಮಣರು ಒಂದು ಅಧ್ಯಯನ (ಸಂಶೋಧನೆ)

೨೭. ಕರ್ಹಾಡ ರಾಮಾಯಣ (ಆರು ಕಾಂಡಗಳು) ಮಹಾಕಾವ್ಯ

೨೮. ಕರ್ಹಾಡ ರಾಮಾಯಣ (ಉತ್ತರ ಕಾಂಡ) ಮಹಾಕಾವ್ಯ.

**ಪ್ರಕಟಿತ ಧ್ವನಿಸುರುಳಿಗಳು :**

೧. ಪುತ್ತೂರು ಶ್ರೀ ಮಹಾಲಿಂಗೇಶ್ವರ ಸುಪ್ರಭಾತ (ಕನ್ನಡ)

೨. ಪುತ್ತೂರು ಶ್ರೀ ಮಹಾಲಿಂಗೇಶ್ವರ ಸುಪ್ರಭಾತ (ತುಳು)

೩. ಕಂಸ ವಧಃ (ಸಂಸ್ಕೃತ ಯಕ್ಷಗಾನಂ)

೪. ಶಿವಚಂದ್ರಃ (ಸಂಸ್ಕೃತ ಯಕ್ಷಗಾನಂ)

೫. ವೀರ ಸುಶೇಣ (ಹಿಂದಿ ಯಕ್ಷಗಾನ)

೬. ವಿಭೀಷಣ ನೀತಿ (ಹಿಂದಿ ಯಕ್ಷಗಾನ)

೭. ಸ್ಲೇಯಿಂಗ್ ಆಫ್ ಸುಧನ್ವ (ಇಂಗ್ಲಿಷ್ ಯಕ್ಷಗಾನ)

೮. ಶ್ರೀ ಕೃಷ್ಣ ಸಾರಥ್ಯ (ಇಂಗ್ಲಿಷ್ ಯಕ್ಷಗಾನ)

೯. ಪಾರ್ಥ ಪ್ರತಿಜ್ಞ (ಕರ್ಹಾಡಿ ಯಕ್ಷಗಾನ)

೧೦. ಅಮೃತವರ್ಷಿಣಿ (ಕರ್ಹಾಡಿ ಭಾವಗೀತೆ)

೧೧. ಆವಳ ಶ್ರೀ ದುರ್ಗಾಪರಮೇಶ್ವರೀ ಸುಪ್ರಭಾತಣೆ : ಭಾವಗೀತ (ಕರ್ಹಾಡ ಬಾಷೆಯ ಸುಪ್ರಭಾತ)

೧೨. ಅಗಲ್ಪಾಡಿ ಶ್ರೀ ದುರ್ಗಾಪರಮೇಶ್ವರೀ ಸುಪ್ರಭಾತಣೆ : ಭಕ್ತಿಗೀತ (ಕರ್ಹಾಡ ಭಾಷೆಯ ಸುಪ್ರಭಾತ)

**ತುಳು ಯಕ್ಷಗಾನ / ನಾಟಕಗಳು :**

೧. ಊರ ಉಳ್ಳಾಲ್ತಿ    ೨. ಧರ್ಮಣ್ಣನ ಗಡಿಬಿಡಿ    ೩. ರಾಧಕ್ಕನ ರಾದ್ದಾಂತೊ

೪. ಮರ್ಲ್‌ದ ಪೊರ್ಲು    ೫. ವೇದಕ್ಕನ ವೇದಾಂತೊ    ೬. ಚಿತ್ರನ ವಿಚಿತ್ರೊ

೭. ಏರ್?

**ಅಪ್ರಕಟಿತ ಕೃತಿಗಳು : ಯಕ್ಷಗಾನ (ಕನ್ನಡ)**

೧. ರಕ್ತಕ್ರಾಂತಿ
೨. ಧ್ರುವ ಚರಿತ್ರ
೩. ದಕ್ಷಾಧ್ವರ – ತಾರಕವಧೆ
೪. ಯಕ್ಷನಾರದ ಶಾಪ
೫. ಮಹಿಷಾಸುರ ವಧೆ
೬. ಊರ್ವಶಿ ಗರ್ವಾಪಹಾರ
೭. ಧರ್ಮೇಂದ್ರ ವಿಜಯ
೮. ವೀರ ವೃಷಸೇನ
೯. ಯಮ – ಯಮಿ
೧೦. ಸತೀ ಗಾಯತ್ರಿ
೧೧. ವೇನ ವಧೆ
೧೨. ಶ್ರೀಮತಿ ಸ್ವಯಂವರ
೧೩. ನಾರದ ಶಾಪ
೧೪. ತಾರಾ ಶಶಾಂಕ
೧೫. ವೀರ ವರ ಅಗಸ್ತ್ಯ
೧೬. ಶಿವ–ಚಂದ್ರ
೧೭. ವೇದವರೇ ಶಾಪ
೧೮. ಪರಶುರಾಮ ವಿಜಯ
೧೯. ರಾವಣ ದಿಗ್ವಿಜಯ
೨೦. ಸುಧನ್ವಾವಸಾನ
೨೧. ಊರ್ಮಿಳಾ
೨೨ ಭರತ ದಿಗ್ವಿಜಯ
೨೩. ಗುರುದಕ್ಷಿಣೆ
೨೪. ಅಭಯ ಪ್ರಧಾನ
೨೫. ದ್ರುಪದ ಗರ್ವಭಂಗ
೨೬. ವೀರ ಸುಶೀಣ
೨೭. ವೀರ ಸಹದೇವ
೨೮. ಶಂಬರ ವಧೆ
೨೯. ಸುಲಕ್ಷಣ ವಧೆ
೩೦. ವನಿತೆ ಕನಕಾವತಿ

**ತುಳು ಯಕ್ಷಗಾನ :**

೧. ವರದಾನೊ
೨. ವೀರ ರಾವಣೆ
೩. ಕುಂಭಸೇನ ವಧೆ
೪. ವೀರವರ ಅಗಸ್ತ್ಯ
೫. ಸುಧನ್ವಾನಸಾನೊ
೬. ವೀರ ವೃಷಕೇತು

**ಇತರ (ಅಪ್ರಕಟಿತ) :**

೧. ರಾವಣ ದಿಗ್ವಿಜಯ (ಕರ್ಹಾಡಿ ಯಕ್ಷಗಾನ)
೨. ಬೇಡುವವು ಆರು (ಹವ್ಯಕ ನಾಟಕ)
೩. ಶ್ರೀಮತಿಗೆ ಮದುವೆ (ಹರಿಕಥೆ)
೪. ಕೆಲವು ಚಾಟು ಪದ್ಯಗಳು

**ಗೀತ ರೂಪಕಗಳು (ಅಪ್ರಕಟಿತ)**

೧. ಅಮೃತತ್ವದೆಡೆಗೆ

೨. ಭಾಗೀರಥೆ

೩. ಭಾರ್ಗವಾನುಗ್ರಹ

೪. ಕೆರೆಗೆ ಹಾರ

೫. ರವಿಜನ ಕಿವಿಯಲಿ ಬಿತ್ತಿದನು ಭಯವ

೬. ಸುಭದ್ರಾರ್ಜುನ (ಸಂಸ್ಕೃತ ಗೀತ ರೂಪಕ)

೭. ವೀರ ಅಭಿಮನ್ಯು

**ನಾಟಕಗಳು (ಅಪ್ರಕಟಿತ ಕನ್ನಡ ನಾಟಕಗಳು) :**

೧. ಆಹುತಿ ೨. ಹಳ್ಳಿಯ ಹತ್ತು ಮುಖ ೩. ಗಂಡುಭೀರಿ ೪. ಭೀಪ್, ಭೀಪ್ ೫. ಇದುವೇ ಸಂಸಾರ.

**ತುಳು ನಾಟಕಗಳು (ಅಪ್ರಕಟಿತ) :**

೧. ಯಾನೇ ಮಲ್ಲಯ

೨. ಜಾರಿನಾಳ

೩. ಯಾನೊಂಜಿ ಗಿರೆತಂದೆ

೪. ಮಂಗಳ

೫. ಎಂಚಿನ ಪೋ

೬. ಏರ್?

೭. ಬಿ.ಎಸ್.ಸಿ.

೮. ಅಪ್ಪೆ – ಮಗೆ

೯. ನನದಾನಕ

**ಕನ್ನಡ ಪೌರಾಣಿಕ ನಾಟಕಗಳು (ಅಪ್ರಕಟಿತ)**

೧. ಭೀಷ್ಮ

೨. ಅಗಸ್ತ್ಯ ಸಾಂತ್ವನ

೩. ಹರಿದಳಾ ಯಮುನೆ

೪. ಅಗಸ್ತ್ಯ ಜನನ

೫. ಅಹಲ್ಯೋಧ್ಧಾರ

೬. ವಿಧಿವಿಲಸನ

೭. ಭಗವಾನ್ ಪರಶುರಾಮ

೮. ಅಗಸ್ತ್ಯಾನುಗ್ರಹ

೯. ನಾರಿ ಮುನಿದರೆ–೧

೧೦. ನಾರಿ ಮುನಿದರೆ–೨

೧೧. ಶ್ರೀ ಕೃಷ್ಣ ರಾಯಭಾರ

೧೨. ಪಾರಿಜಾತ

೧೩. ವೀರ ಗಣಪತಿ

೧೪. ಯಮ – ಯಮಿ

**ದೊರೆತ ಪ್ರಶಸ್ತಿಗಳು ಮತ್ತು ಸನ್ಮಾನಗಳು :**

೧. ಯಕ್ಷಗಾನ ಕ್ಷೇತ್ರದ ಸಾಧನೆಗಾಗಿ ಸೀತಾನದಿ ಗಣಪಯ್ಯ ಶೆಟ್ಟಿ ಸ್ಮಾರಕ ಪ್ರಶಸ್ತಿ

೨. ಪೊಳಲ ಶಾಸ್ತ್ರಿ ಸ್ಮಾರಕ ಪ್ರಶಸ್ತಿ

೩. ಕಡವ ಶಂಭುಶರ್ಮ ಸ್ಮಾರಕ ಪ್ರತಿಷ್ಠಾನದ ಗೌರ ಸನ್ಮಾನ

೪. ಸುಳ್ಯ ಕರ್ಹಾಡ ಬ್ರಾಹ್ಮಣ ಸಮಾಜದವರಿಂದ ಗೌರವ ಸನ್ಮಾನ

೫. ಉಡುಪಿಯ ಯಕ್ಷಗಾನ ಕಲಾಸಮುಚ್ಚಯ 'ಶಿವಪ್ರಭಾ'ದ ಪ್ರವೇಶೋತ್ಸವ ಸಮಾರಂಭದಲ್ಲಿ ಯಕ್ಷಗಾನ ಪ್ರಸಂಗ ರಚನೆಗಾಗಿ ಅಭಿನಂದನೆ.

೬. ಹಲವಾರು ಸಂಘ-ಸಂಸ್ಥೆಗಳಿಂದ ಗೌರವ ಸನ್ಮಾನಗಳು

೭. ಪುತ್ತೂರು ತಾಲೂಕು ೧೩ನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪಟ್ಟ.

**೪.೪.೨೬ ಮುಳಿಯ ಕೃಷ್ಣಭಟ್ಟ (೧೯೩೩-೧೯೮೨)**

೧೯೩೩ರ ಸಪ್ಟೆಂಬರ್ ೩ರಂದು ಮುಳಿಯ ಕೇಶವ ಭಟ್ಟ ಮತ್ತು ಸರಸ್ವತಿಯವರ ಮಗನಾಗಿ ಜನಿಸಿದ ಮುಳಿಯ ಕೃಷ್ಣಭಟ್ಟರು ಬಾಲ್ಯದಿಂದಲೇ ಸಾಹಿತ್ಯಾಸಕ್ತರಾಗಿದ್ದರು. ಅವರು ಬರೆದ ಹತ್ತಾರು ಕತೆಗಳೂ ಬರಹಗಳೂ ನಿಯತಕಾಲಿಕ ಪತ್ರಿಕೆಗಳಲ್ಲಿ ಬೆಳಕು ಕಂಡಿದ್ದವು. 'ಪ್ರವಾಹದಲ್ಲಿ ಪ್ರತಿಬಿಂಬ' ಅವರ ಕಥಾ ಸಂಕಲನ. 'ಹುಚ್ಚು ಹೊಳೆ' ಮರಣೋತ್ತರ ಪ್ರಕಟಗೊಂಡ ಅವರ ಕಾದಂಬರಿ. 'ಮುಂಗಾರು ಮುಗಿಲು' ಎಂಬ ಕಥಾಸಂಕಲನದಲ್ಲಿನ 'ಏಳು ಉರುಳುಗಳು' ಎಂಬ ಕಥೆ ಅವರ ಉತ್ತಮ ಕಥೆಗಾರಿಕೆಗೆ ನಿದರ್ಶನ.

೧೯೫೬ರಲ್ಲಿ ತಮ್ಮ ಸಂಗಾತಿ ಗೆಳೆಯರೊಂದಿಗೆ ಸೇರಿ 'ಜನಪ್ರಿಯ ಸಾಹಿತ್ಯ' ಎಂಬ ಪ್ರಕಾಶನ ಸಂಸ್ಥೆಯನ್ನು ಪುತ್ತೂರಿನಲ್ಲಿ ಸ್ಥಾಪಿಸಿದರು. ಸಮಕಾಲೀನ ಲೇಖಕರ ಬರಹಗಳನ್ನು ಬೆಳಕಿಗೆ ತಂದ ಈ ಸಂಸ್ಥೆ, 'ಮುಂಗಾರು ಮುಗಿಲು', 'ಇನ್ನೊಂದು ಮುಖ', 'ಪ್ರವಾಹದಲ್ಲಿ ಪ್ರತಿಬಿಂಬ', 'ರೂಪರಾಶಿಗಳ ಸಂತೆ' ಮುಂತಾದ ಕಥಾ ಸಂಕಲನಗಳನ್ನು, ಗೋಪಾಲಕೃಷ್ಣ ಅಡಿಗರ 'ಚೆಂಡೆ ಮದ್ದಳೆ' ಎಂಬ ಕವನ ಸಂಕಲನವನ್ನು ಪ್ರಕಟಿಸಿದ್ದಾರೆ. ಮುಳಿಯ ಕೃಷ್ಣಭಟ್ಟರು ಕನ್ನಡ ಭಾಷೆ-ಸಾಹಿತ್ಯಗಳಲ್ಲಿ ಅಪಾರ ಪಾಂಡಿತ್ಯ ಪಡೆದಿದ್ದರು.

### ೪.೪.೨೭ ಅಬ್ದುಲ್ ರಹಿಮಾನ್, ಅರಸಳಿಕೆ (೧೯೩೪ – ೧೯೬೯)

ಪುತ್ತೂರು ತಾಲೂಕಿಗೆ ಸೇರಿದ ಕರೋಪಾಡಿ ಗ್ರಾಮದ ಅರಸಳಿಕೆಯಲ್ಲಿ ಅಬ್ದುಲ್ ರಹಿಮಾನ್ ಜನಿಸಿದರು. ಅವರ ತಂದೆ ಕಾದ್ರಿ ಬ್ಯಾರಿ, ತಾಯಿ ಖದೀಜಮ್ಮ. ಈ ತಂದೆ ತಾಯಿಯ ಮೂರು ಗಂಡು, ಎರಡು ಹೆಣ್ಣು ಮಕ್ಕಳಲ್ಲಿ ಅಬ್ದುಲ್ ರಹಿಮಾನ್ ಕೊನೆಯವರು.

ಅಬ್ದುಲ್ ರಹಿಮಾನರ ಜನನ ೮-೧೧-೧೯೩೪ರಲ್ಲಾಯಿತು. ಪ್ರಾಥಮಿಕ ವಿದ್ಯಾಭ್ಯಾಸ ಆನೆಕಲ್ಲು ಮತ್ತು ಕನ್ಯಾನಗಳಲ್ಲಾಯಿತು. ಎಂಟನೆಯ ತರಗತಿಯವರೆಗೆ ಕಲಿತು ೧೯೫೧ ಜುಲೈಯಿಂದ ೧೯೫೩ ಮಾರ್ಚ್‌ವರೆಗೆ ಎರಡು ವರ್ಷಕಾಲ ಮಾಯಿಪ್ಪಾಡಿಯ ಸರಕಾರಿ ಬುನಾದಿ ಶಿಕ್ಷಣ ತರಬೇತಿ ಶಾಲೆಯಲ್ಲಿ ಶಿಕ್ಷಣ ಪಡೆದರು. ಆ ಕಾಲದಲ್ಲೇ ಅಬ್ದುಲ್ ರಹಿಮಾನರು ಸಣ್ಣ ಸಣ್ಣ ಮಕ್ಕಳ ಪದ್ಯ ಬರೆಯುತ್ತಿದ್ದರು. ಆ ಕಾಲದಲ್ಲಿ ಅವರು ಪಡೆದ ಶಿಕ್ಷಕ ತರಬೇತಿಗೆ ಜ್ಯೂನಿಯರ್ ಗ್ರೇಡ್ ಎಂಬ ಹೆಸರಿತ್ತು.

೧೯೫೩ರಲ್ಲಿ ಅಂದಿನ ದಕ್ಷಿಣ ಕನ್ನಡ ಜಿಲ್ಲೆಯ ಬೇಕೂರು ಶಾಲೆಯಲ್ಲಿ ಹಂಗಾಮಿಯಾಗಿ ಕೆಲವು ತಿಂಗಳುಗಳ ಕಾಲ ಕೆಲಸ ಮಾಡಿದ ಅಬ್ದುಲ್ ರಹಿಮಾನರು ಇಂದಿನ ಸುಳ್ಯ ತಾಲೂಕಿನ ಅಮರಮೂಡ್ನೂರು ಶಾಲೆಯಲ್ಲಿ ಎರಡು ವರ್ಷ, ಬಳಿಕ ಸಾಲೆತ್ತೂರು ಶಾಲೆಯಲ್ಲಿ ಕೆಲವು ತಿಂಗಳು ಕೆಲಸ ಮಾಡಿದರು. ಅಮರಮುಡ್ನೂರಿನಲ್ಲಿರುವಾಗ ಕವಿತೆಗಳನ್ನು ಬರೆಯಲು ಆರಂಭಿಸಿದರು. ೩೦-೧೦-೧೯೫೬ರಂದು ಮಿತ್ತನಡ್ಕ ಶಾಲೆಯನ್ನು ಸೇರಿದ ಅವರು ಕೊನೆಗಾಲದವರೆಗೆ ಅಲ್ಲೇ ಅಧ್ಯಾಪಕರಾಗಿದ್ದರು.

೧೯೫೩ರಿಂದ ೧೯೬೯ರ ವರೆಗಿನ ಅಧ್ಯಾಪನದ ಅವಧಿಯಲ್ಲಿ ಮಕ್ಕಳ ಒಡನಾಟದಿಂದ ಅವರ ಮನಸ್ಸನ್ನರಿತು ಅವರಿಗೆ ಬೇಕಾದಂತಹ ಪದ್ಯಗಳನ್ನು ರಚಿಸಲು ಅವರಿಗೆ ಅವಕಾಶವಾಯಿತು. ಮೊದಲ ಮಕ್ಕಳ ಪದ್ಯಗಳ ಸಂಕಲನ 'ಮಕ್ಕಳ ಮಲ್ಲಿಗೆ'ಯಲ್ಲಿ ೨೪ ಕವನಗಳಿವೆ. ಈ ಸಂಕಲನದಲ್ಲಿರುವ ಅಂಗಡಿ, ಬಂತು ತಂಗಾಳಿ, ಪುಟ್ಟನ ಆಟ, ಬೆಕ್ಕಿನ ಆಟ ಮೊದಲಾದ ಪದ್ಯಗಳನ್ನು ಅವರು ಸೊಗಸಾಗಿ ಮಕ್ಕಳಿಗೆ ಹೇಳಿಕೊಡುತ್ತಿದ್ದರು. 'ಹಾಡು ಹಕ್ಕಿ' ಎಂಬುದು ಅವರ ಎರಡನೆಯ ಕವನ ಸಂಕಲನ. ೧೯೬೪ರಲ್ಲಿ 'ಬಿಚ್ಚುಗತ್ತಿ' ಪ್ರಕಟವಾಯಿತು. ಇದರಲ್ಲಿ ರಾಷ್ಟ್ರಪ್ರೇಮವನ್ನು ಹೆಚ್ಚಿಸುವ ಕವಿತೆಗಳಿವೆ. ಅವರ ಕೆಲವು ಕವನಗಳು ಮಂಗಳೂರಿನ ದಿವ್ಯವಾಣಿ, ಪುತ್ತೂರಿನ ಇಂದ್ರ ಧನುಸ್ಸು ಪತ್ರಿಕೆಗಳಲ್ಲೂ ಪ್ರಕಟವಾಗಿದೆ[೨೬].

೧೯೬೫ರಲ್ಲಿ ಪ್ರಕಟವಾದ 'ಚುಟುಕು ಗುಟುಕು' ಎಂಬುದು ೮೭ ಚುಟುಕಗಳ ಸಂಕಲನ. ಮಕ್ಕಳಿಗೆ ಪ್ರಿಯವಾಗಬಹುದಾದ ಅಂತ್ಯಪ್ರಾಸಬದ್ಧ ಚುಟುಕುಗಳು ಇಲ್ಲಿವೆ. ಉದಾ. : ೧) ಗದ್ದೆಯನ್ನು ಉತ್ತು!, ಒಳ್ಳೆ ಬೀಜ ಬಿತ್ತು! ಮುಂದೆ ನಿನಗೆ ಸಿಗುವುದಣ್ಣ, ಹೊಟ್ಟೆ ತುಂಬ ತುತ್ತು!

೨) ಹೇ ಹೇ ಕತ್ತೆ, ಅಗಸನ ತೊತ್ತೆ, ಹೇಳಿದ ಜಾಗಕೆ ಗಂಟನು ಹೊತ್ತೆ ... ಇತ್ಯಾದಿ.

ಹೀಗೆ ಕನ್ನಡ ಸಾಹಿತ್ಯದಲ್ಲಿ ಮರೆತು ಹೋಗಿದೆಯೆಂದೇ ಹೇಳಬಹುದಾದ ಒಂದು ಹೆಸರು ಅಬ್ದುಲ್ ರಹಿಮಾನ್ ಅರಸಳಿಕೆ ಅವರದು.

### ೪.೪.೨೮ ಅಮೃತ ಸೋಮೇಶ್ವರ (೧೯೩೫)

ಹೊಸಗನ್ನಡದ ಪ್ರಮುಖ ಕವಿಗಳಲ್ಲಿ ಅಮೃತ ಸೋಮೇಶ್ವರರೂ ಒಬ್ಬರು. ಮಂಗಳೂರು ಸಮೀಪದ ಕೋಟೆಕಾರು ಗ್ರಾಮದ ಅಡ್ಕ ಅಮೃತ ಸೋಮೇಶ್ವರರ ಹುಟ್ಟೂರು. ಕೋಟೇಕಾರಿನ ಸ್ಟೆಲ್ಲಾಮೇರೀಸ್ ಕನ್ವೆಂಟ್ನಲ್ಲಿ ಪ್ರಾಥಮಿಕ ಶಿಕ್ಷಣ ಮುಗಿಸಿದ ಸೋಮೇಶ್ವರರು,ಅಲ್ಲಿನ ಆನಂದಾಶ್ರಮದಲ್ಲಿ ಹೈಸ್ಕೂಲ್ ವಿದ್ಯಾಭ್ಯಾಸ ಮುಗಿಸಿದರು. ಸಂತ ಅಲೋಷಿಯಸ್ ಕಾಲೇಜಿನಲ್ಲಿ ಬಿ.ಎ ಪದವಿಯನ್ನು ಪಡೆದರು. ನಂತರ ಖಾಸಗಿಯಾಗಿ ಓದಿ ಕರ್ನಾಟಕ ವಿಶ್ವವಿದ್ಯಾನಿಲಯದಿಂದ ಎಂ.ಎ ಪದವಿ ಪಡೆದರು. ಪುತ್ತೂರು ಸಂತ ಫಿಲೋಮಿನಾ ಕಾಲೇಜಿನಲ್ಲಿ ಸೋಮೇಶ್ವರರು ೨ವರ್ಷ ಸೇವೆ ಸಲ್ಲಿಸಿದರು. ೧೯೬೭ರಿಂದ ಪುತ್ತೂರು ವಿವೇಕಾನಂದ ಕಾಲೇಜಿನಲ್ಲಿ ಕನ್ನಡ ವಿಭಾಗದ ಮುಖ್ಯಸ್ಥರಾಗಿ ಕರ್ತವ್ಯನಿರ್ವಹಿಸಿ ೧೯೯೫ರಲ್ಲಿ ನಿವೃತ್ತರಾದರು. ವಿದ್ಯಾರ್ಥಿಯಾಗಿದ್ದಾಗಲೇ ಸಾಹಿತ್ಯದಲ್ಲಿ ಆಸಕ್ತಿ ಹೊಂದಿದ್ದ ಅಮೃತರು ತುಳುನಾಡಿನ ಸಂಸ್ಕೃತಿ ಹಾಗೂ ಕಲೆಗಳ ಬಗೆಗೆ ವಿಶೇಷ ಒಲವುಳ್ಳವರು.

ಇವರ ಪ್ರಮುಖ ಕೃತಿಗಳು 'ಎಲೆಗಿಳಿ', 'ರುದ್ರಶಿಲೆ ಸಾಕ್ಷಿ', 'ಕೆಂಪು ನೆನಪು'. 'ತಂಬಿಲ', 'ರಂಗಿತ', 'ವನಮಾಲೆ', 'ಭ್ರಮಣ', 'ಉಪ್ಪುಗಾಳಿ' ಇವು ಇವರ ಪ್ರಮುಖ ಕವನ ಸಂಕಲನಗಳು. 'ತೀರದ ತೆರೆ' ಇವರ ಕಾದಂಬರಿ. 'ಯಕ್ಷಗಾನ ಕೃತಿ ಸಂಪುಟ', 'ತುಳು ಬದುಕು', 'ಯಕ್ಷಗಾನ ಹೆಜ್ಜೆ ಗುರುತು', 'ಭಗವತಿ ಆರಾದನೆ' ಇವರ ಇತರ ಕೃತಿಗಳು. 'ಗೋಂದೋಳು', 'ರಾಯ ರಾವುತೆ' ಇವರು ಬರೆದ ನಾಟಕಗಳು. ಸಾಕಷ್ಟು ಧ್ವನಿ ಸುರುಳಿಗಳಿಗೆ ಸಾಹಿತ್ಯ ಒದಗಿಸಿದ ಹಿರಿಮೆ ಇವರದು. ಕರ್ನಾಟಕ ಸಾಹಿತ್ಯ ಅಕಾಡಮಿ, ತುಳು ಸಾಹಿತ್ಯ ಅಕಾಡಮಿ ಮೊದಲಾದ ಪ್ರಶಸ್ತಿ ಪುರಸ್ಕೃತರು.

### ೪.೪.೨೯ ಗಣಪತಿ ಮೊಳೆಯಾರ (೧೯೩೬–೧೯೮೧)

ಮೊಳೆಯಾರ ಮನೆತನದ ವೆಂಕಪ್ಪ–ಗಂಗಮ್ಮನವರ ಕೊನೆಯ ಮಗ ಗಣಪತಿ ಭಟ್ಟರು. ಇವರ ಪ್ರಾಥಮಿಕ ವಿದ್ಯಾಭ್ಯಾಸ ನಡೆದದ್ದು ಮಹಾಜನ ಸಂಸ್ಕೃತ ಪಾಠಶಾಲೆಯಲ್ಲಿ. ನಂತರ ಮಂಗಳೂರು ಗಣಪತಿ ಹೈಸ್ಕೂಲಿನಲ್ಲಿ ಎಸ್.ಎಸ್.ಎಲ್.ಸಿ. ಪಾಸು ಮಾಡಿ, ಮಂಗಳೂರು ಶಿಕ್ಷಕ ತರಬೇತಿ ಶಾಲೆಯಲ್ಲಿ ಅಧ್ಯಾಪಕ ತರಬೇತಿ ಪಡೆದರು. ಹಿರಿಯಡ್ಕ, ಕನ್ಯಾನ ಮತ್ತು ಪುತ್ತೂರುಗಳಲ್ಲಿ ಅಧ್ಯಾಪಕರಾಗಿ ದುಡಿದರು. ಜೊತೆಯಲ್ಲಿ ಪರಂಪರೆಯಿಂದ ಬಳುವಳಿಯಾಗಿ ಬಂದ ಸಾಹಿತ್ಯಸೇವೆ ನಡೆಯುತ್ತಲೇ ಇತ್ತು. ಸಾಹಿತ್ಯವನ್ನು ಇವರು ಅಧ್ಯಯನ ವಿಷಯವನ್ನಾಗಿ ಎತ್ತಿಕೊಳ್ಳದಿದ್ದರೂ ಅದು ಹವ್ಯಾಸವೇ ಆಯಿತು.

ಇವರು ಬರೆದ 'ಮೇಘದೂತದ ಪ್ರತಿಕೃತಿ' ಕನ್ನಡ ಅನುವಾದ ಓದುಗರು ಬೆರಗಾಗುವಂತಿದೆ. ಭಟ್ಟನಾರಾಯಣನ 'ವೇಣೀಸಂಹಾರ', ಕಾಳೀದಾಸನ 'ಅಭಿಜ್ಞಾನ ಶಾಕುಂತಲ', ಭಾಸ ಕವಿಯ 'ಅವಿಮಾರಕ', ವಿಶಾಕ ದತ್ತನ 'ಮುದ್ರಾರಾಕ್ಷಸ', ಆರ್ಯ ಕ್ಷೇಮೀಶ್ವರನ 'ಚಂಡಕೌಶಿಕ', ರಾಜಶೇಖರನ 'ವಿದ್ಧಶಾಲ ಭಂಜಿಕೆ', ಶಂಖಧರನ 'ಲಟಕ ಮೇಲಕಮ್' ಮತ್ತು ಮಹೇಂದ್ರ ವಿಕ್ರಮವರ್ಮನ 'ಮತ್ತವಿಲಾಸ ಪ್ರಹಸನಮ್', ಭವಭೂತಿಯ 'ಮಹಾವೀರ ಚರಿತಮ್' ಹೀಗೆ ಎಂಟು ಅನುವಾದಗಳು ಇವರ ಸಾಧನೆಯ ಪ್ರತೀಕಗಳು. 'ಪೂರ್ವ ಪುಣ್ಯ' ಮತ್ತು 'ಪುರಸ್ಕಾರ'ಗಳು ಸ್ವತಂತ್ರ ಸಾಮಾಜಿಕ ಕಾದಂಬರಿಗಳು. 'ರಘುವಂಶದ ಕಥೆಗಳು' ಕಾಳಿದಾಸನ ಸಂಸ್ಕೃತ ಕಾವ್ಯದ ಗದ್ಯಾನುವಾದಗಳು. 'ರೈವತಕ ಗಿರಿವರ್ಣನೆ'ಯು ಮಾಘನ ಶಿಶುಪಾಲ ವಧೆಯ ಪದ್ಯಾನುವಾದ ಬೇರೆಯೇ ಇದೆ. 'ವೈಜಯಂತಿ' ಎಂಬುದು ಪ್ರೇಮಗೀತೆಗಳ ಸಂಗ್ರಹ. 'ಭಾರತದ ಬೆಳಕು' ಜೀವನ ಚರಿತ್ರೆರೂಪದ ವ್ಯಕ್ತಿ ಚಿತ್ರಗಳ ಸಂಗ್ರಕ– ಇವು ಸ್ವತಂತ್ರ ಕೃತಿಗಳು.

### ೪.೪.೩೦ ಸುಬ್ರಾಯ ಚೊಕ್ಕಾಡಿ (೧೯೩೬)

ಇವರು ಹುಟ್ಟಿದ್ದು ಹಿಂದಿನ ಪುತ್ತೂರು ತಾಲೂಕಿ ತಾಲೂಕಿಗೆ ಸೇರಿದ್ದ ಚೊಕ್ಕಾಡಿಯ ಅಜ್ಜನಗದ್ದೆಯಲ್ಲಿ. ವೃತ್ತಿಯಲ್ಲಿ ಶಾಲಾ ಶಿಕ್ಷಕರು. ಸುದೀರ್ಘ ಮೂವತ್ತೊಂಬತ್ತು ವರ್ಷಗಳ ಕಾಲ ಸೇವೆಯಲ್ಲಿದ್ದು ಹಿರಿಯ ಪ್ರಾಥಮಿಕ ಶಾಲೆಯ ಮುಖ್ಯೋಪಾಧ್ಯಾಯರಾಗಿ ನಿವೃತ್ತಿ ಹೊಂದಿದವರು. ಕನ್ನಡದ ನವ್ಯಕಾವ್ಯ ಪರಂಪರೆಯಲ್ಲಿ ಬರವಣಿಗೆಯನ್ನು ಆರಂಭಿಸಿದರೂ, ಇದರಿಂದ ಭಿನ್ನವಾಗಿ ಕಾವ್ಯ ರಚಿಸಿದವರು. ೧೯೭೦ರ ತಮ್ಮ ಮೊದಲ ಸಂಕಲನ 'ತೆರೆ'ಯಿಂದ ಮೊದಲ್ಗೊಂಡು 'ಬೆಟ್ಟವೇರಿದ ಮೇಲೆ', 'ನಿಮ್ಮವೂ ಇರಬಹುದು', 'ಮೊನ್ನೆ ಸಿಕ್ಕವರು', 'ಇದರಲ್ಲಿ ಅದು', 'ಇನ್ನೊಂದು ಬೆರಗು', 'ಹಾಡಿನ ಲೋಕ' ಮುಂತಾದ ಕವನ ಸಂಕಲನಗಳ ಮೂಲಕ ಕವಿಯಾಗಿ ಹೊರಹೊಮ್ಮಿರುವ ಸುಬ್ರಾಯ ಚೊಕ್ಕಾಡಿಯವರು ಇಂದಿಗೂ ಬರೆಯುತ್ತಿದ್ದಾರೆ.

ಇವರು 'ಸಂತೆಮನೆ' ಕಾದಂಬರಿ ಮತ್ತು 'ಬೇರುಗಳು' ಕಥಾಸಂಕಲನಗಳಿಂದ ಕಥನಗಾರರಾಗಿಯೂ ಗುರುತಿಸಿಕೊಂಡಿದ್ದಾರೆ. 'ದಕ್ಷಿಣ ಕನ್ನಡದ ಕಾವ್ಯಸಮೀಕ್ಷೆ', 'ಕೃತಿ ಶೋಧ', 'ಒಳ–ಹೊರಗು' ಎನ್ನುವ ಕೃತಿಗಳ ಮೂಲಕ ವಿಮರ್ಶಕರಾಗಿಯೂ ಗಮನಾರ್ಹರು. 'ಮಿಲನ', 'ಮಾನಸ', 'ವನಸಿರಿ', 'ಭಾವಚಿತ್ತಾರ' ಇತ್ಯಾದಿ ಧ್ವನಿ ಸುರುಳಿಗಳಲ್ಲಿ ಇವರ ಮಧುರವಾದ ಗೀತೆಗಳಿವೆ. ವೃತ್ತಿಯಲ್ಲಿ ಶಾಲಾ ಅಧ್ಯಾಪಕರಾಗಿದ್ದ ಸುಬ್ರಾಯ ಚೊಕ್ಕಾಡಿಯವರು ಗ್ರಾಮೀಣ ಪ್ರದೇಶದಲ್ಲಿ ಸಮಾನ ಮನಸ್ಕರೊಂದಿಗೆ 'ಸಮನಸ' ಎಂಬ ಸಾಹಿತ್ಯದ ಪರಿಚಾರಕ ಸಂಸ್ಥೆಯನ್ನು ಹುಟ್ಟು ಹಾಕಿ ಸಾಹಿತ್ಯ ಸೇವೆಯನ್ನು ಮಾಡಿದವರು. ಇವರಿಗೆ ವರ್ಧಮಾನ ಪ್ರಶಸ್ತಿ, ಮುದ್ದಣ ಪ್ರಶಸ್ತಿ, ಜಿಲ್ಲಾ ರಾಜ್ಯೋತ್ಸವ

ಪ್ರಶಸ್ತಿ, ಕರ್ನಾಟಕಶ್ರೀ ಪ್ರಶಸ್ತಿಗಳು ಲಭಿಸಿವೆ. ಅಖಿಲ ಭಾರತೀಯ ೬೫ನೇ ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯ ಅಧ್ಯಕ್ಷತೆ, ದ.ಕ. ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಗೌರವಗಳು ಇವರಿಗೆ ಲಭಿಸಿವೆ.

### ೪.೪.೩೧ ಬಿ. ಪುರಂದರ ಭಟ್ (೧೯೩೬)

ಬರೆಪ್ಪಾಡಿ ಪುರಂದರ ಭಟ್ ಇವರ ಪೂರ್ಣ ಹೆಸರು. 'ಪುರಂದರ' ಕಾವ್ಯನಾಮ ಸೀತಾರಾಮ ಭಟ್, ಕಾವೇರಮ್ಮ ದಂಪತಿಯ ಮಗನಾಗಿ ೭ ಮಾರ್ಚ್ ೧೯೩೬ರಂದು ಜನನ.

ನಾಲ್ಕನೇ ತರಗತಿಗೆ ನೇರವಾಗಿ ಪ್ರವೇಶ ಪಡೆದ ಪುರಂದರ ಭಟ್ಟರು ಪ್ರಾಥಮಿಕ ವಿದ್ಯಾಭ್ಯಾಸವನ್ನು ಬೆಳಂದೂರಿನಲ್ಲೂ, ಪ್ರೌಢ ಶಾಲಾ ವಿದ್ಯಾಭ್ಯಾಸವನ್ನು ವಿಟ್ಲ ಮತ್ತು ಪುತ್ತೂರಿನ ಶಾಲೆಗಳಲ್ಲಿ ಅಭ್ಯಾಸ ಮಾಡಿದರು. ಮಂಗಳೂರು ಸರಕಾರಿ ಕಾಲೇಜಿನಿಂದ ಬಿ. ಎ. ಪದವಿ, ಉಡುಪಿಯ ವೈಕುಂಠ ಬಾಳಿಗ ಕಾನೂನು ಕಾಲೇಜಿನಲ್ಲಿ ಎಲ್.ಎಲ್.ಬಿ. ಪದವಿ, ಮಣಿಪಾಲ ಶಿಕ್ಷಣ ಕಾಲೇಜಿನಿಂದ ಬಿ.ಎಡ್. ಶಿಕ್ಷಣ, ಪರ್ಕಳ ಹೈಸ್ಕೂಲು ಮತ್ತು ಉಡುಪಿ ಸಂಸ್ಕೃತ ಕಾಲೇಜು, ಹೈಸ್ಕೂಲುಗಳಲ್ಲಿ ಎರಡು ವರ್ಷಗಳ ಕಾಲ ಅಧ್ಯಾಪಕ, ಮುಂದೆ ೧೭ ವರ್ಷಗಳ ಕಾಲ ವಿವೇಕಾನಂದ ಕಾಲೇಜಿನಲ್ಲಿ ಅಧ್ಯಾಪನ. ವಿವೇಕಾನಂದ ಕಾನೂನು ಕಾಲೇಜಿನಲ್ಲಿಯೂ ಸ್ವಲ್ಪ ಸಮಯ ಉಪನ್ಯಾಸಕರಾಗಿ ಕೆಲಸ ಮಾಡಿದ ಅನುಭವ ಈ ನಡುವೆ ೧೯೭೦ ರಿಂದಲೇ ಪುತ್ತೂರಿನಲ್ಲಿ ನ್ಯಾಯವಾದಿಯಾಗಿ ವೃತ್ತಿ ಜೀವನವನ್ನು ಆರಂಭಿಸಿದರು.

ಸಾಹಿತ್ಯ, ಸಂಗೀತ, ನೃತ್ಯ, ನಾಟಕ, ಅಭಿನಯ, ನಿರ್ದೇಶನ, ಸಂಘಟನೆ ಅಧ್ಯಾಪನ, ಸಮಾಜಸೇವೆ ಹೀಗೆ ಇವರು ಸ್ವತಃ ತೊಗಡಿಸಿಕೊಂಡಿರುವ ಆಸಕ್ತಿಯ ಕ್ಷೇತ್ರ ಹತ್ತು ಹಲವು ಯಕ್ಷಗಾನವಂತೂ ಇವರ ಮನೆತನಕ್ಕೆ ಅಂಟಿದ ನಂಟು.

ಪುರಂದರ ಭಟ್ಟರ ಪ್ರಕಟಿತ ಕೃತಿಗಳು 'ಅನಾದಿಯ ಮಗು' ಮತ್ತು 'ಸಾಂಪ್ರತ' ಕವನ ಸಂಕಲನಗಳು, ಹರಟೆಗಳ ಸಂಕಲನ 'ಧರ್ಮ ಹಾಳಾಯ್ತು', 'ಹೀಗೊಬ್ಬ ಚಾರ್ವಾಕ' ವೈಚಾರಿಕ ನಾಟಕ, 'ತುಣುಕು' ಕಿರು ಕವನಗಳು ಇವಲ್ಲದೆ ಅಪ್ರಕಟಿತ ಕೃತಿಗಳು ಹಲವಿವೆ. ಸಣ್ಣಕಥೆ, ಪ್ರಹಸನ, ಬಿಡಿ ಲೇಖನಗಳು ಪ್ರಕಟಗೊಂಡಿಲ್ಲ. ವಿಡಂಬನಾ ಲೇಖನಗಳ ಸಂಗ್ರಹ 'ಹರಾಮ' ರಾಜ್ಯದಲ್ಲಿ ಕಿರು ಕವನಗಳ ಸಂಕಲನ ಚೆಲ್ಲಿ ಬಿದ್ದ ಚೂರುಗಳು, ಶೃಂಗಾರ ಗೀತೆಗಳ ಸಂಕಲನ 'ಅನುರಾಗದ ಆಲಾಪ' ಇವು ಅಪ್ರಕಟಿತ ಕೃತಿಗಳು' ಇದರೊಂದಿಗೆ ಗ್ರಹಶಾಂತಿ, ಶಿವನೊಲಿದ ಎಂಬ ಎರಡು ನಾಟಕಗಳನ್ನು ಬರೆದು ನಿರ್ದೇಶಸಿದ ಹಿರಿಮೆ ಇವರದು.

‘ನಾಟಕ’ ಪುರಂದರ ಭಟ್ಟರ ಅಚ್ಚುಮೆಚ್ಚಿನ ಕ್ಷೇತ್ರ ಸ್ವತಃ ನಟ, ಸಮರ್ಥ ನಿರ್ದೇಶಕ, ನೂರಕ್ಕೂ ಹೆಚ್ಚು ನಾಟಕಗಳಲ್ಲಿ ಅಭಿನಯ, ೩೦ಕ್ಕಿಂತ ಹೆಚ್ಚು ನಾಟಕಗಳ ನಿರ್ದೇಶನ ಹಿರಣ್ಯ ಕಶಿಪು ನಾಟಕದ ಪೆದ್ದ ಭಟ್ಟನ ಪಾತ್ರದ ಮೂಲಕ ನಾಟಕ ರಂಗವನ್ನು ಪ್ರವೇಶಿಸಿದ ಇವರಿಗೆ ತುಳು ನಾಟಕದಲ್ಲಿಯೂ ವಿಶೇಷ ಒಲವು.

ಕಲಾರಂಗ, ನಾಡಹಬ್ಬ ಸಮಿತಿ, ಗಣೇಶೋತ್ಸವ ಸಮಿತಿ, ತುಳುಕೂಟ, ಯಕ್ಷರಂಜಿನಿ, ಚಲನಚಿತ್ರ ನೋಟಕರ ಸಂಘ, ಸಂತ ಫಿಲೋಮಿನಾ ಮತ್ತು ವಿವೇಕಾನಂದ ಕಾಲೇಜು ಕನ್ನಡ ಸಂಘಗಳಲ್ಲಿ ಹಲವು ಜವಾಬ್ದಾರಿಗಳನ್ನು ಯಶಸ್ವಿಯಾಗಿ ನಿರ್ವಹಣೆ ಮಾಡಿದ್ದಾರೆ.

ಪ್ರಸ್ತುತ ಪುತ್ತೂರು ಕರ್ನಾಟಕ ಸಂಘ, ಶ್ರೀದೇವಿ ಸಂಗೀತ ಕಲಾಕೇಂದ್ರ ಮತ್ತು ‘ದೃಶ್ಯ’ದ ಅಧ್ಯಕ್ಷ, ‘ಎಚ್ಚರ’ ಬಳಗದ ಸಂಚಾಲಕರು ಪುತ್ತೂರು ತಾಲೂಕು ಪತ್ರಕರ್ತರ ಸಂಘದ ಕಾನೂನು ಸಲಹೆಗಾರ, ಪುತ್ತೂರು ತಾಲೂಕು ಕನ್ನಡ ಸಾಹಿತ್ಯ ಪರಿಷತ್ ಸಮಿತಿಯ ಉಪಾಧ್ಯಕ್ಷ, ಹತ್ತಾರು ಸಾಹಿತ್ಯ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸಂಘಟಿಸಿದ ಹಿರಿಮೆ ಅವರದು. ಅವರ ಮನೆಯ ವಠಾರವೇ ಒಂದು ಸಾಂಸ್ಕೃತಿಕ ವೇದಿಕೆ.

ಇವರ ಸೇವೆಯನ್ನು ಗುರುತಿಸಿ ಆರನೇ ಪುತ್ತೂರು ತಾಲೂಕು ಸಾಹಿತ್ಯ ಸಮ್ಮೇಳನದಲ್ಲಿ ಸಾಹಿತ್ಯ ಮತ್ತು ನಾಟಕ ಕ್ಷೇತ್ರಕ್ಕೆ ಸಂಬಂಧಿಸಿದ ಸನ್ಮಾನ ದೊರೆತಿದೆ. ಮಂಗಳೂರು ಕಲಾವೃಂದದಿಂದ ನಾಟಕಕ್ಕೆ ನೀಡಿದ ಕೊಡುಗೆಗಳಾಗಿ ಸನ್ಮಾನ ಮಾಡಲಾಗಿದೆ. ೨೦೦೨ರಲ್ಲಿ ನೆಲ್ಯಾಡಿಯಲ್ಲಿ ನಡೆದ ಪುತ್ತೂರು ತಾಲೂಕು ಎಂಟನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದ ಹೆಗ್ಗಳಿಕೆ ಇವರದು.

### ೪.೪.೩೨ ಬಾಲಕೃಷ್ಣ ನಿಡ್ವಣ್ಣಾಯ(೧೯೩೭)

ಇವರು ದ.ಕ. ಜಿಲ್ಲೆ ಪುತ್ತೂರು ಸಮೀಪದ ನೂಜಜೆ ಎಂಬ ಪುಟ್ಟ ಹಳ್ಳಿಯಲ್ಲಿ ೧೯೩೭ ರಂದು ಜನಿಸಿದರು. ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣವನ್ನು ಪುತ್ತೂರಿನಲ್ಲಿ ಪೂರೈಸಿದರು. ಮಂಗಳೂರಿನ ಕರ್ನಾಟಕ ಪಾಲಿಟೆಕ್ನಿಕ್ ನಲ್ಲಿ ಇಂಜಿನಿಯರಿಂಗ್ ಡಿಪ್ಲೊಮಾ ಪಡೆದರು. ಇವರು ಪ್ರೌಢಶಾಲೆಯ ವಿದ್ಯಾರ್ಥಿಯಾಗಿ ರುವಾಗ ಶಿವರಾಮ ಕಾರಂತರ ಪ್ರೋತ್ಸಾಹದಿಂದ ನಾಟಕ ರಚನೆ, ಅಭಿನಯ ಹಾಗೂ ನಿರ್ದೇಶನಗಳಲ್ಲಿ ತೊಡಗಿದರು. ೧೯೬೦ರಲ್ಲಿ ಇವರು ಮುಂಬಯಿಗೆ ಬಂದು ಇಂಜಿನಿಯರ್ ಆಗಿ ವೃತ್ತಿಜೀವನ ಆರಂಭಿಸಿದರು. ಪ್ರವೃತ್ತಿಯಿಂದ ಸಾಹಿತಿಗಳಾಗಿ ಕಥೆ, ನಾಟಕಗಳ ರಚನೆಗೆ ತೊಡಗಿದರು. ಇವರು ‘ಶ್ರೀಕಲಾ ನಿಲಯ’ ಎಂಬ ನಾಟಕ ಸಂಸ್ಥೆಯನ್ನು ಹುಟ್ಟುಹಾಕಿದರು. ೩೫ ನಾಟಕಗಳನ್ನು ರಚಿಸಿದ್ದಾರೆ. ೧೬ ನಾಟಕಗಳು ಪ್ರಕಟವಾಗಿವೆ.

ಇವರ ಪ್ರಮುಖ ನಾಟಕಗಳು 'ಹೃದಯಾಘಾತ', 'ಅಸಂಭವ', 'ಹುಚ್ಚರ್ಯಾರು', 'ಋಣಾನುಬಂಧ', 'ಯಾರು ಹಿತವರು', 'ತಿರುಗುಬಾಣ', 'ಮೃಷ್ಟಾನ್ನ', ಮತ್ತು 'ಚದುರಂಗ'.

**೪.೪.೩೩ ಪ್ರಭಾಕರ ರೈ (೧೯೪೦)**

ಪುತ್ತೂರಿನಲ್ಲಿ ಜನಿಸಿದ ಇವರು ಬಿ. ಎ. ಪದವಿ ಪಡೆದು ಸಿಪಿಎಡಿಬಿ ಡಿ.ಬಿ.ಎ ಎಂಬ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿದ್ದಾರೆ. ಬ್ಯಾಂಕ್ ಅಧಿಕಾರಿಯಾಗಿ ನಿವೃತ್ತರಾಗಿ ಈಗ ಬೆಂಗಳೂರಿನಲ್ಲಿ ನೆಲೆಸಿದ್ದಾರೆ. 'ದಾರಿ ತಪ್ಪಿದಾನ', 'ಋಣಾನುಬಂಧ', 'ನಿಧಿಕೃತ', 'ನಿರ್ಲಕ್ಷ್ಯ', 'ಸುಖಾಂತ' ಎಂಬ ಸಣ್ಣ ಕತೆಗಳನ್ನು, 'ಕಾಂತಣ್ಣ', 'ಸ್ವೇಚ್ಛಾಮರಣಿ' ಎಂಬ ಕಾದಂಬರಿಗಳನ್ನು ಬರೆದಿದ್ದಾರೆ. ತುಳುವಿನಲ್ಲಿ 'ಆತ್ಮಜ್ಯೋತಿ', 'ಪರಿವರ್ತನೆ' ಎಂಬ ಸಣ್ಣ ಕತೆ, 'ಅವಾಂತರ' ಎಂಬ ಕಾದಂಬರಿ, 'ದಾದ ಉಂಡು ಮಾರಾಯರೆ' ಎಂಬ ಕಾವ್ಯ ಸಂಕಲನ, 'ಮದಪ್ಪಂದಿ ನೆಂಪು' ಆತ್ಮ ಕತೆ ಬರೆದಿದ್ದಾರೆ. 'ಸ್ನೇಹ ಚಿಂತನ' ತುಳು ತ್ರೈಮಾಸಿಕದ ಸಂಪಾದಕರು. ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತರು.

**೪.೪.೩೪ ವಿ. ಬಿ. ಅರ್ತಿಕಜೆ (೧೯೪೨)**

ವೆಂಕಟ್ರಮಣ ಭಟ್ ಅರ್ತಿಕಜೆ ಈ ಹೆಸರಿನ ಹೃಸ್ವರೂಪ – ವಿ. ಬಿ. ಅರ್ತಿಕಜೆ, ಪುತ್ತೂರು ತಾಲೂಕಿನ ಪಡುವನ್ನೂರು ಗ್ರಾಮದ ಅರ್ತಿಕಜೆ ಹುಟ್ಟೂರು. ತಂದೆ ಶ್ಯಾಂ ಭಟ್ ತಾಯಿ ಸಾವಿತ್ರಿ ಅಮ್ಮ. ಈಶ್ವರಮಂಗಲದಲ್ಲಿ ಪ್ರಾಥಮಿಕ ಶಿಕ್ಷಣ, ಪುತ್ತೂರಿನ ಸೈಂಟ್ ಫಿಲೋಮಿನಾದಲ್ಲಿ ಪ್ರೌಢ ಶಿಕ್ಷಣ, ಇದೇ ಕಾಲೇಜಿನಲ್ಲಿ ಇತಿಹಾಸ ಮತ್ತು ಕನ್ನಡದಲ್ಲಿ ಬಿ.ಎ. ಪದವಿ, ಮೈಸೂರು ವಿ.ವಿ.ಯಲ್ಲಿ ಎಂ.ಎ. (ಇತಿಹಾಸ) ಯಲ್ಲಿ ಪ್ರಥಮ ರ್‍ಯಾಂಕ್.

ಅರ್ತಿಕಜೆಯವರ ಆಸಕ್ತಿಯ ಕ್ಷೇತ್ರಗಳು ಹಲವು ಕನ್ನಡ, ಹಿಂದಿ, ಆಂಗ್ಲ ಭಾಷೆಗಳ ಪ್ರಭುತ್ವ, ಸೈಂಟ್ ಫಿಲೋಮಿನಾ ಪ್ರೌಢಶಾಲೆಯಲ್ಲಿ ಅಧ್ಯಾಪಕ ವೃತ್ತಿ, ಎಂ.ಎ. ಬಳಿಕ ಪುತ್ತೂರು ವಿವೇಕಾನಂದ ಕಾಲೇಜಿನಲ್ಲಿ ಇತಿಹಾಸ ಪ್ರಾಧ್ಯಾಪಕರಾಗಿ ನಿಯುಕ್ತಿ, ಆರಂಭದಿಂದಲೂ ವಿಭಾಗ ಮುಖ್ಯಸ್ಥನ ಪಟ್ಟ.

**ಸಾಹಿತ್ಯ :**

'ವಿಕಟಾನಂದ, ನಾದಪ್ರಿಯ, ಪುಸ್ತಕ ಪ್ರಿಯ, ರಂಗಪ್ರಿಯ' ಅರ್ತಿಕಜೆಯವರ ಸಾಹಿತ್ಯದ ಕಾವ್ಯನಾಮಗಳು. ದಾಸರಪದಗಳ ರೀತಿಯ ಕೀರ್ತನೆಗಳ ಸಂಕಲನ 'ನಾದಪೂಜೆ', ಭಾಮಿನಿ ಷಟ್ಪದಿಯಲ್ಲಿ 'ಶ್ರೀ ರಾಮಾಶ್ವಮೇಧಂ', 'ಶಾರದಾ ಶತಕಂ' ಹವ್ಯಕ ಭಾಷೆಯ ಚುಟುಕು 'ಜೇನಹನಿ' ಪತ್ರಾವೋ ಜೀವನ ಚರಿತ್ರೆ 'ಅನನ್ಯ ಸಾಧಕ' ಇವರ ಪ್ರಮುಖ ಕೃತಿಗಳು.

ಅಂಕಣ ಬರಹಗಳ ಸಂಕಲನ 'ಹೀಗೊಂದು ವೃತ್ತಾಂತ' ಮತ್ತು 'ಮಾರ್ದನಿ' ವಿಡಂಬನೆ ರೀತಿಯ 'ಹಾಸ್ಯೋಲ್ಲಾಸ' ಬೋಳಂತಕೋಡಿ ಈಶ್ವರ ಭಟ್ಟರ ಜೀವನ ಚರಿತ್ರೆ 'ಬೋಳಂತಕೋಡಿ' ಐತಿಹಾಸಿಕ ವ್ಯಕ್ತಿ – ಪದ್ಧತಿಗಳ 'ಅಪರೂಪ' ಕೃತಿ (ಸಹಲೇಖಕ) ಹಲವು ಹಸ್ತಪತ್ರಿಕೆ, ಸ್ಮರಣ ಸಂಚಿಕೆಗಳ ಸಂಪಾದಕತ್ವ ಆಂಗ್ಲ ಮತ್ತು ಕನ್ನಡದಲ್ಲಿ ಹಲವು ಐತಿಹಾಸಿಕ ಪಠ್ಯಗಳ ರಚನೆ.

೧೯೮೦ರಿಂದ ಪುತ್ತೂರು ಕರ್ನಾಟಕ ಸಂಘದ ಕಾರ್ಯದರ್ಶಿ, ೧೯೮೬–೯೮ರ ತನಕ ಪುತ್ತೂರು ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ, ಸೈಂಟ್ ಫಿಲೋಮಿನಾ ಮತ್ತು ವಿವೇಕಾನಂದ ಕಾಲೇಜು ಕನ್ನಡ ಸಂಘಗಳ ಪದಾಧಿಕಾರಿಯಾಗಿ ಸಾಹಿತ್ಯ ಸೇವೆ, ರಾಮಾಯಣ, ಮಹಾಭಾರತ, ಭಾಗವತ ಮತ್ತು ಉಪನಿಷತ್‌ಗಳ ಕುರಿತಾದ ಉಪನ್ಯಾಸ ಮಾಲಿಕೆಗಳನ್ನು ಏರ್ಪಡಿಸಿ ನಿರಂತರ ಸಾಹಿತ್ಯಾವಲೋಕನ ಚಿಂತನಗಳಿಗೆ ಸ್ಫೂರ್ತಿ, ಹನ್ನೆರಡು ವರುಷಗಳ ಕಾಲ ತಾಲೂಕು ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷರಾಗಿ ಸಾಹಿತ್ಯ ಸಮ್ಮೇಳನ (ಜಿಲ್ಲಾ / ತಾಲೂಕು)ಗಳ ಸಂಘಟನಾ ಕಾಯಕ ಗ್ರಾಮೀಣ ಸಾಹಿತ್ಯ ಸೌರಭ'ದ ಮೂಲಕ ಸಾಹಿತ್ಯ ಪ್ರಚಾರಕ್ಕೆ ನೆರವು, ಹೀಗೆ ಅವರ ಸಾಹಿತ್ಯ ಲೋಕ ವಿಸ್ತಾರವಾದುದು.

**ಪತ್ರಿಕೋದ್ಯಮ :**

ವಿವಿಧ ಪತ್ರಿಕೆಗಳಲ್ಲಿ ಮೂರು ದಶಕಕ್ಕಿಂತಲೂ ಹೆಚ್ಚು ಕಾಲ ವಿ.ಬಿಯವರು ವರದಿಗಾರರಾಗಿ ಸೇವೆಗೈದ ಅನುಭವಿಗಳು ೧೯೭೦ರಿಂದ ೧೯೮೨ರ ತನಕ ನವಭಾರತ, ೧೯೮೨ರಿಂದ ೨೦೦೬ರ ತನಕ ಪ್ರಜಾವಾಣಿ ಮತ್ತ ಡೆಕ್ಕನ್ ಹೆರಾಲ್ಡ್, ೧೯೮೦ ರಿಂದ ೯೭ರ ತನಕ ಹೊಸದಿಗಂತ, ೧೯೮೯ರಿಂದ ೨೦೦೧ರ ತನಕ ಕನ್ನಡ ಜನ ಅಂತರಂಗ ಮತ್ತು ದಿ ಕೆನರಾ ಟ್ಯಾಂಸ್... ಹೀಗೆ ಏಕಕಾಲಕ್ಕೆ ಐದು ಪತ್ರಿಕೆಗಳಿಗೆ ವರದಿಗಾರರಾಗಿದ್ದರು.

ಅಂತರಂಗ ಪತ್ರಿಕೆಯಲ್ಲಿ ೮೫೦ ವಾರ ನಿರಂತರವಾಗಿ 'ಪುತ್ತೂರು ವೃತ್ತಾಂತ' ಎಂಬ ಗ್ರಾಮೀಣ ವಾರ್ತಾ ಅಂಕಣವನ್ನು ಬರೆದು ಪುತ್ತೂರಿನ ಸಾಂಸ್ಕೃತಿಕ ಇತಿಹಾಸವನ್ನು ದಾಖಲಿಸಿದ್ದಾರೆ.

ಹೊಸದಿಗಂತದಲ್ಲಿ (೬೫೫ ವಾರ) 'ಮಾರ್ದನಿ' ಎಂಬ ಪ್ರೌಢ ಅಂಕಣ, 'ಕೆನರಾ ಟ್ಯಾಂಸ್' ಆಂಗ್ಲ ಪತ್ರಿಕೆಯಲ್ಲಿ ವೀಬಿಯವರ 'ಸಹಾಯಿಮುಖಿ'ವೊಂದನ್ನು ಬರೆದಿದ್ದಾರೆ.

ಸಾಹಿತ್ಯ ಪುಸ್ತಕ ಪ್ರಕಟಣೆಯ ಕುರಿತು ಅತೀವ ಕಾಳಜಿ. ಆದರೂ 'ನನ್ನ ಹೆಸರು ಎಲ್ಲೂ ಹೇಳಬಾರದು, ಎಲ್ಲೂ ಪ್ರಕಟವಾಗಕೂಡದು' ಎಂಬ ಕಟ್ಟಾಜ್ಞೆ ದೇಣಿಗೆ ಪಡೆದವರಿಗೆ, ಇದನ್ನವರು ಪಾಲಿಸಲೇಬೇಕು. ಅವರ ಔಚಿತ್ಯ ಪ್ರಜ್ಞೆ ಅನುಸರಣೀಯ, ಕೇಳುವವರು ಇದ್ದಾರೆಂದು 'ಕೊರೆಯುವ' ಭಾಷಣಕ್ಕಿಂತ ಅವರು ದೂರ. ಪ್ರೇಕ್ಷಕರ ಮನೋಧರ್ಮ ನೋಡಿ ಮಾತನಾಡುವ ಮೋಡಿ. ಇವರಿಗಿಂತ ಮೊದಲು ಎಷ್ಟೇ ಭಾಷಣಗಳು ವೇದಿಕೆಯಲ್ಲಿ ಹರಿದಿರಲಿ ಅವುಗಳನ್ನು ಮರೆಸುವಷ್ಟು ತನ್ನ ಹಾಸ್ಯ ಮಿಶ್ರಿತ ಮಾತುಗಳಿಂದ ಪ್ರೇಕ್ಷಕರ ಹತ್ತಿರವಾಗುತ್ತಾರೆ.

ಇವರ ಸಾಹಿತ್ಯ ಸೇವೆ ಮನ್ನಿಸಿ ಪುತ್ತೂರು ತಾಲೂಕು ೧೨ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಮಾಡಿ ಗೌರವಿಸಲಾಗಿದೆ.

**೪.೪.೩೫. ಎ. ಪಿ. ಮಾಲತಿ (೧೯೪೪)**

ಪುತ್ತೂರು ತಾಲೂಕಿನ ಆರ್ಯಾಪು ಗ್ರಾಮದ ಸಂಟ್ಯಾರಿನಲ್ಲಿ ಖ್ಯಾತ ಬರಹಗಾರ್ತಿ ಶ್ರೀಮತಿ ಎ.ಪಿ. ಮಾಲತಿ ನೆಲೆಸಿದ್ದಾರೆ.

ಮೇ ೬, ೧೯೪೪ರಂದು ಉತ್ತರ ಕನ್ನಡ ಜಿಲ್ಲೆಯ ಭಟ್ಕಳದಲ್ಲಿ ಶ್ರೀ ಗಣೇಶ ಕೃಷ್ಣ ಭಟ್ಟ, ಶ್ರೀಮತಿ ಕಾವೇರಿ ದಂಪತಿಗಳ ಮಗಳಾಗಿ ಜನಿಸಿದರು. ಎ. ಪಿ. ಮಾಲತಿಯವರು ತನ್ನ ೧೫ರ ಹರೆಯದಲ್ಲೇ ತನ್ನ ಕತೆ ಸಿನಿಮಾವಾಗಬೇಕೆಂಬ ಕನಸು ಕಂಡು ತಮ್ಮನ ಜೊತೆಗೂಡಿ ಬರೆದ ಪುಟ್ಟ ಕಾದಂಬರಿಯ ಹಸ್ತಪ್ರತಿಯನ್ನು ತಮ್ಮ ಮನೆ ವಠಾರದಲ್ಲಿ ವಾಸವಾಗಿದ್ದ ಲಕ್ಷ್ಮಣ ಎಂಬ ಹಿರಿಯರ ಕೈಗೆ ನೀಡುತ್ತಾರೆ. ಅವರ ಭಾವ ತೆಲುಗು ಸಿನಿಮಾ ನಿರ್ದೇಶಕರಾಗಿದ್ದರಂತೆ. ಆದರೆ ಅಕ್ಕ – ತಮ್ಮನ ಕಾದಂಬರಿ ಸಿನೇಮಾ ಆಗಲೇ ಇಲ್ಲ. ಹಸ್ತಪ್ರತಿ ಯಾರದೋ ಕೈಸೇರಿ ಇಲ್ಲವಾದಾಗ ನಿರಾಶೆಗೊಳ್ಳದೆ, ಮುಂದೆ ಬರವಣಿಗೆಯ ಹಠ ಜಾಗೃತಗೊಂಡಿತು[೨೫].

ಮಾಲತಿಯವರ ಲೇಖನ ಕಥೆಗಳು ಅಂದಿನ ಪ್ರಸಿದ್ಧ ವಾರಪತ್ರಿಕೆ 'ಕರ್ಮವೀರ'ದಲ್ಲಿ ಪ್ರಕಟ ಗೊಂಡಾಗ ರೋಮಾಂಚನಗೊಂಡರು. ಪತ್ರಿಕೆಯಿಂದ ಬಂದ ಮೊದಲ ಸಂಭಾವನೆ ಎಂಟು ರೂಪಾಯಿ ಅವರಲ್ಲಿ ಎಲ್ಲಿಲ್ಲದ ಉತ್ಸಾಹ ತುಂಬಿಸಿತು. ಓದುವ, ಬರೆಯುವ ಆಸಕ್ತಿ ಹೆಚ್ಚಿಸಿತು. ಹಿಂದಿ ಸಾಹಿತ್ಯ ಓದಲೆಂದು ಹಿಂದಿ ಭಾಷೆ ಕಲಿತ ಮಾಲತಿಯವರು 'ವಿಶಾರದ ಪರೀಕ್ಷೆ' ಉತ್ತೀರ್ಣರಾದರು. ಠಾಗೋರರ ಕಾದಂಬರಿಗಳು, ಶರಶ್ಚಂದ್ರರ ಕೃತಿಗಳು ಶಿವರಾಮ ಕಾರಂತರ ಬೆಟ್ಟದ ಜೀವ,

ಒಡಹುಟ್ಟಿದವರು... ಮೊದಲಾದ ಕಾದಂಬರಿಗಳು ಇವರ ಮುಂದೆ ಒಂದು ಹೊಸ ಲೋಕವನ್ನೇ ತೆರೆದಿಟ್ಟವು.

ಪುತ್ತೂರಿನಲ್ಲಿ ಶಿವರಾಮ ಕಾರಂತರ ಅಭಿಮಾನ ಗಳಿಸಿದ ಎ. ಪಿ. ಮಾಲತಿ ಯವರು ಅವರ ದಿವ್ಯಹಸ್ತದಿಂದ ಪುಸ್ತಕವೊಂದನ್ನು ಉಡುಗೊರೆಯಾಗಿ ಪಡೆದ ಭಾಗ್ಯವಂತೆ. ಹಳ್ಳಿಯ ಬದುಕಿಗೆ ಹೊಂದಿಕೊಂಡು ಕೃಷಿಯಲ್ಲಿ ಪತಿಗೆ ಆಸರೆಯಾಗಿ, ಹೈನುಗಾರಿಕೆಯಲ್ಲೂ ತನ್ನನ್ನು ತಾನು ತೊಡಗಿಸಿಕೊಂಡು, ತನ್ನಿಬ್ಬರು ಮಕ್ಕಳ ಲಾಲನೆ-ಪಾಲನೆ ಮಾಡಿ, ಅವರನ್ನು ವಿದ್ಯಾವಂತ ರನ್ನಾಗಿಸಿದ್ದಾರೆ.

ಕೃಷಿ ಕೆಲಸಗಳು, ಜವಾಬ್ದಾರಿಗಳು, ಆತಂಕ-ಸಮಸ್ಯೆಗಳು ಕ್ರಿಯಾಶೀಲ ಬರವಣಿಗೆಗೆ ಮಾರಕ ವಾಗಲಿಲ್ಲ. ಬದಲಾಗಿ ಜನರನ್ನು, ಪರಿಸರವನ್ನು, ನೋವು-ನಲಿವು, ಮೂಢನಂಬಿಕೆ, ಅಜ್ಞಾನವನ್ನು ದಲಿತರ ಆಕ್ರೋಶ, ಜೀತಪದ್ಧತಿ, ಬಡತನವನ್ನು ಸಮೀಪದಿಂದ ನೋಡುವ ಅವಕಾಶ ಇವರದಾಯಿತು. ಒಂದೊಂದು ಸಮಸ್ಯೆ, ನೋವು ಇವರ ಅಂತರಾಳವನ್ನು ಕೆಣಕಿದಾಗ ಸಮಸ್ಯೆಗಳಿಗೆ ಸವಾಲಾಯಿತು. ಶ್ರೀಮತಿ ಎ. ಪಿ. ಮಾಲತಿಯವರ ಲೇಖನಿ 'ಕಾಡು ಕರೆಯಿತು', 'ದೇವ', 'ಬದಲಾಗದವರು' ಮೊದಲಾದ ಕಾದಂಬರಿಗಳು ಮೂಡಿಬಂದವು. ಅವರ ತಂದೆ ಮುಂಬಯಿಗೆ ವರ್ಗವಾಗಿ ಅಲ್ಲೇ ಸ್ವಂತ ಮನೆ ಮಾಡಿದಾಗ ವರ್ಷಕ್ಕೊಮ್ಮೆ ಎ. ಪಿ. ಮಾಲತಿಯವರು ಅಲ್ಲಿಗೆ ಹೋಗಿ ಅಲ್ಲಿನ ಯಾಂತ್ರಿಕ ಜೀವನವನ್ನು ನೋಡುವ, ಅಲ್ಲಿನ ಅನೇಕ ವಿಷಯಗಳು ವೈವಿಧ್ಯಮಯ ಜೀವನ, ಭಾಷೆ, ಸಂಸ್ಕೃತಿಗಳಿಂದ ಪ್ರಭಾವಿತರಾಗಿ ತನ್ನ ಬದುಕು ಬರೆಹಗಳನ್ನು ವಿಸ್ತರಿಸಿದರು. ಈ ಸಂದರ್ಭದಲ್ಲಿ 'ಅವನು ಮತ್ತು ಮಗು', ಕತೆ, 'ಖಾಲಿ ಮನೆ' ಕಾದಂಬರಿ ಬೆಳಕಿಗೆ ಬಂದವು.

ಎ.ಪಿ. ಮಾಲತಿಯವರು ೧೯ ಕಾದಂಬರಿಗಳನ್ನು, ೭ ಮೌಲಿಕ ಕೃತಿಗಳನ್ನು ಎರಡು ಸಣ್ಣ ಕಥಾ ಸಂಕಲನಗಳನ್ನು ಬರೆದಿದ್ದಾರೆ. ಇವರ ಅನೇಕ ಸಣ್ಣ ಕಥೆಗಳು ತೆಲುಗು ಮತ್ತು ಮಲೆಯಾಳಿ ಭಾಷೆಗಳಿಗೆ ಅನುವಾದಿಸಲ್ಪಟ್ಟಿವೆ. ಕರಾವಳಿ ಲೇಖಕಿ ವಾಚಕಿಯರ ಸಂಘದ ಪ್ರಥಮ ಮಹಿಳಾ ಸಮ್ಮೇಳನದ ಅಧ್ಯಕ್ಷತೆಯನ್ನು ೧೯೯೪ರಲ್ಲಿ ಅಲಂಕರಿಸಿದ್ದು ಇವರ ಹಿರಿಮೆಯಾಗಿದೆ. ಇವರ 'ದೇವ' ಕಾದಂಬರಿ ಮಂಗಳೂರು ವಿ. ವಿ. ಪದವಿ ತರಗತಿಗೆ ಪಠ್ಯ ಪುಸ್ತಕವಾಗಿ ಆಯ್ಕೆಯಾಗಿದೆ. ಅವರ 'ಕಾಡು ಕರೆಯಿತು' ಕಾದಂಬರಿಗೆ ಮಾತೋಶ್ರೀ ರತ್ನಮ್ಮ ಹೆಗ್ಗಡೆ ಬಹುಮಾನ. ೧೯೯೮ರಲ್ಲಿ 'ಖಾಲಿ ಮನೆ' ಕಾದಂಬರಿಗೆ ಮತ್ತೆ ಮಾತೋಶ್ರೀ ರತ್ನಮ್ಮ ಹೆಗ್ಗಡೆ ಬಹುಮಾನ ಲಭಿಸಿದೆ.

ಎ.ಪಿ. ಮಾಲತಿಯವರ ಸಾಹಿತ್ಯ ಕೃತಿಗಳಲ್ಲಿ ಕಾದಂಬರಿಗಳು

೧. ಅರ್ಧಾಂಗಿ (೧೯೭೩)
೨. ಆಘಾತ (೧೯೭೫)
೩. ಅನಿಶ್ಚಯ (೧೯೭೮)
೪. ಅತೃಪ್ತೆ (೧೯೭೮)
೫. ಅಲೋಕ ( ೧೯೮೧)
೬. ಹೊಸ ಹೆಜ್ಜೆ (೧೯೮೧)
೭. ಮಿನುಗದ ಚುಕ್ಕೆ (೧೯೮೪)
೮. ಸರಿದ ತೆರೆ (೧೯೮೩)
೯. ಬದಲಾಗದವರು (೧೯೮೪)
೧೦. ದೇವ (೧೯೮೫)
೧೧. ಅಂಜನಾ (೧೯೮೩)
೧೨. ತಿರುಗಿದ ಚಕ್ರ (೧೯೮೭)
೧೩. ಪುನರ್ಮಿಲನ (೧೯೮೮)
೧೪. ನೂಪುರಗಾನ (೧೯೮೬)
೧೫. ಕಾಡು ಕರೆಯಿತು (೧೯೯೩)
೧೬. ವಕ್ರರೇಖೆ (೧೯೯೩)
೧೭. ಮಂದಾರ (೧೯೮೬)
೧೮. ಖಾಲಿ ಮನೆ (೧೯೯೮)
೧೯. ಪುಣ್ಯದ ಎಣ್ಣೆ (೧೯೯೪)

**ಇತರ ಕೃತಿಗಳು :**

೧. ಗ್ರಾಮೀಣ ಮಹಿಳೆಯರು (೧೯೭೫)
೨. ಹಳ್ಳಿಗೆ ಬಂದ ಎಳೆಯರು (೧೯೭೯)
೩. ಸುಖದ ಹಾದಿ (೧೯೮೧)
೪. ಮಹಿಳೆ ಸಮಾಜ ಕಲ್ಯಾಣ (೧೯೮೮)
೫. ಮಕ್ಕಳ ಪಾಲನೆ (೧೯೯೦)
೬. ಸಮಯದ ಸದುಪಯೋಗ (೧೯೯೪)
೭. ದಿವ್ಯಪಥ (೧೯೯೩)

**ಸಣ್ಣ ಕಥಾ ಸಂಕಲನ :**

೧. ವಸಂತದ ಹೂವುಗಳು (೧೯೯೮)
೨. ಸಂಜೆ ಬಿಸಿಲು

**ಎ. ಪಿ. ಮಾಲತಿಯವರಿಗೆ ದೊರೆತ ಪ್ರಶಸ್ತಿಗಳು :**

೧. ಸುಖದ ಹಾದಿ ಕೃತಿಗೆ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ (೧೯೮೩)

೨. ಗ್ರಾಮೀಣ ಮಹಿಳೆಯರು ಕೃತಿಗೆ ಕನ್ನಡ ಸಾಹಿತ್ಯ ಪರಿಷತ್ ಬಹುಮಾನ (೧೯೭೮)

೩. ಅನಿಶ್ಚಯ ಕಾದಂಬರಿಗೆ ಕನ್ನಡ ಸಾಹಿತ್ಯ ಪರಿಷತ್ ಬಹುಮಾನ (೧೯೭೯)

೪. ಅನಿಶ್ಚಯ ಕಾದಂಬರಿಗೆ ತಮ್ಮನ ರಾವ್ ಅಮ್ಮಿನಭಾವಿ ಸ್ಮಾರಕ ಗ್ರಂಥ ಬಹುಮಾನ (೧೯೭೯)

೫. ಕಾಡು ಕರೆಯಿತು ಕಾದಂಬರಿಗೆ ಮಾತೋಶ್ರೀ ರತ್ನಮ್ಮ ಹೆಗಡೆ ಬಹುಮಾನ.

೬. ಮಂದಾರ, ತಿರುಗಿದ ಚಕ್ರ, ವಕ್ರರೇಖೆ ಕಾದಂಬರಿಗಳಿಗೆ ವನಿತಾ ಮಾಸ ಪತ್ರಿಕೆ ನಡೆಸಿದ ಸ್ಪರ್ಧೆಗಳಲ್ಲಿ
ಅನುಕ್ರಮವಾಗಿ ಪ್ರಥಮ ಮತ್ತು ದ್ವಿತೀಯ ಬಹುಮಾನಗಳು.

೭. ಖಾಲಿ ಮನೆ ಕಾದಂಬರಿಗೆ ಮಾತೋಶ್ರೀ ರತ್ನಮ್ಮ ಹೆಗ್ಗಡೆ ಬಹುಮಾನ (೧೯೮೮)

**ಗೌರವ ಪ್ರಶಸ್ತಿಗಳು :**

೧. ಕರಾವಳಿ ಲೇಖಕಿ ವಾಚಕಿಯರ ಸಂಘದ ಪ್ರಥಮ ಮಹಿಳಾ ಸಮ್ಮೇಳನದ ಅಧ್ಯಕ್ಷ ಸ್ಥಾನ – ೧೯೯೪ ರಲ್ಲಿ

೨. ಭಾರ್ಗವ ಪ್ರಶಸ್ತಿ – ಕೋದಂಡರಾಮ ದೇವಸ್ಥಾನ, ಹಿರೇಮಗಳೂರು

೩. ಗೌರವಾರ್ಪಣೆ – ಡೋನ್ ಬಾಸ್ಕೋ ಕ್ಲಬ್, ಪುತ್ತೂರು

**೪.೪.೩೬ ಶ್ರೀಕೃಷ್ಣ ಭಟ್ ಅರ್ತಿಕಜೆ (೧೯೪೫)**

ಪುತ್ತೂರು ತಾಲೂಕಿನ ಪಡುವನ್ನೂರು ಗ್ರಾಮ ಅರ್ತಿಕಜೆಯವರ ಹುಟ್ಟೂರು. ತಂದೆ ಶ್ಯಾಂ ಭಟ್, ತಾಯಿ ಸಾವಿತ್ರಿ ಅಮ್ಮ. ಈಶ್ವರಮಂಗಲದಲ್ಲಿ ಪ್ರಾಥಮಿಕ ಶಿಕ್ಷಣ, ಎಡನೀರಿನ ಸ್ವಾಮೀಜೀಸ್ ಹೈಸ್ಕೂಲ್‌ನಲ್ಲಿ ಪ್ರೌಢ ಶಿಕ್ಷಣ, ಸರಕಾರಿ ಕಾಲೇಜು ಕಾಸರಗೋಡಿನಲ್ಲಿ ಸ್ವರ್ಣ ಪದಕದೊಂದಿಗೆ ಬಿ.ಎ. ಪದವಿ, ಕಲ್ಲಿಕೋಟೆ ವಿಶ್ವವಿದ್ಯಾನಿಲಯದಲ್ಲಿ ಕನ್ನಡದಲ್ಲಿ ಎಂ.ಎ., ಪ್ರಥಮ ರ್‍ಯಾಂಕ್‌ನೊಂದಿಗೆ ಸ್ವರ್ಣಪದಕ, ೧೯೮೧ರಲ್ಲಿ ಮದರಾಸು ವಿಶ್ವವಿದ್ಯಾನಿಲಯದಿಂದ ಪಿ.ಎಚ್.ಡಿ. ಪದವಿ.

ಅರ್ತಿಕಜೆಯವರ ಹರಹು ವಿಸ್ತಾರ, ವೇಗದ ಗ್ರಾಹ್ಯಶಕ್ತಿ, ಕನ್ನಡ, ಹಿಂದಿ, ಇಂಗ್ಲಿಷ್, ತಮಿಳು, ಮಲೆಯಾಳಂ, ತೆಲುಗು ಭಾಷೆಗಳ ಪ್ರಭುತ್ವ, ಪುತ್ತೂರು ಸೈಂಟ್ ಫಿಲೋಮಿನಾ ಕಾಲೇಜಿನಲ್ಲಿ ಉಪನ್ಯಾಸಕ ವೃತ್ತಿ, ಬಳಿಕ ಮದರಾಸು ವಿಶ್ವವಿದ್ಯಾನಿಲಯದಲ್ಲಿ ಉಪನ್ಯಾಸಕ, ರೀಡರ್, ಪ್ರಾಧ್ಯಾಪಕ ಮತ್ತು ವಿಭಾಗದ ಮುಖ್ಯಸ್ಥರಾಗಿ ನಿವೃತ್ತಿ.

ಮನದಟ್ಟಾಗುವ ಬೋಧನಾ ವಿಧಾನ. ಬಿಗುಮಾನವಿಲ್ಲದ ಶಿಸ್ತಿನ ಜೀವನಕ್ರಮ ಮತ್ತು ಸರಳ ಸಜ್ಜನಿಕೆಗಳಿಂದಾಗಿ ಹೊರನಾಡಿನಿಂದ ಬಂದ ಕನ್ನಡ ವಿದ್ಯಾರ್ಥಿಗಳ ಪಾಲಿಗೆ ಇವರೊಬ್ಬ ಪ್ರೀತಿಯ ಗುರು. ಹೊರನಾಡಿನಲ್ಲಿರುವ ಇವರು ನಮ್ಮ ಜಿಲ್ಲೆಯ ವಿದ್ಯಾರ್ಥಿಗಳಿಗೆ ಒಬ್ಬ ಹಿರಿಯಣ್ಣನಂತೆ ಇದ್ದಾರೆ.

**ಸಾಹಿತ್ಯ :**

೧. ಜಾನಪದ ಜೀವನ, ೨. ಗಾನ ಮಂಜರಿ, ೩. ಸೂತಭಾರತ (ಸಹಲೇಖಕ), ೪.ಸಹಸ್ರಾರ್ಧ ತುಳು ಗಾದೆಗಳು (ಸಂಪಾದನೆ), ೫. ಅಯ್ಯಪ್ಪ (ಮಲಯಾಳ ಕಾದಂಬರಿಯ ಅನುವಾದ), ೬. ಜನಪ್ರಿಯ ತುಳು ಗಾದೆಗಳು (ಸಂಪಾದನೆ), ೭. ವಿಷಕನ್ನಿಕೆ (ಮಲೆಯಾಳ ಕಾದಂಬರಿಯ ಅನುವಾದ), ೮. ಸಾರ್ಥಕ (ಸಂಪಾದನೆ : ಪ್ರೊ. ಮರಿಯಪ್ಪ ಭಟ್ ಸಂಸ್ಮರಣ ಗ್ರಂಥ ೧೯೯೬), ೯. ಕನ್ನಡದಲ್ಲಿ ಶತಕ ಸಾಹಿತ್ಯ (ಪಿ.ಎಚ್.ಡಿ. ಪ್ರಬಂಧ), ೧೦. ಸಮಾಜ ವಿಜ್ಞಾನಿ ಪೆರಿಯಾರ್ (ತಮಿಳಿನಿಂದ ಅನುವಾದ), ೧೧. ಸಾಹಿತ್ಯ ಸಂಬಂಧ (ಸಂಶೋಧನ ಲೇಖನಗಳ ಸಂಗ್ರಹ) ೧೨. ನುಡಿ ಸಂಸ್ಕೃತಿ – ಹವ್ಯಕ ಪಡೆನುಡಿಗಳ ಕೋಶ (ಸಹಲೇಖಕ)

ಹಲವು ಸ್ಮರಣ ಸಂಚಿಕೆಗಳ ಸಂಪಾದಕತ್ವ ಹೀಗೆ ಶ್ರೀಕೃಷ್ಣ ಭಟ್ ಅರ್ತಿಕಜೆಯವರ ಸಾಹಿತ್ಯಲೋಕ ಹಲವು ಹರವುಗಳಿಂದ ಕೂಡಿದೆ.

ಶೈಕ್ಷಣಿಕವಾಗಿ ಎಂಟು ಮಂದಿ ಇವರ ಮಾರ್ಗದರ್ಶನದಲ್ಲಿ ಪಿ.ಎಚ್.ಡಿ. ಪದವಿ ಪಡೆದಿದ್ದಾರೆ. ಇಪ್ಪತ್ತೈದಕ್ಕೂ ಹೆಚ್ಚು ಮಂದಿ ಇವರ ಮಾರ್ಗದರ್ಶನದಲ್ಲಿ ಎಂ.ಫಿಲ್. ಪದವಿ ಪಡೆದಿದ್ದಾರೆ. ಇಪ್ಪತ್ತಕ್ಕೂ ಹೆಚ್ಚು ವಿಶ್ವವಿದ್ಯಾನಿಲಯಗಳ ಪರೀಕ್ಷಾ ಮಂಡಳಿ, ಅಧ್ಯಯನ ಮಂಡಳಿ, ನೇಮಕಾತಿ ಸಮಿತಿ, ಅಕಾಡೆಮಿಕ್ ಕೌನ್ಸಿಲ್, ಸೆನೆಟ್ ಮುಂತಾದ ಒಂದಲ್ಲ ಒಂದು ಸಮಿತಿಯಲ್ಲಿ ಸೇವೆ ಸಲ್ಲಿಸಿದ್ದಾರೆ. ನಾಲ್ಕು ವರ್ಷಗಳ ಕಾಲ ಕನ್ನಡ ಸಾಹಿತ್ಯ ಪರಿಷತ್ತಿನ ತಮಿಳುನಾಡು ಘಟಕದ ಅಧ್ಯಕ್ಷರಾಗಿ, ೨೦೦೪ರಿಂದ ಚೆನ್ನೈ ಹವ್ಯಕ ಸಮಿತಿಯ ಅಧ್ಯಕ್ಷರಾಗಿ, ತಮಿಳುನಾಡು ಕನ್ನಡ ಪಠ್ಯಪುಸ್ತಕ ಸಮಿತಿ ಮತ್ತು ಪಠ್ಯಕ್ರಮ ನವೀಕರಣ ಸಮಿತಿ, ೧೯೭೮ ರಿಂದ ೧೯೮೬ರ ವರೆಗೆ ಕೇಂದ್ರ ಫಿಲಂ ಸೆನ್ಸಾರ್ ಮಂಡಳಿಯ ಕನ್ನಡ ಸಲಹಾ ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

ಅರ್ತಿಕಜೆಯವರು ವಿವಿಧ ಸಂಸ್ಥೆಗಳ ಪ್ರಶಸ್ತಿಗಳಿಂದ ಪುರಸ್ಕೃತರು, ಅಮೃತೋತ್ಸವ ಸನ್ಮಾನ, ಕಾಂಚಿ ಕಾಮಕೋಟಿ ಸ್ವಾಮೀಜಿಯವರ ವಜ್ರ ಮಹೋತ್ಸವ ಸನ್ಮಾನ, ರಾಷ್ಟ್ರೀಯ ಸುವರ್ಣ ಮಹಾನ್ ಶ್ರೀ ಪ್ರಶಸ್ತಿ, ಅತ್ಯುತ್ತಮ ಕನ್ನಡ ಪ್ರಾಧ್ಯಾಪಕ ಪ್ರಶಸ್ತಿ ಲಭಿಸಿದೆ.

**೪.೪.೩.೭ ಪಾಲ್ತಾಡಿ ರಾಮಕೃಷ್ಣ ಆಚಾರ್ (೧೯೪೫)**

ಪಾಲ್ತಾಡಿ ರಾಮಕೃಷ್ಣ ಆಚಾರ್ ೧೦-೦೬-೧೯೪೫ರಂದು ಪುತ್ತೂರು ತಾಲೂಕಿನ ಬೆಟ್ಟಂಪಾಡಿ ಗ್ರಾಮದ ಪೆಲತ್ತಾಜೆ ಎಂಬಲ್ಲಿ ಜನಿಸಿದರು. ತಂದೆ ನಾರಾಯಣ ಆಚಾರ್ಯ, ತಾಯಿ ಸರಸ್ವತಿ ಅಮ್ಮ.

ಪ್ರಾಥಮಿಕ ಶಿಕ್ಷಣವನ್ನು ಬೋರ್ಡು ಎಲಿಮೆಂಟರಿ ಶಾಲೆ. ಬೆಟ್ಟಂಪಾಡಿ ಬೋರ್ಡು ಹಿರಿಯ ಪ್ರಾಥಮಿಕ ಶಾಲೆ ಪಾಣಾಜೆಯಲ್ಲಿ, ಹೈಸ್ಕೂಲ್ ವಿದ್ಯಾಭ್ಯಾಸ ಬೋರ್ಡು, ಹೈಸ್ಕೂಲ್ ಬೆಳ್ಳಾರೆಯಲ್ಲಿ, ಕಾಲೇಜು ವಿದ್ಯಾಭ್ಯಾಸವನ್ನು ಸಂತ ಫಿಲೋಮಿನಾ ಕಾಲೇಜು ಪುತ್ತೂರಿನಲ್ಲಿ ಕಲಿತರು. ಕನ್ನಡದಲ್ಲಿ ಎಂ.ಎ. ಪದವಿಯನ್ನು ಧಾರವಾಡದ ಕರ್ನಾಟಕ ವಿಶ್ವವಿದ್ಯಾನಿಲಯದಿಂದ ಪಡೆದರು. ಕೆ. ಚಿನ್ನಪ್ಪ ಗೌಡರ ಮಾರ್ಗದರ್ಶನದಲ್ಲಿ 'ನಲಿಕೆ ಜನಾಂಗ ಮತ್ತು ಕುಣಿತಗಳು' ಎಂಬ ವಿಷಯದಲ್ಲಿ ಮಂಗಳೂರು ವಿಶ್ವವಿದ್ಯಾನಿಲಯದಿಂದ ಪಿ.ಎಚ್.ಡಿ. ಪದವಿಯನ್ನು ಪಡೆದರು.

೧೯೬೩ರಿಂದ ಪ್ರಾಥಮಿಕ ಶಾಲಾ ಶಿಕ್ಷಕರಾಗಿ ಕುಂತೂರು, ಕೆಯ್ಯೂರು, ಸಾಮೆತ್ತಡ್ಕ, ಕಾವು, ಮಾಡ್ನೂರು ಶಾಲೆಗಳಲ್ಲಿ, ಪ್ರೌಢಶಾಲಾ ಶಿಕ್ಷಕರಾಗಿ ೧೯೮೩ರಿಂದ ೧೯೯೫ರ ವರೆಗೆ ಕೆಯ್ಯೂರು ಸರಕಾರಿ ಪ್ರೌಢಶಾಲೆಯಲ್ಲಿ ೧೯೯೬ರಿಂದ ೨೦೦೩ರ ವರೆಗೆ ಉಪ್ಪಿನಂಗಡಿ, ಬೊಕ್ಕಪಟ್ಟಣ, ಬೆಟ್ಟಂಪಾಡಿ, ಕಾಣಿಯೂರು ಪದವಿಪೂರ್ವ ಕಾಲೇಜುಗಳಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ್ದಾರೆ.

ಕರ್ನಾಟಕ ತುಳು ಸಾಹಿತ್ಯ ಅಕಾಡಮಿಯ ಸದಸ್ಯರಾಗಿ, ತುಳು ಕೂಟ ಪುತ್ತೂರು ಇದರ ಅಧ್ಯಕ್ಷರಾಗಿ, ಜಾನಪದ ಕೂಡುಕಟ್ಟು ಸುಳ್ಯ ಇದರ ಅಧ್ಯಕ್ಷರಾಗಿ, ಡಾ। ಕೆ. ಶಿವರಾಮ ಕಾರಂತ ಬಾಲವನ ಸಾಂಸ್ಕೃತಿಕ ಸಮಿತಿಯ ಅಧ್ಯಕ್ಷರಾಗಿ ಹಾಗೂ ತುಳು ಸಾಹಿತ್ಯ ಅಕಾಡಮಿ ಮಂಗಳೂರು ಇದರ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದಾರೆ.

**ಸಾಹಿತ್ಯ ಸೇವೆ :**

೧೯೭೨ರಲ್ಲಿ ಬಂಗ್ಲಾ ವಿಜಯ ಎಂಬ ಯಕ್ಷಗಾನ ಕೃತಿಯನ್ನು ೧೯೮೦ರಲ್ಲಿ 'ಕಿರಣ' ಎಂಬ ಬಾಲ ಸಾಹಿತ್ಯ ಕೃತಿ, ೧೯೮೧ರಲ್ಲಿ 'ಅಂತರ್ಭೂತ' ಎಂಬ ಕಥಾ ಸಂಕಲನ, ೧೯೯೧ರಲ್ಲಿ 'ನಮ್ಮ ಸರಕಾರ' ಎಂಬ ಕೃತಿಯನ್ನು ನವ ಸಾಕ್ಷರರಿಗಾಗಿ ಬರೆದರು. ೨೦೦೦ರಲ್ಲಿ 'ಪಂಚ ಶಿಲ್ಪ' ಎಂಬ ಶಿಲ್ಪ ಕಲೆಯನ್ನು ಕುರಿತಾದ ಕೃತಿಯನ್ನು ೨೦೦೧ರಲ್ಲಿ 'ಮೆಲುಕಾಡಿದಾಗ' ಎಂಬ ಕವನ ಸಂಕಲನ

೧೯೮೭ – ತುಳುವರ ಜನಪದ ಕಥೆಗಳು

೧೯೮೭ – ಜಾನಪದ ಸ್ಪಂದನ

೧೯೯೨ – ಜನಪದ ಕುಣಿತಗಳು

೧೯೯೬ – ಜಾನಪದ ಮಿನದನ

೧೯೯೭ – ಕಲ್ಕುಡ ಕಲ್ಲುರ್ಟಿ ಸಂಸ್ಕೃತಿ ಶೋಧ

೧೯೯೯ – ತುಳು ನಾಡು ನುಡಿ

೧೯೯೯ – ಸಂವಹನ ಮಾಧ್ಯಮವಾಗಿ ಜನಪದ ಕುಣಿತಗಳು

೧೯೮೭ – ಪಚ್ಚೆ ಕುರಲ್ (ತುಳು ಕವನ ಸಂಕಲನ)

೧೯೯೨ – ದುನಿಪು (ತುಳು ಕವನ ಸಂಕಲನ)

೧೯೯೬ – ಭೂತಾಳ ಪಾಂಡ್ಯೆ (ಕತೆ)

೨೦೦೩ – ಡಾ। ಕೆ. ಶಿವರಾಮ ಕಾರಂತೆರ್

**ಇತರ ಲೇಖಕರೊಡನೆ :** ಒಂಬತ್ತು ಪ್ರಬಂಧಗಳು, ಸೊಗಡು, ಪ್ರವಾಳ, ಹೂಗೊಂಚಲು, ಕಾಮನ ಬಿಲ್ಲು, ಕಣ್ಮರೆಯಾಗುತ್ತಿರುವ ತುಳು ಬುದುಕು, ಪೊಲಿ (ಕೆನರಾ ೨೦೦೦) ಆಟಿ ಮತ್ತಿತರ ಹಲವಾರು ಸ್ಮರಣ ಸಂಚಿಕೆಗಳು ಲೇಖನಗಳನ್ನು ಬರೆದಿದ್ದಾರೆ.

**ಅಂಕಣ ಬರಹಗಳು :** ಹೊಸದಿಗಂತ ಪತ್ರಿಕೆಯಲ್ಲಿ ಜಾನಪದಕ್ಕೆ ಸಂಬಂಧಪಟ್ಟಂತೆ ೬೦ ಲೇಖನಗಳು, ಉದಯವಾಣಿಯಲ್ಲಿ ಸುಮಾರು ೨೦ ಲೇಖನಗಳು, ಶಿವಮೊಗ್ಗದ ತಮಸೋಮಾ ಪತ್ರಿಕೆಯಲ್ಲಿ ಸುಮಾರು ೨೦ ಲೇಖನಗಳು, ಸುಧಾ, ತರಂಗ, ಪ್ರಜಾವಾಣಿ, ಸುದ್ದಿ ಬಿಡುಗಡೆ, ಈ ದಿನ, ತುಳುವ ಮುಂತಾದ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದಿದ್ದಾರೆ.

**ಪ್ರಕಾಶಕರಾಗಿ :** ಸುಪ್ರಿಯಾ ಪ್ರಕಾಶನದ ಸಂಚಾಲಕರಾಗಿ ೧೨ ಪ್ರಕಟಣೆಗಳು, ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿಯ ರಿಜಿಸ್ಟ್ರಾರ್ ಆಗಿ ४೭ ಪುಸ್ತಕಗಳು, ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿಯ ಮದಿಪು ಪತ್ರಿಕೆ, ಸಂಪಾದಕನಾಗಿ ೨೯ ಸಂಚಿಕೆಗಳನ್ನು ಪ್ರಕಟಿಸಿದ್ದಾರೆ.

**ಧ್ವನಿ ಸುರುಳಿ ಸಾಹಿತ್ಯ :** ತುಳುವ ಸಿರಿ, ತುಳುವ ಮಲ್ಲಿಗೆ, ಅರ್ತಿದ ಪೂ (ತುಳು), ಶ್ರೀ ಕ್ಷೇತ್ರ ದರ್ಶನ, ಪ್ರಣಾಮ (ಕನ್ನಡ)

**ಪ್ರಶಸ್ತಿಗಳು :** ಯುವಜನ ಸೇವಾ ಇಲಾಖೆಯಿಂದ ರಾಜ್ಯಮಟ್ಟದ ಪ್ರಬಂಧ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ, ಜಾನಪದ ಟ್ರಸ್ಟ್, ಬೆಂಗಳೂರು ಏರ್ಪಡಿಸಿದ ಪ್ರಬಂಧ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ, ಕಲ್ಕುಡ ಕಲ್ಲುರ್ಟಿ ಗ್ರಂಥಕ್ಕೆ ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿಯಿಂದ ಪುಸ್ತಕ

ಬಹುಮಾನ, ೧೯೯೨ರಲ್ಲಿ ಶ್ರೀ ಸತ್ಯಸಾಯಿ ಸೇವಾ ಟ್ರಸ್ಟ್, ಬೆಂಗಳೂರು ಇವರು ಏರ್ಪಡಿಸಿದ ಪ್ರಶಸ್ತಿ–ಆದರ್ಶ ಗುರು–ಭಗವಾನ್ ಶ್ರೀ ಸತ್ಯಸಾಯಿಬಾಬಾ ಅವರಿಂದ ೧೯೯೩ರಲ್ಲಿ ಕರ್ನಾಟಕ ರಾಜ್ಯ ಉತ್ತಮ ಶಿಕ್ಷಕ ಪ್ರಶಸ್ತಿ, ೧೯೯೭ರಲ್ಲಿ ರಾಜ್ಯ ಸರಕಾರಿ ನೌಕರರ ರಾಜ್ಯಮಟ್ಟದ ರಸಪ್ರಶ್ನೆ ಸ್ಪರ್ಧೆಯಲ್ಲಿ ದ್ವಿತೀಯ ಬಹುಮಾನ, ೧೯೯೯ ಪುತ್ತೂರು ತಾಲೂಕು ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನ, ೨೦೦೦ ದ.ಕ. ಜಿಲ್ಲಾ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನ, ಶಿವಮೊಗ್ಗ, ಪುತ್ತೂರು, ಮಂಗಳೂರು, ಕುಂಬ್ರ ಮಂಡಲ ಪಂಚಾಯತು ಹಾಗೂ ವಿವಿಧ ಸಂಘ–ಸಂಸ್ಥೆಗಳಿಂದ ಸನ್ಮಾನ.

**೪.೪.೩೮ ಶಾಲಿನಿ ಶ್ರೀನಿವಾಸ (೧೯೪೭)**

ಬಿ. ಎ. ಪದವಿ ಪಡೆದ ಇವರು ಬಡೆಕ್ಕಿಲದಲ್ಲಿ ಜನಿಸಿದರು. ಈಗ ಬೆಂಗಲೂರಿನಲ್ಲಿ ನೆಲೆಸಿದ್ದಾರೆ. 'ನಿಜವೇನು ಗೆಳೆಯಾ ಆ ಹಸಿರು ತೋಟ' ಎಂಬ ಕಾವ್ಯ ಸಂಕಲನ, 'ಬಡೆಕ್ಕಿಲದ ಕರ್ಮಯೋಗಿ' ಜೀವನ ಚರಿತ್ರೆ ರಚಿಸಿದ್ದಾರೆ.

**೪.೪.೩೯ ಜಯಮ್ಮ ಜಿ. ಕೆ. (೧೯೪೮)**

ಜಯಮ್ಮ ಎ ಚೆಟ್ಟಿಮಾಡ ಇವರು ಉಪ್ಪಿನಂಗಡಿಯಲ್ಲಿ ಜನಿಸಿದರು. ಈಗ ಸುಳ್ಯದ ಮೊಹರ್ಪಣೆಯಲ್ಲಿ ವಾಸಿಸುತ್ತಿದ್ದಾರೆ. ಕನ್ನಡ ಹಿಂದಿ ಎಂ.ಎ. ಮತ್ತು ಬಿ.ಎಡ್. ಮಾಡಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. 'ಪುರುಷಾರ್ಥ ಸಾಧಕರು', 'ಕೈಮರ' ಎಂಬ ಪ್ರಬಂಧ ಸಕಲನ; 'ಲಹರಿ', 'ತನನ ದಿನದ', 'ಕಾಡು ಮೋಡಿನ ಜಾಡು', ಎಂಬ ಕಾವ್ಯ ಸಂಕಲನಗಳು; ನಾಲ್ಕೂ ಭಾಗಗಳಲ್ಲಿ 'ಹಳವರ ಜೋಳಿಗೆ' ಎಂಬ ಕೃತಿ ರಚಿಸಿದ್ದಾರೆ. ಜಿ. ಪಿ. ರಾಜರತ್ನಂ ಮಕ್ಕಳ ಸಾಹಿತ್ಯ ಪ್ರಶಸ್ತಿ ಪುರಸ್ಕೃತರು.

**೪.೪.೪೦ ತಾಳ್ತಜೆ ವಸಂತ ಕುಮಾರ (೧೯೪೮)**

ಕೃಷ್ಣಭಟ್ ಮತ್ತು ಲಕ್ಷ್ಮೀ ದಂಪತಿಗಳ ಮಗನಾಗಿ ೨೭–೧೨–೧೯೪೮ರಲ್ಲಿ ನೀರ್ಕಜೆ ಎಂಬಲ್ಲಿ ತಾಳ್ತಜೆಯವರ ಜನನ. ಬಾಲ್ಯದಿಂದಲೂ ಸಾಹಿತ್ಯದಲ್ಲಿ ಆಸಕ್ತಿಯನ್ನು ರೂಢಿಸಿಕೊಂಡಿರುವ ತಾಳ್ತಜೆಯವರು ಬೆಂಗಳೂರು ವಿಶ್ವವಿದ್ಯಾನಿಲದಿಂದ ಕನ್ನಡ ಎಂ.ಎ. ಪ್ರಥಮ ದರ್ಜೆ ರ್‍ಯಾಂಕ್‌ನೊಂದಿಗೆ ಉತ್ತೀರ್ಣರಾಗಿ ಸುವರ್ಣ ಪದಕವನ್ನು ಪಡೆದವರು. ಅನಂತರ 'ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ' ಎಂಬ ವಿಷಯದ ಮೇಲೆ ಮಹಾಪ್ರಬಂಧವನ್ನು ಸಿದ್ಧಪಡಿಸಿ ೧೯೮೫ರಲ್ಲಿ

ಮಂಗಳೂರು ವಿಶ್ವವಿದ್ಯಾನಿಲಯದಿಂದ ಪಿ.ಎಚ್.ಡಿ. ಪದವಿಯನ್ನು ಪಡೆದರು. ತಾಳ್ತಜೆಯವರು ಪುತ್ತೂರಿನ ವಿವೇಕಾನಂದ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ೧೯೭೧ರಿಂದ ೧೯೮೬ರ ವರೆಗೆ ಸೇವೆ ಸಲ್ಲಿಸಿ, ೧೯೮೬ರಲ್ಲಿ ಮುಂಬಯಿ ವಿಶ್ವವಿದ್ಯಾಲಯ ಕನ್ನಡ ವಿಭಾಗದ ಪ್ರಾಧ್ಯಾಪಕರಾಗಿ ಸೇರಿ ೧೯೮೯ರಿಂದ ವಿಭಾಗದ ಮುಖ್ಯಸ್ಥರಾಗಿ ಪ್ರಸ್ತುತ ನಿವೃತ್ತರಾಗಿದ್ದಾರೆ.

ಸಂಶೋಧನೆಯು ತಾಳ್ತಜೆಯವರ ಆಸಕ್ತಿಯ ಕ್ಷೇತ್ರ. ೧೯೭೩ರಲ್ಲಿ ಇವರು ವಿಶ್ವವಿದ್ಯಾಲಯ ಅನುದಾನ ಆಯೋಗದ ನೆರವಿನಿಂದ ಬನವಾಸಿಯ ಬಗೆಗೆ ಸಂಶೋಧನೆ, ೧೯೮೧ರಿಂದ ೧೯೮೫ರ ವರೆಗೆ ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿಯ ಬಗೆಗೆ ಉನ್ನತ ಅಧ್ಯಯನ ಹಾಗೂ ಯು.ಜಿ.ಸಿ. ಅನುದಾನದಿಂದ ಈವರೆಗೆ ಮೂರು ಉನ್ನತ ಸಂಶೋಧನಾ ಯೋಜನೆಗಳನ್ನು ನಡೆಸಿದ್ದಾರೆ. ಕಾವ್ಯ ಮೀಮಾಂಸೆ, ಜಾನಪದ ಸಂಸ್ಕೃತಿಯ ಅಧ್ಯಯನ ಇವು ತಾಳ್ತಜೆಯವರ ಒಲವಿನ ಕ್ಷೇತ್ರಗಳು, ಹಳೆಗನ್ನಡ ಸಾಹಿತ್ಯದಲ್ಲಿ ಶ್ರೀಯುತರು ವಿಶೇಷವಾದ ಪರಿಶ್ರಮವನ್ನು ಗಳಿಸಿರುತ್ತಾರೆ. ಈಗಾಗಲೇ ೧೭ ಮಂದಿ ವಿದ್ಯಾರ್ಥಿಗಳು ಅವರ ಮಾರ್ಗದರ್ಶನದಲ್ಲಿ ಪಿ.ಎಚ್.ಡಿ. ಪದವಿಯನ್ನು ಗಳಿಸಿದ್ದಾರೆ.

**ಪ್ರಮುಖ ಕೃತಿಗಳು :**

೧. ೧೯೮೦ : ಹರಿಹರನ ರಗಳೆಗಳು (ವಿಮರ್ಶೆ)

೨. ೧೯೮೨ : ಸಿಂಗಾರ (ವಿಮರ್ಶೆ)

೩. ೧೯೮೪ : ಮರೀಚಿಕೆ (ಕಾದಂಬರಿ)

೪. ೧೯೮೫ : ಸಾರಸ (ಸಂಶೋಧನಾ ಲೇಖನಗಳು)

೫. ೧೯೮೭ : ಬೇರು – ಬಿಳಲು (ಸಂಪಾದಿತ)

೬. ೧೯೮೮ : ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ (ಸಂಶೋಧನ ಮಹಾಪ್ರಬಂಧ)

೭. ೧೯೮೯ : ಆಯ್ದ ಲೇಖನಗಳು (ವಿಮರ್ಶಾ ಲೇಖನಗಳು)

೮. ೧೯೯೩ : ಜನಪರ ನಿಲುವು (ಸಂಪಾದಿತ ಲೇಖನಗಳ ಸಂಗ್ರಹ)

೯. ೧೯೯೬ : ಸೋಪಾನ (ಸಂಪಾದಿತ : ಬಿ.ಎ. ಸನದಿ ಕೃತಿ ಸಮೀಕ್ಷೆ)

೧೦. ೧೯೯೭ : ವಿ. ಕೃ. ಗೋಕಾಕ (ಬದುಕು – ಬರಹ)

೧೧. ೧೯೯೮ : ಸಾಂಸ್ಕೃತಿಕ ಸಂಶೋಧನೆ (ಸಂಶೋಧನೆ)

೧೨. ೧೯೯೮ : ಸಂಶೋಧನ ರಂಗ (ಸಂಶೋಧನ ವಿಧಾನ ಕೈಪಿಡಿ)

೧೩. ೨೦೦೦ : ದಾಸ ಸಾಹಿತ್ಯ (ಪರಿಶೀಲನೆ)

೧೪. ೨೦೦೦ : ಶಬ್ದಾರ್ಥ ಮೀಮಾಂಸೆ

೧೫. ೨೦೦೧ : ರಂ. ಶ್ರೀ. ಮುಗಳಿ (ಬದುಕು – ಬರಹ)

೧೬. ೨೦೦೧ : ಮುತ್ತಿನ ಸತ್ತಿಗೆ (ಸಂಶೋಧನ ಲೇಖನ ಸಂಚಯ)

೧೭. ೨೦೦೩ : ಶಿವರಾಮ ಕಾರಂತ (ಬದುಕು – ಬರಹ)

೧೮. ೨೦೦೫ : ಬೌದ್ಧಾಯನ (ಸಂಶೋಧನೆ)

೧೯. ೨೦೦೭ : ಹಣತೆಗೆ ಹನಿ ಎಣ್ಣೆ (ವಿಮರ್ಶನ ಲೇಖನ ಸಂಚಯ)

**ಪ್ರಶಸ್ತಿ, ಸನ್ಮಾನಗಳು :**

೧. ಕರ್ನಾಟಕ ಸಾಹಿತ್ಯ ಅಕಾಡಮಿಯ ಪುಸ್ತಕ ಪ್ರಶಸ್ತಿ 'ಬೌದ್ಧಾಯನ' ಕೃತಿಗಾಗಿ (೨೦೦೭)

೨. ಸೇಡಿಯಾಪು ವಿದ್ವತ್ ಪ್ರಶಸ್ತಿ (೨೦೦೧)

೩. ಗೋರೂರು ಸಾಹಿತ್ಯ ಪ್ರಶಸ್ತಿ ('ಮುತ್ತಿನ ಸತ್ತಿಗೆ' ಕೃತಿಗಾಗಿ ೨೦೦೨)

೪. ಕಾಂತಾವರ ಪ್ರಶಸ್ತಿ (೨೦೧೦)

೫. ಗುರುನಾರಾಯಣ ಸಾಹಿತ್ಯ ಪ್ರಶಸ್ತಿ (ಹೊರನಾಡಿನ ಕನ್ನಡ ಸೇವೆಗಾಗಿ – ೨೦೦೯)

**ವಿಶೇಷ ಹೊಣೆಗಾರಿಕೆಗಳು :**

೧. ಕನ್ನಡ ಸಾಹಿತ್ಯ ಪರಿಷತ್ತಿನ ಮಹಾರಾಷ್ಟ್ರ ರಾಜ್ಯ ಘಟಕದ ಸ್ಥಾಪಕ ಅಧ್ಯಕ್ಷ (೧೯೯೨ ೯೫)

೨. ದಕ್ಷಿಣ ಕನ್ನಡ ಜಿಲ್ಲಾ ೧೭ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ (೨೦೧೧ ನವೆಂಬರ್)

೩. ಅನೇಕ ಅಂತಾರಾಷ್ಟ್ರೀಯ ಮತ್ತು ರಾಷ್ಟ್ರಮಟ್ಟದ ವಿಚಾರ ಸಂಕಿರಣಗಳಲ್ಲಿ ಗೋಷ್ಠಿಗಳ ಅಧ್ಯಕ್ಷತೆ

೪. ವಿವೇಕಾನಂದ ಕಾಲೇಜು ಪುತ್ತೂರು ಇಲ್ಲಿಯ ಶಿವರಾಮ ಕಾರಂತ ಅಧ್ಯಯನ ಕೇಂದ್ರದ ಕಾರ್ಯಾಧ್ಯಕ್ಷ (೨೦೦೮ರಿಂದ)

೫. ಮಂಗಳೂರು ವಿಶ್ವವಿದ್ಯಾನಿಲಯ ಬೌದ್ಧ ಅಧ್ಯಯನ ಪೀಠದ ಸಲಹಾ ಸಮಿತಿ ಸದಸ್ಯ (೨೦೧೧ ರಿಂದ)

೧೯೯೩ರಲ್ಲಿ ಇವರು ಭಾರತ – ಜರ್ಮನಿ ಸಾಂಸ್ಕೃತಿಕ ವಿನಿಮಯ ಯೋಜನೆಯಲ್ಲಿ ಜರ್ಮನಿಗೆ ಭೇಟಿ ನೀಡಿ ಅಲ್ಲಿಯ ವಿಶ್ವವಿದ್ಯಾನಿಲಯಗಳಲ್ಲಿ ವಿಶೇಷ ಉಪನ್ಯಾಸಗಳನ್ನು ನೀಡಿದ್ದಾರೆ.

## ೪.೪.೪೧ ಗಂಗಾ ಪಾದೇಕಲ್(೧೯೪೮)

ಪುತ್ತೂರು ತಾಲೂಕಿನ ಕರೋಪಾಡಿಯಲ್ಲಿ ಜನಿಸಿದ ಗಂಗಾ ಪಾದೇಕಲ್ ಕಾವ್ಯನಾಮದ ಪಿ. ರತ್ನಾ ಜಿ. ಭಟ್ ಕನ್ನಡದ ಬಹುಮುಖ ಕಥೆಗಾರ್ತಿಯರಲ್ಲಿ ಒಬ್ಬರು. ಕಳೆದ ಮೂರು ದಶಕಗಳಿಂದ ಬರೆಯುತ್ತಾ ಬಂದಿರುವ ಗಂಗಾ ಪಾದೇಕಲ್ ಅವರ ಬಹುತೇಕ ಕೃತಿಗಳ ಕೇಂದ್ರ ಬಿಂದು ಸಮಾಜದಲ್ಲಿನ ಶೋಷಣೆ. ಸುತ್ತಲಿನ ಪರಿಸರದ ಸೂಕ್ಷ್ಮಗ್ರಹಿಕೆಯ ಜೊತೆಗೆ ಸ್ತ್ರೀ ಪ್ರಧಾನವಾದ ಕಥಾ ವಸ್ತುವನ್ನು ಅವರ ಬರಹಗಳಲ್ಲಿ ಕಾಣಬಹುದು.

ಇವರ ಕೃತಿಗಳು 'ಮಲಪೇಡಿ ಮತ್ತು ಇತರ ಕಥೆಗಳು', 'ಹೆಜ್ಜೆ ಮೂಡದ ಹಾದಿಯಲ್ಲಿ', 'ಹೊಸ ಹೆಜ್ಜೆ', 'ವಾಸ್ತವ', 'ಕ್ಷಮಯಾಧರಿತ್ರಿ', 'ನೆಲೆ ತಪ್ಪಿದ ಹಕ್ಕಿ', 'ಮನ್ನಣೆಯ ದಾಹ', 'ಈ ಪ್ರಜಾರಾಜ್ಯದೊಳಗೆ', 'ಸಂಕ್ರಮಣ' ಇವು ಗಂಗಾ ಪಾದೇಕಲ್‌ರ ಪ್ರಮುಖ ಕಥಾ ಸಂಕಲನಗಳು. 'ಹೊನ್ನಳ್ಳಿಯಲ್ಲೊಮ್ಮೆ', 'ಸೆರೆಯಿಂದ ಹೊರಗೆ', 'ಪಯಣದ ಹಾದಿಯಲ್ಲಿ', 'ಮೌನರಾಗಗಳು', 'ಬಂಗಾರದ ಜಿಂಕೆಯ ಹಿಂದೆ', 'ಇನ್ನೊಂದು ಅಧ್ಯಾಯ', 'ಅದೃಷ್ಟ ರೇಖೆಗಳು', 'ಕನಕಾಂಬರಿ' ಇವು ಗಂಗಾ ಪಾದೇಕಲ್‌ರ ಇತರ ಕೆಲವು ಕೃತಿಗಳು. ಇವಲ್ಲದೆ ಮೂರು ಕಿರು ಕಾದಂಬರಿಗಳನ್ನೂ, 'ಸೆರಗಿನ ಕೆಂಡ' ಮುಂತಾದ ಹತ್ತು ಕಾದಂಬರಿಗಳನ್ನೂ, ನಾಲ್ಕು ಸಂಪಾದಿತ ಕೃತಿಗಳನ್ನು ಪ್ರಕಟಿಸಿದ್ದಾರೆ. ಇವರು ಮುಳಿಯ ಶ್ರೀ ಕೃಷ್ಣ ಭಟ್ಟರ ತಂಗಿ.

## ೪.೪.೪೨ ಕೆ. ಸಿ. ಪಾಟಾಳಿ (೧೯೪೮)

ವೀರ ಕೋಟಿ ಚೆನ್ನಯರು ಜನಿಸಿದ 'ಪಡುಮಲೆ' ಚಂದಪಾಟಾಳಿಯವರ (ಕೆ.ಸಿ. ಪಾಟಾಳಿ) ಹುಟ್ಟೂರು ೧೩ ಫೆಬ್ರವರಿ ೧೯೪೮ರಂದು ಜನನ. ತಂದೆ ಮಹಾಲಿಂಗ ಪಾಟಾಳಿ, ತಾಯಿ ಪರಮೇಶ್ವರಿ ಅಮ್ಮ.

ಈಶ್ವರಮಂಗಲದಲ್ಲಿ ಪ್ರಾಥಮಿಕ ಶಿಕ್ಷಣ. ಬೆಳ್ಳಾರೆಯಲ್ಲಿ ಪ್ರೌಢ ಶಿಕ್ಷಣ. ಮಂಗಳೂರಿನಲ್ಲಿ ಶಿಕ್ಷಕ ತರಬೇತಿ. ಕರ್ನಾಟಕ ವಿ.ವಿ.ಯ ಪದವಿ. ಸುಳ್ಯಪದವು ಪ್ರಾಥಮಿಕ ಶಾಲೆಯಲ್ಲಿ ಅಧ್ಯಾಪಕರಾಗಿ ಎರಡು ದಶಕಗಳಿಗಿಂತಲೂ ಹೆಚ್ಚು ಕಾಲ ಶಿಕ್ಷಕರಾಗಿ ದುಡಿಯುತ್ತಿದ್ದಾರೆ.

ಶೈಕ್ಷಣಿಕ ರಂಗದಲ್ಲಿ ಪಾಟಾಳಿಯವರ ಸಾಧನೆ ಗುರುತರವಾದುದು. ಶಿಕ್ಷಣ ಕ್ಷೇತ್ರದ ಹಲವು ತರಬೇತಿಗಳನ್ನು ಪಡೆದಿದ್ದಾರೆ. ಸಾಕ್ಷರತಾ ಆಂದೋಲನ ತರಬೇತುದಾರರಾಗಿ, ಜನಶಿಕ್ಷಣ ನಿಲಯದ ಸಲಹೆಗಾರರಾಗಿ, ತಾಲೂಕು ಮಟ್ಟದ ಕಾರ್ಯಕ್ರಮಗಳ ನಿರ್ವಾಹಕರಾಗಿ, ಪರಿಸರ ಸಂಬಂಧಿ ಶಿಬಿರಗಳ ಸಂಪನ್ಮೂಲ ವ್ಯಕ್ತಿಯಾಗಿ ಭಾಗವಹಿಸಿದ್ದಾರೆ.

ಪಾಟಾಳಿಯವರು ಉತ್ತಮ ಬರೆಹಗಾರರು ಇವರ ಅನೇಕ ಲೇಖನಗಳು ನಾಡಿದ ಪ್ರಸಿದ್ಧ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಪ್ರಕಟವಾಗುತ್ತಿವೆ. ಪ್ರಾಥಮಿಕ ಮತ್ತು ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಸಹಾಯಕವಾಗುವ ಪ್ರಬಂಧಗಳ ಸಂಕಲನ 'ಪ್ರಬಂಧ ಸಂಗಮ' ಕೃತಿಯು ಅಚ್ಚಾಗಿದೆ. ಇದಕ್ಕೆ ಜಿಲ್ಲಾ ಮಟ್ಟದ ಸಾಹಿತ್ಯ ಸಂಗಮದ ಪ್ರಶಸ್ತಿ ಬಂದಿದೆ.

ಶ್ರೀ ಅಯ್ಯಪ್ಪ ಸ್ವಾಮಿ ಚರಿತ್ರೆ, ಶ್ರೀ ಪಡುಮಲೆ ಕ್ಷೇತ್ರ ದರ್ಶನ, ಬಾಲರಶ್ಮಿ, ಅಕ್ಷರ ದೀಪ, ಕೃತಿಗಳನ್ನು ಶ್ರೀ ಭಗವತೀ ಪ್ರಕಾಶನದ ಮೂಲಕ ಅಚ್ಚು ಹಾಕಿಸಿದ್ದಾರೆ. ಶ್ರೀ ರಣಮಂಡಲ ಕ್ಷೇತ್ರ ಮಹಾತ್ಮೆ' ಎಂಬ ಯಕ್ಷಗಾನ ಕೃತಿಯೊಂದನ್ನು ಇತ್ತೀಚೆಗೆ ಬರೆದು ಯಶಸ್ವಿ ಪ್ರದರ್ಶನ ಕಂಡಿದೆ.

ಯಕ್ಷಗಾನವು ಕೆ.ಸಿ.ಯವರ ಮೆಚ್ಚಿನ ಕ್ಷೇತ್ರ. ಇವರು ವೇಷದಾರಿಯೂ ಹೌದು. ಅರ್ಥಧಾರಿಯೂ ಹೌದು. ಭಾವಪೂರ್ಣ ಶೈಲಿ, ಪ್ರತ್ಯುತ್ಪನ್ನಮತಿತ್ವ, ಸಾಹಿತ್ಯಾಂಶಗಳಿಗೆ ಒತ್ತು ನೀಡುವ ಅರ್ಥಗಾರಿಕೆ ಇವರದು. ಹಿತ-ಮಿತ ನಾಟ್ಯಗಳಿಂದ ಮಾತು ಪ್ರಧಾನ ವೇಷಗಳಲ್ಲಿ ಮಿಂಚುತ್ತಾರೆ. 'ಶ್ರೀ ಭಗವತಿ ಯಕ್ಷಗಾನ ಕಲಾ ಸಮಿತಿ'ಯನ್ನು ಸಂಘಟಿಸಿ ಎಳೆಯರ ತಂಡವನ್ನು ಕಟ್ಟಿ ಜಿಲ್ಲೆಯ ಉದ್ದಗಲಕ್ಕೂ ಪ್ರದರ್ಶನ ನೀಡಿ ಯಶಸ್ಸು ಕಂಡಿದ್ದಾರೆ.

ಕೆ.ಸಿ. ಪಾಟಾಳಿಯವರು ಶಿಕ್ಷಣ ಕ್ಷೇತ್ರದ ಹಲವು ಪ್ರಶಸ್ತಿಗಳಿಂದ ಪುರಸ್ಕೃತರು. ೧೯೯೨ರಲ್ಲಿ ಜಿಲ್ಲಾ ಅತ್ಯುತ್ತಮ ಶಿಕ್ಷಕ ಪ್ರಶಸ್ತಿ, ೧೯೯೩ರಲ್ಲಿ ರಾಜ್ಯ ಪ್ರಶಸ್ತಿ, ೧೯೯೬ರಲ್ಲಿ ರಾಷ್ಟ್ರ ಪ್ರಶಸ್ತಿ ಲಭಿಸಿದೆ.

### ೪.೪.೪೩ ಬೊಳುವಾರು ಮಹಮ್ಮದ್ ಕುಂಞಿ (೧೯೫೨)

ಮುಸ್ಲಿಂ ಬದುಕನ್ನು ಓದುಗರಿಗೆ ತೆರೆದಿಡುವ ಮೂಲಕ ೧೯೭೨ರಲ್ಲಿ ಸಾಹಿತ್ಯ ಕ್ಷೇತ್ರ ಪ್ರವೇಶಿಸಿದ ಬೊಳುವಾರು ಅವರು 'ಆಕಾಶಕ್ಕೆ ನೀಲಿ ಪರದೆ','ಒಂದು ತುಂಡು ಗೋಡೆ' ಮತ್ತು 'ಸ್ವಾತಂತ್ರ್ಯದ ಓಟ' ಹೀಗೆ ಕಥೆ, ಕಾದಂಬರಿ, ಮಕ್ಕಳ ನಾಟಕಗಳನ್ನು ರಚಿಸಿದ್ದಾರೆ. ಅವರ ಲೇಖನಗಳಿಗೆ ಕೇಂದ್ರ ಬಾಲ ಸಾಹಿತ್ಯ ಪ್ರಶಸ್ತಿ, ನಾಲ್ಕು ಬಾರಿ ಕರ್ನಾಟಕ ಸಾಹಿತ್ಯ ಅಕಾಡಮಿ ಪ್ರಶಸ್ತಿ, ಭಾರತೀಯ ಭಾಷಾ ಸಂಸ್ಥಾನ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಆರ್ಯಭಟ ಪ್ರಶಸ್ತಿ, ಚಲನಚಿತ್ರ ಸಂಭಾಷಣೆಗಾಗಿ ರಾಜ್ಯ ಪ್ರಶಸ್ತಿ ಹೀಗೆ ಹಲವು ಪ್ರಶಸ್ತಿಗಳು ಸಂದಿವೆ. ಇವರ ಕತೆಗಳು ವಿಶ್ವವಿದ್ಯಾನಿಲಯಗಳಿಗೆ ಪಠ್ಯವಾಗಿರುವುದಲ್ಲದೆ ಹೆಚ್ಚಿನ ಕತೆಗಳು ಬೇರೆ ಬೇರೆ ಭಾಷೆಗಳಿಗೆ ಅನುವಾದಗೊಡಿವೆ.

ಕರ್ನಾಟಕ ನಾಟಕ ಅಕಾಡಮಿಯ ಸದಸ್ಯರಾಗಿ ೧೯೯೮-೨೦೦೦ದ ಅವಧಿಯಲ್ಲಿ ಕಾರ್ಯ ನಿರ್ವಹಿಸಿದ್ದಾರೆ. ಹೆಗ್ಗೋಡು, ಬೆಂಗಳೂರು, ಉಡುಪಿ, ಮೈಸೂರು, ಮಡಿಕೇರಿ, ಕಾಸರಗೋಡು,

ಹೊನ್ನಾವರ ಮುಂತಾದೆಡೆ ನಡೆದ ರಾಷ್ಟ್ರಮಟ್ಟದ, ರಾಜ್ಯಮಟ್ಟದ ರಂಗ ಸಂಕಿರಣಗಳಲ್ಲಿ ಪ್ರಬಂಧ ಮಂಡನೆ, ಉಪನ್ಯಾಸ ನೀಡಿಕೆ ಹಾಗೂ ೩೦ಕ್ಕೂ ಹೆಚ್ಚು ನಾಟಕಗಳ ರಚನೆ ಹಾಗೂ ನಿರ್ದೇಶನ ಮಾಡಿದ್ದಾರೆ.

ಬಿ. ವಿ. ಕಾರಂತರ ನಿರ್ದೇಶನದ 'ಮಕ್ಕಳ ರಂಗಭೂಮಿ' ವಿಶೇಷ ಶಿಬಿರಗಳಲ್ಲಿ ಸಹನಿರ್ದೇಶಕ ನಾಗಿ ಕಾರ್ಯನಿರ್ವಹಿಸಿದ್ದಾರೆ. ಬೆಂಗಳೂರು, ಹೆಗ್ಗೋಡು, ಕಾಸರಗೋಡು, ಮುಲ್ಕಿ, ಅರಸೀಕೆರೆಗಳಲ್ಲಿ ನಡೆದ 'ನಾಟಕ ಕೃತಿ ರಚನಾ ಕಮ್ಮಟ'ಗಳಲ್ಲಿ ಸಹಭಾಗಿಯಾಗಿದ್ದಾರೆ. ದಕ್ಷಿಣಕನ್ನಡ ಜಿಲ್ಲೆಯ ಯಾವುದೇ ಊರಿನಲ್ಲಿ ನಡೆಯುವ ಆಧುನಿಕ ರಂಗ ಪ್ರಯೋಗಗಳೊಂದಿಗೆ ನಿಕಟ ಸಂಪರ್ಕವಿರಿಸಿ, ಭಾಗವಹಿಸುತ್ತಾರೆ. ಸೋಣಂಗೇರಿಯ ನಿರತ ನಿರಂತರ ಬಯಲು ಚಿತ್ರಾಲಯವನ್ನು ಪ್ರಾರಂಭಿಸಿ ಮುನ್ನಡೆಸುವಲ್ಲಿ ಸಕ್ರಿಯ ಪಾತ್ರವಹಿಸಿದ್ದಾರೆ. ಪತ್ರಿಕೆಗಳಲ್ಲಿ, ಸ್ಮರಣಸಂಚಿಕೆಗಳಲ್ಲಿ ರಂಗಭೂಮಿ ಕುರಿತ ಬರಹಗಳನ್ನು, ನಾಟಕ ವಿಮರ್ಶಾ ಬರಹಗಳನ್ನು ಬರೆದಿದ್ದಾರೆ.

ಮಕ್ಕಳ ರಂಗಭೂಮಿ, ಬೀದಿ ನಾಟಕ ಕುರಿತು ವಿಶೇಷ ಅಧ್ಯಯನ, ಹಲವಾರು ರಂಗ ತರಬೇತಿ ಶಿಬಿರಗಳಲ್ಲಿ 'ರಂಗ ನಿರ್ದೇಶಕ'ನಾಗಿ ಕೆಲಸ ನಿರ್ವಹಿಸುದ್ದಾರೆ. 'ಶಿಕ್ಷಣದಲ್ಲಿ ರಂಗಭೂಮಿಯ ಬಳಕೆ' ಕುರಿತು ವಿಶೇಷವಾದ ಆಸಕ್ತಿಯನ್ನು ಹೊಂದಿದ್ದಾರೆ.

### ೪.೪.೪೪ ಅಶೋಕವರ್ಧನ ಜಿ. ಎನ್. (೧೯೫೨)

ಪುತ್ತೂರಿನಲ್ಲಿ ಜನನ. ಇಂಗ್ಲೀಷ್ ಎಂ. ಎ. ಮತ್ತು ಪತ್ರಿಕೋದ್ಯಮ ಎಂ. ಎ., ಮಂಗಳೂರಿನಲ್ಲಿ ಅತ್ರಿ ಬುಕ್ ಸೆಂಟರ್ ಸ್ಥಾಪಿಸಿ ೨೫ಕ್ಕೂ ಹೆಚ್ಚುಕಾಲ ನಡೆಸಿದರು. ಪರಿಸರ ಪ್ರೇಮಿ, ಚಾರಣ ಪ್ರೇಮಿ, 'ತಾತಾರ್ ಶಿಖರರೋಹಣ', 'ಚಕ್ರವರ್ತಿಗಳು', 'ಪುಸ್ತಕ ಮಾರಾಟ ಹೋರಾಟ', 'ಬೆಟ್ಟಗುಡ್ಡಗಳು', – ಇವರ ಕೃತಿಗಳು

### ೪.೪.೪೫ ನಾರಾಯಣ ರೈ ಕುಕ್ಕುವಳ್ಳಿ (೧೯೫೪)

ನಾರಾಯಣ ರೈ ಕುಕ್ಕುವಳ್ಳಿಯವರು ಪ್ರಸಿದ್ಧ ಕುಕ್ಕುವಳ್ಳಿ ಮನೆತನದಲ್ಲಿ ಕಲ್ಲಡ್ಕ ಕರಿಯಪ್ಪ ರೈ ಮತ್ತು ಶ್ರೀಮತಿ ಕುಕ್ಕುವಳ್ಳಿ ಗಿರಿಜ ದಂಪತಿಗಳ ಹಿರಿಯ ಮಗನಾಗಿ ೧೯೫೪ರಲ್ಲಿ ಜನಿಸಿದರು. ಬೆಟ್ಟಂಪಾಡಿ, ದರ್ಬೆತ್ತಡ್ಕ ಶಾಲೆಗಳಲ್ಲಿ ತನ್ನ ಪ್ರಾಥಮಿಕ ಶಿಕ್ಷಣ ಪೂರೈಸಿದ ಇವರು ಬೆಟ್ಟಂಪಾಡಿ ನವೋದಯ ಪ್ರೌಢ ಶಾಲೆಯಲ್ಲಿ ಪ್ರೌಢ ಶಿಕ್ಷಣ ಮುಗಿಸಿ ಮಡಿಕೇರಿ ವಿರಾಜಪೇಟೆಯಲ್ಲಿ ಶಿಕ್ಷಕ ತರಬೇತಿ ಹೊಂದಿ ೧೯೭೭ರಲ್ಲಿ ಶಿಕ್ಷಕರಾಗಿ ಸೇವೆಗೆ ಸೇರಿದರು. ಮುಂದೆ ಬಿ.ಎ., ಬಿ.ಎಡ್., ಎಂ.ಎ. ಪದವಿ ಗಳಿಸಿದ ಇವರು ಪ್ರಸ್ತುತ ಪುತ್ತೂರು ಸರಕಾರಿ ಪದವಿ ಪೂರ್ವ ಕಾಲೇಜಿನಲ್ಲಿ ಪದವೀಧರ ಸಹ

ಅಧ್ಯಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಶಿಕ್ಷಣ ಕ್ಷೇತ್ರದಲ್ಲಿ ನಾನಾ ಪ್ರಯೋಗ ತಂತ್ರ ಅನುಭವ ವಿಧಾನಗಳನ್ನು ರೂಢಿಸಿಕೊಂಡು ಇವರು ಕ್ರಿಯಾಶೀಲ ಶಿಕ್ಷಕರಾಗಿ ಗುರುತಿಸಿಕೊಂಡವರು. ಜೊತೆಗೆ ಎಲ್ಲಾ ರಂಗಗಳಲ್ಲೂ ತನ್ನನ್ನು ತಾನು ತೊಡಗಿಸಿಕೊಂಡು, ಬರಹಗಾರನಾಗಿ, ಅಂಕಣಕಾರರಾಗಿ, ಕಲಾವಿದರಾಗಿ ತನ್ನ ಸಾಧನೆಗಳಿಗೆ ಅನೇಕ ಜಿಲ್ಲಾ, ರಾಜ್ಯ, ರಾಷ್ಟ್ರ ಮಟ್ಟದ ಪುರಸ್ಕಾರ ಬಹುಮಾನಗಳನ್ನು ಗಳಿಸಿ ಪುತ್ತೂರು ತಾಲೂಕಿನ ಓರ್ವ ಪ್ರಮುಖ ಪ್ರತಿಭೆಯ ಶಿಕ್ಷಕರಾಗಿ ಗುರುತಿಸಲ್ಪಟ್ಟವರು.

ತನ್ನ ನಾಡು ನುಡಿ ಸಂಸ್ಕೃತಿಯ ಬಗ್ಗೆ ಅಭಿಮಾನ ಹೊಂದಿರುವ ಕುಕ್ಕುವಳ್ಳಿಯವರು ಅದರ ಬೆಳವಣಿಗೆಗೆ ಅನೇಕ ಸಂಘ ಸಂಸ್ಥೆಗಳೊಂದಿಗೆ ನಿಕಟ ಸಂಪರ್ಕವಿರಿಸಿಕೊಂಡು ಕಾರ್ಯಶೀಲರಾದವರು. ಮಕ್ಕಳಲ್ಲಿ, ಯುವಕರಲ್ಲಿ ಪರಿಸರ ಪ್ರಜ್ಞೆ, ರಾಷ್ಟ್ರ ಪ್ರೇಮ ಮೂಡಿಸುವ ನಿಟ್ಟಿನಲ್ಲಿ ಅಂಕಣ ನಿರ್ವಹಿಸಿ ಪ್ರೋತ್ಸಾಹಿಸುತ್ತಿರುವ ಇವರು ಪುತ್ತೂರು ಸುದ್ದಿ ಬಿಡುಗಡೆಯಲ್ಲಿ ಕಳೆದ ೨೦ ವರ್ಷಗಳಿಂದ ಪ್ರತಿಭಾರಂಗ, ಯುವರಂಗ, ತುಳು ಚಾವಡಿ, ಚಿತ್ರರಂಗ, ವಿಚಿತ್ರರಂಗ, ಹನಿಮಿನಿ ಕಾವ್ಯ, ಕಲಾ ಕಾವ್ಯರಂಗ ಅಂಕಣ ನಿರ್ವಹಿಸುತ್ತಿದ್ದಾರೆ. ೧೯೯೨ ರಿಂದ ಮಕ್ಕಳ ಪ್ರತಿಭೆಗಳನ್ನು ಗುರುತಿಸಿ ಪ್ರೋತ್ಸಾಹಿಸಲು 'ಪ್ರತಿಭಾ ದೀಪ ಪುರಸ್ಕಾರ', 'ಪ್ರತಿಭಾರಂಗದ ಮೆಚ್ಚುಗೆ ಪುರಸ್ಕಾರ', 'ಸುವರ್ಣ ಚಿಣ್ಣ ಪುರಸ್ಕಾರ' ಯೋಜನೆಗಳನ್ನು ಮಾದರಿಯಾಗಿ ನಡೆಸಿಕೊಂಡು ಬರುತ್ತಿದ್ದಾರೆ.

**ಕುಕ್ಕುವಳ್ಳಿಯವರಿಗೆ ದೊರೆತ ಪ್ರಶಸ್ತಿ, ಪುರಸ್ಕಾರ, ಸನ್ಮಾನಗಳು ಹೀಗಿವೆ :**

- ೧೯೮೭-೮೮ರಲ್ಲಿ ಪುತ್ತೂರು ತಾಲೂಕು ಉತ್ತಮ ಶಿಕ್ಷಕ ಪುರಸ್ಕಾರ
- ೧೯೮೭ – ೮೯ರಲ್ಲಿ ಪುತ್ತೂರು ತಾಲೂಕು ಪ್ರತಿಭಾವಂತ ಶಿಕ್ಷಕ ಪುರಸ್ಕಾರ ಸನ್ಮಾನ
- ಕರ್ನಾಟಕ ಸರಕಾರದ ಸಾರ್ವಜನಿಕ ಶಿಕ್ಷಣ ಇಲಾಖೆಯ ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ ಏರ್ಪಡಿಸಿದ ೧೯೮೭-೮೮ನೇ ಸಾಲಿನ ಶಿಕ್ಷಣದಲ್ಲಿ ಹಿರಿಮೆಗೆ ರಾಜ್ಯ ಪುರಸ್ಕಾರ ಯೋಜನೆಯನ್ವಯ ಏರ್ಪಡಿಸಿದ ಲೇಖನ ಪ್ರಬಂಧ ಸ್ಪರ್ಧೆಯಲ್ಲಿ ಶಿಕ್ಷಣ ಸಂಶೋಧನೆ ಪ್ರಾಯೋಗಿಕ ಯೋಜನೆ ಒಂದು ರಾಷ್ಟ್ರೀಯ ಶಿಕ್ಷಣ ನೀತಿ, ಪ್ರಯೋಗ ತಂತ್ರ ಅನುಭವ ವಿಧಾನಗಳು ಎಂಬ ಸಂಶೋಧನಾತ್ಮಕ ಪ್ರಬಂಧಕ್ಕೆ ರಾಜ್ಯ ಪುರಸ್ಕಾರ.
- ೧೯೮೮-೮೯ರಲ್ಲಿ ಬೆಂಗಳೂರು ಆಕಾಶವಾಣಿ ಕೇಂದ್ರ ಮತ್ತು ಕರ್ನಾಟಕ ರಾಜ್ಯ ಅಯೋಗ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸಹಯೋಗದೊಂದಿಗೆ ನಡೆಸಲಾದ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಅತ್ಯಧಿಕ ಅಂಕಗಳೊಂದಿಗೆ ಪಾಲಕರ ದರ್ಶಿನಿ ರಾಜ್ಯ ಪ್ರಶಸ್ತಿ.

- ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ ಮತ್ತು ರಾಷ್ಟ್ರೀಯ ಶಿಕ್ಷಕರ ಕಲ್ಯಾಣ ಪ್ರತಿಷ್ಠಾನ, ಶಿಕ್ಷಣ ಕ್ಷೇತ್ರದಲ್ಲಿ ಇವರ ಶ್ಲಾಘನೀಯ ಸೇವೆಯನ್ನು ಗುರುತಿಸಿ ೧೯೯೨–೯೩ನೇ ಸಾಲಿಗಾಗಿ ಜಿಲ್ಲಾಮಟ್ಟದ ಅತ್ಯುತ್ತಮ ಶಿಕ್ಷಕರ ಪ್ರಶಸ್ತಿ ನೀಡಿ ಗೌರವಿಸಲಾಗಿದೆ.
- ಕರ್ನಾಟಕ ಪ್ರತಿಭಾ ಅಕಾಡೆಮಿ ರಿ. ಬೆಂಗಳೂರು ವತಿಯಿಂದ ಡಾ। ಎಸ್. ರಾಧಾಕೃಷ್ಣನ್ ರಾಜ್ಯ ಶಿಕ್ಷಕ ಪ್ರಶಸ್ತಿ. ಚಿತ್ರದುರ್ಗ ಬಸವಕೇಂದ್ರದ ಶ್ರೀ ಮರುಘ ರಾಜೇಂದ್ರ ಮಠ ವತಿಯಿಂದ ೨೦೦೩–೨೦೦೪ರ ಶಿಕ್ಷಕ ರತ್ನ ಪ್ರಶಸ್ತಿ.
- ಕರ್ನಾಟಕ ಪ್ರತಿಭಾ ಅಕಾಡಮಿ ರಿ. ಬೆಂಗಳೂರು ವತಿಯಿಂದ ಆದರ್ಶ ಶಿಕ್ಷಕ ರಾಜ್ಯ ಪ್ರಶಸ್ತಿ.
- ಶಿಕ್ಷಣ ಇಲಾಖೆ ಸಹಯೋಗದೊಂದಿಗೆ ಬೆಂಗಳೂರು ಆಕಾಶವಾಣಿ ಕೇಂದ್ರದಿಂದ ಪ್ರಸಾರವಾದ ಎಳೆಯರಿಗೆ ಪರಿಸರ ಬಾಂದನಿ ಕಾರ್ಯಕ್ರಮದದಲ್ಲಿ ಪ್ರಶಸ್ತಿ (೧೯೯೯)
- ಮುಂಬೈ ಮೊಗವೀರ ಮಾಸಪತ್ರಿಕೆ ೧೯೯೯ರಲ್ಲಿ ನಡೆಸಿದ ಲೇಖನ ಸ್ಪರ್ಧೆಯಲ್ಲಿ ಶಿಕ್ಷಣದಲ್ಲಿ ಭಾವೈಕ್ಯತೆ ಲೇಖನಕ್ಕೆ ರಾಷ್ಟ್ರೀಯ ನಗದು ಪುರಸ್ಕಾರ.
- ಪುತ್ತೂರು ತಾಲೂಕು ಪ್ರಥಮ ಮಕ್ಕಳ ಸಾಹಿತ್ಯ ಸಮ್ಮೇಳನ ವತಿಯಿಂದ ೨೦೦೪ರಲ್ಲಿ ಸನ್ಮಾನ.
- ಕುಕ್ಕುವಳ್ಳಿಯವರ ಹತ್ತು ಹಲವು ಲೇಖನ, ಕವನ, ವ್ಯಂಗ್ಯಚಿತ್ರ, ಕಥೆಗಳು ನಾಡಿನ ಖ್ಯಾತ ಪತ್ರಿಕೆಗಳಲ್ಲಿ ಪ್ರಕಟವಾಗಿವೆ.
- ಅನೇಕ ಸ್ಮರಣ ಸಂಚಿಕೆಗಳಲ್ಲಿ ಸಂಪಾದಕರಾಗಿ, ಸದಸ್ಯರಾಗಿ ಕಾರ್ಯನಿರ್ವಹಿಸಿದ್ದಾರೆ.

### ೪.೪.೪೬ ಚಂದ್ರ ಪೂಜಾರಿ (೧೯೫೬)

ಪುತ್ತೂರಿನಲ್ಲಿ ಜನಿಸಿದರು. ಎಂ. ಎ., ಪಿ.ಎಚ್.ಡಿ ಪದವಿ ಪಡೆದು ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಅಭಿವೃದ್ಧಿ ಅಧ್ಯಯನ ವಿಭಾಗದಲ್ಲಿ ಪ್ರಧ್ಯಾಪಕರಾಗಿದ್ದಾರೆ. 'ಅಭಿವೃದ್ಧಿ ಮತ್ತು ಪರಿಸರ', 'ಸ್ವದೇಶಿ–ಒಂದು ವಿಶ್ಲೇಷಣೆ', 'ದೇಶೀಯತೆಯ ನೆರಳಿನಲ್ಲಿ ವಿಕೇಂದ್ರೀಕರಣ', 'ಸಮುದಾಯ ಮತ್ತು ಸಹಭಾಗಿತ್ವ', 'ರಾಜಕೀಯದ ಬಡತನ', ಇವರ ಕೃತಿಗಳು.

### ೪.೪.೪೭ ಚಂದ್ರಶೇಖರ ಎ. ಪಿ. (೧೯೫೮)

ಪುತ್ತೂರಿನಲ್ಲಿ ಜನನ. ಬಿ. ಇ ಪದವೀಧರರು. ಮೈಸೂರು ಜಿಲ್ಲೆ ಕಳಲವಾಡಿ ಗ್ರಾಮದಲ್ಲಿ ಕೃಷಿ ನಡೆಸುತ್ತಿದ್ದಾರೆ. 'ಭೂಮಿ ನಮ್ಮ ಪಾಠಶಾಲೆ ಪ್ರಕೃತಿ ತಾನೆ ಗುರುವು', 'ಹಲವು ಬಗೆಯ ಹಲಸುಬಿಡಿಸಿದಾಗ', 'ತೆಂಗಿನ ಹಣ್ಣು ತೆರೆಯಲಿ ನಮ್ಮ ಕಣ್ಣು', ಎಂಬ ಕೃಷಿ ಸಾಹಿತ್ಯ, 'ಕುಂಕುಮದಿಂದ ಕ್ರಾಂತಿ', 'ನಾವೆಲ್ಲ ಪ್ರಬುದ್ಧರಾಗುವುದು ಯಾವಾಗ', 'ಇಂದ್ರಪ್ರಸ್ಥದೊಳಗೊಂದು ಸುತ್ತು', 'ಆಮಿಷಗಳ ಬೋನಿನೊಳಗೆ ಬೀಳಬೇಡ', 'ಅಡುಗೆಯ ಮೂಲಭೂತ ಸಿದ್ಧಾಂತಗಳು' ಎಂಬ ಕೃತಿಗಳನ್ನು ರಚಿಸಿದ್ದಾರೆ.

### ೪.೪.೪೮ ಶ್ರೀಧರ ಎಚ್. ಜಿ. (೧೯೬೩)

ಪ್ರಸ್ತುತ ಪುತ್ತೂರಿನ ವಿವೇಕಾನಂದ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿರುವ ಇವರು ಮೂಲತಃ ಶಿವಮೊಗ್ಗ ಜಿಲ್ಲೆ ಸಾಗರ ಸಮೀಪದ ಹಳ್ಳಿ ಮುಂಡಿಗೆ ಹಳ್ಳ ಊರಿನವರು. ಸಾಗರದ ಲಾಲ್‌ಬಹದ್ದೂರ್ ಶಾಸ್ತ್ರಿ ಕಾಲೇಜಿನಲ್ಲಿ ಪದವಿ, ಮೈಸೂರು ವಿಶ್ವವಿದ್ಯಾನಿಲಯದಿಂದ ಕನ್ನಡದಲ್ಲಿ ಎಂ.ಎ ಪದವಿ, ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀ ಇವರ ಮಾರ್ಗದರ್ಶನದಲ್ಲಿ "ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಯುದ್ಧಕಲೆ" ಎಂಬ ವಿಷಯದ ಮೇಲೆ ಸಲ್ಲಿಸಿದ ನಿಬಂಧಕ್ಕೆ ಮೈಸೂರು ವಿಶ್ವವಿದ್ಯಾನಿಲಯದಿಂದ ಡಾಕ್ಟರೇಟ್ ಪದವಿ ಲಭಿಸಿದೆ.

ಇವರ ಪ್ರಕಟಿತ ವಿಮರ್ಶಾ ಕೃತಿಗಳು 'ವಿನಾಯಕರ ಸಮುದ್ರಗೀತೆಗಳು– ಒಂದು ವಿಶ್ಲೇಷಣೆ'(1987), 'ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಯುದ್ಧಚಿತ್ರಗಳು'(2000), 'ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಯುದ್ಧಕಲೆ'(2002), 'ಪ್ರೋ. ಎಂ. ಮರಿಯಪ್ಪ ಭಟ್ಟ– ಜೀವನ ಸಾಧನೆ'(2011), 'ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಯುದ್ಧವರ್ಣನೆಗಳು'(2011).

ಇವರ ಸಂಪಾದಿತ ಕೃತಿಗಳು 'ಕರ್ಲಮಂಗಲಂ ಶ್ರೀಕಂಯ್ಯನವರ ಲೇಖನಗಳು'(1993), 'ಸಮರಸ' ಸಹಸಂಪಾದಕ, ಪ್ರೋ. ವಿ.ಬಿ. ಮೊಳೆಯಾರ ಅಭಿನಂದನ ಗ್ರಂಥ(1994), 'ವಾಹ' ನಾಟಕ(1995), 'ಕನ್ನಡ ರಾಮಾಯಣ ಗ್ರಂಥಸೂಚಿ– ಸಂಪಾದಕೀಯ ನೆರವು'(1998), 'ಕಾರಂತ ಸ್ಮರಣೆ'(200), 'ನವನಾಥ ಕಥಾ ಮತ್ತು ಚರ್ಪಟನಾಥ ಶತಕ'(2003), 'ಕಡವ ಶಂಭುಶರ್ಮ ಅನುವಾದಿಸಿದ ಕದಲೀ ಮಂಜುನಾಥ ಮಾಹಾತ್ಮ್ಯೆ ಗದ್ಯಾನುವಾದ'(2003), 'ಕಡವ ಶಂಭುಶರ್ಮರ ಶ್ರೀಮದ್ಭಗವದ್ಗೀತಾ'(2003), 'ಕಡವ ಶಂಭುಶರ್ಮರ ಕೃತಿ ಸಂಚಯ 1' (2003),'ಕಡವ ಶಂಭುಶರ್ಮರ ಕೃತಿ ಸಂಚಯ 2'(2006), 'ಕಡವ ಶಂಭುಶರ್ಮರ ಕೃತಿ ಸಂಚಯ 3'(2005), 'ಕಡವ ಶಂಭುಶರ್ಮರ ಕೃತಿ ಸಂಚಯ 4'(2008), 'ನೆಲದ ಬದುಕು' ಕೆ.ಟಿ. ಗಟ್ಟಿ ಅಭಿನಂದನ

ಗ್ರಂಥ(2009), 'ಭಾರತೀಸುತರ ಕಾದಂಬರಿಗಳು ಮತ್ತು ಸಾಮಾಜಿಕ ಸಂದರ್ಭ'(2910), 'ನೆಲ್ಯಾಡಿಯ ನಲ್ನುಡಿ'

ಇವರು ರಾಷ್ಟ್ರೀಯ ಮತ್ತು ರಾಜ್ಯಮಟ್ಟದ ವಿವಿಧ ಗೋಷ್ಠಿಗಳಲ್ಲಿ 80 ಕ್ಕಿಂತ ಹೆಚ್ಚು ಪ್ರಬಂಧ ಮಂಡನೆ ಮಾಡಿದ್ದಾರೆ. ಹಲವು ಸಂಶೋಧನಾ ಲೇಖನಗಳು ವಿವಿಧ ಸಂಚಿಕೆಗಳಲ್ಲಿ ಪ್ರಕಟವಾಗಿವೆ.

## ೪.೪.೪೯ ನರೇಂದ್ರ ರೈ ದೇರ್ಲ (೧೯೬೪)

ಪುತ್ತೂರಿನ ದೇರ್ಲದಲ್ಲಿ ೧೯೬೪ರಲ್ಲಿ ಜನಿಸಿದ ನರೇಂದ್ರ ರೈ ತಮ್ಮ ಪ್ರಾಥಮಿಕ ವಿದ್ಯಾಭ್ಯಾಸವನ್ನು ದೇರ್ಲದಲ್ಲಿ ಪಡೆದು, ಕೆಯ್ಯೂರಿನಲ್ಲಿ ಪ್ರೌಢಶಾಲಾ ಶಿಕ್ಷಣವನ್ನು, ಪುತ್ತೂರು ಜೂನಿಯರ್ ಕಾಲೇಜಿನಲ್ಲಿ ಪಿ.ಯು.ಸಿ. ಮತ್ತು ಸಂತ ಫಿಲೋಮಿನಾ ಕಾಲೇಜಿನಲ್ಲಿ ಕಾಲೇಜು ಶಿಕ್ಷಣವನ್ನು ಪೂರೈಸಿ, ಎಂ.ಎ. ಮತ್ತು ಎಂ.ಫಿಲ್. ಪದವಿಯನ್ನು ಮದ್ರಾಸು ವಿಶ್ವವಿದ್ಯಾಲಯದಿಂದ ಪಡೆದರು. ನಂತರ ಮಂಗಳೂರು ವಿಶ್ವವಿದ್ಯಾನಿಲಯದಿಂದ ಪಿ.ಎಚ್.ಡಿ ಪದವಿಯನ್ನು ಪಡೆದರು.

೧೯೯೦ರಿಂದ ೧೯೯೭ರ ವರೆಗೆ ತರಂಗ ವಾರಪತ್ರಿಕೆಯ ಉಪಸಂಪಾದಕರಾಗಿ ಕಾರ್ಯ ನಿರ್ವಹಿಸಿದರು. ೧೯೯೭ರಲ್ಲಿ ಸರಕಾರಿ ಪ್ರಥಮ ದರ್ಜೆ ಕಾಲೇಜಿಗೆ ಪ್ರಾಧ್ಯಾಪಕರಾಗಿ ನೇಮಕಗೊಂಡು ಹಲವು ಸರಕಾರಿ ಕಾಲೇಜುಗಳಲ್ಲಿ ಸೇವೆ ಸಲ್ಲಿಸಿ, ಪ್ರಸ್ತುತ ಬೆಳ್ಳಾರೆ ಪ್ರಥಮ ದರ್ಜೆ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ಇವರು ಬರೆಯುವ ಅಂಕಣಗಳು, ವಿಜಯ ವಾಣಿಯಲ್ಲಿ 'ಹಸಿರು–ಹುಸಿರು', ಪ್ರಜಾವಾಣಿಯಲ್ಲಿ 'ಅಜ್ಜನ–ಜಗಲಿ', ವಾರ್ತಾ ಭಾರತಿಯಲ್ಲಿ 'ಸನ್ಮಯ', ವಾರೆಕೊರೆಯಲ್ಲಿ 'ಮಣ್ಣು–ಮಸಿ'. ಇವರು ಬರೆದ 'ಇದು ನೀರಿನ ಊರಿನ ಕಥೆ' ಲೇಖನ ಉದಯವಾಣಿಯಲ್ಲಿ ಪ್ರಕಟವಾಗಿದ್ದು, ಇದಕ್ಕೆ ಫಾ.ಗೋ. ಪ್ರಶಸ್ತಿ ಲಭಿಸಿದೆ. ಕರ್ನಾಟಕ ರಾಜ್ಯದ ೭ನೇ ತರಗತಿಗೆ ಇವರು ಬರೆದ 'ಹಳ್ಳಿ ಮನೆ ಆಶ್ರಮವಾಗಲಿ' ಹಾಗೂ ಕೇರಳ ರಾಜ್ಯದ ೯ನೇ ತರಗತಿಗೆ 'ಗ್ರಾಮ ಪ್ರೀತಿ' ಲೇಖನಗಳು ಪಠ್ಯವಾಗಿವೆ. ಕುವೆಂಪು ವಿಶ್ವವಿದ್ಯಾ ನಿಲಯದ ಪ್ರಥಮ ಬಿ.ಬಿ.ಯಂ. ತರಗತಿಗೆ 'ಶೇಖಡಿ ರಾಮಚಂದ್ರ ರಾವ್ ಬದುಕು ಬರಹ' ಮತ್ತು ದ್ವಿತೀಯ ಬಿ.ಬಿ.ಯಂ ತರಗತಿಗೆ 'ನಿಧಿಯ ಕೃಷಿ–ಖುಷಿ' ಎಂಬ ಇವರು ಬರೆದ ಪುಸ್ತಕಗಳು ಪಠ್ಯಗಳಾಗಿವೆ.

ನರೇಂದ್ರ ರೈ ಬರೆದ ಪುಸ್ತಕಗಳು 'ತೊದಲು', 'ಕಾಂಕ್ರೀಟ್ ಕಾಡಿನ ಪುಟ್ಟ ಕಿಟಕಿ', 'ಎಂಟು ಲೋಕ', 'ಬೊಗಸೆ ತುಂಬಾ ಬೀಜ', 'ಬೆಳ್ಳಿ ಗುರುತು', 'ಹೊನ್ನಯ್ಯ ಶೆಟ್ಟಿ ಬದುಕು–ಬರಹ', 'ವಿಶು ಕುಮಾರ್ ಬದುಕು–ಬರಹ', 'ಡಾ. ಮೋಹನ ಆಳ್ವ', 'ಇದೂ ಪತ್ರಿಕೋದ್ಯಮ', 'ಕನ್ನಡದಲ್ಲಿ ಬೇಟೆ

ಸಾಹಿತ್ಯ', 'ನೆಲದವರು', 'ಸಾವಯವ ಕೃಷಿ', 'ಬೇಟೆ ಪ್ರಭುತ್ವದಿಂದ ಪ್ರಜಾಪ್ರಭುತ್ವದೆಡೆಗೆ', 'ತೇಜಸ್ವಿಯೊಳಗೊಬ್ಬ ಕಲಾವಿದ', 'ಕೃಷಿ ದೇಸೀ ಚಿಂತನೆ' ಮತ್ತು 'ಹಸಿರು ಕೃಷಿಯ ನಿಟ್ಟುಸಿರುಗಳು'.

### ೪.೪.೫೦ ವರದರಾಜ ಚಂದ್ರಗಿರಿ (೧೯೬೪)

ಪ್ರಸ್ತುತ ಬೆಟ್ಟಂಪಾಡಿ ಸರಕಾರಿ ಪ್ರಥಮ ದರ್ಜೆ ಕಾಲೇಜಿನ ಪ್ರಭಾರ ಪ್ರಾಂಶುಪಾಲರಾಗಿರುವ ಇವರು ಕಲ್ಲಿಕೋಟೆ ವಿಶ್ವವಿದ್ಯಾಲಯದಿಂದ ಎಂ.ಎ ಹಾಗೂ ಮಧುರೈ ಕಾಮರಾಜ ವಿಶ್ವವಿದ್ಯಾಲಯದಿಂದ ಎಂ.ಫಿಲ್ ಪದವಿಯನ್ನು ಪಡೆದು, ಮುಂಬಯಿ ವಿಶ್ವವಿದ್ಯಾಲಯದಿಂದ ಡಾ. ತಾಳ್ತಜೆ ವಸಂತಕುಮಾರ್ ಅವರ ಮಾರ್ಗದರ್ಶನದಲ್ಲಿ 'ಕನ್ನಡ ಕಾದಂಬರಿ– ಆಶಯ ಮತ್ತು ಆಕೃತಿ' ಎಂಬ ವಿಷಯವಾಗಿ ಪಿ.ಹೆಚ್.ಡಿ. ಪದವಿಯನ್ನು ಪಡೆದಿದ್ದಾರೆ. ಇವರ ಪ್ರಕಟಿತ ವಿಮರ್ಶಾ ಲೇಖನಗಳ ಸಂಕಲನ 'ಅರಿವು ಬೆರಗು'೨೦೦೮ ರಲ್ಲಿ ಪ್ರಕಟವಾಗಿದೆ. ಇವರ ಇತರ ಕೃತಿಗಳು 'ತಪ್ತ' (೨೦೦೯), 'ಅಸ್ತ್ರ' (೨೦೦೯), 'ಕೆಂಡ' (೨೦೦೯), 'ಮೌನಗರ್ಭ' (೨೦೧೦), 'ಸೃಷ್ಟಿ' (೨೦೧೦), 'ದಡ' (೨೦೧೧), 'ಓಟ' (೨೦೧೨). ಪುತ್ತೂರು ತಾಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿಯೂ ಇವರು ಸೇವೆ ಸಲ್ಲಿಸುತ್ತಿದ್ದಾರೆ.

### ೪.೪.೫೧ ಗಂಗಾಧರ ಬೆಳ್ಳಾರೆ (೧೯೬೫)

ಇವರು ಪುತ್ತೂರಿನ ಬೆಳ್ಳಾರೆಯಲ್ಲಿ ೧೯೬೫ ರಂದು ಜನಿಸಿದರು. ಪ್ರಾಥಮಿಕ ಹಾಗೂ ಪ್ರೌಢ ಶಾಲಾ ಶಿಕ್ಷಣವನ್ನು ಬೆಳ್ಳಾರೆಯಲ್ಲಿ ಪಡೆದು, ಐ.ಸಿ.ಟಿ.ಎ (ಇನ್‌ಸ್ಟಿಟ್ಯೂಟ್ ಫಾರ್ ಕೌನ್ಸೆಲಿಂಗ್ ಎಂಡ್ ಟ್ರಾನ್ಸಾಕ್ಷನಲ್ ಅನಲಿಸಿಸ್) ಕೊಚ್ಚಿನ್ ಮತ್ತು ಕೇರಳದಲ್ಲಿ, ಟಿ.ಎ.ಸೈಕಾಲಜಿ, ಗೆಸ್ಟಾಲ್ಟ್ ಥೆರಪಿ, ಎನ್.ಎಲ್.ಪಿ. ಹಾಗೂ ಕೌನ್ಸೆಲಿಂಗ್ ತರಬೇತಿಯನ್ನೂ ಪಡೆದರು.

ಮೀನಗುಂಡಿ ಸುಬ್ರಮಣ್ಯಂ ಅವರಿಂದ ಸೈಕೋಥೆರಪಿ, ಗ್ರೂಪ್ ಕೌನ್ಸೆಲಿಂಗ್, ಕ್ಲಿನಿಕಲ್ ಹಿಪ್ನೋಸಿಸ್ ತರಬೇತಿಯನ್ನು ಪಡೆದರು. ಸ್ಕೋಪ್ ಸ್ವವಿಕಾಸ ಕೇಂದ್ರ ಎಂಬ ಕೌನ್ಸೆಲಿಂಗ್ ಸೆಂಟರ್‌ನ ಮೂಲಕ ಕಳೆದ ೧೮ ವರ್ಷಗಳಿಂದ 'ವರ್ತನಾ ಚಿಕಿತ್ಸೆ' ಅಥವಾ 'ಮಾತು ಚಿಕಿತ್ಸೆ' ನೀಡುತ್ತಿರುವ ಅನುಭವ ಇವರದು. ಯಕ್ಷಗಾನ, ನಾಟಕ, ನೃತ್ಯರೂಪಕಗಳಲ್ಲಿ ಕಲಾವಿದನಾಗಿಯೂ ಕೆಲಸ ಮಾಡಿದ್ದಾರೆ.

ಇವರು ಬರೆದ ಕೃತಿಗಳು 'ಚಿಲಿಪಿಲಿ'(ಮಕ್ಕಳ ಅಂಕಣ ಬರಹಗಳು), 'ಗಾಜಿನ ತೇರು'(ಕಥಾ ಸಂಕಲನ), 'ತಬ್ಬಲಿಯು ನೀನಲ್ಲ ಮಗಳೆ'(ಕೌನ್ಸೆಲಿಂಗ್ ಕಥೆಗಳು), 'ಕಲಿಕೆ ಹಾದಿಯ ಮಗು'(ಕಿರು

ಲೇಖನಗಳು), 'ಕನಸು ಹೆಕ್ಕುವ ಮನಸು'(ಮಕ್ಕಳ ಮನೋವಿಕಾಸ ಕೈಪಿಡಿ), 'ನೆನಪಿಗೊಂದು ಕೌನ್ಸೆಲಿಂಗ್'(ವರ್ತನಾ ವಿಮರ್ಶೆಯ ನೈಜ ಕಥಾಗುಚ್ಛ), 'ಇವರು ನೀವಲ್ಲ'(ವರ್ತನಾ ವಿಶ್ಲೇಷಣೆಗೆ ವಾಸ್ತವ ಕತೆಗಳು).

### ೪.೪.೫೨ ಉದಯ ಗೌರಿ (೧೯೬೯)

ಉದಯ ಗೌರಿ ಇವರು ಪುತ್ತೂರು ತಾಲೂಕಿನ ಕೊಳ್ತಿಗೆ ಗ್ರಾಮದ ಕೊರ್ಬಂಡ್ಕ ಎಂಬಲ್ಲಿ ೧೯೬೯ರಲ್ಲಿ ಜನಿಸಿದರು. ಇವರ ಪ್ರಾಥಮಿಕ ಶಿಕ್ಷಣ ಈಶ್ವರಮಂಗಲದ ಶಾಲೆಯಲ್ಲಾಯಿತು. ಪದವಿಪೂರ್ವ ಶಿಕ್ಷಣ ಪೆರ್ನಾಜೆಯ ಶ್ರೀಸೀತಾರಾಘವ ಪದವಿಪೂರ್ವ ಮಹಾವಿದ್ಯಾಲಯ ದಲ್ಲಾಯಿತು. ಪದವಿ ಶಿಕ್ಷಣ ಪುತ್ತೂರಿನಲ್ಲಾಯಿತು. ನಂತರ ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಎಂ.ಎ ಪದವಿ ಗಳಿಸಿದರು. ಪೆರ್ನಾಜೆಯ ಸೀತಾರಾಘವ ಹಿ.ಪ್ರಾ.ಶಾಲೆಯಲ್ಲಿ ಶಿಕ್ಷಕಿಯಾಗಿ ವೃತ್ತಿಜೀವನ ಆರಂಭಿಸಿದರು. ನಂತರ ಪುತ್ತೂರಿನ ಕೆಮ್ಮಿಂಜೆ ಹೆಣ್ಣುಮಕ್ಕಳ ಪ್ರೌಢಶಾಲೆಯಲ್ಲಿ ಶಿಕ್ಷಕಿಯಾಗಿ ಸೇವೆ ಮುಂದುವರಿಸಿದರು. ಇವರು ಬಾಲ್ಯದಲ್ಲೇ ತ್ರಿವೇಣಿ, ಎಂ.ಕೆ ಇಂದಿರಾ ಅವರುಗಳ ಕೃತಿಗಳನ್ನು ಓದುತ್ತಿದ್ದರು. ಪಿ.ಯು.ಸಿಗೆ ಬಂದಾಗ ಕಥೆ, ಕಾದಂಬರಿ ಬರೆಯತೊಡಗಿದು. ಹೆಸರು ಕೊಡದೆ ವಾಗ್ದೇವಿ ಹೆಸರಿನಲ್ಲಿ 'ಮಂಗಳ' ಪತ್ರಿಕೆಯಲ್ಲಿ ಇವರ ಮೊದಲ ಕಥೆ ಪ್ರಕಟವಾಯಿತು. ಹಂಸರಾಗ, ನವರಾಗಸಂಗಮ ಪತ್ರಿಕೆಯಲ್ಲಿ ಇವರ ೮ ಕಾದಂಬರಿಗಳು ಪ್ರಕಟವಾಗಿವೆ. ಮಕ್ಕಳಿಗಾಗಿ ಇವರು 'ಹೂಮನ' ಮಾಸಪತ್ರಿಕೆಯನ್ನು ಆರಂಭಿಸಿದ್ದಾರೆ.

ಇವರ ಪ್ರಕಟಿತ ಕಾದಂಬರಿಗಳು 'ಕ್ಷಮಯಾ ಧರಿತ್ರಿ', 'ಸುಖದ ಸ್ವಪ್ನಗಾನ', 'ಮುಂಗಾರಿನ ಅಭಿಷೇಕ', 'ಮೋಡದ ಮರೆಯ ಚಂದ್ರಮ', 'ಮಂಗಳಾಕ್ಷತೆ', 'ಒಲುಮೆಯ ಹೂ', 'ಸರಯೂ' ಮತ್ತು 'ಭವತಾರಿಣಿ'.

### ೪.೪.೫೩ ಅಜಕ್ಕಳ ಗಿರೀಶ ಭಟ್ಟ(೧೯೭೦)

ಪುತ್ತೂರಿನ ತಾಲೂಕಿನ ಅಜಕ್ಕಳ ಎಂಬಲ್ಲಿ ೯.೯.೧೯೭೦ರಲ್ಲಿ ಕೃಷಿಕ ಮನೆತನದಲ್ಲಿ ಇವರ ಜನನ. ಪ್ರಾಥಮಿಕ ವಿದ್ಯಾಭ್ಯಾಸ ಸ್ಥಳೀಯ ಶಾಲೆಯಲ್ಲಿ ನಡೆದು, ಕಾಲೇಜು ವಿದ್ಯಾಭ್ಯಾಸ ಸಂತ ಫಿಲೋಮಿನಾ ಕಾಲೇಜಿನಲ್ಲಿ. ಕನ್ನಡ ಹಾಗೂ ಇಂಗ್ಲೀಷ್ ಎಂ.ಎ ಪದವಿ ಪಡೆದ ಇವರು ೧೯೯೩ರಲ್ಲಿ ಬದ್ರಿಯಾ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕನಾಗಿ ವೃತ್ತಿ ಜೀವನ ಪ್ರಾರಂಭಿಸಿದರು. ೧೯೯೪ ರಿಂದ೧೯೯೬ರ ವರೆಗೆ ಫೀಲ್ಡ್ ಮಾರ್ಷಲ್ ಕಾರ್ಯಪ್ಪ ಕಾಲೇಜು, ಮಡಿಕೇರಿಯಲ್ಲಿ ಸೇವೆ

ಸಲ್ಲಿಸಿ, ೧೯೯೬ರಿಂದ ೨೦೦೪ರ ವರೆಗೆ ಸರಕಾರಿ ಪ್ರಥಮ ದರ್ಜೆ ಕಾಲೇಜು ವಾಮನಪದವು ಹಾಗೂ ೨೦೦೪ರಿಂದ ೨೦೦೯ರ ವರೆಗೆ ಸರಕಾರಿ ಪ್ರಥಮ ದರ್ಜೆ ಕಾಲೇಜು ವಿಟ್ಲದಲ್ಲಿ ಉಪನ್ಯಾಸಕನಾಗಿ ಪ್ರಸ್ತುತ ಸರಕಾರಿ ಪ್ರಥಮ ದರ್ಜೆ ಕಾಲೇಜು ಬಂಟ್ವಾಳದಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಇವರ ಪ್ರಮುಖ ಕೃತಿಗಳು 'ಇಂಗ್ಲಿಷನ್ನು ಪಳಗಿಸೋಣ', 'ಬುದ್ಧಿಜೀವಿ ವರ್ಸಸ್ ಭೌದ್ಧಿಕ ಸ್ವಾತಂತ್ರ್ಯ', 'ಕನ್ನಡಕ್ಕೇಕೆ ಶಮ್ಮರ ಭಟ್ಟರ ಕತ್ತರಿ?', 'ತುಳು ಭಾಷಾ ಜ್ಞಾನ ಮತ್ತು ಭಾಸ್ಜಹಾ ಬಳಕೆ', 'ಅಗೆ ಬಗೆ', 'ಅಗ್ನಿ ರಸ', 'ಕವಲು:ಕಲೆ ಮತ್ತು ಕಾಳಜಿ'(ಸಂಪಾದಿತ), 'ಅಣುವೇ ಅಸ್ತ್ರವೇ?'(ಸಂಪಾದಿತ), 'ನುಡಿಗಡಲು' (ಸಂಪಾದಿತ), 'ಕಬಿತ'(ಸಂಪಾದಿತ). ಇದಲ್ಲದೆ ಹಲವು ರಾಷ್ಟ್ರೀಯ ವಿಚಾರ ಸಂಕಿರಣಗಳಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ ಇವರು ಭಾಗವಹಿಸಿದ್ದಾರೆ.

### ೪.೫.೦. ಪುತ್ತೂರಿನ ಸಾಹಿತ್ಯಿಕ ಪರಿಸರ :

ಪುತ್ತೂರಿನ ಸಾಹಿತಿಗಳಲ್ಲಿ ಪ್ರಮುಖವಾಗಿ ಮೊದಲು ಸಿಗುವ ಸಾಹಿತಿ ಮೊಳಹಳ್ಳಿ ಶಿವರಾಮ್. ೧೯೦೦ರ ಪ್ರಾರಂಭದಲ್ಲಿಯೇ ಇವರು ಸಾಹಿತ್ಯ ಬರವಣಿಗೆಯಲ್ಲಿ ತೊಡಗಿರುವುದನ್ನು ಗಮನಿಸಬಹುದು. ಇವರ ನಂತರ ಬಡೆಕ್ಕಿಲ ವೆಂಕಟರಮಣ ಭಟ್ಟ, ಮೊಳಹಳ್ಳಿ ಶಿವರಾಮ್, ಮುಳಿಯ ತಿಮ್ಮಪ್ಪಯ್ಯ, ಕಡವ ಶಂಬುಶರ್ಮ, ಮುಳಿಯ ಶಂಕರ ಭಟ್ಟ, ಉಗ್ರಾಣ ಮಂಗೇಶರಾಯರು, ಸೇಡಿಯಾಪು ಕೃಷ್ಣ ಭಟ್, ಮುಂತಾದವರು ಪುತ್ತೂರಿನ ಹಿರಿಯ ತಲೆಮಾರಿನ ಸಾಹಿತಿಗಳಾಗಿ ಕಾಣ ಸಿಗುತ್ತಾರೆ. ಇವರ ಸಮಯದಲ್ಲಿ ಛಂದಸ್ಸು, ವ್ಯಾಕರಣಗಳಿಗೆ ಪ್ರಾಮುಖ್ಯತೆ ದೊರೆತಿದ್ದು, ಗಾಂಧೀಜಿ ಯವರ ಭೋಧನೆಗಳ ಪ್ರಭಾವವೂ ಇವರ ಸಾಹಿತ್ಯದ ಮೇಲೆ ಆಗಿರುವುದನ್ನು ಗಮನಿಸಬಹುದು.

ಶಿವರಾಮ ಕಾರಂತರು ತಮ್ಮ ಜನ್ಮಸ್ಥಳ ಕುಂದಾಪುರವಾದರೂ ಪುತ್ತೂರನ್ನು ಕಾರ್ಯಕ್ಷೇತ್ರವನ್ನಾಗಿ ಮಾಡಿ ಇಲ್ಲೇ ಇದ್ದು ಸಮೃದ್ದ ಸಾಹಿತ್ಯ ರಚಿಸಿ, ಜ್ಞಾನಪೀಠದಂತಹ ಉನ್ನತ ಪ್ರಶಸ್ತಿಗಳನ್ನು ಗಳಿಸಿ ಪ್ರಸಿದ್ಧರಾಗಿದ್ದಾರೆ. ಅವರೇ ಹೇಳುವಂತೆ 'ಪುತ್ತೂರು ತಾಲೂಕಿನ ಅನೇಕ ಗ್ರಾಮಗಳನ್ನು, ಮೂಲೆಗಳನ್ನು, ಉದ್ದೇಶಪಟ್ಟೋ, ಪಡದೆಯೋ ಅಲೆದಾಡಿದವನು ನಾನು'[೨]. ಹೀಗೆ ಸುತ್ತಾಡಿದ ಕಾರಂತರು ತಮ್ಮ ಅನೇಕ ಕಾದಂಬರಿಗಳಲ್ಲಿ ಪುತ್ತೂರಿನ ಪರಿಸರವನ್ನು ಕುರಿತು ವರ್ಣಿಸಿದ್ದಾರೆ. ಇಲ್ಲಿನ ಪರಿಸ್ಥಿತಿಯ ಕುರಿತು ಬರೆದಿದ್ದಾರೆ.

ಎಂ. ಮರಿಯಪ್ಪ ಭಟ್ಟ, ತಾಳ್ತಜೆ ವಸಂತಕುಮಾರ್, ಶ್ರೀಕೃಷ್ಣ ಭಟ್ ಅರ್ತಿಕಜೆ ಮುಂತಾದವರು ಪುತ್ತೂರಿನವರಾಗಿದ್ದು, ಹೊರ ರಾಜ್ಯಗಳಿಗೆ ಕಾರ್ಯ ನಿಮಿತ್ತ ಹೋಗಿ, ಅಲ್ಲಿ ಕನ್ನಡ ಸಾಹಿತ್ಯ ರಚಿಸಿ, ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ.

ಪಿ. ಕೆ. ನಾರಾಯಣ, ಕುದ್ಕಾಡಿ ವಿಶ್ವನಾಥ ರೈ, ಮುಂತಾದವರು ಯಕ್ಷಗಾನ ಕ್ಷೇತ್ರದಲ್ಲಿ ತಮ್ಮ ಬರವಣಿಗೆಯನ್ನು ಹೆಚ್ಚಾಗಿ ಪ್ರಯೋಗಿಸಿ ಯಕ್ಷಗಾನದ ಬೆಳವಣಿಗೆಗೆ ಕಾರಣರಾಗಿದ್ದಾರೆ. ಎನ್. ಸುಬ್ರಮಣ್ಯ ಕೊಳತ್ತಾಯ, ಬಿ. ಪುರಂದರ ಭಟ್ ಮುಂತಾದವರು ವೃತ್ತಿಯಲ್ಲಿ ವಕೀಲರಾದರೂ ಸಾಹಿತ್ಯಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಅಬ್ದುಲ್ ರಹಿಮಾನ್ ಅರಸಳಿಕೆ, ಬೊಳುವಾರು ಮಹಮ್ಮದ್ ಕುಂಞಿ ಮುಂತಾದ ಮುಸ್ಲಿಂ ಸಾಹಿತಿಗಳೂ ಕನ್ನಡ ಸಾಹಿತ್ಯಕ್ಕಾಗಿ ದುಡಿದು ಕನ್ನಡ ಸಾಹಿತ್ಯವನ್ನು ಶ್ರೀಮಂತ ಗೊಳಿಸಿದ್ದಾರೆ.

ಪಾಲ್ತಾಡಿ ರಾಮಕೃಷ್ಣ ಆಚಾರ್ ಮುಂತಾದವರು ತುಳು ಸಾಹಿತ್ಯದೊಂದಿಗೆ ಕನ್ನಡ ಸಾಹಿತ್ಯದಲ್ಲೂ ದುಡಿದ್ದಿದ್ದಾರೆ. ಹರಿನಾರಾಯಣ ಮಾಡಾವು, ನರೇಂದ್ರ ರೈ ದೇರ್ಲ ಮುಂತಾದವರು ಪ್ರಸ್ತುತ ಪ್ರಸಿದ್ಧಿಗೆ ಬರುತ್ತಿದ್ದಾರೆ. ಇವರೊಂದಿಗೆ ಯುವ ಸಾಹಿತಿಗಳೂ ಪುತ್ತೂರಿನಲ್ಲಿ ಇದ್ದು, ಇಲ್ಲಿನ ಸಾಹಿತ್ಯ ಪರಿಸರ ಮುಂದುವರೆಸುತ್ತಿದ್ದರೆ.

ಪುತ್ತೂರಿನಲ್ಲಿ ಕರಾವಳಿ ಲೇಖಕಿಯರ ಮತ್ತು ವಾಚಿಕೆಯರ ಸಂಘ ಇದ್ದು, ಎ. ಪಿ. ಮಾಲತಿ ಯಂತಹ ಮಹಿಳಾ ಸಾಹಿತಿಗಳೂ ಇಲ್ಲಿದ್ದು, ಗ್ರಾಮೀಣ ಮಹಿಳೆಯರ ಸ್ಥಿತಿಗತಿಗಳ ಕುರಿತಾಗಿ ಸಾಹಿತ್ಯ ರಚನೆ ಮಾಡಿ ಜನರ ಮನಸ್ಸು ಗೆದ್ದಿದ್ದಾರೆ. ಹೀಗೆ ಪುತ್ತೂರಿನ ಸಾಹಿತ್ಯ ಪರಿಸರವು ಶ್ರೀಮಂತವಾಗಿದೆ.

## ಅಡಿ ಟಿಪ್ಪಣಿ

೧. ಪುತ್ತೂರು ತಾಲೂಕು ಇತಿಹಾಸ ದರ್ಪಣ. ಪೀಟರ್ ವಿಲ್ಸನ್ ಪ್ರಭಾಕರ್, ವಿಘ್ನೇಶ್ವರ ವರ್ಮುಡಿ – ಪುಟ ೯೭

೨. ಅದೇ – ಪುಟ ೯೭

೩. ಪುತ್ತೂರಿನಲ್ಲಿ ಮಕ್ಕಳ ಸಾಹಿತ್ಯ ಒಂದು ಚಿಂತನೆ (ನವಮಿ) ನಾರಾಯಣ ರೈ ಕುಕ್ಕುವಳ್ಳಿ – ಪುಟ ೬೬

೪. ಜಿ. ಎನ್. ಲಕ್ಷ್ಮಣ ಪೈ – ಬದುಕು ಬರಹ – ಜಿ. ವರದರಾಜ ಪೈ – ಪುಟ ೯

೫. ಪುತ್ತೂರು ತಾಲೂಕು ಇತಿಹಾಸ ದರ್ಪಣ. ಪೀಟರ್ ವಿಲ್ಸನ್ ಪ್ರಭಾಕರ್, ವಿಘ್ನೇಶ್ವರ ವರ್ಮುಡಿ – ಪುಟ ೯೯

೬. ಪುತ್ತೂರಿನಲ್ಲಿ ಮಕ್ಕಳ ಸಾಹಿತ್ಯ ಒಂದು ಚಿಂತನೆ (ನವಮಿ) ನಾರಾಯಣ ರೈ ಕುಕ್ಕುವಳ್ಳಿ – ಪುಟ ೭೧

೭. ಅಭಿಮಾನ – ಲೇ: ಬಿ. ಲೀಲಾ ಭಟ್ ಪುಟ ೨೯

೮. ಉಗ್ರಾಣ ಮಂಗೇಶರಾವ್ ಬಿ. ಲೀಲಾ ಭಟ್ – ಪುಟ ೩೧

೯. ಮೊಳಹಳ್ಳಿ ಶಿವರಾಮ್, ಲೇ. ಪೆರಾಜೆ ಶ್ರೀನಿವಾಸ ರಾವ್ ಪುಟ ೨೫೮

೧೦. ಅಭಿಮಾನ ಲೇ. ಅಮೃತ ಸೋಮೇಶ್ವರ

೧೧. ಅಭಿಮಾನ ಮುಳಿಯ ತಿಮ್ಮಪ್ಪಯ್ಯ ಲೇ : ಬಡೆಕ್ಕಿಲ ಕೃಷ್ಣ ಭಟ್

೧೨. ಮುಳಿಯ ಶಂಕರ ಭಟ್ಟ, ಲೇ. ಗಂಗಾ ಪಾದೇಕಲ್ ಪುಟ ೬೭

೧೩. ಅಭಿಮಾನ ಪುಟ ೨೪ ಕಡವ ಶಂಭುಶರ್ಮ. ಲೇ, ವಿ.ಬಿ.ಮೊಳೆಯಾರ

೧೪. ಸೇಡಿಯಾಪು (ಲೇ) – ಪಾದೆಕಲ್ಲು ವಿಷ್ಣಭಟ್ – ಪುಟ ೧೬

೧೫. ಸೇಡಿಯಾಪು (ಲೇ.) ಪಾದೆಕಲ್ಲು ವಿಷ್ಣುಭಟ್ – ಪುಟ ೧೭

೧೬. ಸೇಡಿಯಾಪು (ಲೇ.) ಪಾದೆಕಲ್ಲು ವಿಷ್ಣುಭಟ್ – ಪುಟ ೩೫

೧೭. ಸೇಡಿಯಾಪು ಕಲೆಗಾರರಾಗಿ (ಲೇ.) ಪಾದೆಕಲ್ಲು ವಿಷ್ಣುಭಟ್ – ಪುಟ ೩೯

೧೮. ಅಭಿಮಾನ ಎ.ಪಿ. ಸುಬ್ಬಯ್ಯ ಲೇ.ಜಿ.ಟಿ. ನಾರಾಯಣ ರಾವ್ ಪುಟ ೮೨

೧೯. ಅಭಿಮಾನ – ಲೇ: ಕೃಷ್ಣಮೂರ್ತಿ ನಿಟಿಲಾಪುರ ಪುಟ ೧೮೫

೨೦. ಅಭಿಮಾನ ಲೇ. ಕೃಷ್ಣಮೂರ್ತಿ ನಿಟಿಲಾಪುರ ಪುಟ ೧೮೭

೨೧. ಸಾರ್ಥಕ, ಪ್ರೊ. ಮರಿಯಪ್ಪ ಭಟ್ ನಡೆದು ಬಂದ ದಾರಿ – ಲೇ: ಶ್ರೀ ಕೃಷ್ಣ ಭಟ್

೨೨. ಅಭಿಮಾನ ಲೇ. ಹರಿನಾರಾಯಣ ಮಾಡಾವು ಪುಟ ೩೩

೨೩. ಜಿ.ಎನ್. ಲಕ್ಷ್ಮಣ ಪೈಯವರ ಬದುಕು–ಬರಹ, ಲೇ – ಶ್ರೀ ಜಿ. ವರದರಾಜ ಪೈ

೨೪. ಅಭಿಮಾನ, ಅಬ್ದುಲ್ ರಹಿಮಾನ್ ಲೇ. ಪಾದೆಕಲ್ಲು ವಿಷ್ಣುಭಟ್

೨೫. ಕೆದಂಬಾಡಿ ಕೇದಗೆ – ಲೇ. ನಾರಾಯಣ ರೈ ಕುಕ್ಕುವಳ್ಳಿ

೨೬. ಸ್ಮೃತಿ ಪಟಲದಿಂದ. ಸಂಪುಟ–೨ ಶಿವರಾಮ ಕಾರಂತ. ಪುಟ–೪೯

# ಅಧ್ಯಾಯ – ೫

# ಜಾನಪದ

೫.೧. ಜನಪದ ಸಾಹಿತ್ಯ (ಕನ್ನಡ, ಕೊಂಕಣಿ, ತುಳು, ಬ್ಯಾರಿ)

೫.೨. ಪ್ರದರ್ಶನ ಕಲೆಗಳು (ಯಕ್ಷಗಾನ, ತಾಳಮದ್ದಳೆ, ಕುಣಿತ)

೫.೩. ಜನಪದ ಕುಣಿತಗಳು

೫.೪. ಜನಪದ ಪರಿಕರಗಳು (ಗೃಹ, ವಾದ್ಯ, ಕೃಷಿ)

೫.೫. ಹಬ್ಬಗಳು

೫.೬. ಜನಪದ ಐತಿಹ್ಯಗಳು

## ಅಧ್ಯಾಯ – ೫

# ಜಾನಪದ

### ೫.೧.೦. ಜನಪದ ಸಾಹಿತ್ಯ (ಕನ್ನಡ, ಕೊಂಕಣಿ, ತುಳು, ಬ್ಯಾರಿ) :

ಪುತ್ತೂರು ಎಂಬುದು ಭೌಗೋಳಿಕವಾಗಿ ಒಂದು ಪ್ರಾದೇಶಿಕ ಘಟಕದ ಹೆಸರು. ಶೈಕ್ಷಣಿಕ ಮತ್ತು ಆಡಳಿತ ಭಾಷೆಯಾಗಿ ಇಲ್ಲಿ ಕನ್ನಡವು ಪ್ರಧಾನವಾಗಿ ಬಳಕೆಯಾಗುತ್ತದೆಯಾದರೂ ಸಂಪರ್ಕ ಭಾಷೆಯಾಗಿ ತುಳು ಅತಿ ಪ್ರಮುಖ ಸ್ಥಾನವನ್ನು ಪಡೆದುಕೊಂಡಿದೆ. ತುಳು ಮಾತನಾಡುವ ಜನರಲ್ಲದೆ ಕೊಂಕಣಿಗರು, ಹವ್ಯಕರು, ಮುಸ್ಲಿಮರು, ಕ್ರೈಸ್ತರು, ಇಲ್ಲಿದ್ದು ತುಳು ಭಾಷೆ ಮತ್ತು ಸಂಸ್ಕೃತಿಯ ಜೊತೆಗೆ ಆಪ್ತವಾದ ಸಂಬಂಧವನ್ನು ಬೆಳೆಸಿಕೊಂಡಿದ್ದಾರೆ. ಹಾಗಾಗಿ ಈ ಪ್ರದೇಶ ಹಲವು ಜೀವನ ಕ್ರಮಗಳ ನೆಲೆ ಬೀಡಾಗಿದೆ. ಈ ಬಹುಮುಖೀ ಪರಂಪರೆಗಳ ಸಮೃದ್ಧಿಯನ್ನು ಈ ಪ್ರದೇಶದಲ್ಲಿ ವಿಶೇಷವಾಗಿ ಕಾಣಬಹುದು. ಈ ಹಿನ್ನೆಲೆಯಲ್ಲಿ ಈ ವಲಯದ ಜಾನಪದ ಅಧ್ಯಯನದ ಬಹುಮುಖೀ ನೆಲೆಗಳನ್ನು ಗುರುತಿಸಬಹುದು. ಇಲ್ಲಿ ತುಳು ಜಾನಪದದ ಅಧ್ಯಯನವು ವಿಶೇಷವಾಗಿ ನಡೆದಿದ್ದು ಹವ್ಯಕ ಮತ್ತು ಇತರ ಜನಪದ ಪರಂಪರೆಗಳ ಅಧ್ಯಯನ ಗಮನ ಸೆಳೆಯುವ ರೀತಿಯಲ್ಲಿ ಆಗಿಲ್ಲ. ಹವ್ಯಕರ ಶೋಭಾನೆಗಳು, ಮದುವೆ ಮತ್ತು ಕೊಡಿ ಸಂಪ್ರದಾಯಗಳು, ಮುಸ್ಲಿಮರ ಪಾಟ್ಟುಗಳು ಹೀಗೆ ಕೆಲವು ನಿರ್ದಿಷ್ಟ ಜನಪದ ಸಾಹಿತ್ಯದ ಕೆಲಸ ಬಿಟ್ಟರೆ ಉಳಿದಂತೆ ಯಾವುದೇ ಕೆಲಸಗಳು ಇಲ್ಲಿ ನಡೆಯಲಿಲ್ಲ.

### ೫.೧.೧ ಕನ್ನಡ ಜನಪದ ಸಾಹಿತ್ಯ:

ಪುತ್ತೂರಿನ ಪರಿಸರದಲ್ಲಿ ಹವ್ಯಕರು ಮಾತ್ರವೇ ಕನ್ನಡವನ್ನು ಮನೆಮಾತಾಗಿ ಮಾತನಾಡುತ್ತಿದ್ದು ಅವರ ಶೋಭಾನೆ ಹಾಡುಗಳನ್ನು ಕನ್ನಡದಲ್ಲಿ ಗಮನಿಸಬಹುದು. ಶೋಭಾನೆ ಹಾಡುಗಳನ್ನು ವಿವಿಧ ಸಂದರ್ಭದಲ್ಲಿ ಹಾಡುತ್ತಾರೆ. ಪ್ರಮುಖವಾಗಿ ಮಗುವನ್ನು ತೊಟ್ಟಿಲಲ್ಲಿ ಇಡುವ ಸಮಯದಲ್ಲಿ ಮದುವೆ ಸಮಯದಲ್ಲಿ ಶೋಭಾನೆ ಹಾಡುಗಳನ್ನು ಹಾಡುವುದು ಸಂಪ್ರದಾಯ. ಕನ್ನಡ ಜನಪದದಲ್ಲಿ ಅನೇಕ ಗಾದೆ ಮಾತುಗಳೂ ಇವೆ. ಸಂದರ್ಭಕ್ಕೆ ಅನುಗುಣವಾಗಿ ಮಾತನಾಡುವಾಗ ಗಾದೆ ಮಾತುಗಳನ್ನು ಬಳಸುತ್ತಾರೆ. ಉದಾಹರಣೆಗೆ ಒಬ್ಬನು ಸಂಪಾದನೆಗಿಂತ ಹೆಚ್ಚು ಖರ್ಚು ಮಾಡುತ್ತಿದ್ದರೆ ಅವನಿಗೆ 'ಹಾಸಿಗೆ ಇದ್ದಷ್ಟೇ ಕಾಲು ಚಾಚು' ಎಂದು ಬುದ್ಧಿ ಮಾತು ಹೇಳುತ್ತಾರೆ.

ಇಲ್ಲಿನ ಕನ್ನಡ ಜನಪದದಲ್ಲಿ ಕೆಲವು ಕಥೆಗಳು ಮತ್ತು ಒಗಟುಗಳೂ ಇವೆ. ಉದಾಹರಣೆಗೆ 'ಅಂಕು ಡೊಂಕು ಸಂಕ ಮಾಲೆ ಮೂರು ತಲೆ ಹತ್ತು ಕಾಲು' ಎಂದು ಹೇಳಿ ಅದರ

ಉತ್ತರವನ್ನು ಕೇಳುತ್ತಾರೆ. ಇಲ್ಲಿ ಕೃಷಿ ಪ್ರಧಾನ ಕಸುಬು ಆಗಿರುವುದರಿಂದ ಗದ್ದೆ ಉಳುವುದನ್ನು ಈ ಮೇಲಿನ ಒಗಟಿನಲ್ಲಿ ಹೇಳುತ್ತಾರೆ. ಹೀಗೆ ಪುತ್ತೂರಿನ ಕನ್ನಡ ಜನಪದದಲ್ಲಿ ಈ ಎಲ್ಲಾ ಅಂಶಗಳಿರುವುದನ್ನು ಗಮನಿಸಬಹುದು.

### ೫.೧.೨ ಕೊಂಕಣಿ ಜನಪದ ಸಾಹಿತ್ಯ :

ಪುತ್ತೂರಿನ ಪರಿಸರದಲ್ಲಿ ಕ್ಯಾಥೋಲಿಕ್ ಕ್ರೈಸ್ತರು ಮತ್ತು ಸಾರಸ್ವತರು ಕೊಂಕಣಿ ಭಾಷೆಯನ್ನು ಮಾತನಾಡುತ್ತಾರೆ. ಇವರಲ್ಲಿ ವಿಶಿಷ್ಟವಾದ ಜಾನಪದ ಸಾಹಿತ್ಯ ಇದೆ. ಕ್ರೈಸ್ತರ ಜನಜೀವನ, ಬದುಕು ವಿಭಿನ್ನ ಸಂಸ್ಕೃತಿಗಳ ಮಿಲನ, ಹಿರಿಯರ ಬಾಯಲ್ಲಿ ಇಂದಿಗೂ ಅಲ್ಪ ಸ್ವಲ್ಪ ಜೀವಂತವಿರುವ ಹಾಡು ಹಾಗೂ ಕತೆಗಳು ಕೇಳಲು ಸಿಗುತ್ತಿವೆ.

ಕ್ರೈಸ್ತರ ಮದುವೆಯ ಹಿಂದಿನ ದಿನ ಹೆಣ್ಣಿನ, ಗಂಡಿನ ಮುಗ್ಧತೆಯನ್ನು ತೊಳೆದಿಟ್ಟು ಸ್ತ್ರೀಯಾಗಿ, ಪುರುಷನಾಗಿ ಇನ್ನೊಂದು ಕುಟುಂಬವನ್ನು ಬೆಳಗಿಸಲೆಂದು ಎಣ್ಣೆ ಹಾಗೂ ತೆಂಗಿನ ಹಾಲಿನಿಂದ ಶುದ್ಧಗೊಳಿಸಿ ಬಿಸಿನೀರ ಸ್ನಾನವನ್ನು ಮಾಡಿಸುವ ಪದ್ಧತಿ. ಆ ಹೊತ್ತಿನಲ್ಲಿ ಹಿರಿಯ ಮುತ್ತೈದೆಯರ ಬಾಯಿಯಿಂದ ಜನಪದ ಹಾಡುಗಳ ಸುರಿಮಳೆ ಇದರಲ್ಲಿ ಒಂದು ಹಾಡು,

***'ಹಾಡ್ ಕುಂಬಾರ ಹಾಡ್ ಆಂವೆತು ಭಾಣ್ ಆಜ್ ನ್ಹಾತಾಂ ನಾಣ್ ವ್ಹಕಾಲ್ ವ್ಹೊರೆತ್ ಆಂಕ್ವಾರ್ ವೊಣ್'***

ತಾ ಕುಂಬಾರನೇ ತಾ ಕುಲುಮೆಯಲ್ಲಿ ಬೆಂದ ಹರಿಗೆಯನ್ನು ಇಂದು ಮೀಯ್ತಾನೆ(ಳೆ) ಸ್ನಾನ ಮದುಮಗ (ಮದುಮಗಳು) ಬ್ರಹ್ಮಚರ್ಯದ ಸ್ನಾನ. ನೆಂಟರಿಷ್ಟರು ಹಚ್ಚುವ ಆ ಅಪ್ಪಟ ಹಾಲಿನಷ್ಟು ಪರಿಶುದ್ಧವಾಗಿದೆ ಈ ಜನಪದ ಹಾಡಿನ ಸೊಬಗು. ಈ ಹಾಲನ್ನೆರೆಯುವ ಕಾರ್ಯಕ್ರಮ ಒಂದು ಎರಡು ಗಂಟೆಗಳಿಗೂ ಹೆಚ್ಚು ಸಮಯ ಮುಂದುವರಿಯುತ್ತದೆ. ಈ ಸಮಯದಲ್ಲಿ ವ್ಹೊವಿಯೊ ವೇರ್ಸ್ ಎಂಬ ಹಾಡುಗಳು ಹೊನಲಾಗಿ ಹರಿಯುತ್ತವೆ. ಈ ಹಾಡುಗಳು ಮದುಮಗ (ಮದುಮಗಳು)ನಿಗೆ ಬುದ್ಧಿವಾದ ಹೇಳುವ ರೀತಿಯಲ್ಲಿ, ಅವರ ಗುಣಗಾನ ಮಾಡುವ ರೀತಿಯಲ್ಲಿ ಇರುತ್ತವೆ.

ಈ ಕಾರ್ಯಕ್ರಮ ಮುಗಿದು ಊಟವಾದ ಬಳಿಕ ಗುಮ್ಟೆ ಹಾಡುಗಳ ಕಾರ್ಯಕ್ರಮ. ಆ ಹಾಡುಗಳು ಜನಪದದ ಸೊಗಡಿನೊಂದಿಗೆ ಬೈಬಲಿನ ಕಥೆಗಳನ್ನು ಹೇಳುತ್ತವೆ. ಆ ಹಾಡುಗಳಲ್ಲಿ ಧ್ವನಿತವಾಗುವ ಏರಿಳಿತ, ಆ ಧ್ವನಿಗೆ ಜೋಡಣೆಯಾದ ಪದ ಸಂಪತ್ತು, ಧ್ವನಿ ಏರಿಸಿ ಆಡುವ ಉಳಿದವರ ಸೊಂಟ ಕುಣಿತ ಇಡೀ ಮದುವೆಯ ಮಂಟಪ ಹುಚ್ಚೆದ್ದು ಕುಣಿಯುತ್ತಲಿತ್ತು. ಪೊಲ್ಯ ಬೈಲಾಗಳೆಂಬ ಹೆಸರನ್ನಿರಿಸಿಕೊಂಡ ಆ ಕುಣಿತದಲ್ಲಿ ಒಂದು ಹಿತಮಿತವಾದ ನಾಟ್ಯ, ಆ ಹೆಜ್ಜೆಗಳ

ಕುಣಿತಕ್ಕೆ ಸರಿಯಾಗಿ ಎದ್ದೇಳುವ 'ವ್ವಾ ವ್ವಾ' ಎಂಬ ಉದ್ಗಾರ ಇವೆಲ್ಲಾ ಹೆಚ್ಚಾಗಿ ಮದುವೆಯ ಮನೆಯಲ್ಲಿ ಕಾಣಿಸಿಕೊಳ್ಳುತ್ತಿದ್ದವು.

ಅಷ್ಟೇ ಅಲ್ಲದೆ ಚಿಕ್ಕ ಮಗುವನ್ನು ತೊಟ್ಟಿಲಿನಲ್ಲಿ ಮಲಗಿಸುವ ಸಮಯದಲ್ಲೂ ಕೆಲವು ಹಾಡುಗಳನ್ನು ಹಾಡಿ ಮಗುವನ್ನು ಮಲಗಿಸುವ ಸಂಪ್ರದಾಯ, ಈ ಎಲ್ಲಾ ಹಾಡುಗಳು ಇಂದೂ ಮುಂದುವರಿದು ಬರುತ್ತಿವೆ. ಆದರೆ ಗುಮ್ಟೆ ಹಾಡುಗಳು ನಶಿಸಿ ಹೋಗುವ ಹಂತದಲ್ಲಿದೆ.

ಕೊಂಕಣಿ ಭಾಷೆಯನ್ನಾಡುವ ಇನ್ನೊಂದು ಪಂಗಡವೇ ಸಾರಸ್ವತರು. ಇವರಲ್ಲಿಯೂ ವೊವಿ ಎಂಬ ಹಾಡುಗಳು ಚಾಲ್ತಿಯಲ್ಲಿವೆ. ಸಾರಸ್ವತರೂ ಅವರ ಮದುವೆಯ ಸಮಯದಲ್ಲಿ ನಡೆಯುವ ಎಲ್ಲಾ ಕಾರ್ಯಕ್ರಮಗಳಲ್ಲಿ 'ವೊವಿ' ಮೂಲಕ ಪ್ರಶ್ನೆ ಕೇಳುವ ಹಾಗೂ ಉತ್ತರಿಸುವ ಪರಿಪಾಠವಿದೆ.

**ಉದಾಹರಣೆಗೆ :** ಬಲಿಚಕ್ರವರ್ತಿಲೆ ಸಂಹಾರ ಕೆಲ್ಲೆಲೊ ವಾಮನು

ಮಗೆಲ್ ಬರ್ಶಿ ಸಂಸಾರ ಕರ್ತಲೊ ಮೋಹನು[7].

ಎಂಬಲ್ಲಿ ಸ್ತ್ರೀಯಲ್ಲಿ ಪತಿಯ ಹೆಸರನ್ನು ಕೇಳಿದಾಗ ಆ ಮೇಲಿನ ಹಾಡಿನಲ್ಲಿ ಅವರಿಗೆ ಉತ್ತರಿಸುತ್ತಾಳೆ.

ಇಷ್ಟೇ ಅಲ್ಲದೆ ಕೊಂಕಣಿಯಲ್ಲೂ ಗಾದೆ ಮಾತುಗಳು, ನುಡಿಗಟ್ಟುಗಳು ಇವೆ. ಉದಾಹರಣೆಗೆ 'ಮಾದ್ರಿ ಅಸ್‌ಲ್ಲೆ ತಿತ್ಲಿಸ್ ಪಾಯ್ ಸೊಡ್' ಎಂಬಲ್ಲಿ ಹಾಸಿಗೆ ಇದ್ದಷ್ಟೇ ಕಾಲು ಚಾಚು ಎಂಬ ಬುದ್ಧಿವಾದ ಹೇಳುವಾಗ ಉಪಯೋಗಿಸುತ್ತಾರೆ.

ಹೀಗೆ ಕೊಂಕಣಿ ಜನಪದ ಸಾಹಿತ್ಯದಲ್ಲಿ ವೊವ್ಯೊ-ವೇರ್ಸ್, ಗಾದೆ ಮಾತುಗಳು, ನುಡಿಗಟ್ಟುಗಳು ಹಾಗೂ ಜಾನಪದ ಕಥೆಗಳೂ ಇದ್ದು ಜನಪದ ಸಾಹಿತ್ಯ ಸಮೃದ್ಧವಾಗಿದೆ.

### ೫.೧.೩ ತುಳು ಜಾನಪದ ಸಾಹಿತ್ಯ :

ಪುತ್ತೂರಿನ ಪರಿಸರದಲ್ಲಿ ತುಳು ಮಾತನಾಡುವ ಜನರೇ ಅಧಿಕವಾಗಿದ್ದು, ತುಳು ಜನಪದ ಸಾಹಿತ್ಯವರೂ ಸಮೃದ್ಧವಾಗಿದೆ. ಇಲ್ಲಿನ ಬೈರ ಜನಾಂಗ, ಸಮಗಾರರು, ಗೌಡ ಸಮಾಜದರು, ಗಾಣಿಗ ಸಮಾಜ, ಕಣಿಯ ಜನಾಂಗ, ದಾಸಯ್ಯ, ಕುಂಬಾರರು, ಪರವ ಜನಾಂಗ, ಬಿಲ್ಲವರು, ಬಂಟರು ಇವರೆಲ್ಲಾ ಮನೆ ಮಾತಾಗಿ ತುಳುವನ್ನೇ ಮಾತಾಡುತ್ತಿದ್ದು ತುಳು ಜನಪದವೂ ಇಲ್ಲಿ ಹೇರಳವಾಗಲು ಕಾರಣವಾಗಿದೆ.

ತುಳುವಿನಲ್ಲಿ ಪಾಡ್ದನಗಳು, ಗಾದೆ, ಒಗಟು, ನುಡಿಗಟ್ಟುಗಳು ಜನಪದ ಕತೆಗಳು, ಕವಿತೆಗಳು, ಉರಲ್ ಮುಂತಾದ ಜನಪದ ಸಾಹಿತ್ಯವಿದೆ.

ತುಳು ಜನಪದ ಸಾಹಿತ್ಯದ ಗೀತ ಸಂಪ್ರದಾಯದಲ್ಲಿ 'ಪಾಡ್ದನಗಳು' ಪ್ರಧಾನವಾದುವು. ಇವುಗಳನ್ನು ಸಾಮಾನ್ಯವಾಗಿ ಜನಪದ ಕಥನಕವನಗಳ (Ballads) ಗುಂಪಿಗೆ ಸೇರಿಸಬಹುದು. 'ಪಾಡ್ದನ' ಶಬ್ದದ ಭಿನ್ನರೂಪಗಳಾಗಿ 'ಪಾರ್ದನ' 'ಪಾಡ್ದೊನೆ', 'ಪಾಡ್ದನೊ' ಎಂಬ ಶಬ್ದಗಳಿವೆ. 'ಪಾರ್ದನ' ಅಥವಾ 'ಪಾರ್ತನ' ಎಂಬ ರೂಪದ ಮೂಲ 'ಪಳಮೆ', 'ಪಳತನ' ಎಂಬ ಅರ್ಥವುಳ್ಳ ತುಳುವಿನ 'ಪರತ್ತನ' ಎಂಬುದು ಇನ್ನೊಂದು ಅಭಿಪ್ರಾಯ[2], 'ಪಾಡ್ದನ' ಶಬ್ದದ ಹೆಚ್ಚು ಅಂಗೀಕೃತವಾದ ನಿಷ್ಪತ್ತಿ 'ಹಾಡು' ಎಂಬ ಅರ್ಥವುಳ್ಳ 'ಪಾಡ್' ಅಥವಾ 'ಪಾಟ್' ಎಂಬ ಧಾತುವಿನಿಂದ ಹೆಚ್ಚಿನ ದ್ರಾವಿಡ ಭಾಷೆಗಳಲ್ಲಿ 'ಪಾಟ್', 'ಪಾಡ್' ಎನ್ನುವ ಧಾತುಗಳಿಗೆ 'ಹಾಡುವುದು' (to sing) ಎನ್ನುವ ಅರ್ಥವಿದೆ[3].

'ಪಾಡ್ದನ'ಗಳನ್ನು ಜನಪ್ರಿಯವಾಗಿ 'ಸಂಧಿಗಳು' ಎಂದೂ ಕರೆಯುತ್ತಾರೆ. 'ಕೋಟಿ ಚೆನ್ನಯ' ಪಾಡ್ದನವನ್ನು 'ಬಂಟೆರೆ ಸಂಧಿ, ಸಿರಿಯ ಪಾಡ್ದನವನ್ನು ಸಿರಿಯ ಸಂಧಿ ಎಂದೂ ಕರೆಯುತ್ತಾರೆ. ಭೂತಗಳಿಗೆ ಸಂಬಂಧಿಸಿದ 'ಪಾಡ್ದನ'ಗಳನ್ನು ಆಯಾ ಭೂತಗಳ ಉತ್ಸವ (ನೇಮ, ಕೋಲ, ಆಯನ)ಗಳ ಸಂದರ್ಭಗಳಲ್ಲಿ ಹಾಡುತ್ತಾರೆ.

'ಪಾಡ್ದನ' ಅಥವಾ 'ಸಂಧಿ'ಗಳನ್ನು ಹೊಲಗಳಲ್ಲಿ ನೇಜಿ ತೆಗೆಯುವಾಗಲೂ ಹಾಡುತ್ತಾರೆ. ನೇಜಿ ತೆಗೆಯುವಾಗ ಆ ಕೆಲಸ ಮಾಡುವ ಹೆಂಗಸರ ಗುಂಪಿನಲ್ಲಿ ಯಾವಳೋ ಒಬ್ಬಾಕೆ ಅಥವಾ ಇಬ್ಬರು ಮಾತ್ರ ಸಂಧಿಗಳನ್ನು ಹೇಳುತ್ತಾರೆ. ಆಯಾಸ ಪರಿಹಾರಕ್ಕಾಗಿ, ಮನೋರಂಜನೆಯಾಗಿ 'ಸಂಧಿಗಳು' ಇಲ್ಲಿ ಬಳಕೆಯಾಗುತ್ತವೆ. ಒಂದು ಸಂಧಿ ಹೀಗಿದೆ.

ಎಣ್ಣೆ ನನ ಕೊರ್ವೆರಾರ್ ಬೊಟ್ಟುಡಿ ಬಲ್ಲಾಳ್
ಎಣ್ಣೆ ಕೊರ್‌ದ್ ಮಿಯಾರೆ ಪೋಪೆ ಪರವೆ ಪೋಪೆನೋ
ಮೀದ್ ನನ ಬರ್ಪೆ ಆಯೆ ಪರವೆ  ಬರ್ಪೆನೊ
ಆರದ್ದಲೊ ನನ ಪಾಡುಪೆಯೆ ಪರವೆ ಪಾಡ್ಪೆನೋ
ಆರದ್ದಲೊ ಪಾಡ್ನಗ ಪೋಪೆರಾರ್ ಬೊಟ್ಟುಡಿ ಬಲ್ಲಾಳ್
ಜೋಡು ನಳಿಗೆದ ಬೆಡಿ ಜಿಂಜಯೆರ್ ಬೊಟ್ಟುಡಿ ಬಲ್ಲಾಳ್ (ಪರತಿ ಮಂಗಣೆ)

'ಕಬಿತಗಳು' ತುಳು ಜನಪದ ಸಾಹಿತ್ಯದ ಕೆಲಸದ ಹಾಡುಗಳಲ್ಲಿ ಒಂದು ಪ್ರಮುಖ ಪ್ರಕಾರಕ್ಕೆ ಸೇರುತ್ತವೆ. ಹೊಲದಲ್ಲಿ ನೇಜಿ (ನಾಟಿ) ನೆಡುವಾಗ ಹೇಳುವ ಹಾಡುಗಳೇ 'ಕಬಿತಗಳು' ನೇಜಿ (ನಾಟಿ) ಕೀಳುವಾಗ ಕಬಿತಗಳನ್ನು ಹಾಡುವುದಿಲ್ಲ, 'ಸಂಧಿ'ಗಳನ್ನು ಹಾಡುತ್ತಾರೆ.

ಸಾಮಾನ್ಯವಾಗಿ ಹೆಂಗಸರು ನೇಜಿ ನೆಡುವುದು ತುಳುನಾಡಿನಲ್ಲಿ ನಡೆದು ಬಂದ ಸಂಪ್ರದಾಯ, ಅವರಲ್ಲಿ ಒಬ್ಬಾಕೆ ಆ ಗುಂಪಿನ ನೇತೃತ್ವ ವಹಿಸುತ್ತಾಳೆ. ಅವಳು 'ಕಬಿತ'ದ ಒಂದು

ಸಾಲನ್ನು ಹಾಡುತ್ತಾಳೆ. ಆಗ ಎಲ್ಲರೂ ಆ 'ಕಬಿತ'ದ ಪಲ್ಲವಿಯನ್ನು ಒಟ್ಟಿಗೇ ಹಾಡುತ್ತಾರೆ. ಬಳಿಕ ಪುನಃ ಆ ಹೆಂಗಸು ಕಬಿತದ ಮುಂದಿನ ಸಾಲನ್ನು ಹಾಡುತ್ತಾಳೆ. ಉಳಿದವರು ಹಿಂದಿನದೇ ಪಲ್ಲವಿಯನ್ನು ಹೇಳುತ್ತಾರೆ. ಈ ರೀತಿ ಕಬಿತದ ಹಾಡುವಿಕೆಯು ಮುಂದುವರಿಯುತ್ತದೆ. ಇಲ್ಲಿ ಕಬಿತದ ಪಠ್ಯವನ್ನು ಹಾಡುವವಳು ಒಬ್ಬಳು ಮಾತ್ರ, ಉಳಿದವರು ಪಲ್ಲವಿಯನ್ನು ಮಾತ್ರ ಪುನರಾವರ್ತಿಸುತ್ತಾರೆ[೪].

ತುಳು ಜನಪದ ಸಾಹಿತ್ಯದಲ್ಲಿ 'ಉರಲ್' ಎನ್ನುವುದು ಒಂದು ಚಿಕ್ಕ ಪ್ರಕಾರ. ಇದು ಸಾಮಾನ್ಯವಾಗಿ ಕನ್ನಡ ಚುಟುಕುಗಳನ್ನು ಹೋಲುತ್ತದೆ. ಇಲ್ಲಿ ಎರಡು ವಾಕ್ಯಗಳು ಇರುತ್ತವೆ. ಉರಲನ್ನು ದೀರ್ಘವಾಗಿ ರಾಗ ಎಳೆದು ಹೇಳುತ್ತಾರೆ. ಗಂಡಸರು ಹೊಲವನ್ನು ಉಳುವಾಗ ಮತ್ತು ಗಾಡಿ ಹೊಡೆಯುವಾಗ ಉರಲ್ ಹೇಳುತ್ತಾರೆ.

ಭೂತ ಕಲಾವಿದ ಅಥವಾ ದರ್ಶನ ಪಾತ್ರಿ ಆವೇಶಗೊಂಡು ನುಡಿಯುವ 'ಅಭಯದ ನುಡಿ' ಮತ್ತು ನ್ಯಾಯ ತೀರ್ಮಾನದ ಸಂದರ್ಭದಲ್ಲಿ ದೈವ ನೀಡುವ 'ತೀರ್ಮಾನದ ನುಡಿ' ಇವುಗಳನ್ನು 'ನುಡಿಕಟ್ಟು' ಎನ್ನುತ್ತಾರೆ[೫]. ಇವುಗಳನ್ನು ಮದು, ಮದಿಪು, ಪಾರಿ, ಬೀರ, ನುಡಿ ಎಂದು ವಿಭಾಗಿಸುತ್ತಾರೆ. ಮದು ಎಂದರೆ ದೇವರಲ್ಲಿ ಪ್ರಾರ್ಥನೆ ಮಾಡುವುದು ಎಂದು ಅರ್ಥ. ಮದಿಪು ಎಂದರೆ ಭೂತದ ನುಡಿ ಎನ್ನಬಹುದು. ಪಾರಿ ಎಂದರೆ ದೇವರುಗಳ ಮುಂದೆ ಪ್ರಾರ್ಥನಾ ರೂಪದಲ್ಲಿ ಮಾಡುವ ಭಿನ್ನಹ, ಮನವಿ ಅರಿಕೆ ಎನ್ನಬಹುದು. ಬೀರ ಎಂದರೆ ಜಂಬ ಮುರಿಯುವುದು, ಉಪಟಳ, ತುಂಟತನ ಎಂಬ ಅರ್ಥಗಳು ಬರುತ್ತದೆ. ನುಡಿ ಎಂದರೆ ಮಾತು ಎಂಬ ಅರ್ಥವಿದೆ. ನುಡಿದಂತೆ ನಡೆ ಎಂಬ ಅರ್ಥವೂ ಇದೆ.

ತುಳುವಿನಲ್ಲಿ ಸಹಸ್ರಾರು ಗಾದೆಗಳಿವೆ. ಈ ಗಾದೆಗಳು ಜೀವನ ಅನುಭವದಿಂದ ಬಂದದ್ದು. ಉದಾಹರಣೆಗೆ 'ಕಂದೊಡಿಗ್ ಪೇರ್ ಪರ್ಪಾಯಿನಂಚ' ಎಂಬಲ್ಲಿ ಕೆಟ್ಟವರಿಗೆ ಎಷ್ಟೇ ಉಪಕಾರ ಮಾಡಿದರೂ ವ್ಯರ್ಥ ಎಂಬ ತಿಳುವಳಿಕೆಯ ಮಾತಿದೆ. 'ತಗ್ಗಿ ಕಂಡೊಗೋಪಾಲಾ ಮೂಜಿ ಬುಳೆ' ಎಂಬಲ್ಲಿ ತಗ್ಗಿ ಬಾಳಿದರೆ ಅಥವಾ ತಾಳಿದವನು ಬಾಳಿಯಾನು ಎಂಬ ಅರ್ಥವಿದೆ. 'ಸಲಿಗೆ ತಿಕ್ಕಿನ ನಾಯಿ ನೆಸಲ್ ನಕ್ಕ್‌ಂಡ್' ಎಂಬಲ್ಲಿ ಸಲಿಗೆ ಕೊಟ್ಟರೆ ಏನು ಬೇಕಾದರೂ ಮಾಡಬಹುದು ಎಂಬ ಜಿಜ್ಞಾಸೆ ಇದೆ. ಹೀಗೆ ಗಾದೆಗಳು ಜೀವನ ಅನುಭವವನ್ನು ವಿವರಿಸುತ್ತದೆ.

ತುಳುವಿನಲಿ ಅನೇಕ ಒಗಟುಗಳೂ ಇವೆ. ಇವುಗಳನ್ನು ಕೇಳಿದ ಕೂಡಲೇ ಅರ್ಥ ಗೊತ್ತಾಗದಿದ್ದರೂ ಅದರ ಬಗ್ಗೆ ಸರಿಯಾಗಿ ಯೋಚಿಸಿದರೆ ಅದರ ಅರ್ಥ ಗೊತ್ತಾಗುತ್ತದೆ. 'ನೀರ್‌ದಡೆ ಪೋನಗ ರಡ್ಡ್ ಎರುಕುಲು ಮಿತ್ತ್ ಉಂತುವೊ' ಎಂಬಲ್ಲಿ ನೀರಿಗೆ ಹೋದಾಗ ಎರಡು ಚಪ್ಪಲಿಗಳು ಮೇಲೆಯೇ ನಿಲ್ಲುತ್ತವೆ ಎಂದು ಅರ್ಥವಾಗುತ್ತದೆ. 'ಅಡ್ಡ ಮರಟ್ಟ್ ಬಡ್ಡೆ ಜೆರ್ತ್‌ದೆ' ಎಂಬಲ್ಲಿ ಹಲಸಿನ

ಕಾಯಿ ಮರದಲ್ಲಿ ಹೇಗಿರುತ್ತದೆ ಎಂಬುದನ್ನು ಸೂಚಿಸುತ್ತದೆ. 'ಉದ್ದ ಮರಟ್ಟ್ ಕೆಂಪು ಸನ್ಯಾಸಿ' ಎಂಬಲ್ಲಿ ಉದ್ದವಾದ ಅಡಕೆ ಮರದಲ್ಲಿ ಅಡಿಕೆ ಕೆಂಪಾಗಿ ಇರುತ್ತದೆ. ಈ ರೀತಿ ಬುದ್ಧಿವಂತಿಕೆಯನ್ನು ಪರೀಕ್ಷಿಸಲು ಒಗಟುಗಳನ್ನು ಉಪಯೋಗಿಸುತ್ತಿದ್ದರು.

ತುಳುವಿನಲ್ಲಿ ಅನೇಕ ಜನಪದ ಕತೆಗಳೂ ಇವೆ. ಒಂದು ಊರಿನ ಹಿರಿಮೆಯನ್ನು ಹೇಳಲು ಈ ಕಥೆಯನ್ನು ಬಳಸುತ್ತಾರೆ. ಪುತ್ತೂರಿನಲ್ಲಿರುವ ವಿವಿಧ ಸ್ಥಳಗಳಿಗೆ ಆ ಹೆಸರು ಬರಲು ಕಾರಣ ಏನೆಂಬುದಕ್ಕೆ ಅನೇಕ ಕಥೆಗಳಿವೆ. ಅನೇಕ ವರ್ಷಗಳ ಹಿಂದೆ ಮನೆಯಲ್ಲಿರುವ ಹಿರಿಯರು ಮಕ್ಕಳಿಗೆ ಈ ಕಥೆಗಳನ್ನು ಹೇಳುವುದರ ಮೂಲಕ ಅವರಲ್ಲಿ ನೈತಿಕತೆ, ಧೈರ್ಯ ತುಂಬಲು ಪ್ರಯತಿಸುತ್ತಿದ್ದರು. ಹೀಗೆ ತುಳು ಜನಪದ ಸಾಹಿತ್ಯ ಸಮೃದ್ದವಾಗಿದೆ ಎನ್ನಬಹುದು.

### ೫.೧.೪. ಬ್ಯಾರಿ ಜನಪದ ಸಾಹಿತ್ಯ :

ಪುತ್ತೂರು ಪರಿಸರದಲ್ಲಿಯೂ ಮುಸ್ಲಿಮರು ಅಧಿಕ ಸಂಖ್ಯೆಯಲ್ಲಿ ಇದ್ದು ಅವರು ತಮ್ಮದೇ ಆದ ಜಾನಪದ ಸಂಸ್ಕೃತಿಯನ್ನು ಹೊಂದಿದ್ದಾರೆ. ಅವರು ವಿನೋದಕ್ಕಾಗಿ ಕೆಲವು ಹಾಡುಗಳನ್ನು ಬ್ಯಾರಿ ಭಾಷೆಯಲ್ಲಿ ಹೇಳುತ್ತಾರೆ. ಕೆಲವು ಕುಣಿತಗಳು, ದಫ್, ಕೊಲ್ಕಲಿ ಮುಂತಾದವನ್ನು ಹೇಳುತ್ತಾರೆ.

'ಬ್ಯಾರಿಗಳಲ್ಲಿ ತ್ಯಾಗ ಮಾಡಿದ ಸಾಹಸಮಯ ಕಥೆಗಳೂ ಇವೆ. ಅದರಲ್ಲಿ ಒಂದು ಕುರಿಯ ಮಾಮೂಲಿಯವರದ್ದು, ಪುತ್ತೂರು ತಾಲೂಕಿನ ಕುರಿಯ ಗ್ರಾಮ ಹಾಗೂ ಎಣ್ಮೂರು, ಐವತ್ತೊಕ್ಲು ಎಂಬ ಪ್ರದೇಶದಲ್ಲಿ ೧೫ನೆಯ ಶತಮಾನದಲ್ಲಿ ವಿಜಯನಗರ ಮತ್ತು ಬಹುನಿ ಸುಲ್ತಾನರ ಮಧ್ಯ ಯುದ್ಧವಾದಾಗ ವಿಜಯನಗರದ ಅಣತಿಯಂತೆ ಪುತ್ತೂರಿನ ಹೆಗ್ಡೆ ಅರಸನಿಗೆ ಯೋಧರನ್ನು ಕಳುಹಿಸಿ ಕೊಡುವ ಆಜ್ಞೆ ಬರುತ್ತದೆ. ಆ ಸಮಯದಲ್ಲಿ ಪುತ್ತೂರಿನ ಮುಸ್ಲಿಂ ಯುವಕನೂ ಅದರಲ್ಲಿ ಭಾಗವಹಿಸುತ್ತಾನೆ. ಯುದ್ಧಕ್ಕೆ ಹೋಗುವ ಮುಂಚೆ ತನ್ನ ಗರ್ಭಿಣಿ ಹೆಂಡತಿಯನ್ನು ಕುರಿಯಗುತ್ತಿನ ಮನೆಯಲ್ಲಿ ನಿಲ್ಲಿಸುವ ಏರ್ಪಾಡು ಮಾಡುತ್ತಾನೆ. ಮುಸ್ಲಿಂ ಯುವಕ ರಣರಂಗದಲ್ಲಿ ವೀರ ಮರಣವನ್ನು ಅಪ್ಪುತ್ತಾನೆ. ಇತ್ತ ಅವನ ಹೆಂಡತಿ ಗಂಡು ಮಗುವಿಗೆ ಜನ್ಮ ಕೊಟ್ಟು ವಿಧಿವಶಳಾಗುತ್ತಾಳೆ. ಮಗುವಿನ ಆರೈಕೆಯ ಹೊಣೆ. ಕುರಿಯ ಏಳ್ನಾಡು ಗುತ್ತಿನ ಮನೆಯವರಿಗೆ ಒದಗಿಬರುತ್ತದೆ. ಮಗುವಿಗೆ ಕುಂಞ ಎಂದು ಹೆಸರಿಟ್ಟರು. ಮುಂದೊಂದು ದಿನ ಕುರಿಯ ಮನೆಯ ಹಸುಗಳು ಗುಡ್ಡೆಗೆ ಹೋಗಿ ಮೇದು ಬರುತ್ತಿದ್ದಾಗ ಒಂದು ಹಸುವನ್ನು ಹುಲಿ ತಿನ್ನುತ್ತದೆ. ಮನೆಯ ಸ್ತ್ರೀಯರೆಲ್ಲಾ ಗೋಳಾಡಲಾರಂಭಿಸಿದಾಗ ಕುಂಞನು ಒನಕೆ ಹಿಡಿದು ಕಂಬಳಿ ಹೊದೆದು ದನ ಸತ್ತು ಬಿದ್ದ ಸ್ಥಳಕ್ಕೆ ಧಾವಿಸಿ ಸತ್ತ ದನದ ಮಗ್ಗುಲಲ್ಲಿ ಕಂಬಳಿ ಮುಸುಕಿನಿಂದ ಮಲಗುತ್ತಾನೆ. ಕತ್ತಲು ಆವರಿಸಿದ ಮೇಲೆ ದನ ತಿನ್ನಲು ಮತ್ತೆ ಹುಲಿ ಬಂದಾಗ ಅದನ್ನು ಒನಕೆಯಿಂದ ಹೊಡೆದು ಕೊಂದು ಊರಿಗೆ

ಎಳೆದುತರುತ್ತಾನೆ. ಹೀಗೆ ದುಃಖಿಸುತ್ತಿರುವ ಸ್ತ್ರೀಯರನ್ನು ಸಮಾಧಾನಗೊಳಿಸಿದ ಎಂಬ ಸಾಹಸದ ಕಥೆ ಇದೆ[೬]. ಇಂತಹ ಅನೇಕ ಕಥೆಗಳು ಬ್ಯಾರಿ ಜನಪದದಲ್ಲಿ ಇವೆ.

ತುಳುವಿನಲ್ಲಿದ್ದಂತೆ ಬ್ಯಾರಿ ಸಮುದಾಯದಲ್ಲಿ ಮೌಖಿಕ ಸಾಹಿತ್ಯ ಪರಂಪರೆಯಿದ್ದುದು ತಿಳಿದು ಬರುತ್ತದೆ. ಇವರಲ್ಲಿ 'ಪಾಟ್' ಜನಪದ ಸಾಹಿತ್ಯವಿದೆ[೭]. ಬ್ಯಾರಿಗಳ ಶುಭಸಮಾರಂಭದಲ್ಲಿ ಮದುವೆ ಪ್ರಮುಖ. ಬ್ಯಾರಿಗಳ ಮಂಜಲ ಸಂದರ್ಭದಲ್ಲಿ 'ಪಾಟ್ ಪಾಡ್‌ರೆ' ಹಾಡು ಹಾಡುವ ಕ್ರಮವಿದ್ದುದರಿಂದ ಎಲ್ಲ ಹಾಡುಗಳಿಗೆ ಸಾಮಾನ್ಯವಾಗಿ 'ಮಂಜಿಲಪ್ಪಾಡ್ ಎನ್ನಲಾಗುತ್ತಿತ್ತು.

ಮಂಜಲ ಪಾಟ್‌ಗಳಲ್ಲಿ ಬೇರೆ ಬೇರೆ ವಿಧಗಳಿಗೆ, ಮದುವೆ ಮುಂತಾದ ಸಂದರ್ಭದಲ್ಲಿ ಸೇರಿದವರು ಮುಖ್ಯವಾಗಿ, ಹೆಂಗಸರು ಕೈ ಕೈ ತಟ್ಟಿಕೊಂಡು ಹಾಡುತ್ತಿದ್ದುದರಿಂದ 'ಕೈ ಕೊಟ್ಟು ಪಾಟ್' ಅಂತಲೂ ಹೇಳುತ್ತಿದ್ದರು. 'ಚಮಯಪ್ಪಾಟ್' (ಸಿಂಗಾರದಹಾಡು) ಮದುಮಗಳನ್ನು ಉಡುಪು ಒಡವೆಗಳಿಂದ ಶೃಂಗಾರ ಮಾಡುವಾಗ ಹಾಡುವಂಥದ್ದು 'ಅಪ್ಪತ್ತೆ ಮಂಜಿಲ' – ಸೀಮಂತ ಸಂದರ್ಭದಲ್ಲಿ ಹಾಡುವ ಹಾಡು. 'ಸುನ್ನತ್ ಮಂಜಿಲ' ಹುಡುಗರ ಮುಂಜಿ ಮದುವೆ ಸಮಯದಲ್ಲಿ ಹಾಡುವಂತಾದ್ದು. 'ಮೊಯಿಲಾಂಜಿಪ್ಪಾಟ್' – ಮದರಂಗಿ ಇಡುವಾಗ ಹಾಡುವುದು. ಹೀಗೆ 'ಪಾಟ್'ಗಳನ್ನು ಸಂದರ್ಭಕ್ಕೆ ಅನುಗುಣವಾಗಿ ಬೇರೆ ಬೇರೆ ರೀತಿಯಲ್ಲಿ ಹೇಳುತ್ತಾರೆ.

ಬ್ಯಾರಿಗಳಲ್ಲಿರುವ ಇನ್ನೊಂದು ಜಾನಪದ ಹಾಡಿನ ರೀತಿ 'ದಪ್ಪು'[೮]. ತಡರಾತ್ರಿ ಮಸೀದಿಯಿಂದ ಹೊರಡುತ್ತಿದ್ದ ದಪ್ಪು ರಾತೀಬು ತಂಡ ನಡುರಾತ್ರಿ ಮನೆ ಮನೆ ಸಂದರ್ಶಿಸಿ ಎಬ್ಬಿಸಿ ಹಾಡಿನಲ್ಲಿ ದಪ್ಪು ಕುಣಿದು ನೇರ್ಚೆ ಸಲ್ಲಿಸುವ ಹಾಗೂ ಮದುವೆ ಸಮಾರಂಭಗಳಲ್ಲಿ ದಪ್ಪು ಹಾಡಿಸುವ ಕ್ರಮ ಇದೆ.

ಹೀಗೆ ಬ್ಯಾರಿ ಜನಪದ ಸಾಹಿತ್ಯದಲ್ಲೂ 'ದಪ್ಪು', ಪಾಟ್ ಮುಂತಾದ ಹಾಡುಗಳೂ, ಜನಪದ ಕಥೆಗಳೂ ಇದ್ದು ಬ್ಯಾರಿ ಜನಪದ ಸಾಹಿತ್ಯ ವಿಶಿಷ್ಟ ಸ್ಥಾನವನ್ನು ಪಡೆದಿದೆ.

## ೫.೨.೦ ಪ್ರದರ್ಶನ ಕಲೆಗಳು (ಯಕ್ಷಗಾನ, ತಾಳಮದ್ದಲೆ, ಕುಣಿತ)

ಯಕ್ಷಗಾನ ಪುತ್ತೂರಿನ ಒಂದು ಪ್ರಾಚೀನ ರಂಗ ಕಲೆ. ಸಾಹಿತ್ಯ, ಸಂಗೀತ ಅಭಿನಯ, ಕುಣಿತ, ವೇಷ–ಭೂಷಣ, ಅಲಂಕಾರ – ಹೀಗೆ ಕಲೆಯ ಎಲ್ಲಾ ಅಂಗಗಳು ಇದರಲ್ಲಿ ಹಾಸು ಹೊಕ್ಕಾಗಿರುವುದರಿಂದ ಇದು ಒಂದು ಸಂಕೀರ್ಣ ಕಲೆ ಎನಿಸಲ್ಪಡುತ್ತದೆ. ಇವೆಲ್ಲಾ ಒಂದಕ್ಕೊಂದು ಪೂರಕವಾಗಿ ಸೇರಿದಾಗ ಯಕ್ಷಗಾನ ಆಕರ್ಷಕವಾಗುತ್ತದೆ. ಈ ಕಲೆಯು, ಯಾವಾಗ ಹುಟ್ಟಿತು ಎಂದು ಹೇಳುವುದು ಕಷ್ಟ. ಆದರೆ ಯಕ್ಷಗಾನ ಪುತ್ತೂರಿನಲ್ಲಿ ಬಹಳ ಆಳದವರೆಗೆ ವಿಸ್ತಾರವಾಗಿ ಬೇರುಬಿಟ್ಟಿದೆ. ಜನರ

ಮನಸ್ಸನ್ನು ಸೂರೆಗೊಳ್ಳುವ ಮೋಹಕ ಶಕ್ತಿ ಈ ಯಕ್ಷಗಾನಕ್ಕಿದೆ. ಯಕ್ಷಗಾನ ಬಯಲಾಟದ ಮೂಡಲ ಪಾಯ, ಪಡುವಲ ಪಾಯವೆಂದು ಎರಡು ವಿಭಾಗ ಮಾಡುತ್ತಾರೆ. ಮೂಡಲಾಪಾಯದಲ್ಲಿ ದೊಡ್ಡಾಟ ಸಣ್ಣಾಟಗಳಿದ್ದಂತೆ, ಪಡುವಲ ಪಾಯದಲ್ಲಿ ತೆಂಕುತಿಟ್ಟು, ಬಡಗುತಿಟ್ಟು ಎಂಬ ಎರಡು ಪದ್ಧತಿಗಳಿವೆ. ಕಾಸರಗೋಡು, ದಕ್ಷಿಣ ಕನ್ನಡ ಜಿಲ್ಲೆಯ ಕಲಾವಿದರು ತೆಂಕುತಿಟ್ಟನ್ನು ಅನುಸರಿಸಿದರೆ ಉಡುಪಿ, ಉತ್ತರಕನ್ನಡ ಜಿಲ್ಲೆಯವರು ಬಡಗು ತಿಟ್ಟನ್ನು ಅನುಸರಿಸುತ್ತಾರೆ. ಇತ್ತೀಚೆಗೆ ತುಳುಭಾಷೆಯನ್ನು ಯಕ್ಷಗಾನದಲ್ಲಿ ಅಳವಡಿಸಿಕೊಳ್ಳಲು ಪ್ರಾರಂಭಿಸಿದ ಬಳಿಕ ತೆಂಕುತಿಟ್ಟು ಕೂಡಾ ಕೆಲವು ವಿಷಯಗಳಲ್ಲಿ ಬದಲಾವಣೆ ಪಡೆದಿದೆ. ಹೊಸತಿಟ್ಟನ್ನು 'ತುಳು ತಿಟ್ಟು' ಎಂಬುದಾಗಿ ಕರೆಯುತ್ತಾರೆ. ಯಕ್ಷಗಾನಕ್ಕೆ ಇಲ್ಲಿಯ ಕೊಡುಗೆ ಅತ್ಯಂತ ಮಹತ್ವದ್ದಾಗಿದೆ. ಇಲ್ಲಿ ಅನೇಕ ವೃತ್ತಿಪರ ಯಕ್ಷಗಾನ ಮೇಳಗಳಿವೆ. ಅವುಗಳಲ್ಲಿ ಬೊಳುವಾರಿನ ಅಂಜನೇಯ ಯಕ್ಷಗಾನ ಮಂಡಳಿ, ಉಪ್ಪಿನಂಗಡಿಯ ಕಾಳಿಕಾಂಬಾ ಯಕ್ಷಗಾನ ಮಂಡಳಿ ಹಾಗೂ ಆಂಜನೇಯ ಮಹಿಳಾ ಯಕ್ಷಗಾನ ಮಂಡಳಿಗಳು ತಾಳಮದ್ದಳೆಯ ಸವಿಯನ್ನು ಉಣಪಡಿಸುತ್ತಿವೆ. ಯಕ್ಷಕೂಟದಂತಹ ತರುಣರ ಸಂಘಟನೆಗಳ ಸ್ವಗತಗುಚ್ಛದಂತಹ ಹೊಸ ಪ್ರಯೋಗಗಳನ್ನು ನಡೆಸುತ್ತಿವೆ.

ಯಕ್ಷಗಾನ ಕ್ಷೇತ್ರದಲ್ಲಿ ಇರುವ ಕಲಾವಿದರಲ್ಲಿ ಹೆಚ್ಚಿನ ಸಂಖ್ಯೆಯ ಕಲಾವಿದರು ಪುತ್ತೂರಿನವರು. ಅವರಲ್ಲಿ ಪೆರುವಾಡಿ ನಾರಾಯಣ್ ಭಟ್, ಪಾತಾಳ ವೆಂಕಟ್ರಮಣ ಭಟ್, ಬೆಟ್ಟಂಪಾಡಿ ಬಾಳಪ್ಪ ಶೆಟ್ಟಿ, ಕುಂಬಳೆ ಶ್ರೀಧರ ರಾವ್, ಶೀನಪ್ಪ ಭಂಡಾರಿ ಪುತ್ತೂರು, ಶ್ರೀಧರ ಭಂಡಾರಿ ಪುತ್ತೂರು ಪೂಕಳ ಲಕ್ಷ್ಮೀ ನಾರಾಯಣ ಭಟ್, ಕೆ. ಎಚ್. ದಾಸಪ್ಪ ರೈ, ನಯನ ಕುಮಾರ್, ನಾರಾಯಣ ಪಾಟಾಳಿ, ಜಗನ್ನಾಥ ಶೆಟ್ಟಿ ನೆಕ್ರಾಜೆ, ಅಂಬಪ್ರಸಾದ ಪಾತಾಳ, ತಿಲಕ ಹೆಗ್ಡೆ, ಗಂಗಾಧರ ಭಂಡಾರಿ, ಗಂಗಾಧರ ಸೇಡಿಯಾಪು, ಚಂದ್ರಶೇಖರ ಹೆಗ್ಡೆ, ತಲೆಂಗಳ ಗೋಪಾಲಕೃಷ್ಣ ಭಟ್, ಕಡಬ ಮೋಹನ ಬೈಪಡಿತ್ತಾಯ, ಕಡಬ ನಾರಾಯಣ ಆಚಾರ್, ಕಡಬ ರಾಮಚಂದ್ರ ರೈ, ಕಾಂಚನ ಸಂಜೀವ ರೈ, ಪುತ್ತೂರು ಕೃಷ್ಣ ಭಟ್, ಹೀಗೆ ಇವರಿಗಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಅನೇಕ ಕಿರಿಯರು ವೃತ್ತಿ ರಂಗದಲ್ಲಿ ರಾರಾಜಿಸುತ್ತಾರೆ.

ಪುತ್ತೂರಿನಲ್ಲಿ ಯಕ್ಷಗಾನದ ತರಬೇತಿ ನೀಡುವ ಮತ್ತು ಪ್ರಸಿದ್ಧವಾದ ಕಲಾ ಸಂಘಗಳು ಅನೇಕ ಇವೆ. ಇವುಗಳಲ್ಲಿ ಪ್ರಸಿದ್ಧವಾದವು.

**೫.೨.೧ ಯಕ್ಷಕೂಟ ಪುತ್ತೂರು :** ೧೯೬೨ರಲ್ಲಿ ಸ್ಥಾಪಿತವಾದ ಸಂಸ್ಥೆ, ಯಕ್ಷಗಾನದ ಭೀಷ್ಮ, ಶ್ರೇಣಿ, ಗೋಪಾಲಕೃಷ್ಣ ಭಟ್ಟರ ಪ್ರಸಂಗಗಳ ಸಂಕಲನ 'ಶ್ರೇಣಿ ಕೃತಿ ಶ್ರೇಣಿ'ಯನ್ನು ಪ್ರಕಾಶಿಸಿದೆ. ಸಹಯೋಗ ಸಂಸ್ಥೆಗಳೊಂದಿಗೆ ತಾಳಮದ್ದಳೆ ಆಟಗಳನ್ನು ಜರುಗಿಸಿದೆ. ಕಿನ್ನಿಗೋಳಿಯಲ್ಲಿ ಜರುಗಿದ ಯಕ್ಷಗಾನ

ತಾಳಮದ್ದಳೆ ಸ್ಪರ್ಧೆಯಲ್ಲಿ (೨೦೦೦) ಪ್ರಥಮ ಬಹುಮಾನ ಪಡೆದಿದೆ. ಕಳೆದೆರಡು ವರ್ಷಗಳಿಂದ 'ಮಕ್ಕಳ ತಂಡ'ವನ್ನು ರೂಪಿಸಿದೆ.

ಶ್ರೀ ಆಂಜನೇಯ ಯಕ್ಷಗಾನ ಕಲಾ ಸಂಘ, ಬೊಳ್ವಾರು, ಪುತ್ತೂರು

ಶ್ರೀ ಕಾಳಿಕಾಂಬ ಯಕ್ಷಗಾನ ಕಲಾ ಸೇವಾ ಸಂಘ, ಉಪ್ಪಿನಂಗಡಿ

ಶ್ರೀ ಸುಬ್ರಹ್ಮಣ್ಯೇಶ್ವ ಯಕ್ಷಗಾನ ಕಲಾಸಂಘ, ಆರ್ಲಪದವು

ಶ್ರೀ ರಾಮಕುಂಜೇಶ್ವರ ಯಕ್ಷಗಾನ ಕಲಾ ಸಂಘ, ರಾಮಕುಂಜ

ಶ್ರೀ ಮಹಾವಿಷ್ಣುಮೂರ್ತಿ ಯಕ್ಷಗಾನ ಮಂಡಳಿ, ನೆಲ್ಯಾಡಿ

ಶ್ರೀ ಮಹಾಲಿಂಗೇಶ್ವರ ಯಕ್ಷಗಾನ ಕಲಾ ಸಂಘ, ಬೆಟ್ಟಂಪಾಡಿ

ಶ್ರೀ ಸತ್ಯನಾರಾಯಣ ಯಕ್ಷಗಾನ ಕಲಾ ಸಂಘ, ನಿಡ್ಪಳ್ಳಿ

ಶ್ರೀ ಭಗವತಿ ಯಕ್ಷಗಾನ ಕಲಾ ಸಂಘ, ಪಡುಮಲೆ

ಶ್ರೀ ಪಂಚಲಿಂಗೇಶ್ವರ ಯಕ್ಷಗಾನ ಕಲಾ ಸಂಘ, ಈಶ್ವರಮಂಗಲ

ಶ್ರೀ ಶಾಸ್ತಾವು ಯಕ್ಷಗಾನ ಕಲಾ ಸಂಘ, ಪಡುಮಲೆ

ಶ್ರೀ ಗುರುದೇವ ಯಕ್ಷಗಾನ ಕಲಾ ಸಂಘ, ಈಶ್ವರಮಂಗಲ

ಶ್ರೀ ಮಹಾಲಕ್ಷ್ಮೀ ಯಕ್ಷಗಾನ ಕಲಾ ಸಂಘ, ದೊಡ್ಡಡ್ಕ, ಬಿಳಿಯೂರು ಕಟ್ಟೆ

ಶ್ರೀ ಅಯ್ಯಪ್ಪ ಸ್ವಾಮಿ ಯಕ್ಷಗಾನ ಕಲಾ ಸಂಘ, ದರ್ಬೆತಡ್ಕ

ಶ್ರೀ ವಿಶ್ವಭಾರತಿ ಯಕ್ಷಗಾನ ಸಂಘ, ಕುಂಬ್ರ

ಶ್ರೀ ಪಂಚಲಿಂಗೇಶ್ವರ ಯಕ್ಷಗಾನ ಕಲಾ ಸಂಘ, ಕಾವು

ಶ್ರೀ ದೇವಿ ಯುವಕ ಮಂಡಲ, ಮಾಡಾವು

ಶ್ರೀ ಕೋಟಿ–ಚೆನ್ನಯ ಯಕ್ಷಗಾನ ಕಲಾ ಸಂಘ, ಅಂಕತಡ್ಕ

ಶ್ರೀ ವಿನಾಯಕ ಯಕ್ಷಗಾನ ಮಂಡಳಿ, ಬಲ್ಯ

ಶ್ರವಣ ರಂಗ ಸವಣೂರು

ಶ್ರೀ ವಿಷ್ಣುಮೂರ್ತಿ ಯಕ್ಷಗಾನ ಕಲಾ ಸಂಘ, ಕುರಿಯ

ಶ್ರೀ ಗಣೇಶ ಯಕ್ಷಗಾನ ಕಲಾ ಮಂಡಳಿ, ಆಲಂಕಾರು

ಶ್ರೀ ಉಮಾಮಹೇಶ್ವರ ಯಕ್ಷಗಾನ ಕಲಾ ಸಂಘ, ಕೊಂಬೆಟ್ಟು

ಶ್ರೀ ನರಹರಿ ಯಕ್ಷಗಾನ ಮಂಡಳಿ, ಕಾಣಿಯೂರು

ಹೀಗೆ ೨೫ಕ್ಕೂ ಹೆಚ್ಚು ಯಕ್ಷಗಾನ ಕಲಾ ಸಂಘಗಳು ಪುತ್ತೂರಿನಲ್ಲಿ ಇವೆ. ಇವುಗಳಲ್ಲಿ ಹತ್ತರಷ್ಟು ಸಂಸ್ಥೆಗಳು ಸಕ್ರಿಯವಾಗಿವೆ. ಕೆಲವು ಸಂಘಗಳು ತಮ್ಮ ಅನುಕೂಲತೆಗಳಿಗೆ ತಕ್ಕಂತೆ ಯಕ್ಷಗಾನದಲ್ಲಿ ಪ್ರವೃತ್ತವಾಗಿವೆ.

ಕೆಲವು ದಶಕಗಳ ಹಿಂದೆ ಶೈಕ್ಷಣಿಕ ಸಂಸ್ಥೆಗಳಲ್ಲಿ ಯಕ್ಷಗಾನಕ್ಕೆ ಮನ್ನಣೆಯಿತ್ತು. ಪುತ್ತೂರಿನ ಸಂತ ಫಿಲೋಮಿನಾ ಕಾಲೇಜಿನ ಕನ್ನಡ ಸಂಘವು (ವಿ. ಬಿ. ಮೊಳೆಯಾರರ ಸಾರಥ್ಯ) ಯಕ್ಷಗಾನ ತಂಡ ಕಟ್ಟಿ ಹಲವೆಡೆ ಪ್ರದರ್ಶನ ನೀಡಿದೆ. ಮಹಿಳಾ ತಂಡದ ಪ್ರದರ್ಶನ ಏರ್ಪಡಿಸಿದೆ. ಮಾತಿನಲೋಕದ ಮಹಾಕವಿ ಶ್ರೀ ಶೇಣಿ ಗೋಪಾಲಕೃಷ್ಣ ಭಟ್ಟರ 'ಯಕ್ಷಗಾನ ಮತ್ತು ನಾನು' ಕೃತಿಯ ಬಿಡುಗಡೆ ಮೂಲಕ ಯಕ್ಷಗಾನಕ್ಕೆ ಉತ್ತಮ ಕೊಡುಗೆ ನೀಡಿದೆ.

ಇದೇ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದ ಶ್ರೀ ಭಾಸ್ಕರ ರೈ ಕುಕ್ಕುವಳ್ಳಿಯವರು ಮತ್ತು ಸಮಾನಾಸಕ್ತರ ತಂಡ 'ಕರ್ನಾಟಕ ಯಕ್ಷಭಾರತ ಸಂಸ್ಥೆಯು ದೂರದ ದೆಹಲಿ ತನಕ ಕಾರ್ಯಕ್ರಮ ನೀಡಿದ ಹೆಗ್ಗಳಿಕೆ ಪಡೆದಿದೆ[೧೦].

ಪುತ್ತೂರಿನ ವಿವೇಕಾನಂದ ಕಾಲೇಜಿನ 'ಯಕ್ಷರಂಜಿನಿ'ಯ ವತಿಯಿಂದ ಉತ್ತಮ ಕಾರ್ಯಕ್ರಮ ನಡೆಯುತ್ತಿತ್ತು. ಕಾಲೇಜು ಮಟ್ಟದ ಯಕ್ಷಗಾನ ಸ್ಪರ್ಧೆಗಳಲ್ಲಿ ಭಾಗವಹಿಸಿ, ಬಹುಮಾನಗಳನ್ನು ಪಡೆದಿದೆ. ಅಂದಿನ ಯಕ್ಷಗಾನೀಯ ವಾತಾವರಣದಲ್ಲಿ ಬೆಳೆದ ಹಲವಾರು ಮಂದಿ ಇಂದು ಯಕ್ಷಗಾನದ ಸಹೃದಯಿಗಳಾಗಿರುವುದು ಕಂಡು ಬರುತ್ತದೆ. ಶೈಕ್ಷಣಿಕ ಮಟ್ಟದಲ್ಲೇ ಯಕ್ಷಗಾನದ ಅಭಿರುಚಿ ಹತ್ತಿದರೆ ಮುಂದೆ ಬದುಕಿನುದ್ದಕ್ಕೂ ಅದು ಮರೆತು ಹೋಗುವುದಿಲ್ಲ ಎಂಬುದಕ್ಕೆ ಅಲ್ಲಿ ಕಲಿತು ಈಗ ಯಕ್ಷಗಾನದಲ್ಲಿ ತೊಡಗಿಸಿಕೊಂಡ ಅನೇಕರು ಸಾಕ್ಷಿಯಾಗಿದ್ದಾರೆ.

ದೇಶಭಕ್ತ ಎನ್. ಎಸ್. ಕಿಲ್ಲೆಯವರು ಯಕ್ಷಗಾನ ಪಟು. ಅನನ್ಯ ವಾಗ್ಮಿ, ಸಾಹಿತಿ, ಸಮಾಜ ಸೇವಕ, ಅವರ ಸ್ಮರಣೆಗಾಗಿ ಪುತ್ತೂರು ತಾಲೂಕಿನ ಕೆದಂಬಾಡಿಯಲ್ಲಿ 'ಎನ್.ಎಸ್.ಕಿಲ್ಲೆ ಪ್ರತಿಷ್ಠಾನ'ವನ್ನು ೧೯೯೭ರಲ್ಲಿ ಸ್ಥಾಪಿಸಲಾಗಿದೆ. ಕಡಮಜಲು ಸುಭಾಸ್ ರೈಯವರು ಇದರ ಅಧ್ಯಕ್ಷರಾಗಿದ್ದಾರೆ. ಕಿಲ್ಲೆಯವರ ಸ್ಮರಣಾರ್ಥ ಪ್ರಶಸ್ತಿ ಪ್ರಧಾನ, ಸಾಹಿತ್ಯಿಕ, ಸಾಂಸ್ಕೃತಿಕ, ಸಾಮಾಜಿಕ ಕಾರ್ಯಕ್ರಮಗಳನ್ನು ನಡೆಸುವುದು ಪ್ರತಿಷ್ಠಾನದ ಆಶಯ.

ಪುತ್ತೂರಿನಲ್ಲಿ ಯಕ್ಷಗಾನ ಕಲಾ ಸಂಘಗಳು ೨೫ಕ್ಕೂ ಅಧಿಕ ಇರುವಂತೆ ಕೆಲವು ಯಕ್ಷಗಾನ ಮೇಳಗಳೂ ಇದ್ದು ಪ್ರಸಿದ್ಧಿ ಪಡೆದಿವೆ. ಅವುಗಳಲ್ಲಿ ಶ್ರೀ ಆದಿಸುಬ್ರಹ್ಮಣ್ಯ ಸ್ವಾಮಿ ಕೃಪಾಪೋಶಿತ ಯಕ್ಷಗಾನ ಮಂಡಳಿ ಪುತ್ತೂರು, ಜಿಲ್ಲಾದ್ಯಂತ ಜನಪ್ರಿಯ. ಹಳ್ಳಿ ಮೂಲೆ ಮೂಲೆಯಲ್ಲಿ ಯಕ್ಷಗಾನ ಪ್ರದರ್ಶನವನ್ನು ನೀಡಿದ ಕೀರ್ತಿ ಇವರದು. ಈ ಮೇಳ ಕಲಾವಿದರನ್ನು ತಯಾರಿಸುವ ಕಾರ್ಯಾಗಾರ. ರಾಜ್ಯ ಪ್ರಶಸ್ತಿ ಪುರಸ್ಕೃತ ಶೀನಪ್ಪ ಭಂಡಾರಿ ಪುತ್ತೂರು ಮೇಳದ ಯಜಮಾನರು.

ಶ್ರೀ ಮಹಾಲಿಂಗೇಶ್ವರ ಕೃಪಾಪೋಶಿತ ಯಕ್ಷಗಾನ ನಿಲುಗಡೆಯಾಗಿದೆ. ಆದರೆ ಗಣೇಶ ಹಬ್ಬದ ಸಮಯದಲ್ಲಿ ಒಂದೆರಡು ತಿಂಗಳು ಆಯ್ದ ಕಲಾವಿದರಿಂದೊಡಗೂಡಿ ತಿರುಗಾಟ ಮಾಡುತ್ತದೆ. ಕೆ. ಎಚ್. ದಾಸಪ್ಪ ರೈಗಳು ಶ್ರೀ ಕಣಿಪುರ ಗೋಪಾಲಕೃಷ್ಣ ಪ್ರಸಾದಿತ ಯಕ್ಷಗಾನ ಮಂಡಳಿಯನ್ನು

೧೯೮೮ – ೧೯೮೫ ರಲ್ಲಿ ನಿರ್ವಹಿಸಿದ್ದರು. ಹಿಂದೆ ಇದು ಇಚ್ಲಂಪಾಡಿ ಮೇಳ ಎಂದೇ ಪ್ರಸಿದ್ಧವಾಗಿತ್ತು.

ಪುತ್ತೂರಿನ ವಾಸುದೇವ ಮದ್ದಳೆಗಾರ (ವಾಸಣ್ಣ) ಚೆಂಡೆ ಮದ್ದಳೆ ತಯಾರಿನಲ್ಲಿ ಸಿದ್ಧಹಸ್ತರು. ಪ್ರಕೃತ ಈಶ್ವರಮಂಗಲದ ಶ್ರೀನಿವಾಸ ರಾವ್ ಮತ್ತು ಪುತ್ತೂರಿನ ಶ್ರೀ ರಾಜರಾತ್ನಂ ಇವರು ಹಿಮ್ಮೇಳದ ಪರಿಕರಗಳಿಗೆ ಕಾಯಕಲ್ಪ ನೀಡುವುದು ಮಾತ್ರವಲ್ಲದೆ ಹೊಸದಾಗಿಯೂ ತಯಾರಿಸಿ ಕೊಡಬಲ್ಲರು.

ಯಕ್ಷಗಾನ ಪ್ರಸಂಗಗಳನ್ನು ರಚಿಸುವುದರಲ್ಲಿಯೂ ಪುತ್ತೂರಿನ ಹಲವರು ಸಿದ್ಧಹಸ್ತರು. ದೇವದಾಸ ಈಶ್ವರಮಂಗಲ–ಇವರು ರಚಿಸಿದ ಪ್ರಸಂಗಗಳು ಬಡಗು ಮೇಳಗಳಲ್ಲಿ ವಿಜೃಂಭಿಸುತ್ತಿವೆ. ಕೆ.ಸಿ. ಪಾಟಾಳಿಯವರು 'ಶ್ರೀ ರಣಮಂಗಲ ಕ್ಷೇತ್ರ ಮಹಾತ್ಮೆ' ಎಂಬ ಪ್ರಸಂಗ ರಚಿಸಿದ್ದು ಇದರ ಪ್ರದರ್ಶನ ಮೆಚ್ಚುಗೆ ಪಡೆದಿದೆ. ಕಾವು ಗಣೇಶ ಭಟ್ ಇವರು 'ಗಂಧರ್ವಕನ್ಯೆ, ಪಾಂಚಜನ್ಯ, ನೈಮಿಷಾರಣ್ಯ, ಶತ್ರುದಮನ, ಪಾರ್ವತಿ ಪ್ರತಿಜ್ಞೆ, ನಾಗಮಣಿ ಮಾಣಿಕ್ಯ' ಪ್ರಸಂಗಗಳನ್ನು ರಚಿಸಿದ್ದಾರೆ. ಡಿ.ಸದಾಶಿವ ಭಟ್, ನಿಡ್ಪಳ್ಳಿ–ಇವರು ರಚಿಸಿದ 'ವೀರ ಸುಷೇಣ' ಎಂಬ ಹಿಂದಿ ಯಕ್ಷಗಾನ ಮತ್ತು 'ಸ್ಲೇಯಿಂಗ್ ಅಪ್ ಸುಧನ್ವ' ಎಂಬ ಇಂಗ್ಲಿಷ್ ಭಾಷೆಯ ಪ್ರಸಂಗಗಳು ಅಚ್ಚಾಗಿದ್ದು, ಅವು ಧ್ವನಿಸುರುಳಿಗಳಾಗಿವೆ. ಗಣರಾಜ ಕುಂಬ್ಳೆಯವರು ರಚಿಸಿದ 'ಶ್ರೀರಾಮಕುಂಜೇಶ್ವರ ಕ್ಷೇತ್ರ ಮಹಾತ್ಮೆ' ಕೆಲವು ಪ್ರದರ್ಶನಗಳನ್ನು ಕಂಡಿದೆ[೧೧]. ಹೀಗೆ ಪುತ್ತೂರಿನಲ್ಲಿ ಯಕ್ಷಗಾನದ ವಿವಿಧ ರೂಪಗಳಲ್ಲಿ ಸೃಷ್ಟಿಯಾಗಿದೆ.

### ೫.೨.೨ ತಾಳಮದ್ದಳೆ :

ಪುತ್ತೂರು ಪ್ರದೇಶದಲ್ಲಿ ತಾಳಮದ್ದಳೆಯ ಪ್ರಾರಂಭ ಸುಮಾರು ನೂರು ವರ್ಷಗಳ ಹಿಂದಿನದು ಇರಬಹುದು[೨೨]. ಇಲ್ಲಿಯೂ ಅದು ತುಂಬಾ 'ಗ್ರಾಮ್ಯ'ವಾಗಿಯೇ ಇತ್ತೆನ್ನಬಹುದು. ಭಾಷೆಯ ಬಳಕೆ, ಅರ್ಥ ಕಲ್ಪನೆಗಳಲ್ಲಿ ಇಂದು ಕಾಣುವ ವಿಕಾಸ ಆಗ ಇರಲಿಲ್ಲ. ಮಾತ್ರವಲ್ಲ 'ಪ್ರಸಂಗ'ವು ವೇಷ ಕಳಚಿದ ಆಟದಂತೆಯೇ ನಡೆಯುತ್ತಿತ್ತು'.

ಈ ಪರಿಸರದಲ್ಲಿ ತಾಳಮದ್ದಳೆ ಕಲೆಯು ವಿಶೇಷವಾಗಿ ಅಭಿವೃದ್ಧಿ ಹೊಂದಲು ಈ ಕೆಳಗಿನ ಕೆಲವು ಕಾರಣಗಳನ್ನು ಗುರುತಿಸಬಹುದು.

೧. ಹಿಂದಿನಿಂದಲೂ ಇಲ್ಲಿಯ ದೇವಾಲಯಗಳಲ್ಲಿ ದೇವರ ಮುಂದೆ ಸ್ತೋತ್ರಗಳನ್ನು ಪುರಾಣಗಳನ್ನು ಪಠಿಸುವ ಮತ್ತು ಅದಕ್ಕೆ ಅರ್ಥ ಹೇಳುವ ಪರಂಪರೆಯಿತ್ತು. ಹಾಗೆ ಪಠಿಸುವ

‘ಪಾಟಾಳಿ’ಗಳೂ ಅರ್ಥ ಹೇಳುವ ‘ಪದಾರ್ತಿ’ಗಳೂ ಹಲವು ದೇವಸ್ಥಾನಗಳಲ್ಲಿ ಇದ್ದರು. ಉದಾಹರಣೆಗೆ : ಪಾಟಾಳಿ ಪಾರ್ತಿಸುಬ್ಬ ಹಾಗೂ ಪಾಟಾಳಿ ತಿಮ್ಮಪ್ಪಯ್ಯ.

೨. ಈ ಒಂದು ಪಠನ ಶ್ರವಣ ಪರಂಪರೆಯನ್ನೇ ಅನುಸರಿಸಿ, ಮನೆಗಳಲ್ಲೂ ಪುರಾಣ ಓದುವ ಮತ್ತು ಕೇಳುವ ಪದ್ಧತಿ ಈ ಪ್ರದೇಶದಲ್ಲಿ ಇದ್ದಿತ್ತು.

೩. ಈ ಪಠನ ಶ್ರವಣದ ಪ್ರಭಾವ ವಿಶೇಷವಾಗುವುದಕ್ಕೆ ಇನ್ನೊಂದು ಕಾರಣ ಕಳೆದ ಶತಮಾನದಲ್ಲಿಯೇ ಈ ಜಿಲ್ಲೆಯಲ್ಲಿ ಕೆಲಸ ಮಾಡುತ್ತಿದ್ದ ಕ್ರೈಸ್ತ ಮಿಷನರಿಗಳ ಮುದ್ರಣ ಕಾರ್ಯ – ಇವರು ಮುದ್ರಣಾಲಯಗಳನ್ನು ಆರಂಭಿಸಿ, ಪತ್ರಿಕೆಗಳನ್ನು ಹೊರಡಿಸುತ್ತಿದ್ದರು ಮಾತ್ರವಲ್ಲ, ತಾಳಮದ್ದಳೆ ಪ್ರಸಂಗಗಳನ್ನು ಮುದ್ರಿಸುತ್ತಿದ್ದರು.

೪. ಇನ್ನೊಂದು ಪ್ರಮುಖ ಕಾರಣ ಶಾಲೆಗಳಲ್ಲಿ ಯಕ್ಷಗಾನದ ಆಸಕ್ತಿ ಮೂಡಿಸುವ ಕೆಲಸಗಳಾಗುತ್ತಿದ್ದವು. ಇಲ್ಲಿ ಯಕ್ಷರಂಗದಲ್ಲಿ ಕೈಯಾಡಿಸಿದ ಕಲಾಸಕ್ತ ಶಿಕ್ಷಕರುಗಳಿರುತ್ತಿದ್ದರು. ನೀತಿಭೋದೆಯ ಕಾಲದಲ್ಲಿ ಯಕ್ಷಗಾನದ ಹಾಡು ಹೇಳಿ ಅರ್ಥ ವಿವರಿಸುವುವಂತಹ ಕಾರ್ಯಗಳೂ ನಡೆಯುತ್ತಿದ್ದವು[೧೩].

ಈ ಎಲ್ಲಾ ಕಾರಣಗಳಿಂದಾಗಿ ಒಂದು ಶತಮಾನದಿಂದೀಚೆಗೆ ತಾಳಮದ್ದಳೆ ಈ ಪ್ರದೇಶದಲ್ಲಿ ಒಂದು ಹೊಸ ಆಯಾಮವನ್ನು ಪಡೆದುಕೊಂಡಿತು. ಇದಕ್ಕೆ ಪೂರಕವಾಗಿ ಪುತ್ತೂರಿನ ಪ್ರಮುಖ ಮೂರು ಕನ್ನಡ ಸಂಘಗಳಾದ ಕರ್ನಾಟಕ ಸಂಘ ಪುತ್ತೂರು, ಸಂತ ಫಿಲೋಮಿನಾ ಕಾಲೇಜಿನ ಕನ್ನಡ ಸಂಘ ಮತ್ತು ವಿವೇಕಾನಂದ ಕಾಲೇಜಿನ ಕನ್ನಡ ಸಂಘಗಳು ಈ ತಾಳಮದ್ದಳೆ ಕಲೆಯನ್ನು ಪೋಷಿಸಿದವು[೧೪]. ಈ ಸಂಘಗಳು ತಾಳಮದ್ದಳೆ ಕಾರ್ಯಕ್ರಮವನ್ನು ಏರ್ಪಡಿಸುವುದರೊಂದಿಗೆ ವಿದ್ಯಾರ್ಥಿಗಳಿಗೂ ತಾಳಮದ್ದಳೆಯ ಬಗ್ಗೆ ಆಸಕ್ತಿ ಉಂಟಾಗಲು, ವಿದ್ಯಾರ್ಥಿಗಳ ಪ್ರತಿಭೆಗಳನ್ನು ಗುರುತಿಸಿ ಪ್ರೋತ್ಸಾಹಿಸುವುದಕ್ಕಾಗಿ ತಮ್ಮ ವಾರ್ಷಿಕೋತ್ಸವ ಸಂದರ್ಭದಲ್ಲಿ ತಾಳಮದ್ದಳೆ ಕಾರ್ಯಕ್ರಮಗಳನ್ನು ವಿದ್ಯಾರ್ಥಿಗಳಿಂದಲೇ ಅವರಿಗೆ ತರಬೇತಿ ನೀಡಿ ಏರ್ಪಡಿಸುತ್ತಿದ್ದರು.

‘ಯಕ್ಷಗಾನ ವಾಚಸ್ಪತಿ’ ಬಿರುದು ಪಡೆದಿದ್ದ ಪೊಳಲಿ ಶಂಕರನಾರಾಯಣ ಶಾಸ್ತ್ರಿಗಳನ್ನು ಹೊಸ ಹುಟ್ಟಿನ ಕಾಲದ ಯುಗಪುರುಷರೆಂದೇ ಭಾವಿಸಲಾಗುತ್ತದೆ[೧೫]. ಅದಕ್ಕೆ ಕಾರಣ ಅವರ ಪಾಂಡಿತ್ಯ, ಪ್ರತಿಭೆ ಹಾಗೂ ಅಸಾಮಾನ್ಯ ವ್ಯಕ್ತಿತ್ವ, ಪ್ರತಿಯೊಂದು ಪಾತ್ರದ ಒಳ–ಹೊರಗುಗಳನ್ನು ವಿಶ್ಲೇಷಿಸುವ ಅವರ ಸೊಬಗು, ಔಚಿತ್ಯ ಪ್ರಜ್ಞೆ ಹಾಗೂ ಕಳಶಪ್ರಾಯವಾದ ಸರಳತೆ. ಇಂತಹ ಶಾಸ್ತ್ರಿಗಳ ಪ್ರವೇಶದಿಂದಾಗಿ ತಾಳಮದ್ದಳೆಯು ವಿದ್ಯಾವಂತರ ರಂಗವೆಂದು ಪರಿಗಣಿಸಲ್ಪಟ್ಟಿತು. ಈ ಕಾಲದಲ್ಲಿ

ಶಾಸ್ತ್ರಗಳಿಗೆ ಸರಿದೊರೆಯಾಗಿ ಅರ್ಥ ಹೇಳಬಲ್ಲ ಸಾಮರ್ಥ್ಯವುಳ್ಳವರಲ್ಲಿ ನಾರಾಯಣ ಕಿಲ್ಲೆಯವರೂ ಒಬ್ಬರು.

ಎನ್.ಎಸ್. ಕಿಲ್ಲೆಯವರ ವೆಂಕಪ್ಪ ಶೆಟ್ಟರ ದಾಳಿಗಳನ್ನು ಸಮರ್ಥವಾಗಿ ಎದುರಿಸುತ್ತಿದ್ದ ಒಬ್ಬ ಪ್ರತಿಭಾವಂತರಾಗಿದ್ದರು. ಪ್ರಸಿದ್ಧ ರಾಜಕೀಯ ಭಾಷಣಕಾರರೂ, ಹೆಸರಾಂತ ದೇಶಭಕ್ತರೂ ಆಗಿದ್ದರು. ಸ್ವತಃ ಕವಿಗಳಾಗಿದ್ದ ಅವರು ಭಾವಪೂರ್ಣವಾಗಿ ಪಾತ್ರಗಳನ್ನು ಚಿತ್ರಿಸಿ ಜನಮನ್ನಣೆ ಗಳಿಸಿದರು. ಅವರ ಕರ್ಣಪರ್ವದ ಕರ್ಣನ ಚಿತ್ರ ಅತ್ಯಂತ ವಿಶಿಷ್ಟವಾಗಿರುತ್ತಿತ್ತೆಂಬುದು ಅವರನ್ನು ಕೇಳಿದವರ ಅಭಿಪ್ರಾಯ[೧೬].

ಹೊಸ ಕಾಲದ ಅಬ್ಬರದ ಭರತ ಸ್ವಲ್ಪ ಇಳಿಯುತ್ತಿದ್ದಂತೆಯೇ ತಮ್ಮ ಮೃದು ಮನೋಹರ ಶೈಲಿಯೊಂದಿಗೆ ತಾಳಮದ್ದಳೆ ಕ್ಷೇತ್ರಕ್ಕೆ ಕಾಲಿರಿಸಿದವರು ದೇರಾಜೆ ಸೀತಾರಾಮಯ್ಯವರು[೧೭]. ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಭಾವವನ್ನು ತುಂಬಿ ರಸಪ್ರವಾಹ ಹರಿಸುವ ರೀತಿ, ವೈಚಾರಿಕತೆಯೊಂದಿಗೆ ಭಾವುಕತೆಯ ಮಿಶ್ರಣ, ತಿಳಿಹಾಸ್ಯ, ಸರಸ – ಸಂಭಾಷಣೆ ಇವೆಲ್ಲ 'ದೇರಾಜೆ ಶೈಲಿ'ಯೆಂದು ಒಂದು ವಿಶಿಷ್ಟ ಶೈಲಿಯನ್ನೇ ನಿರ್ಮಿಸಿದರು. ತಾಳಮದ್ದಳೆಯಲ್ಲಿ ಅರ್ಥ ಹೇಳುವುದರ ಮೂಲಕ ಅವರು ಬಹು ಮಂದಿ ಸ್ನೇಹಿತರ ಬಳಗವನ್ನು ಸಂಪಾದಿಸಿಕೊಂಡಿದ್ದಾರೆ. ಮದ್ರಾಸು, ಮುಂಬಯಿ, ಮಧುರೆ, ಕಾಂಚಿ, ತಿರುಚನಾಪಳ್ಳಿ, ಹೈದರಾಬಾದ್, ಮಾತ್ರವಲ್ಲದೆ ಕರ್ನಾಟಕದ ಹೆಚ್ಚಿನ ಊರುಗಳನ್ನೆಲ್ಲಾ ಅವರು ಕಲಾಬಳಗದೊಂದಿಗೆ ಸುತ್ತಾಡಿದ್ದಾರೆ.

ಮುಳಿಯ ತಿಮ್ಮಪ್ಪಯ್ಯನವರ ಮಗ ಮುಳಿಯ ಮಹಾಬಲ ಭಟ್ಟರೂ ತಾಳಮದ್ದಳೆಯಲ್ಲಿ ಹೆಸರು ಗಳಿಸಿದವರು. ೧೯೬೫ರ ವರೆಗೂ ಅರ್ಥ ಹೇಳುತ್ತಿದ್ದು, ಅರ್ಥದಲ್ಲಿ ಆಧುನಿಕ ವಿಚಾರಗಳು, ವಾದಗಳು, ತತ್ವಗಳು ಇವುಗಳನ್ನು ಪೌರಾಣಿಕ ಪಾತ್ರಗಳ ಪರಿಕಲ್ಪನೆಯಂತೆ ಹದಗೊಳಿಸಿ ಪ್ರೌಢವಾಗಿ ಅರ್ಥ ಹೇಳುತ್ತಿದ್ದ ಮುಳಿಯ ಮಹಾಬಲ ಭಟ್ಟರು ಈ ಕ್ಷೇತ್ರದಲ್ಲಿ ಒಳ್ಳೆಯ ವಿಮರ್ಶಕರು, ಲೇಖಕರೂ ಆಗಿದ್ದಾರೆ. ಪ್ರಸ್ತುತ ಲಕ್ಷ್ಮೀಶ ತೋಳ್ಪಾಡಿ, ಪುರುಷೋತ್ತಮ ಬಿಳಿಮಲೆ, ಡಿ. ಈಶ್ವರ ಶಾಸ್ತ್ರಿ, ಪ್ರಶಾಂತ್ ರೈ, ಪ್ರಸಂಗಕರ್ತರಾಗಿ ಹೆಸರು ಮಾಡಿದ ಅಮೃತ ಸೋಮೇಶ್ವರ ಮುಂತಾದವರು ಆಧುನಿಕ ವಿಚಾರ, ಆಶಯಗಳನ್ನು ಪೌರಾಣಿಕ ಚೌಕಟ್ಟಿನಲ್ಲಿ ಅಳವಡಿಸಿ ಅರ್ಥ ಹೇಳುವ, ಆ ಮೂಲಕ ಅರ್ಥಗಾರಿಕೆಯನ್ನು ಪ್ರಸ್ತುತಗೊಳಿಸುವ ರೀತಿಯಲ್ಲಿ ಅರ್ಥ ಹೇಳುತ್ತಾ, ತಾಳಮದ್ದಳೆಯ ಕುರಿತು ವಿಚಾರ–ವಿಮರ್ಶೆಗಳನ್ನು ನಡೆಸುತ್ತಾ ಇರುವ ಆಧುನಿಕ ವಿದ್ವಾಂಸರುಗಳು ಹಾಗೂ ವಿಮರ್ಶಕರು.

ಹೀಗೆ ತಾಳಮದ್ದಳೆಯ ರಂಗದಲ್ಲಿ ಸಮೃದ್ಧವಾಗಿ ಕೃಷಿ ಮಾಡಿರುವ ಪುತ್ತೂರು, ವೈಚಾರಿಕತೆ, ತಾತ್ವಿಕತೆ ಹಾಗೂ ತಾರ್ಕಿಕತೆಗಳನ್ನು ಈ ಕ್ಷೇತ್ರಕ್ಕೆ ತಂದಿದೆ. ಅತ್ಯಂತ ಉನ್ನತ ದರ್ಜೆಯ ಕಲಾವಿದರನ್ನೂ, ಪ್ರಯೋಗಶೀಲ ಅರ್ಥಧಾರಿಗಳನ್ನು, ಪರಂಪರೆಗಳ ನಿರ್ಮಾಪಕರನ್ನೂ ಸಶಕ್ತವಾಗಿ ಬೆಳೆಸಿ ಈ ತಾಳಮದ್ದಳೆ ಕಲೆಗೆ ಒಂದು ಮನ್ನಣೆಯನ್ನು ಸ್ಥಾನವನ್ನು ಈ ಪ್ರದೇಶ ದೊರಕಿಸಿಕೊಟ್ಟಿದೆ.

## ೫.೩.೦ ಜನಪದ ಕುಣಿತಗಳು :

ಪುತ್ತೂರಿನಲ್ಲಿ ಹಿಂದೆ ೩೦-೪೦ ಜನಪದ ಕುಣಿತಗಳು ನಡೆಯುತ್ತಿದ್ದವು. ಅವುಗಳಲ್ಲಿ ಬಹಳಷ್ಟು ಕುಣಿತಗಳು ಇಂದು ಕಂಡು ಬರುತ್ತಿಲ್ಲ. ಕುಣಿತಗಳು ಹುಟ್ಟಿಕೊಳ್ಳಲು ಕಾರಣೀಭೂತವಾದ ಉದ್ದೇಶ, ಅವುಗಳನ್ನು ಸಂವಹನಗೊಳಿಸುವ ಅವಶ್ಯಕತೆ ಇಂದಿನ ಕಾಲಕ್ಕೆ ಪ್ರಸ್ತುತವೆನಿಸುವುದಿಲ್ಲ., ಆದರೂ ಈ ಕುಣಿತಗಳನ್ನು ಉಳಿಸಿಕೊಂಡು ಬರುವುದು ಅವಶ್ಯಕವಾಗಿದೆ. ಜನಪದ ಕುಣಿತಗಳನ್ನು ಅವುಗಳ ಆಶಯಗಳಿಗೆ ಅನುಗುಣವಾಗಿ ೧. ಆರಾಧನಾ ಕುಣಿತಗಳು, ೨. ಮಾಂತ್ರಿಕ ಕುಣಿತಗಳು, ೩. ಕೃಷಿ ಸಂಬಂಧೀ ಕುಣಿತಗಳು, ೪. ಮತ ಸಂಬಂಧೀ ಕುಣಿತಗಳು ಮತ್ತು ೫. ಕುಟುಂಬ ಸಂಬಂಧೀ ಕುಣಿತಗಳು ಎಂಬುದಾಗಿ ವಿಂಗಡಿಸಬಹುದು.

## ೫.೩.೧ ಆರಾಧನಾ ಕುಣಿತಗಳು :

ಬಹುತೇಕ ಜನಪದ ಕುಣಿತಗಳು ಆಚರಣಾತ್ಮಕ ಕುಣಿತಗಳು. ಕುಣಿತವು ಯಾವುದೇ ಒಂದು ಆರಾಧನೆಯ ಅಂಗವಾಗಿರದಿದ್ದರೂ ಕುಣಿತದ ಪ್ರಾರಂಭ ಮತ್ತು ಅಂತ್ಯದಲ್ಲಿ ದೈವ, ದೇವರನ್ನು ಪ್ರಾರ್ಥಿಸಿಕೊಳ್ಳುವುದು ಸಾಮಾನ್ಯವಾಗಿರುತ್ತದೆ. ಆದರೆ ಭೂತದಕೋಲ, ನಾಗಮಂಡಲಗಳಲ್ಲಿ, ಆರಾಧನೆ ಆಚರಣೆಗಳು ಮುಖ್ಯವಾಗುತ್ತವೆ ಹೊರತು ಕುಣಿತವಲ್ಲ. ಆದುದರಿಂದ ಇಂತಹ ಕುಣಿತಗಳನ್ನು ಆರಾಧನಾ ಕುಣಿತ ಗಳೆಂದು ಪ್ರತ್ಯೇಕಿಸಬಹುದು.

ಹಳದಿ, ಕೆಂಪು, ಬಿಳಿ, ಕಪ್ಪು, ನೀಲಿ ಬಣ್ಣಗಳಿಂದ ಕಲಾತ್ಮಕವಾಗಿ ಚಿತ್ರಿಸಿದ ಮುಖವರ್ಣಿಕೆ, ಅದ್ಭುತ, ಭಯಾನಕ, ಭವ್ಯಕಲ್ಪನೆಗೆ ಸರಿಯಾಗಿ ಧರಿಸಿಕೊಂಡ ವೇಷಭೂಷಣ, ಆಭರಣ, ಆಯುಧಗಳು, ಕಾಲಿಗೆ ಗಗ್ಗರ ಕಟ್ಟಿ ಕೈಯಲ್ಲಿ ದೊಂದಿ, ಕರವಾಳ, ಚಾಮರ ಹಿಡಿದು ಹಿಮ್ಮೇಳಕ್ಕನುಸಾರವಾಗಿ ಹೆಜ್ಜೆ ಹಾಕಿ ನಡೆಸುವ ಕುಣಿತ, ಹಾಡು ಮಾತುಗಾರಿಕೆ ಎಲ್ಲವೂ ಸೌಂದರ್ಯವನ್ನು ಹೊರಹೊಮ್ಮಿಸುವ ಸಾಧನಗಳು, ಕ್ರಿಯೆಗಳು. ಭೂತದ ಕೋಲ ಸಂಕೀರ್ಣ ಸೌಂದರ್ಯದ ತಾಣ. ಸೌಂದರ್ಯ ಪ್ರಕಟಗೊಳ್ಳುವಂತೆ ಮಾಡುವುದೇ ಕಲೆ.

ಭೂತಾರಾಧನೆಯಂತೆ ನಾಗಮಂಡಲವೂ ಕೂಡ ಒಂದು ಸಂಕೀರ್ಣ ಕಲೆ. ನಾಗಮಂಡಲದಲ್ಲಿ ಬಣ್ಣಬಣ್ಣದ ಹುಡಿಗಳಿಂದ ಅದ್ಭುತವಾಗಿ ಚಿತ್ರಿಸಲಾದ ಏಳು ಹೆಡೆಯ ಮಹಾಶೇಷ ಮೇಲ್ಭಾಗದಲ್ಲಿ ಮೂಡಿಬರುವ ಯಕ್ಷ-ಚಿತ್ರಕಲೆಯ ಕೌಶಲ್ಯವನ್ನು ಎತ್ತಿ ತೋರಿಸಿದರೆ ರೇಷ್ಮೆ ಧೋತರ ಉಟ್ಟು ಆವೇಶದಿಂದ ಕುಣಿಯುವ ಪಾತ್ರಿ. ಪಾತ್ರಿಯನ್ನು ಒಲಿಸಿಕೊಳ್ಳಲು ನರ - ನಾರಿಯಾಗಿ ಸೀರೆ ಉಟ್ಟು, ರವಿಕೆ ತೊಟ್ಟು, ತಲೆಗೆ ಜರಿಪೇಟ ಸುತ್ತಿ, ಸೊಂಟಕ್ಕೆ ಪಟ್ಟಿ ಕೈಗಳಿಗೆ ಬಳೆ ಕಾಲಿಗೆ ಗೆಜ್ಜೆ ಕಟ್ಟಿ, ಡಮರುನಾದಕ್ಕೆ ಹಾಡಿಗೆ ಸರಿಯಾಗಿ ಹೆಜ್ಜೆ ಇಟ್ಟು ಶೃಂಗಾರರಸ ಹೊರಹೊಮ್ಮುವಂತೆ ಕುಣಿಯುವ ಅರ್ಧನಾರಿ ಪಾತ್ರಧಾರಿಯ ಕುಣಿತ ಪ್ರೇಕ್ಷಕರ ಕಣ್ಮನ ಸೂರೆಗೊಳ್ಳುತ್ತದೆ. ಭಕ್ತರನ್ನು

ಭಾವುಕರನ್ನಾಗಿಸುತ್ತದೆ. ರೌದ್ರ, ಭೀಭತ್ಸ, ಸೌಮ್ಯ, ಲಾಲಿತ್ಯ, ರಸಗಳಿಂದ ಕೂಡಿದ ಹಾವಭಾವ ಪ್ರದರ್ಶನ, ಸಂಗೀತ ನರ್ತನ ಅದ್ಭುತವೆನಿಸುವ ರೀತಿಯಲ್ಲಿ ಪಿಂಗಾರ ಹೂಗಳಿಂದ ಕೂಡಿದ ಅಲಂಕಾರ ಎಲ್ಲವೂ ನಾಗಮಂಡಲದ ವೈಶಿಷ್ಟ್ಯ

**೫.೩.೨. ಮಾಂತ್ರಿಕ ಕುಣಿತಗಳು :**

ಆದಿಮಾನವರು ಪ್ರಕೃತಿ ವಿಕೋಪ, ಹಸಿವೆ, ರೋಗದಿಂದುಂಟಾಗುವ ಭಯವನ್ನು ಹೋಗಲಾಡಿಸಲು ಪ್ರತಿಭೆಯನ್ನು ಕುಣಿತಗಳ ಮೂಲಕ ಕಲ್ಪಿಸಿಕೊಳ್ಳುತ್ತಿದ್ದರು. ಈ ಉದ್ದೇಶದಿಂದ ಹುಟ್ಟಿ ಬಂದ ಕುಣಿತಗಳನ್ನು ಮಾಂತ್ರಿಕ ಕುಣಿತಗಳೆಂದು ವಿಂಗಡಿಸಬಹುದು. ಆಟಿ ತಿಂಗಳ ಕಾಲದಲ್ಲಿ ಉಂಟಾಗುವ ಉದ್ವೇಗವನ್ನು ತಡೆಗಟ್ಟಲು ನಡೆಸುವ ಕುಣಿತವೇ ಆಟಿ ಕಳೆಂಜಿ. ಮುಖಕ್ಕೆ ಅರದಾಳ, ತಲೆಗೆ ತೆಂಗಿನ ಎಳೆಗರಿಯ ಕಿರೀಟ, ಕಿವಿಗೆ ಕುಂಡಲ, ಮಣಿಗಂಟಿಗೆ ಕೈನಾಗ, ಎದೆಗೆ ತಿಗಲೆ ಚವರಿ, ಸೊಂಟಕ್ಕೆ ತೆಂಗಿನ ತಿರಿಯ ಜಾಲರಿ, ತಲೆಮಣಿ, ತಲೆಚವುರಿ ಕಳೆಂಜನಿಗೆ ಎಲ್ಲವೂ ತೆಂಗಿನ ಗರಿಯಿಂದಲೇ ಮಾಡಿದ ಅಲಂಕಾರ ಸಾಧನಗಳು. ಕೈಯಲ್ಲಿ ಪನೆ ಛತ್ರ, ಕಾಲಲ್ಲಿ ಗಗ್ಗರ ಧರಿಸಿ ಬರುವ ಕಳೆಂಜ ತೆಂಬರೆಯ ನಾದಕ್ಕೆ ಪಾಡ್ದನದ ರಾಗಕ್ಕೆ ಪೂರಕವಾಗಿ ಹೆಜ್ಜೆ ಇಟ್ಟು ಕುಣಿಯುತ್ತಾನೆ. ಮನೆಯವರು ನೀಡಿದ ಒಣ ಮೆಣಸು, ಬೇಯಿಸಿ ಒಣಗಿಸಿದ ಹಲಸಿನ ಬೀಜ (ಸಾಂತಣಿ), ಅಕ್ಕಿ, ಅರಿಶಿನ, ತೆಂಗಿನಕಾಯಿಯನ್ನು ಸ್ವೀಕರಿಸಿ ಮನೆಗೆ ಬಂದ ಮಾರಿ (ರೋಗ)ಯನ್ನು ಪರಿಹರಿಸುವ ಅಭಯ ನೀಡಿ ಮುಂದಕ್ಕೆ ಹೋಗುತ್ತಾನೆ.

ಮುಗೇರರು ನಡೆಸುವ 'ಪಿಲಿ–ಪಂಜಿ ಕುಣಿತ, ಒಂದು ಪ್ರಾಣಿ ಸಂಬಂಧಿ ಕುಣಿತ, ಅಡಿಕೆ ಹಾಳೆಯಲ್ಲಿ ಮಾಡಿದ ಹುಲಿ, ಹಂದಿ, ಜಿಂಕೆಗಳ ಮುಖವಾಡ ಧರಿಸಿಕೊಂಡು ಪಾತ್ರಧಾರಿಗಳು ಆಯಾಯ ಪ್ರಾಣಿಗಳ ನಡಿಗೆಯಲ್ಲಿ ಹೆಜ್ಜೆ ಹಾಕಿ ಕುಣಿಯುತ್ತಾರೆ. ಬೇಟೆಗಾರನೊಬ್ಬ ಅವುಗಳನ್ನು ಕೊಲ್ಲುವಂತೆ ಅಭಿನಯ ಮಾಡುತ್ತಾರೆ. ಕಾಡು ಪ್ರದೇಶದ ಜನರು ಪ್ರಾಣಿಗಳಿಂದುಂಟಾಗುವ ಭಯ ನಿವಾರಣೆಗಾಗಿ ಈ ಕುಣಿತವನ್ನು ಸೃಷ್ಟಿಸಿಕೊಂಡರು. ಈ ಕುಣಿತವನ್ನು ಸುಗ್ಗಿಯ ಹುಣ್ಣಿಮೆಯಿಂದ ಪ್ರಾರಂಭಿಸುತ್ತಾರೆ. ದುಡಿಯ ಹಿಮ್ಮೇಳದಲ್ಲಿ ಈ ಕುಣಿತ ನಡೆಯುತ್ತದೆ.

ಆದಿದ್ರಾವಿಡ ಜಾತಿಯವರಿಂದ ನಡೆಯುವ ಒಂದು ಕೃಷಿ ಸಂಬಂಧಿ ಮಾಂತ್ರಿಕ ಕುಣಿತ ಕರ್ಂಗೋಲು, ನಾಲ್ಕು ಜನ ಯುವಕರು ಬಿಳಿ ಪಂಚೆ ಉಟ್ಟು ಕಲಸಿದ ಜೇಡಿ ಮಣ್ಣಿನಿಂದ ಮುಖ, ಎದೆ, ಬೆನ್ನು, ಹೊಟ್ಟೆಯ ಭಾಗಕ್ಕೆಲ್ಲ, ಚುಕ್ಕಿಗಳನ್ನು ಹಾಕಿಕೊಳ್ಳುತ್ತಾರೆ. ಅದರ ಮೇಲೆ ದೇಹದ ಮುಂಭಾಗ ಮತ್ತು ಹಿಂಭಾಗಕ್ಕೆ ಅಡ್ಡ ನೀಟ ಗೆರೆ ಎಳೆದುಕೊಳ್ಳುತ್ತಾರೆ. ತಲೆಗೆ ಬಿಳಿ ಬಟ್ಟೆಯ ಪಟ್ಟಿ

ಸುತ್ತಿಕೊಳ್ಳುತ್ತಾರೆ. ಕಾಲಿಗೆ ಗೆಜ್ಜೆ ಕಟ್ಟಿ ಕೈಯಲ್ಲಿ ನೆಕ್ಕಿ ಸೊಪ್ಪು ಸೂಡಿ ಧರಿಸಿ ಹಿಂದೆ ಮುಂದೆ ಚಲಿಸುವ ಇವರ ಜೊತೆಯಲ್ಲಿ ದೊಣ್ಣೆ ಹಿಡಿದ ಒಬ್ಬ ಮುದುಕನ ವೇಷಧಾರಿ ಇರುತ್ತಾನೆ. ಮಾರಿ ನಿವಾರಣೆಗಾಗಿ ಈ ಕುಣಿತ ನಡೆಯುತ್ತದೆ.

**೫.೩.೩ ಕೃಷಿ ಸಂಬಂಧೀ ಕುಣಿತಗಳು :**

ಪುತ್ತೂರು ಕೃಷಿ ಪ್ರಧಾನವಾದ ಪ್ರದೇಶ. ಇಲ್ಲಿಯ ಜನರ ಜೀವನಕ್ಕೆ ಕೃಷಿ ಅನಿವಾರ್ಯ. ಆದುದರಿಂದಲೇ ಬಿತ್ತನೆ ಕೊಯ್ಲು, ಕದಿರು ಕಟ್ಟುವುದು, ಹೂಡುವುದು – ಇವೆಲ್ಲಾ ಪೂಜಾ ನಿಷ್ಠೆಯಿಂದ ಮಾಡುವ ಕಸುಬುಗಳಾಗಿದ್ದವು. ಮೂಲತಃ ಇಲ್ಲಿನ ಹೆಚ್ಚಿನ ಕುಣಿತಗಳೆಲ್ಲ ಕೃಷಿ ಸಂಬಂಧಿಯಾಗಿಯೇ ಹುಟ್ಟಿಕೊಂಡವು. ಆರಾಧನಾ ಕುಣಿತಗಳಾಗಲೀ, ಮಾಂತ್ರಿಕ ಕುಣಿತಗಳಾಗಲೀ, ಅವು ಕೇವಲ ಮಾನವ ಜೀವರಕ್ಷಣೆಯ ಉದ್ದೇಶವನ್ನಷ್ಟೇ ಹೊಂದಿರುವುದಿಲ್ಲ. ತಾವು ಬೆಳೆಸಿದ ಬೆಳೆಯ ರಕ್ಷಣೆಯ ಆಶಯವನ್ನು ಕೂಡ ಅವು ಹೊಂದಿರುತ್ತದೆ.

ಭೂಮಿತಾಯಿಗೆ ಮೆಚ್ಚುಗೆಯಾಗಿ ನಡೆದರೆ ಭಯವಿಲ್ಲ ಎಂಬುದು ಇಲ್ಲಿಯ ಜನರ ನಂಬಿಕೆ. ಭೂಮಿದೇವಿ ಮತ್ತು ಭಗವಂತ ತಾಯಿ ತಂದೆ ಇದ್ದಂತೆ. ಭೂಮಿಯನ್ನು ನಮ್ಮ ಪೂರ್ವಜರು ಹೆಣ್ಣು ಎಂದು ಪರಿಗಣಿಸಿದ್ದಾರೆ. ಹೆಣ್ಣಿನ ಜೀವನದಲ್ಲಿ ನಡೆಯುವ ಮುಖ್ಯವಾದ ಎರಡು ಸಂಸ್ಕಾರಗಳೆಂದರೆ ರಜಸ್ವಲೆಯಾದ ಬಳಿಕ ನಡೆಯುವ ಋತುಶಾಂತಿ ಮತ್ತು ಮದುವೆ. ಮೊದಲ ಬೆಳೆ ಏಣೆಲು ಕೊಯ್ಲು ಆದ ಬಳಿಕ ಉಳುಮೆ ಮಾಡಿ ಗದ್ದೆಯನ್ನು ಹಸನುಗೊಳಿಸಿ ಬೀಜ ಬಿತ್ತನೆ ಅಣಿಗೊಳಿಸುವ ಕಾರ್ಯವೇ ಗದ್ದೆಗೋರಿ. ಇದನ್ನೆ ಭೂಮಿದೇವಿಯ ಮದುವೆ ಎಂದು ಪರಿಗಣಿಸಿದ್ದಾರೆ. ಈ ಕೃಷಿ ಕೆಲಸವನ್ನು ಒಂದು ಆಚರಣೆಯ ರೀತಿಯಲ್ಲಿ ನಡೆಸಲಾಗುತ್ತದೆ. ಗುತ್ತು ಬೀಡಿನ ಶ್ರೀಮಂತರು ಗದ್ದೆಗೋರಿಯನ್ನು ಬಹಳ ವೈಭವದಿಂದ ನಡೆಸುತ್ತಾರೆ. ಆ ದಿನ ಗದ್ದೆಯಲ್ಲಿ ಕಂಬಳ ನಡೆಯುತ್ತದೆ. ಕೊರಗರಿಂದ ಅಥವಾ ಆದಿ ದ್ರಾವಿಡರಿಂದ ಡೋಲು ಕುಣಿತ ನಡೆಯುತ್ತದೆ. ಭೂತ, ನಾಗರಿಗೆ ವಿಶೇಷ ಕೋಲ ಸಲ್ಲುತ್ತದೆ.

ಮಾಗಿಯ ಮಾಸ ಕಳೆದು ವಸಂತ ಋತು ಪ್ರಾರಂಭವಾಗುವ ಹೊತ್ತಿಗೆ ಪ್ರಕೃತಿಯ ಗಿಡ ಮರಗಳೆಲ್ಲ ಚಿಗುರುತ್ತಿರುವುದನ್ನು ಕಂಡ ಪೂರ್ವಿಕರು ಭೂಮಿದೇವಿ ಋತುಮತಿಯಾಗಿ ಮಿಂದು ಬಂದು ಗರ್ಭ ತಾಳಿದ್ದಾಳೆ ಎಂದು ಭಾವಿಸಿದರು. ಚೇತೋಹಾರಿಯಾದ ಪ್ರಕೃತಿಯನ್ನು ಕಂಡು ಅವರು ಸಂಭ್ರಮ ಪಟ್ಟು 'ಕೆಡ್ಡಸ' ಹಬ್ಬವನ್ನಾಚರಿಸಿದರು. ಕೃಷಿ ಸಂರಕ್ಷಣೆಗಾಗಿ ಕಾಡು ಪ್ರಾಣಿಗಳ ಬೇಟೆಯಾಡುವುದು ಕೆಡ್ಡಸದ ಒಂದು ಭಾಗ. ಕೆಡ್ಡೆಸ ಹಬ್ಬ ಬಂತೆಂದು ತಿಳಿಸುವ ಮತ್ತು ಬೇಟೆಗೆ

ಆಹ್ವಾನ ನೀಡುವ ಕೆಲಸವನ್ನು ಜನಪದರು ಕುಣಿತದ ಮೂಲಕ ನಡೆಸುತ್ತಾರೆ. ಇದುವೇ ಕೆಡ್ಡಸದ ಹೇಳಿಕೆ ಕುಣಿತ.

ಭತ್ತದ ಕೊಯ್ಲು, ಆದ ಬಳಿಕ ಕತ್ತರಿಸಿದ ಪೈರನ್ನು ಬಡಿದು ಭತ್ತವನ್ನು ಬೇರ್ಪಡಿಸುತ್ತಾರೆ. ಹೀಗೆ ಪೈರು ಹೊಡೆದು ಭತ್ತ ಸಂಗ್ರಹಿಸುವ ಸಂದರ್ಭದಲ್ಲಿ ನಾಲ್ಕೈದು ಸೂಡಿ ಪೈರನ್ನು ಪ್ರತ್ಯೇಕವಾಗಿ ತೆಗೆದಿಡುತ್ತಾರೆ. ಇದನ್ನು 'ಪೊಲ್ಸಿನ (ಅದೃಷ್ಟ) ಪೈರು' ಎನ್ನುತ್ತಾರೆ. ನಲ್ಕೆ ಜನಾಂಗದ ಹೆಂಗಸರು ಬಂದು ಕುಣಿತದ ಮೂಲಕ ಈ ಪೊಲ್ಸಿನ ಪೈರನ್ನು ಹಾಡು ಕುಣಿತಗಳ ಮೂಲಕ ಬಡಿದು ಭತ್ತವನ್ನು ಕೊಂಡೊಯ್ಯುತ್ತಾರೆ. ಇದನ್ನು 'ಪೊಲ್ಸೋಡಿ ಪೋಪಿನಿ' ಎನ್ನುತ್ತಾರೆ. ಪೊಲ್ಸು ಎಂದರೆ ಅದೃಷ್ಟ, ಒಡಿ ಪೋಪಿನಿ ಎಂದರೆ ತುಂಬಿ ತುಳುಕುವುದು ಎಂದರ್ಥ.

### ೫.೩.೪. ಮತಸಂಬಂಧೀ ಕುಣಿತಗಳು :

ಪುತ್ತೂರಿನಲ್ಲಿ ಹಲವು ಭಾಷೆ, ಧರ್ಮ, ಮತಗಳಿಗೆ ಸೇರಿದ ಜನರಿದ್ದಾರೆ. ಅವರ ಧರ್ಮದಲ್ಲೇ ವಿಶೇಷವಾದ ಮತಸಂಬಂಧೀ ಕುಣಿತಗಳೂ ಇವೆ. 'ಸಿದ್ಧ ವೇಷ' ಇಲ್ಲಿಯ ಗೌಡ ಜಾತಿಯವರು ನಡೆಸುವ ಕುಣಿತ. ಇದರಲ್ಲಿ ಸನ್ಯಾಸಿ, ಬ್ರಾಹ್ಮಣ ಮತ್ತು ದಾಸಯ್ಯ ವೇಷಗಳಿರುತ್ತವೆ. ಕುಣಿತ ನಡೆಸಲು ಹತ್ತಾರು ಯುವಕರು ಪಂಚೆ ಉಟ್ಟು ನಿಲುವಂಗಿ ಹಾಕಿ ತಲೆಗೆ ಮುಂಡಾಸು ಕಟ್ಟಿ, ಸೊಂಟಕ್ಕೆ ದಟ್ಟಿ ಕಟ್ಟಿ ಸಿದ್ಧರಾಗುತ್ತಾರೆ. ಒಣಗಿದ ಬಾಳೆ ಎಲೆಯನ್ನು ಮೈಮೇಲೆಲ್ಲಾ ಸುತ್ತಿಕೊಂಡ ಬೆತ್ತಲೆ ಸನ್ಯಾಸಿ ಕೈಯಲ್ಲೊಂದು ದೊಡ್ಡೆ ಹಿಡಿದುಕೊಂಡಿರುತ್ತಾನೆ. ನಾಥ ಪಂಥ ಮತ್ತು ವೈದಿಕ ಧರ್ಮದ ಬಗ್ಗೆ ನಡೆದ ಸಂಘರ್ಷವನ್ನು ಬ್ರಾಹ್ಮಣ, ದಾಸಯ್ಯ ಮತ್ತು ಸನ್ಯಾಸಿ ಪರಸ್ಪರ ಜಗಳವಾಡಿಕೊಂಡು ಸಾಂಕೇತಿಕವಾಗಿ ತೋರಿಸುತ್ತಾರೆ.

### ೫.೩.೫. ಕುಟುಂಬ ಸಂಬಂಧೀ ಕುಣಿತಗಳು :

ಸಾಮಾನ್ಯವಾಗಿ ಕೌಟುಂಬಿಕ ಕಲಹಗಳು ಮನೆ ಮನೆಯಲ್ಲೂ ನಡೆಯುತ್ತಲೇ ಇರುತ್ತವೆ. ಅವಿಭಕ್ತ ಕುಟುಂಬದಲ್ಲಂತೂ ಇಂತಹ ಕಲಹಗಳು ಸಾಮಾನ್ಯ. ಅತ್ತೆ–ಸೊಸೆ ಜಗಳ, ಅತ್ತೆ–ನಾದಿನಿ ಜಗಳ, ಗಂಡ–ಹೆಂಡತಿ ಜಗಳ ಇವೆಲ್ಲಾ ಹಿಂದಿನ ಕಾಲದಲ್ಲಿ ಸರ್ವೇ ಸಾಮಾನ್ಯ ಇಂತಹ ಜಗಳಗಳು ಒಂದು ಸಣ್ಣ ಘಟನೆಯಿಂದ ಪ್ರಾರಂಭವಾಗುತ್ತವೆ. ಜನಪದರು ಇಂತಹ ಘಟನೆಗಳನ್ನೇ ವಸ್ತುವನ್ನಾಗಿಟ್ಟುಕೊಂಡು ಹಾಡನ್ನು ಹೆಣೆದು ಕುಣಿತಗಳನ್ನು ಕಟ್ಟಿದರು. ಇಂತಹ ಕುಣಿತಗಳೇ ಕುಟುಂಬ ಸಂಬಂಧಿ ಕುಣಿತಗಳು.

ಚೆನ್ನು ಕುಣಿತವನ್ನು ಈ ಸಾಲಿಗೆ ಸೇರಿಸಬಹುದು. ಇದನ್ನು ಮುಗೇರರು ನಡೆಸುತ್ತಾರೆ. ಇದರಲ್ಲಿ ಚೆನ್ನುವಿನ ಪಾತ್ರವೇ ಮುಖ್ಯ, ಚೆನ್ನು ಎಂದರೆ ಸುಂದರಿ ಎಂದರ್ಥ. ಗಂಡಸರೇ ಈ ಸ್ತ್ರೀ ಪಾತ್ರವನ್ನು ಮಾಡುತ್ತಾರೆ. ಚೆನ್ನು ಕನ್ಯೆಯಲ್ಲ, ಒಂದು ಮಗುವಿನ ತಾಯಿ, ಆದರೆ ಆಕೆ ಅನಾಥೆ, ಮಗುವನ್ನು ಎತ್ತಿಕೊಂಡು ಚೆನ್ನು ಕುಣಿಯುತ್ತಾಳೆ. ತಂಡದ ಸದಸ್ಯರಲ್ಲಿ ಹೆಂಗಸರು, ಗಂಡಸರೂ ಇರುತ್ತಾರೆ. ಅವರೆಲ್ಲ ಸಾಮಾನ್ಯ ಉಡುಪಿನಲ್ಲಿರುತ್ತಾರೆ. ದುಡಿ ಬಾರಿಸಿಕೊಂಡು ಚೆನ್ನುವನ್ನು ಸುತ್ತುವರಿದು ಅವರು ಕುಣಿಯುತ್ತಾರೆ. ಪರವರು ಮದಿಮಯ–ಮದಿಮಲ್ ಎಂಬ ಹೆಸರಿನಿಂದ ಒಂದು ಕುಣಿತವನ್ನು ನಡೆಸುತ್ತಾರೆ. ಇದು ಅಂತರ್ ಜಾತೀಯ ವಿವಾಹವೊಂದನ್ನು ವಿರೋಧಿಸಿದ ಮೇಲ್ವರ್ಗ ಮತ್ತು ಅದನ್ನು ಒಪ್ಪಿಕೊಂಡ ಕೆಳವರ್ಗದ ಮಧ್ಯೆ ನಡೆದ ಸಂಘರ್ಷವೇ ಈ ಕುಣಿತದ ಆಶಯ.

'ಸೋಣದ ಮದಿಮಲೆ' ಮಾದಿಗ ಮಹಿಳೆಯರಿಂದಲೇ ನಡೆಸಲ್ಪಡುವ ಕುಣಿತ. ಹೆಣ್ಣು – ಗಂಡಿನ ಪ್ರಣಯ, ಗಂಡನ ಮನೆಯಲ್ಲಿ ಹೆಣ್ಣಿಗೆ ನೀಡಲಾಗುವ ಹಿಂಸೆ ಇತ್ಯಾದಿ ವಿಷಯಗಳನ್ನೊಳಗೊಂಡ ಹಾಡನ್ನು ಈ ಕುಣಿತದಲ್ಲಿ ಬಳಸಿಕೊಳ್ಳುತ್ತಾರೆ.

**೫.೩.೬. ಕೋಳಿ ಕಟ್ಟುವುದು :**

ಪುತ್ತೂರು ಪರಿಸರದ ಒಂದು ಪ್ರಸಿದ್ಧ ಜನಪದ ಸ್ಪರ್ಧೆ ಕೋಳಿ ಅಂಕ. ಪಂದ್ಯಕ್ಕಾಗಿಯೇ ಸಾಕಿ ಬೆಳೆಸಿದ ಒಳ್ಳೆಯ ಗರ್ವದ ಜಾತಿ ಹುಂಜಗಳ ಕಾಲಿಗೆ ಹರಿತವಾದ ಸಣ್ಣ ಕತ್ತಿ ಕಟ್ಟಿ ಅವುಗಳನ್ನು ಕಾದಾಟಕ್ಕೆ ಬಿಡುವುದೇ ಕೋಳಿ ಅಂಕ. ಇದನ್ನು ಕೋಳಿ ಕಟ್ಟೆ (ಕೋರಿದ ಕಟ್ಟ) ಎಂದೂ ಕರೆಯುತ್ತಾರೆ.

ಎಲ್ಲಾ ಜಾತಿಯ ಕೋಳಿಗಳು ಕಾದಾಟಕ್ಕೆ ನಿಲ್ಲುವುದಿಲ್ಲ. ಹೇಂಟೆಯನ್ನು ಕಾದಾಡಿಸುವ ಕ್ರಮವಿಲ್ಲ. ಕಾದಾಟಕ್ಕೆ ನಿಲ್ಲುವ ಕೋಳಿಗಳು ಊರ ಹುಂಜಗಳು. ಗ್ಯಾಲಸ್ ಎಂಬ ಕೋಳಿ ಇಂದಿನ ಎಲ್ಲಾ ತಳಿಗಳ ಮೂಲ[೧೮]. ಇವು ಬಲಿಷ್ಠವಾಗಿ ಗರ್ವದಿಂದ ಕಾದಾಡುತ್ತವೆ. ಇಂತಹ ಕೋಳಿಗಳ ತಳಿಯನ್ನು ಹುಡುಕಿ ಅಂಕಪ್ರಿಯರು ಆಯ್ಕೆ ಮಾಡುತ್ತಾರೆ. ಒಳ್ಳೆಯ ಆಹಾರ ಕೊಟ್ಟು ಪೋಷಣೆ ಮಾಡುತ್ತಾರೆ. ಕಾದಾಟದ ತರಬೇತು ಮಾಡಿಸುತ್ತಾರೆ. ಕೋಳಿಗಳಲ್ಲಿ ವಿವಿಧ ಜಾತಿಗಳಿವೆ. ದೊಡ್ಡ ಗಾತ್ರದ ಕೋಳಿಯನ್ನು ಪೈಕ ಎಂದೂ, ಸಣ್ಣ ಗಾತ್ರದ ಜಾತಿಯನ್ನು ಜೀಕ ಎಂದೂ ಹೆಸರಿಸುತ್ತಾರೆ. ಉದ್ದವಾದ ಮೊಣಚಾದ ಗರಿ ಇರುವ ಕೋಳಿ ಜಾತಿಯನ್ನು 'ಜಳ್ಳಿ' ಎನ್ನುತ್ತಾರೆ. ಜುಟ್ಟಿಗನುಸಾರವಾಗಿ ಜಾತಿ ವಿಂಗಡಣೆ ಮಾಡುತ್ತಾರೆ. ಬಿಳಿಯ ಬಣ್ಣದ ಕೋಳಿ ಬೊಳ್ಳೆ, ಕಪ್ಪು ಮಿಶ್ರಿತ ಬಿಳಿ ಕರ್ಬೊಳ್ಳೆ, ಕೆಂಪು ಬಣ್ಣದ್ದು ಕೆಂಪ, ಹಳದಿ ಬಣ್ಣದ್ದು ಮಂಜೊಲೆ, ಚುಕ್ಕಿ ಚುಕ್ಕಿಯದ್ದು ಉರಿಯೆ.

ಒಂದೊಂದು ಕೋಳಿಯನ್ನು ಬಿಟ್ಟು ಕಾದಾಡಿಸುವುದು ಮತ್ತು ಇದರಲ್ಲಿ ಸೋತ ಕೋಳಿ ಗೆದ್ದ ಕೋಳಿಯ ಯಜಮಾನನಿಗೆ ಸೇರುವುದು ಸಾಮಾನ್ಯ ನಿಯಮ. ಕೋಳಿ ಅಂಕದ ಬಗ್ಗೆ ಜನರಲ್ಲಿ ಹಲವಾರು ನಂಬಿಕೆಗಳಿವೆ. ಕೋಳಿ ಅಂಕಕ್ಕೆ ಹೊರಡುವ ಮನೆಯ ಯಜಮಾನ ಹೊರಡುವ ಸಿದ್ಧತೆಯಾದ ಬಳಿಕ ತಲೆಗೆ ಮುಂಡಾಸು ಸುತ್ತಿ ಗೂಟದಿಂದ ಕೋಳಿಯನ್ನು ಬಿಚ್ಚುತ್ತಾನೆ. ಕೋಳಿ ಹಿಡಿದುಕೊಂಡು ಅಂಕಕ್ಕೆ ಹೋಗುವಾಗ ವಿಧವೆ, ಒಂಟಿ ಬ್ರಾಹ್ಮಣ, ಸೌದೆ ಹೊರೆ, ಹೊಸ ಮಡಿಕೆ, ನಾಗರಹಾವು ಎದುರಾಗಬಾರದು. ಕೇರೆ ಹಾವು, ಮಾಂಸ, ಕಳ್ಳು (ಸೇಂದಿ) ಶವಯಾತ್ರೆ ಸಿಕ್ಕಿದರೆ ಒಳ್ಳೆಯದು.

ಕೋಳಿ ಅಂಕಗಳನ್ನು ಹಿಂದೆ ಊರಿನ ಉತ್ಸವದ ಸಂದರ್ಭದಲ್ಲಿ ನಡೆಸಲಾಗುತ್ತಿತ್ತು. ದೀಪಾವಳಿ, ಕಾವೇರಿ ಸಂಕ್ರಮಣ, ಕೆಡ್ಡಸ ಮುಂತಾದ ವಿಶೇಷ ಹಬ್ಬಗಳ ದಿನಗಳಲ್ಲಿ ಮಧ್ಯಾಹ್ನ ಭೋಜನವಾದ ಬಳಿಕ ಊರ ಮೈದಾನದಲ್ಲಿ ಕೋಳಿ ಅಂಕದ ಆಸಕ್ತರು ಸೇರಿ ಕೋಳಿ ಅಂಕ ನಡೆಸುತ್ತಿದ್ದರು. ಇತ್ತೀಚಿನ ವರ್ಷಗಳಲ್ಲಿ ಈ ಸ್ಪರ್ದೆಯಲ್ಲಿ ಜೂಜು ನಡೆಯುತ್ತಿದೆ. ಜೂಜಿನ ಕಾರಣದಿಂದಾಗಿಯೇ ಹಲವು ದೇಶಗಳಲ್ಲಿ ಕೋಳಿ ಅಂಕ ನಿಷೇಧಕ್ಕೆ ಒಳಗಾಗಿದೆ. ಇದರಿಂದಾಗಿ ಕ್ರಮೇಣ ಪ್ರಸಿದ್ಧ ಜನಪದ ಕ್ರೀಡೆಯೊಂದು ಕಣ್ಮರೆಯಾಗಿ ಹೋಗುವ ಸಾಧ್ಯತೆ ಇದೆ.

**೫.೩.೭. ಕಂಬಳ :**

ಕಂಬಳ ಒಂದು ಜನಪದ ಪ್ರಕಾರ ವರ್ಷದಲ್ಲಿ ಒಂದು ಬಾರಿ ಪುತ್ತೂರಿನ ಉಪ್ಪಿನಂಗಡಿ ಮತ್ತು ಪುತ್ತೂರು ಮಹಾಲಿಂಗೇಶ್ವರ ದೇವಸ್ಥಾನದ ಗದ್ದೆಯಲ್ಲಿ ಕಂಬಳ ನಡೆಯುತ್ತದೆ. ಕಂಬಳ ಪ್ರಾರಂಭಿಸುವ ಮೊದಲು ಕಟ್ಟು ಪ್ರಕಾರ ಹೇಳಿಕೆ ಕೊಡುವ ಕ್ರಮವಿದೆ. ಹೇಳಿಕೆಯನ್ನು ಸ್ವೀಕರಿಸಿ ದೂರದೂರದಿಂದ ಸಿಂಗರಿಸಲ್ಪಟ್ಟ ಜೊತೆ ಕೋಣಗಳು ಕೊಂಬು ವಾಲಗ ಹಿಮ್ಮೇಳದೊಂದಿಗೆ ಕಂಬಳ ನಡೆಸುವ ಸ್ಥಳಕ್ಕೆ ಬರುತ್ತವೆ. ಕಂಬಳವನ್ನು ವಿಶಾಲವಾದ ಗದ್ದೆಗಳಲ್ಲಿ ನಡೆಸುತ್ತಾರೆ. ಉಪ್ಪಿನಂಗಡಿಯಲ್ಲಿ ನದಿಯ ಮಧ್ಯದಲ್ಲಿ ಸಮತಟ್ಟಾದ ಜಾಗವಿದ್ದು ಅಲ್ಲೇ ವರ್ಷಂಪ್ರತಿ ಬೇಸಿಗೆ ಕಾಲದಲ್ಲಿ ಕಂಬಳ ನಡೆಸುತ್ತಾರೆ.

ಕೋಣಗಳ ಓಟದ ಕಣವನ್ನು ಕರೆ ಎನ್ನುತ್ತಾರೆ. ಕಂಬಳದಲ್ಲಿ ಒಟ್ಟು ನಾಲ್ಕು ವಿಧದ ಸ್ಪರ್ಧೆಗಳಿವೆ. ಹಗ್ಗ ಹಿಡಿ ಓಟ, ಅಡ್ಡ ಹಲಗೆಯ ಓಟ, ನೇಗಿಲ ಓಟ ಮತ್ತು ಕಣೆ ಹಲಗೆಯ ಓಟ. ಕೋಣಗಳು ಗುರಿ ಮುಟ್ಟುವ ಜಾಗಕ್ಕೆ ಮಂಜೊಟ್ಟಿ ಎನ್ನುತ್ತಾರೆ. ಕಣೆ ಹಲಗೆಯನ್ನುಳಿದು ಇತರ ಸ್ಪರ್ಧೆಗಳಲ್ಲಿ ಕೋಣಗಳ ವೇಗವನ್ನು ಪರಿಗಣಿಸಿ ಬಹುಮಾನ ನೀಡಲಾಗುತ್ತದೆ. ಆದರೆ ಕಣೆ ಹಲಗೆಯ ಓಟದಲ್ಲಿ ಮಂಜೊಟ್ಟಿಯ ಸಮೀಪ ಕರೆಗೆ ಅಡ್ಡವಾಗಿ ೨೦-೩೦ ಅಡಿ ಎತ್ತರಕ್ಕೆ ಒಂದೆರಡು

ಕಡೆ ಬಿಳಿ ಬಟ್ಟೆಯ ನಿಶಾನಿ ಕಟ್ಟುತ್ತಾರೆ. ಸಣ್ಣ ಹಲಗೆಯನ್ನು ಕೋಣಗಳ ನೊಗಕ್ಕೆ ಕಟ್ಟಿ ಆ ಹಲಗೆಯ ಮೇಲೆ ನಿಂತುಕೊಂಡು ಕೋಣಗಳನ್ನು ಓಡಿಸಲಾಗುತ್ತದೆ. ಓಟದ ರಭಸಕ್ಕೆ ನೀರು ಕಾರಂಜಿಯಂತೆ ಹಲಗೆಯಿಂದ ಎತ್ತರಕ್ಕೆ ಚಿಮ್ಮುತ್ತದೆ. ಇದು ಎಷ್ಟು ಎತ್ತರಕ್ಕೆ ಚಿಮ್ಮಿದೆ ಎಂಬುದನ್ನು ನಿಶಾನಿಯಲ್ಲಿ ಗುರುತಿಸಿ ಅತ್ಯಂತ ಎತ್ತರಕ್ಕೆ ನೀರು ಹಾಯಿಸಿದ ಕೋಣಗಳಿಗೆ ಮರ್ಯಾದೆ ಕೊಡಲಾಗುತ್ತದೆ.

ಗುತ್ತು ಬೀಡಿನವರು ಕಂಬಳಕ್ಕಾಗಿ ವಿಶೇಷ ಆರೈಕೆಯಿಂದ ಕೋಣಗಳನ್ನು ಸಾಕುವ ಹವ್ಯಾಸವನ್ನು ಇಟ್ಟುಕೊಂಡಿದ್ದರು. ಈಗೀಗ ಕಂಬಳದ ಕೋಣಗಳನ್ನು ಸಾಕಲು ದುಬಾರಿ ವೆಚ್ಚ ತಗಲುವುದರಿಂದ ಕೋಣ ಸಾಕುವವವರ ಸಂಖ್ಯೆ ಕಡಿಮೆಯಾಗಿದೆ.

**೫.೪.೦. ಆರಾಧನಾ ಕಲೆಗಳು**

**೫.೪.೧. ನಾಗಾರಾಧನೆ :**

ಪುತ್ತೂರಿನ ಜನಪದ ಕಲಾಪ್ರಕಾರಗಳಲ್ಲಿ ನಾಗಾರಾಧನೆ ಪ್ರಾಚೀನವಾದುದು. 'ನಾಗಾರಾಧನೆ'ಯ ವಿಶಿಷ್ಟ ಪರಂಪರೆಯ ದ್ಯೋತಕವಾಗಿ ನಿಂತಿರುವ ಈ ಪ್ರಕಾರ ತನ್ನದೇ ಆದ ತಂತ್ರ-ಸಂಪ್ರದಾಯಗಳನ್ನು ಹೊಂದಿದೆ. ಇಲ್ಲಿಯ ಜನರು ನಾಗ ಸಂತುಷ್ಟಿಗಾಗಿ ನಡೆಸಿಕೊಂಡು ಬಂದಿರುವ ಸೇವೆಯೇ 'ನಾಗಮಂಡಲ' ಇದು ಒಂದು ಬಗೆಯ ತಾಂತ್ರಿಕ ನೃತ್ಯ. ಅದು ಪೂರ್ಣ ಮಂಡಲ, ಅರ್ಧ ಮಂಡಲ ಮತ್ತು ಕಾಲು ಮಂಡಲ ಎಂದು ಮೂರು ವಿಧದಿಂದ ರೂಢಿಯಲ್ಲಿದೆ. ಒಂದು ಪೂರ್ಣ ಮಂಡಲವೆಂದರೆ ಹದಿನಾರು ಕಟ್ಟಿನ ನಾಗನ ಚಿತ್ರ ಸ್ಥಾಪನೆ. ಈ ಸೇವೆಯನ್ನು ಸಂತಾನ ಪ್ರಾಪ್ತಿ, ನಾಗಶಾಪ ಮುಕ್ತಿಗಾಗಿ ಮಾಡಿಸುತ್ತಾರೆ.

ಬಣ್ಣ ಬಣ್ಣದ ರಂಗವಲ್ಲಿ ಹುಡಿಗಳಿಂದ ಸುಮಾರು ಹತ್ತು-ಹದಿನೈದು ಅಡಿ ವ್ಯಾಸದ ವೃತ್ತದಲ್ಲಿ ಸರ್ಪದ ಚಿತ್ರವನ್ನು ಬರೆಯಲಾಗುತ್ತದೆ. ಈ ವೃತ್ತದಲ್ಲಿನ ಚಿತ್ರ ವಿವಿಧ ಗತಿಯಲ್ಲಿ ಚಲಿಸುವ ಸರ್ಪದ್ದಾಗಿ ರುತ್ತದೆ. ಭಕ್ತರು ಹೇಳಿಕೊಂಡ ಹರಕೆಗೆ ಅನುಸಾರವಾಗಿ ಮಂಡಲದ ಗಾತ್ರವಿರುತ್ತದೆ. ಈ ಚಿತ್ರ ಬರೆಯಲು ಸುಮಾರು ೫೦ಕ್ಕೂ ಹೆಚ್ಚು ಪೌಂಡು ರಂಗವಲ್ಲಿ ಹುಡಿ ಉಪಯೋಗಿಸಲಾಗುತ್ತದೆ. ಈ ಚಿತ್ರ ಬರೆಯುವುವವ ರನ್ನು ಹಾಗೂ ಅನಂತರ ನಾಗಪಾತ್ರಿಯೊಂದಿಗೆ ಕುಣಿಯುವವರನ್ನು 'ವೈದ್ಯ'ರೆಂದು ಕರೆಯುತ್ತಾರೆ.

ವೈದ್ಯರು ಈ ಮಂಡಲ ಬರೆಯಲು ಕನಿಷ್ಠ ಪಕ್ಷ ಹತ್ತು ಗಂಟೆಯ ಸಮಯ ತೆಗೆದುಕೊಳ್ಳುತ್ತಾರೆ. ಆದ್ದರಿಂದ ಹೆಚ್ಚಾಗಿ ನಾಗಮಂಡಲ ಸೇವೆ ರಾತ್ರಿಯಲ್ಲೇ ನಡೆಯುತ್ತದೆ. ಮಂಡಲ ಬರೆದ ಮೇಲೆ ಅದರ ಸುತ್ತಲೂ ಪಿಂಗಾರ(ಕಂಗಿಲ) ಹೂಗಳ ದಂಡೆ ಹಾಕುತ್ತಾರೆ. ಅನಂತರ ಈ

ಮಂಡಲದ ಮುಂದೆ ಸೇವೆ ಮಾಡಿಸುವ ಯಜಮಾನ ದಂಪತಿಗಳನ್ನು ಕುಳ್ಳಿರಿಸಿ ಪುರೋಹಿತರು ನಾಗಬ್ರಹ್ಮನ ಆವಾಹನೆ ಮಾಡುತ್ತಾರೆ. ಮಂಡಲದ ನಾಗನಿಗೆ ನೈವೇದ್ಯ, ಆರತಿಯಾದ ತರುವಾಯ ಡಮರುಗದಂತಹ ಎರಡು ಮುಖದ 'ಢಕ್ಕೆ' (ಡಕ್ಕೆ) ಎಂಬ ತಾಳ ವಾದ್ಯವನ್ನು ಬಾರಿಸುತ್ತಾ ಅರ್ಧನಾರಿ, ಅರ್ಧಪುರುಷ ವೇಷ ಧರಿಸಿದ 'ವೈದ್ಯರು' ತಾಳಬದ್ಧವಾಗಿ ನಾಗಸ್ತುತಿ ಮಾಡುತ್ತಾರೆ. ಮಂಡಲದ ಸುತ್ತ ಕುಣಿಯುತ್ತಾರೆ. ಅಷ್ಟರಲ್ಲಿ ನಾಗಪಾತ್ರಿಯ ದರ್ಶನ ಪ್ರಾರಂಭವಾಗುತ್ತದೆ.

ನಾಗಸ್ವರದ ಹಿಮ್ಮೇಳದಲ್ಲಿ ಪುರೋಹಿತರು ಪಾತ್ರಿಗೆ ನಾಗದೇವನ ತೀರ್ಥ–ಪ್ರಸಾದಗಳನ್ನು ಕೊಡುತ್ತಾರೆ. ನಾಗದೇವ ಈ ಪಾತ್ರಿಯ ಮೈಮೇಲೆ ಬರುತ್ತಾನೆಂಬ ನಂಬಿಕೆ. ಆಗ ಆತನಲ್ಲಿ ಉಂಟಾಗುವ ಮೈನಡುಕ, ತರಂಗಬದ್ಧವಾದ ನೃತ್ಯ ಎಂಥವರಲ್ಲೂ ನಡುಕ ಹುಟ್ಟಿಸುತ್ತದೆ.

ಈ ತಾಂತ್ರಿಕ ನೃತ್ಯ ಕಾರ್ಯಕ್ರಮ ಕಡಿಮೆಯೆಂದರೆ ನಾಲ್ಕು ಗಂಟೆಗಳ ಕಾಲ ನಡೆಯುತ್ತದೆ. ಪ್ರಕೃತಿ–ಪುರುಷ ಸಂಕೇತವಾಗಿರುವ ಅರ್ಧನಾರೀಶ್ವರ ವೇಷ ಧರಿಸಿದ ವೈದ್ಯರು ತಾವೂ ಕುಣಿಯುತ್ತಾ ನಾಗಪಾತ್ರಿಯನ್ನೂ ಕುಣಿಸುತ್ತಾರೆ. ಹೀಗೆ ನರ್ತನ ಮಾಡುವ ವೇಳೆ ವೈದ್ಯರು 'ಢಕ್ಕೆ ಬಾರಿಸುವುದಲ್ಲದೆ ನಾಗನನ್ನು ಹೊಗಳಿ, ಇನ್ನೊಮ್ಮೆ ತೆಗಳಿ ಯಕ್ಷಗಾನವನ್ನು ಹೋಲುವ ಧಾಟಿಯಲ್ಲಿ ಅಸ್ಪಷ್ಟ ಕನ್ನಡದ ಪದ ಗಳನ್ನು ಹಾಡುತ್ತಾರೆ. ಹೊಗಳಿದಾಗ ಹಿಗ್ಗನ್ನೂ, ತೆಗಳಿದಾಗ ರೋಷವನ್ನೂ ಪ್ರದರ್ಶಿಸುವ ನಾಗನ ಕುಣಿತ ಪ್ರೇಕ್ಷಣೀಯವಾದದ್ದು, ಈ ನೃತ್ಯೋತ್ಸವದ ಅಂತ್ಯದಲ್ಲಿ ನಾಗಪಾತ್ರಿ ಸೇವೆ ಕೊಟ್ಟ ಯಜಮಾನನಿಗೆ ನುಡಿ ಕೊಡುವ ಸಂಪ್ರದಾಯವಿದೆ. ಮಾಡಿಸಿದ ಸೇವೆಯಿಂದ ಸಂತುಷ್ಟಿಯಾದರೆ ನಾಗಪಾತ್ರಿ ಯಜಮಾನನಿಗೆ ಅಭಯಹಸ್ತವನ್ನು ನೀಡಿ ಶುಭಪ್ರಸಾದ ಕೊಡುತ್ತಾನೆ. ಇಲ್ಲವಾದರೆ ನಾಗ ಸಂತುಷ್ಟಿಗಾಗಿ ಇನ್ನೊಂದು ಮಂಡಲ ಮಾಡಿಸಲು ಆಜ್ಞಾಪಿಸುತ್ತಾನೆ.

ನಾಗಮಂಡಲದ ಸಂಕ್ಷಿಪ್ತ ರೂಪ ಒಂದಿದೆ. ಇದು ಸಾಮಾನ್ಯ ಭಕ್ತರ ಸೇವೆ. ಇದಕ್ಕೆ 'ಢಕ್ಕೆ ಬಲಿ' ಎನ್ನುತ್ತಾರೆ. ನಾಗಮಂಡಲದಷ್ಟು ವಿವರ – ವಿಸ್ತಾರಗಳಿಲ್ಲದ ಈ ತಾಂತ್ರಿಕ ವಿಧಿಯಲ್ಲಿ ವೈದ್ಯ ಮತ್ತು ನಾಗಪಾತ್ರಿಯ ನೃತ್ಯ ಮಾತ್ರ ಇರುತ್ತದೆ.

**೫.೪.೨ ಭೂತಾರಾಧನೆ :**

ನೂರಾರು ವರ್ಷಗಳಿಂದ ಪುತ್ತೂರಿನ ಜನರ ಸಾಂಸ್ಕೃತಿಕ ಬದುಕನ್ನು ನಿರ್ದೇಶಿಸುತ್ತ ಬಂದಿರುವ ಭೂತಾರಾಧನಾ ಸಂಪ್ರದಾಯವು ಹಲವಾರು ಸಾಂಸ್ಕೃತಿಕ ಅಂಶಗಳನ್ನು ಒಳಗೊಂಡಿರುವ ವಿಲಕ್ಷಣ ಬೆಸುಗೆಯಾಗಿದೆ. ಇದೊಂದು ಧಾರ್ಮಿಕ ರಂಗಭೂಮಿಯೂ ಆಗಿದ್ದು, ಇದರಲ್ಲಿ ಆರಾಧನಾಂಶ, ಕಲಾತ್ಮಕಾಂಶ, ಮನೋರಂಜನಾಂಶ, ನ್ಯಾಯವಿತರಣಾಂಶ ಇತ್ಯಾದಿಗಳು

ಸೇರ್ಪಡೆಗೊಂಡು ಇದೊಂದು ಸಂಕೀರ್ಣ ವ್ಯವಸ್ಥೆಯೇ ಆಗಿದೆ. ಈ ಆರಾಧನಾ ಪದ್ಧತಿ ಪುತ್ತೂರಿನ ಜನಜೀವನದಲ್ಲಿ ಹಾಸುಹೊಕ್ಕಾಗಿದ್ದು ಈಗಲೂ ಊರ್ಜಿತವಾಗಿಯೇ ಇದೆ.

ತುಳುನಾಡಿನ ದೈವಗಳನ್ನು ನಿರ್ದಿಷ್ಟ ಸಂಖ್ಯೆಯಲ್ಲಿ ಹೇಳುವಂತಿಲ್ಲ[೧೯]. ಸುಮಾರು ನಾಲ್ಕು ನೂರರಷ್ಟು ಇರಬಹುದೆಂದು ಅಮೃತ ಸೋಮೇಶ್ವರರ ಅಭಿಪ್ರಾಯ ಕೆಲವು ದೈವಗಳಿಗೆ ಬೇರೆ ಬೇರೆ ಕಡೆ ಬೇರೆ ಬೇರೆ ಹೆಸರುಗಳುಂಟು. ಈ ದೈವಗಳ ಮೂಲ, ಅಂತಸ್ತು, ವ್ಯಾಪ್ತಿ, ಸ್ವರೂಪ ಇತ್ಯಾದಿಗಳ ದೃಷ್ಟಿಯಿಂದ ಹಲವು ಬಗೆಯಲ್ಲಿ ವರ್ಗೀಕರಿಸಬಹುದು. ಪಂಜುರ್ಲಿ, ಮೈಸಂದಾಮ, ಪಿಲಿಚಾಮುಂಡಿ ಭೂತಗಳು ಪ್ರಾಣಿ ಮೂಲದವುಗಳಾಗಿವೆ. ಪುರಾಣಗಳಿಂದ ಇಳಿದು ಬಂದು ಆರಾಧನಾರಂಗದಲ್ಲಿ ಕಾಣಿಸಿಕೊಂಡ ಕೆಲವು ಭೂತಗಳಿವೆ. ರಕ್ತೇಶ್ವರಿ, ಚಾಮುಂಡಿ, ವಿಷ್ಣುಮೂರ್ತಿ, ಭೈರವ, ಗುಳಿಗ ಮೊದಲಾದವು ಈ ವರ್ಗಕ್ಕೆ ಸೇರಿವೆ[೨೦].

ಭೂತಾರಾಧನೆಯ ಬಗ್ಗೆ ಜಾನಪದ ವಿಶ್ವಕೋಶದಲ್ಲಿ ಈ ವಿವರಗಳು ಸಿಗುತ್ತವೆ. ದಕ್ಷಿಣ ಕನ್ನಡದಲ್ಲಿ ಭೂತ ಪೂಜೆಯ ಸಂಪ್ರದಾಯ ಇತಿಹಾಸ ಪೂರ್ವಕಾಲದಿಂದಲೇ ಬೆಳೆದು ಬಂದಿರಬೇಕೆಂದು ಫಾದರ್ ಹೆರಾಸರು ಅಭಿಪ್ರಾಯ ಪಟ್ಟಿದ್ದಾರೆ. ಭೂತಾರಾಧನೆಯ ಸಂಪ್ರದಾಯ ತಲೆಮಾರಿನಿಂದ ತಲೆಮಾರಿಗೆ ಲಿಖಿತ ದಾಖಲೆಗಳಿಲ್ಲದೆ ಮುಂದುವರಿದು ಬಂದಿದೆ. ತುಳುಭಾಷೆಯೇ ಭೂತಾರಾಧನೆಯ ಮಾತೃಭಾಷೆ ಮತ್ತು ಭೂತಾರಾಧನೆಯ ಮಾಧ್ಯಮ ಭಾಷೆಯಾಗಿರುವುದರಿಂದ ಇದಕ್ಕೆ ಸಂಬಂಧಿಸಿದ ಲಿಖಿತ ಐತಿಹ್ಯ ಉಳಿದಿಲ್ಲ[೨೧].

ಭೂತಾರಾಧನೆಗೂ ಬೇಸಾಯಕ್ಕೂ ಸಂಬಂಧವಿದೆ. ಭೂತಾರಾಧನೆಯಲ್ಲಿ ಉಪಯೋಗಿಸುವ ಭತ್ತ, ಅಕ್ಕಿ, ತೆಂಗಿನಕಾಯಿ, ಅಡಿಕೆ, ತೆಂಗಿನ ಗರಿ ಇವೆಲ್ಲಾ ಬೇಸಾಯಕ್ಕೆ ಸಂಬಂಧಿಸಿದ ಸಾಮಗ್ರಿಗಳು. ಮಳೆ ಬಾರದಿದ್ದರೆ, ಭತ್ತದ ಪೈರಿಗೆ ಕೀಟಗಳ ತೊಂದರೆಯಾಗದಂತೆ, ಜಾನುವಾರು ಕಳೆದು ಹೋದರೆ, ಅಡಿಕೆ – ತೆಂಗಿನಕಾಯಿಗಳು ಕಳುವಾದರೆ ಜನಸಾಮಾನ್ಯರು ಹರಕೆ ಹೇಳುವುದು ಭೂತಗಳಿಗೆ.

ಸಾಮಾನ್ಯವಾಗಿ ಭೂತವೇಷದ ಕುಣಿತವನ್ನೊಳಗೊಂಡ ಆರಾಧನೆಗೆ ನೇಮ ಅಥವಾ ಕೋಲ ಎನ್ನುತ್ತಾರೆ[೨೨]. ಗ್ರಾಮಸ್ಥರು ಮಾಡಿಸುವ ನೇಮವಾದರೆ, ಮೊದಲು ಗ್ರಾಮಸ್ಥರು ದಿನ ನಿರ್ಣಯ ಮಾಡಬೇಕು. ಭೂತದ ವೇಷ ಹಾಕುವವರು. ಮೊದಲು ಮುಖಕ್ಕೆ ಹಳದಿ ಬಣ್ಣ ಬಳಿಯುವುದೇ ಮುಂತಾದ ವಿನ್ಯಾಸಗಳನ್ನು ಮಾಡಿಕೊಳ್ಳುತ್ತಾರೆ. ಕೆಂಪು ಬಣ್ಣದ ಅಂಗಿ ಚಲ್ಲಣಗಳನ್ನು ಧರಿಸಿ ತಲೆಗೆ ಬೆಳ್ಳಿ ಅಥವಾ ಚಿನ್ನದ ತಲೆಯಣಿ ಮತ್ತು ತಲೆಪೇಟವನ್ನು ಬಿಗಿಯುತ್ತಾರೆ. ಕೈಗಳಿಗೆ ಬೆಳ್ಳಿಯ ನಾಲ್ಕು ದಂಡೆಗಳನ್ನು ಕಿಸ್ಕಾರ (ಕೇಪುಳ) ಹೂಗಳ ಮಾಲೆಯ ಮಧ್ಯೆ ಜೋಡಿಸುತ್ತಾರೆ. ಎಳೆಯ ತೆಂಗಿನ ಗರಿಗಳಿಂದ ಮಾಡಿರುವ ಮಾಲೆಯನ್ನು ಸೊಂಟಕ್ಕೆ ಬಿಗಿಯುತ್ತಾರೆ. ಕಾಲಿಗೆ ಹಾಳೆಯನ್ನು ಬಿಗಿದು

ಅದರ ಮೇಲೆ ಗೆಜ್ಜೆಯಂಥ 'ಗಗ್ಗರ' ಎಂಬ ಕಡಗಳನ್ನು ಸಿಕ್ಕಿಸಿಕೊಳ್ಳುತ್ತಾರೆ. ಗಗ್ಗರ ಇಟ್ಟೊಡನೆಯೇ ಆವೇಶ ಬಂದು ನಡುಗ ತೊಡಗುತ್ತಾರೆ. ದೀವಟಿಕೆಯಿಂದ ಎದೆಗೆ ಬೆಂಕಿ ಇಟ್ಟುಕೊಳ್ಳುತ್ತಾರೆ. ಇದಕ್ಕೆ ವಾಲಗ ಬ್ಯಾಂಡುಗಳ ಹಿಮ್ಮೇಳ ಇರುತ್ತದೆ. ಇದು ಅಬ್ಬರದ ಕಾರ್ಯಕ್ರಮ. ಅರ್ಧ ಗಂಟೆಯ ನಂತರ ಎಳನೀರು ಕುಡಿದು ಸ್ವಲ್ಪ ಹೊತ್ತು ವಿಶ್ರಾಂತಿ. ಎರಡನೆಯ ಭಾಗದಲ್ಲಿ ವಿಶೇಷ ಅಬ್ಬರವಿಲ್ಲ ಒಂದು ಕೈಯಲ್ಲಿ ಗಂಟೆ ಇನ್ನೊಂದು ಕೈಯಲ್ಲಿ ಖಡ್ಗವಿರುತ್ತದೆ. ಮುಖ್ಯಸ್ಥರೊಡನೆ ಆರಾಧನೆಯ ಕಾರಣ ಮುಂತಾದವುಗಳ ವಿಚಾರಣೆ ಯಥಾಕ್ರಮದಂತೆ ಅವರಿಗೆ ರಕ್ಷಣೆಯ ಅಭಯ ನೀಡುತ್ತಾರೆ. ಹಾಲು, ಅರಳು, ದೋಸೆ ಮುಂತಾದವುಗಳನ್ನು ಕೈಗೊಂಡು  ನೇಮ ಮುಕ್ತಾಯವಾಗುತ್ತದೆ. ಭೂತಗಳು ಆವೇಶ ಬಂದು ನಡುಗಿ ಸ್ಮೃತಿ ತಪ್ಪುವುದು ಅಪರೂಪವಲ್ಲ ಕ್ಷಣಕಾಲವಾದರೂ ವೇಷಧಾರಿ ಮತ್ತು ಪಾತ್ರಗಳು ತಮ್ಮನ್ನು ತಾವು ಮರೆಯುತ್ತಾರೆ. ಇಂಥ ಅತಿಮಾನುಷ ಅಂಶವೇ ಜನರಲ್ಲಿ ಭೂತಾರಾಧನೆಯ ಆಸಕ್ತಿಯನ್ನು ಉಳಿಸಿದೆ.

**೫.೫.೦. ಜನಪದ ಪರಿಕರಗಳು (ಗೃಹ, ವಾದ್ಯ, ಕೃಷಿ)**

**ಗೃಹ** : ಪುತ್ತೂರಿನ ಪರಿಸರದಲ್ಲಿ ಕೃಷಿಯೇ ಪ್ರಧಾನ ಪಾತ್ರ ವಹಿಸುತ್ತದೆ. ದಿನ ಬೆಳಗಾದೊಡೆ ಭೂಮಿ ತಾಯನ್ನು ಮನಸಾರೆ ಧ್ಯಾನಿಸಿ ತಮ್ಮ ತಮ್ಮ ಕೆಲಸ ಕಾರ್ಯಗಳಲ್ಲಿ ಮಗ್ನರಾಗುವ ರೈತಾಪಿ ವರ್ಗವೇ ಇಲ್ಲಿ ಅಧಿಕ. ಆಚಾರ, ವಿಚಾರ, ಸಂಸ್ಕೃತಿಯಲ್ಲಿ ಎಲ್ಲರಂತೆ ವೈಶಿಷ್ಟ್ಯವನ್ನು ಹೊಂದಿರುವ ಪುತ್ತೂರಿನ ಜನರು ತಮ್ಮ ದಿನ ನಿತ್ಯದ ಆಗುಹೋಗಿನ ನಡುವೆ ಅನೇಕ ರೀತಿಯ ಕೃಷಿ ಸಲಕರಣೆಗಳನ್ನೋ, ಕೃಷಿಗೆ ಪೂರಕವಾದ ನಿತ್ಯೋಪಯೋಗಿ ವಸ್ತುಗಳನ್ನೋ ಉತ್ಕೃಷ್ಟ ದರ್ಜೆಯ ಪ್ರಕೃತಿ ಪ್ರಿಯ ವಸ್ತುಗಳನ್ನೋ ಆವಿಷ್ಕರಿಸಿ ಸಮಾಜಕ್ಕೆ ನೀಡಿದ್ದಾರೆ. ಅವುಗಳಲ್ಲಿ ಅನೇಕ ಸಾಮಗ್ರಿಗಳು ಜನ ಮಾನಸದಿಂದ ದೂರ ಸರಿದು ಕಾಲ ಗರ್ಭದೊಳಗೆ ಸೇರಿವೆ. ವಸ್ತು ಸಂಗ್ರಹಾಲಯ ಸೇರುತ್ತಿವೆ. ಉದಾಹರಣೆಗೆ ತುಳುನಾಡಿನ ಜನತೆ ದಿನನಿತ್ಯದ ಕೃಷಿ ಚಟುವಟಿಕೆಗಳಲ್ಲಿ ಉಪಯೋಗಿಸುತ್ತಿದ್ದ ನೇಗಿಲು, ನೊಗಗಳು ಮಾಯವಾಗಿ ಆ ಜಾಗವನ್ನು ಟಿಲ್ಲರ್ ಆಕ್ರಮಿಸಿದೆ. ಹಿಂದಿನಿಂದ ಇದ್ದಂತಹ ಜನಪದ ಪರಿಕರಗಳು ಯಾವುದೆಂದರೆ.

೧. **ಹರಿವಾಣ** : ಸಂಪ್ರದಾಯಕ್ಕೆ ಒತ್ತು ನೀಡುವ ತುಳುನಾಡಿನ ಜನತೆಯ ಆಚರಣೆಗಳಿಗೆ ಹರಿವಾಣ ಅತೀ ಅಗತ್ಯವಾದ ವಸ್ತುವಾಗಿತ್ತು. ಹರಿವಾಣದಲ್ಲಿ ವೀಳ್ಯದೆಲೆ ಬದಲಾಯಿಸುವುದೆಂದರೆ ಅದು ಜನ ಸಮೂಹದ ಮುಂದೆ ಸತ್ಯ ಪ್ರಮಾಣ ಮಾಡಿದಂತೆ. ಹಿಂದೆ ಬಣ್ಣಬಣ್ಣದ ಕಾಗದಗಳ ಬಳಕೆ ಇರದಿದ್ದಾಗ 'ಹೇಳಿಕೆ'ಗಳನ್ನು ಹರಿವಾಣದಲ್ಲಿ ವೀಳ್ಯದೆಲೆ ನೀಡುವುದರ ಮೂಲಕ

ಮಾಡುತ್ತಿದ್ದರು. ಮನೆಗೆ ನೆಂಟರು ಬಂದಾಗ ಅವರನ್ನು ನೀರು ಮತ್ತು ಹರಿವಾಣದಲ್ಲಿ ವೀಳ್ಯದೆಲೆ, ಅಡಿಕೆ ಕೊಟ್ಟು ಸ್ವಾಗತಿಸು ತ್ತಿದ್ದರು. ಸಭೆ ಸಮಾರಂಭದಲ್ಲೂ ಅತಿಥಿಗಳನ್ನು ಸ್ವಾಗತಿಸಲು ಹರಿವಾಣದಲ್ಲಿ ವೀಳ್ಯದೆಲೆ, ಅಡಿಕೆ ಇಟ್ಟು ಅದನ್ನು ನೀಡಿ ಸ್ವಾಗತಿಸುತ್ತಿದ್ದರು.

**೨. ಇಳಿಚ್ಚಾರ್** : ಇಳಿಚ್ಚಾರ್ ಎಂದರೆ ಮರದ ಕುರ್ಚಿಗೆ ಹತ್ತಿ ಬಟ್ಟೆಯನ್ನು ಸಿಕ್ಕಿಸಿ (ಕಟ್ಟಿ) ಐಶಾರಾಮಿಯಾಗಿ ಕುಳಿತುಕೊಳ್ಳಬಹುದಾದ ಒಂದು ಆಸನ. ಊರಿನಲ್ಲಿರುವ ಶ್ರೀಮಂತರು ಇಲ್ಲವೇ ಮಧ್ಯಮ ವರ್ಗದ ಜನರ ಮನೆಯಲ್ಲಿ ಮಾತ್ರ ಹಿಂದೆ ಇಂತಹ ಕುರ್ಚಿಗಳಿದ್ದವು. ಇಂತಹ ಇಳಿಚ್ಚಾರ್ ಗಳಲ್ಲಿ ಕುಳಿತುಕೊಳ್ಳುವುದೆಂದರೆ ಹಿರಿಯರು ಅಥವಾ ಶ್ರೀಮಂತ ವರ್ಗದ ಜನ ಮಾತ್ರ ಎಂಬ ಭಾವನೆ ಯಿತ್ತು. ಇತ್ತೀಚಿನ ದಿನಗಳಲ್ಲಿ ಪ್ಲಾಸ್ಟಿಕ್ ಕುರ್ಚಿ, ಸೋಫಾಗಳು ಬಂದ ನಂತರ ಇಂತಹ ಇಳಿಚ್ಚಾರ್ ನೋಡಲು ಅಪರೂಪವಾಗಿದೆ.

**೩. ಇಟ್ಟಿಗೆ ಮಣೆ** (ಮರದ) : ಹಿಂದೆಲ್ಲ ಕೆಂಪು ಕಲ್ಲಿನಿಂದಾದ ಗೋಡೆಗಳಾಗಲೀ, ಸಿಮೆಂಟ್ ಬ್ಲಾಕ್‌ನಿಂದ ಕಟ್ಟಿದ ಗೋಡೆಗಳಾಗಲೀ ಇರುತ್ತಿರಲಿಲ್ಲ. ಬದಲಾಗಿ ಮರದಿಂದ ತಯಾರಿಸಿದ ಒಂದು ಅಚ್ಚಿನ ಮಣೆ ಇರುತ್ತಿತ್ತು. ಮಣ್ಣನ್ನು ಕಲಸಿ ಈ ಅಚ್ಚಿನ ಮೂಲಕ ಇಟ್ಟಿಗೆ ಬಿಡಲಾಗುತ್ತಿತ್ತು. ಬೇಸಿಗೆ ಕಾಲದಲ್ಲಿ ಬಿಡುವ ಇಟ್ಟಿಗೆ ಒಣಗಿಸಲು ಸುಮಾರು ೨೦ ದಿನಗಳು ಬೇಕಾಗಿತ್ತು. ಈ ಇಟ್ಟಿಗೆಗಳು ಒಣಗಿದ ಮೇಲೆ ಪ್ರಸ್ತುತ ಕೆಂಪು ಕಲ್ಲು ಅಥವಾ ಸಿಮೆಂಟ್ ಬ್ಲಾಕ್‌ನಿಂದ ಗೋಡೆಗಳನ್ನು ಕಟ್ಟುವಂತೆ, ಇಟ್ಟಿಗೆಗಳಿಂದಲೂ ಗೋಡೆ ಕಟ್ಟುತ್ತಿದ್ದರು. ಕೆಲಸವೂ ಬೇಗನೆ ಆಗುತ್ತಿತ್ತು.

**೪. ಉಜಿಡೆ** : ವಯಸ್ಸಾದ ಮುದುಕರಿಗೆ ಹಲ್ಲು ಹೋದ ಸಂದರ್ಭದಲ್ಲಿ ಅವರು ವೀಳ್ಯದೆಲೆ ತಿನ್ನುವ ಜಾಯಮಾನದವರಾಗಿದ್ದರೆ 'ಉಜಿಡೆ' ಎಂಬ ಸಾಧನವನ್ನು ಉಪಯೋಗಿಸುತ್ತಿದ್ದರು. ವೀಳ್ಯದೆಲೆ ಹಾಗೂ ಅಡಿಕೆ (ಪೂಲ್)ಯನ್ನು ಒಟ್ಟಿಗೆ ಮರದ ಒಂದು ಸಾಧನದಲ್ಲಿ ಹಾಕುತ್ತಿದ್ದರು. ಅನುಕೂಲಕ್ಕಾಗಿ ಮರದ ತುಂಡಿನಲ್ಲಿ ಒಂದು ಹೊಂಡದಂತೆ ಗುಳಿಯಿರುತ್ತಿತ್ತು. ಅದನ್ನು ಸರಿಯಾಗಿ 'ಕೊದಂಟಿ'ಯೆಂಬ ಸಾಧನದಿಂದ ಗುದ್ದಿ ಹುಡಿ ಮಾಡಿ ತಿನ್ನುತ್ತಿದ್ದರು. ಇಂದೂ ಸಹ ಹಲವು ಮುದುಕರು ವೀಳ್ಯದೆಲೆ ತಿನ್ನುವ ಅಭ್ಯಾಸ ಉಳ್ಳವರು ಈ ಸಾಧನವನ್ನು ಬಳಸುತ್ತಾರೆ.

**೫. ಉಜ್ಜೆರ್** : ಕನ್ನಡದಲ್ಲಿ ಒನಕೆ ಎನ್ನುವ 'ಉಜ್ಜೆರ್' ಇತ್ತೀಚಿನ ದಿನಗಳಲ್ಲಿ ಜನಮಾನಸ ದಿಂದ ದೂರ ಸರಿಯುತ್ತಿದೆ. ಭತ್ತ ಕುಟ್ಟಲು ಉಪಯೋಗಿಸುವ ಒನಕೆ ಭತ್ತದ ಹೊಟ್ಟು ಮತ್ತು ಅಕ್ಕಿಯನ್ನು ಬೇರ್ಪಡಿಸುತ್ತದೆ. ಪ್ರಸ್ತುತ ಉಜ್ಜೆರ್‌ನ ಬದಲಿಗೆ ಹಲ್ಲರ್‌ಗಳು ಕ್ಷಿಪ್ರ ಕ್ರಾಂತಿಯನ್ನೇ ಮಾಡಿವೆ. ಇದರೊಂದಿಗೆ ಭತ್ತ ಕುಟ್ಟುವ ಹಾಡುಗಳೂ ಪೋಷಕರಿಲ್ಲದೆ ವಿನಾಶದಂಚಿನಲ್ಲಿದೆ.

**೬. ಎದಿಪ್ಪಾಲೆ :** ಬೀಸಣಿಕೆಯ ಪರಿಕಲ್ಪನೆ ಸಮಯದಿಂದ ಸಮಯಕ್ಕೆ ಬದಲಾಗುತ್ತಾ ಬಂದಿದೆ. ಹಿಂದೆ ಅಡಿಕೆ ತೋಟದಲ್ಲಿ ದೊರೆಯುವ ಅಡಿಕೆ ಮರದ ಹಾಳೆಯಿಂದಲೇ ಬೀಸಣಿಕೆ ತಯಾರಿಸಿ ಬೇಸಿಗೆ ಕಾಲದಲ್ಲಿ ದಣಿವಾರಿಸಿಕೊಳ್ಳುತ್ತಿದ್ದರು. ಇದು ಪ್ರಕೃತಿಯಿಂದಲೇ ಸುಲಭವಾಗಿ ಲಭ್ಯ ಹಾಗೂ ಪ್ರಕೃತಿಗೆ ಮಾರಕವೂ ಅಲ್ಲ.

**೭. ಏಣಿ (ಲೆಂಚಿ) :** ಮನೆಯ ಒಂದು ಮೂಲೆಯಲ್ಲಿ ಅಟ್ಟಕ್ಕೆ ಹತ್ತಲು ಏಣಿಯನ್ನು ಬಳಸುತ್ತಿದ್ದರು. ಬಿದಿರನ್ನು ಸಿಗಿದು ತೂತು ಮಾಡಿ ಅದರ ಸಲಾಕೆಯನ್ನು ತೂತಿನೊಳಗೆ ಸೇರಿಸಿ ಏಣಿಯನ್ನು ತಯಾರಿಸಲಾಗುತ್ತದೆ. ಇಂತಹ ಏಣಿಗಳು ಅಟ್ಟ ಹತ್ತಲು ಅಷ್ಟೇ ಅಲ್ಲದೆ. ಸಣ್ಣ ಪುಟ್ಟ ಮರಗಳ ಮೇಲೆ ಹೋಗಲು, ತರಗೆಲೆಗಳನ್ನು ತಂದು ರಾಶಿ ಹಾಕಿದಾಗ ಅದರ ಮೇಲೆ ಹೋಗಲು, ಉಪಯೋಗಿಸುತ್ತಾರೆ.

**೮. ಒಚ್ಚಿದ ಮರ :** ಕೃಷಿಕರಿಗೆ ಕತ್ತಿ ಪ್ರಧಾನವಾದ ಸಲಕರಣೆ, ಪ್ರತೀ ಆಯುಧವೂ ಸಮರ್ಪಕವಾಗಿದ್ದರಷ್ಟೇ ಹಿಡಿದ ಕೆಲಸ ಪರಿಪೂರ್ಣಗೊಳಿಸಲು ಸಾಧ್ಯ. ಆದ್ದರಿಂದ ಕತ್ತಿಯನ್ನು ಹರಿತಗೊಳಿಸಲು ಕಾಸರಕನ ಮರದ ಒಂದು ತುಂಡನ್ನು ಸ್ವಲ್ಪ ಸಿಪ್ಪೆ ತೆಗೆದು ಸಿದ್ಧಪಡಿಸಿ, ಬಿಳಿಕಲ್ಲಿನ ಹುಡಿಯನ್ನು ಹಾಕಿ ಅದರ ಮೇಲೆ ಕತ್ತಿ ಉಜ್ಜುವ ಮೂಲಕ ಬಳಸುತ್ತಾರೆ. ಈ ಮರವನ್ನು ಒಚ್ಚಿದ ಮರ ಎಂದು ಕರೆಯುತ್ತಾರೆ. ಇದು ಕೇವಲ ಕತ್ತಿಯಲ್ಲದೆ ಉಳಿ, ಬಾಜಿ, ಕೊಡಲಿಗಳನ್ನು ಹರಿತಗೊಳಿಸುವಲ್ಲಿ ಉಪಯೋಗಕಾರಿ.

**೯. ಒರಂಕ :** ಕೆಲವು ವರ್ಷಗಳ ಹಿಂದೆ ಇಂದಿನ ಹಾಗೆ ಸ್ನಾನ ಮಾಡಲಾಗಲೀ, ದಿನ ಬಳಕೆಗಾಗಲೀ ಮಗ್‌ಗಳ ಬಳಕೆಯೇ ಇರಲಿಲ್ಲ. ಯಾಕೆಂದರೆ ಆಗ ಪ್ಲಾಸ್ಟಿಕ್‌ನ ಅವಾಂತರ ಇಂದಿನ ಹಾಗಿರಲಿಲ್ಲ. ಸ್ನಾನ ಮಾಡಲು ಜನಸಾಮಾನ್ಯರು ಒರಂಕ ಎಂಬ ವಸ್ತುವೊಂದನ್ನು ಬಳಸುತ್ತಿದ್ದರು. ಇದರ ವಿಶೇಷತೆಯೆಂದರೆ ಹಾಳಾದ ತೆಂಗಿನಕಾಯಿ ಅಥವಾ ತೆಂಗಿನಕಾಯಿಗೆ ಪರಿವರ್ತಿತವಾಗುತ್ತಿರುವ ಸೀಯಾಳ (ಬಣ್ಣಂಗಾಯಿ)ವನ್ನು ಅದರ ಕಣ್ಣಿನ ಹತ್ತಿರ ತೂತು ಮಾಡಿ ಒಳಗಿನ ಬಾವೆ ತೆಗೆದು ಹೊರಗಿನ ಸಿಪ್ಪೆಸುಲಿದು ಅದನ್ನು ಹಿಡಿದುಕೊಳ್ಳಲೊಂದು ಹಿಡಿಮಾಡಿ ಬಳಸುತ್ತಿದ್ದರು. ಇದನ್ನು ಒರಂಕ ಎಂದು ಕರೆಯುತ್ತಾರೆ.

**೧೦. ಒಲಿತ್ತ ಪಜೆ :** ಕೆಲಕಾಲದ ಹಿಂದೆ ಒಲಿತ್ತ ಪಜೆ ಎಂಬುದು ಮನೆ ಮನೆಯಲ್ಲೂ ಕಾಣ ಸಿಗುತ್ತಿತ್ತು. 'ಮುಂಡೇವು' (ಮುಂಡೋವ್) ಎಂಬ ಮುಳ್ಳಿನ ಪೊದೆಯ ಒಲಿಗಳನ್ನು ಸಂಗ್ರಹಿಸಿ ಕುತ್ತೊಲು ಎಂಬ ಸಾಧನದಿಂದ ಅದರ ಮುಳ್ಳನ್ನು ಬೇರ್ಪಡಿಸಿ, ಒಲಿತ್ತ ಪಜೆ ರಚಿಸಲಾಗುತ್ತಿತ್ತು. ಇವುಗಳ ಮೇಲೆ ಮಲಗಿದರೆ ಮಳೆಗಾಲದಲ್ಲಿ ಬೆಚ್ಚಗಿನ ಅನುಭವವಾಗುತ್ತಿತ್ತು.

೧೧. **ಓಟೆ** : ಒಲೆಯ ಮೂಲಕ ಅಡಿಗೆ ಮಾಡುವವರಿಗೆ ಓಟೆಯ ಹೆಸರು ಚಿರಪರಿಚಿತ. ಬಿದಿರನ್ನು ಕಡಿದು ಅದರ ಎರಡು ಗಂಟುಗಳ ಮಧ್ಯದ ಟೊಳ್ಳಾದ ಭಾಗವನ್ನು ಕತ್ತರಿಸಿ, ಓಟೆಯಾಗಿ ಉಪಯೋಗಿಸುತ್ತಿದ್ದರು. ಕೆಲವು ಬಾರಿ ಮರದ ಓಟೆಯನ್ನೂ ಉಪಯೋಗಿಸುತ್ತಿದ್ದರು. ಇಂದು ಅನೇಕರು ಊದುಬತ್ತಿಯ ತಾತ್ಕಾಲಿಕ ಕೊಳವೆಯನ್ನು ಒಲೆ ಊದಲು ಓಟೆಯಾಗಿ ಬಳಸುತ್ತಾರೆ.

೧೨. **ಓಪಣೆ** : ಓಪಣೆ ಎಂಬುದು ತಲೆಯಲ್ಲಿರುವ ಹೇನುಗಳನ್ನು ಸಾಮೂಹಿಕವಾಗಿ ಮುಗಿಸಲು ಬಳಸುತ್ತಿದ್ದ ಒಂದು ಸಾಧನ. ಆದರೆ ಬಾಚಣಿಕೆಯಲ್ಲಿ, ನೀಳಾಕಾರದಲ್ಲಿ, ಹಲ್ಲುಗಳನ್ನು ಹೊಂದಿರುವ ಮರದ ಒಂದು ರಚನೆ, ತಲೆಗೆ ಮೊದಲು ಎಣ್ಣೆ ಹಾಕಿ ನಂತರ ಓಪಣೆ ಹಾಕಿ ಹಿಂದೆ ತೆಗೆಯುವಾಗ ಮುಷ್ಠಿ ಭದ್ರಪಡಿಸಲಾಗುತ್ತದೆ. ಆಗ ಹೇನುಗಳು ಚಿಟಿ ಚಿಟಿ ಎಂದು ಒಡೆದು ಹೋಗುತ್ತವೆ.

೧೩. ಕಡ್ಡಿ : ಕಡ್ಡಿ ಎಂಬುದು ಹಿಂದಿನ ಪೀಳಿಗೆಯ ಜನ ಧರಿಸುತ್ತಿದ್ದ ಕಿವಿಯ ಆಭರಣಗಳಲ್ಲೊಂದು. ಎರಡೂ ಕಡೆ ಹನುಮಂತನ ಗದೆಯಾಕಾರದ ರಚನೆಯನ್ನು ಈ ಆಭರಣದಲ್ಲಿ ನಾವು ಕಾಣಬಹುದು.

೧೪. **ಕರೆಜ್ಜನ** : ಕರೆಜ್ಜನ ಎಂಬುದು ಆಭರಣ ಹಾಗೂ ಬೆಲೆಬಾಳುವ ವಸ್ತುಗಳನ್ನು ತೆಗೆದಿರಿಸುವ ಕಂಚಿನ ಪಾತ್ರೆಯಾಗಿದೆ. ಇದಕ್ಕೆ ಪವಿತ್ರವಾದ ಸ್ಥಾನಮಾನವಿದ್ದು ವಿಶೇಷ ಸಂದರ್ಭಗಳಲ್ಲಿ ಇದಕ್ಕೆ ಪೂಜೆಯನ್ನು ಸಲ್ಲಿಸಲಾಗುವುದು.

೧೫. **ಕಟಂಚೀಲ** : ಎಲೆ ಅಡಿಕೆ ತಿನ್ನುವ ಹಿರಿಜೀವಗಳಿಗೆ ಈ 'ಕಟಂ ಚೀಲ'ದ ಬಗೆಗೆ ಅರಿವಿದೆ. ಈ ಚೀಲದಲ್ಲಿ ವೀಳ್ಯದೆಲೆ, ಅಡಿಕೆ, ಹೊಗೆಸೊಪ್ಪು, ಸುಣ್ಣ ಎಲ್ಲವೂ ಇರುತ್ತದೆ. ಹತ್ತಿಯಿಂದ ಮಾಡಿದ ಚೀಲ. ಇಂದಿನ 'ವ್ಯಾನಿಟಿ' ಬ್ಯಾಗಿನಂತಿರುತ್ತದೆ. ಆದರೆ ಗಾತ್ರದಲ್ಲಿ ಮಾತ್ರ ತುಸು ಚಿಕ್ಕದಿರುತ್ತದೆ.

೧೬. **ಅಂಡೆ ಕತ್ತಿ (ಕತ್ತಿಕೆರೆ)** : ಬಿದಿರು ಕಡಿಯುವವರಿಗೆ ಅಂಡೆಕತ್ತಿ (ಕತ್ತಿಕೆರೆ) ಬಗ್ಗೆ ಪರಿಚಯವಿದ್ದೇ ಇರುತ್ತದೆ. ಇದು ಅತ್ಯಂತ ಹರಿತವಾದ ಕತ್ತಿಯಾಗಿದ್ದು ಕೊಕ್ಕೆಗೆ ಕತ್ತಿಯನ್ನು ಕಟ್ಟಿ ಕೆಲಸ ಮಾಡಲಾಗುತ್ತದೆ. ಇದರ ಹಿಡಿ ಕೂಡ ಕಬ್ಬಿಣದಿಂದಲೇ ಮಾಡಿರುತ್ತಿತ್ತು. ಬೆಳ್ತಂಗಡಿ ಪರಿಸರದಲ್ಲಿ ಇದಕ್ಕೆ ಕತ್ತಿಕೆರೆ (ಕೆರೆ–ಕೊಕ್ಕೆ, ದೋಂಟಿ) ಎಂದರೆ ಪುತ್ತೂರು ಪರಿಸರದಲ್ಲಿ ಅಂಡೆಕತ್ತಿ ಎಂದೆನ್ನುವರು. ಅಡಿಕೆ ಮರದಿಂದ ಅಡಿಕೆ ಕೀಳಲು, ಮನೆಯನ್ನು ಬಿದಿರಿನಿಂದ ಕಟ್ಟುವುದಕ್ಕಾಗಿ ಮುಳ್ಳು ತಾಗದಂತೆ ಬಿದಿರು ಕಡಿಯಲು ಇದನ್ನು ಬಳಸುತ್ತಾರೆ.

೧೭. **ಕಪ್ಪಲ್** : ಕಪ್ಪಲ್ ಎಂಬುದು ಮಣ್ಣಿನಿಂದ ತಯಾರಿಸಿದ ಒಂದು ದೊಡ್ಡ ಸಂಗ್ರಾಹಕ. ಪ್ರಾಯಶಃ ಇಂದಿನ 'ಸಿಂಟೆಕ್ಸ್' ಟಾಂಕಿಯನ್ನು ಇದು ಹೋಲುತ್ತದೆ. ಇದಕ್ಕೆ ಮುಚ್ಚಳವಿಲ್ಲ. ತೆಂಗಿನ ಮರದ ಗರಿಯೇ ಇದಕ್ಕೆ ಮುಚ್ಚಳ. ಕೆಲವು ಕಡೆ ಇದನ್ನು ಮಣ್ಣನಲ್ಲಿ ಹೂತಿರುತ್ತಿದ್ದರೆ ಕೆಲವೆಡೆ ಹೊರಗಡೆಯೇ ಇಟ್ಟಿರುತ್ತಾರೆ. ಇದು ಒಬ್ಬ ಮುಳುಗುವಷ್ಟು ಆಳವಿರುತ್ತದೆ. ಕಪ್ಪಲ್‌ಗಳಲ್ಲಿ ಭತ್ತ ನೆನೆಯಲು ಹಾಕುವ ಕಪ್ಪಲ್, ಅಕ್ಕಚ್ಚು ಹಾಕುವ ಕಪ್ಪಲ್, ಅಡಿಕೆ (ನೀರು ಬಜ್ಜೆಯ್) ಹಾಕುವ ಕಪ್ಪಲ್, ಎದುರೋಲ್ ಕಾಯಿಯನ್ನು ಹಾಕಿಡುವ ಕಪ್ಪಲ್, ಮಾವಿನಕಾಯಿ ಹಾಕಿಡುವ ಕಪ್ಪಲ್‌ಗಳನ್ನು ಕಾಣಬಹುದಾಗಿತ್ತು.

೧೮. **ಕಾಣಾಜೆ** : ಕಾಣಾಜೆ ಎಂಬುದು ಮನೆಯಲ್ಲಿ ಕತ್ತಿಯನ್ನು ಜೋಪಾನವಾಗಿ ಹಾಗೂ ವ್ಯವಸ್ಥಿತವಾಗಿ ಜೋಡಿಸಿಡುವ ಸ್ಥಳ. ಅಲ್ಲಿ ಪರ್ದಕತ್ತಿ, ನಾರೆ ಕತ್ತಿ ಸಾದಾ ಕತ್ತಿಗಳೆಲ್ಲವೂ ಲಭ್ಯವಿರುತ್ತಿತ್ತು. ಎರಡು ಬಿದಿರಿನ ಸಲಾಕೆಗಳನ್ನು ಕಟ್ಟಿ ಅದರ ನಡುವೆ ಕತ್ತಿ ಹಾಕಿದರೆ ಹಿಡಿಗೆ ಅದರೊಳಗಿಂದ ತೂರಲು ಜಾಗವಿರುತ್ತಿರಲಿಲ್ಲ. ಒಂದು ರೀತಿಯಲ್ಲಿ ತೋರಣ ಕಟ್ಟಿದಂತೆ ಇದು ಕಂಡು ಬರುತ್ತಿತ್ತು.

೧೯. **ಕಾಂಟ್ಯ** : ಕಾಂಟ್ಯ ಎಂಬುದು ಬುಟ್ಟಿಯಂತಹ ರಚನೆ. ಇದನ್ನು ಹಿಂದೆ ನೇಯ್ದು ಕೊಡುವ ವಿಶೇಷ ಪರಿಣತರು ಇರುತ್ತಿದ್ದರು. ಮದುವೆ ಮುಂತಾದ ವಿಶೇಷ ಸಮಾರಂಭಗಳಲ್ಲಿ ಇದನ್ನು ಅನ್ನ ತೋಡಲು ಬಳಸುತ್ತಾರೆ. ಹಿಂದೆ ದಣಿ ಒಕ್ಕಲಿನ ಕಾಲದಲ್ಲಿ ಕಾಂಟ್ಯದಲ್ಲಿ ಫಲವಸ್ತುಗಳನ್ನು ದಣಿಯ ಮನೆಗೆ ಒಯ್ದು 'ಬುಲೆ ಕಾಣಿಕೆ' ಎಂದು ಅರ್ಪಿಸುವ ಸಂಪ್ರದಾಯವೂ ಇತ್ತು.

೨೦. **ಕಾಪು** : ಕಾಪು ಎಂಬುದು ಕೋಳಿ ಸಾಕಾಣಿಕೆಯಿರುವವರ ಮನೆಯಲ್ಲಿ ಹಿಂದೆ ಕಾಣಬಹುದಾಗಿತ್ತು. ಕೋಳಿ (ಹೇಂಟೆ) ಮೊಟ್ಟೆಯಿಡುವ ಕಾಲದಲ್ಲಿ ಇತರರಿಂದ ಅದಕ್ಕೆ ತೊಂದರೆಯಾಗ ಬಾರದೆಂದು ಬುಟ್ಟಿಗೆ ಬೈಹುಲ್ಲು ಹಾಕಿ ಮನೆಯ ಮಾಡಿಗೆ ಕಟ್ಟುತ್ತಾರೆ. ಇದಕ್ಕೆ ಕಾಪು ಎಂದು ಕರೆಯುತ್ತಾರೆ. ಇದು ಹೇಂಟೆಗೆ ಹಾವು, ನರಿಗಳಿಂದ ರಕ್ಷಣೆ ನೀಡುತ್ತದೆ.

೨೧. **ಕುತ್ತರಿ** : ಇದು ಕೋಳಿ ಮುಚ್ಚಲು ಹಿಂದಿನ ರೈತರು, ಕೋಳಿ ಸಾಕಾಣಿಕೆದಾರರು ಬಳಸುತ್ತಿದ್ದ ಒಂದು ಸಾಧನ. ಕುರ್ಕಿಲಿಯಂತಹ ಮಾದರಿಯನ್ನೇ ಇದು ಹೋಲುತ್ತದೆಯಾದರೂ ಬಿಳಲುಗಳನ್ನು ಒತ್ತೊತ್ತಾಗಿ ಪೋಣಿಸಲಾಗಿರುತ್ತದೆ. ಮೇಲ್ಗಡೆ ಕೈಯಿಂದ ಹಿಡಿಯಲು ಸಾಧ್ಯವಾಗಬಹುದಾದ ಒಂದು ತೂತು ಇದ್ದು ಕೋಳಿಗಳನ್ನು ಇದರಿಂದ ಮುಚ್ಚಿ ಹಾಕಿ ತೊಂದರೆ ನೀಡದಂತೆ ಮಾಡುತ್ತಿದ್ದರು.

**೨೨. ಕುದ್ವೆ :** ಇಂದಿನ ಚಹಾ ಮಾಡುವ ಪಾತ್ರೆಯನ್ನೇ ಹೋಲುವ ತುಸು ದೊಡ್ಡ ಆಕಾರದಲ್ಲಿರುತ್ತಿದ್ದ ಕುದ್ವೆ ಹಿಂದೆ ಬಹೂಪಯೋಗಿ ವಸ್ತುವಾಗಿತ್ತು ಮನೆಯ ಶುಭಾರಂಭ (ಗೃಹ ಪ್ರವೇಶ)ದ ವೇಳೆಯಲ್ಲಿ ಬಂದ ಅತಿಥಿಗಳಿಗೆಲ್ಲಾ ಮಣ್ಣಿನ ಕದ್ವೆಯಲ್ಲಿ ಹಾಲು ಕಾಯಿಸಿ ನೀಡಲಾಗುತ್ತಿತ್ತು. ಪ್ರಸ್ತುತ ಇಂತಹ ಮಣ್ಣಿನ ಪಾತ್ರೆಗಳು ನೋಡಲು ಸಿಗುವುದಿಲ್ಲ.

**೨೩. ಕುತ್ತೊಲು :** ಇದು ಒಲಿಯ ಚಾಪೆ ಮಾಡುವ ಸಂದರ್ಭದಲ್ಲಿ ಬಳಕೆಯಾಗುತ್ತಿದ್ದ ಕಬ್ಬಿಣದ ಒಂದು ಸಾಧನ. ಮುಂಡೋವ್‌ನ ಒಲಿಯ ಮುಳ್ಳು ತೆಗೆಯಲು ಇದನ್ನು ಬಳಸಲಾಗುತ್ತಿತ್ತು. ಇದು ಸಾಧಾರಣವಾಗಿ ಒಂದೂವರೆ ಗೇಣಿನಷ್ಟು ಉದ್ದವಾಗಿ ಚಾಕುವಿನಾಕಾರವನ್ನು ಹೋಲುತ್ತದೆ.

**೨೪. ಕುಡ್ಪು :** ಕುಡ್ಪು ಎಂಬುದು ಅನ್ನ ಬಸಿಯಲು ಬಳಸುತ್ತಿದ್ದ ಬಿಳಲಿನಿಂದ ಮಾಡಿದ ಒಂದು ರಚನೆ. ನೋಡಲು ವೃತ್ತಾಕಾರವಾಗಿರುತ್ತದೆ. 'ಇಲ್ಲ್‌ಬೂರ್' ಎಂಬ ಬಿಳಲಿನಿಂದ ಇದನ್ನು ತಯಾರಿಸುತ್ತಾರೆ.

**೨೫. ಕುಚಿಲಿ :** ಶೇಂದಿ ತೆಗೆಯುವವರಿಗೆ ಜೀವನಾಧಾರವಾಗಿರುವ ಸಾಧನ ಕುಚಿಲಿ. ಇದು ಮಣ್ಣಿನಿಂದ ಮಾಡಿದ್ದಾಗಿದ್ದು ತೆಂಗಿನಮರದ, ತಾಳೇ ಮರದ ಅಥವಾ ಈಂದ್ ಮರದ 'ಕೊಂಬಿ'ಗೆ ಕಟ್ಟಿ ಶೇಂದಿ ಶೇಖರವಾಗುವಂತೆ ಮಾಡುತ್ತಾರೆ. ಇದು ಮಣ್ಣಿನಿಂದ ಮಾಡಿದ ಪಾತ್ರೆಯಾಗಿರುವುದರಿಂದ ಇದರಲ್ಲಿ ಎಷ್ಟೇ ಸಮಯ ಶೇಂದಿ ಇದ್ದರೂ ಹಾಳಾಗುವುದಿಲ್ಲ.

**೨೬. ಕೂರಿ :** ಮೀನುಗಾರಿಕೆಯಲ್ಲಿ ಹಿಂದೆ ಬಳಸುತ್ತಿದ್ದ ಸಾಧನಗಳಲ್ಲಿ ಕೂರಿಯೂ ಒಂದು. ಬೀಡಿಕಟ್ಟುವ ಸೂಪಿನಂತೆ ಇದು ಇರುತ್ತದೆ. ಆದರೆ ಮೇಲ್ಭಾಗ ಸೂಪಿನಂತಿದ್ದರೂ ಅದು ಮುಂದುವರಿದು ಕೆಳಭಾಗಕ್ಕೆ ಬಂದಂತೆಲ್ಲಾ ಅಂತರ ಕಿರಿದಾಗುತ್ತದೆ. ನೀರು ಬೀಳುವ ಜಾಗದಲ್ಲಿ ಮೇಲ್ಗಡೆ ತೂತನ್ನು ಬರುವಂತೆ ಮಾಡಿ ಇರಿಸಲಾಗುತ್ತದೆ. ಕೂರಿ ಬಿಳಲಿನಿಂದ ಮಾಡಿರುವುದರಿಂದ ಬಿದ್ದ ನೀರು ಸಲೀಸಾಗಿ ಸೋರಿ ಹೋಗುತ್ತದೆ. ಮೀನುಗಳು ಕೂರಿಯೊಳಗೆ ಬಾಕಿಯಾಗುತ್ತವೆ. ಈ ರೀತಿ ನದಿ ಅಥವಾ ತೋಡುಗಳ ಮೀನನ್ನು ಹಿಡಿದು ಪದಾರ್ಥಕ್ಕಾಗಿ ಉಪಯೋಗಿಸುತ್ತಿದ್ದರು.

**೨೭. ಕೂಜೆ :** ತೆಂಗಿನಕಾಯಿ ಹಾಳಾಗಿದ್ದರೆ ಅದರ ಸಿಪ್ಪೆ ಸುಲಿದು ಚೆನ್ನಾಗಿ ನಯಗೊಳಿಸಿ ಅದರ ಮೇಲ್ಭಾಗದ ಮೂರು ಕಣ್ಣುಗಳನ್ನು ಕೀಳಲಾಗುತ್ತದೆ. ಹೀಗೆ ಕಿತ್ತ ನಂತರ ಅದರ ಬಲ ಹಾಗೂ ಎಡ ತುದಿಗೆ ಎರಡು ತೂತು ಮಾಡಿ ಹಗ್ಗಗಳನ್ನು ಪೋಣಿಸಿ ಮನೆಯಲ್ಲಿನ ಎತ್ತರದ ಆಣಿಯಲ್ಲೊ, ಕಪಾಟಿನ ತುದಿಗೋ ಸಿಕ್ಕಿಸಲಾಗುತ್ತದೆ. ಅದರಲ್ಲಿ ಹಲ್ಲು ತೊಳೆಯುವ ಬ್ರಷ್ ಕಾಲ್‌ಗೇಟ್ ಇಡಲಾಗುತ್ತದೆ. ಇನ್ನೊಂದು ವಿಶೇಷವೆಂದರೆ ಮಳೆಗಾಲದಲ್ಲಿ ಬಿತ್ತಲು ಬೇಕಾದ ಬೀಜಗಳನ್ನು ಇದರಲ್ಲಿ ಇರಿಸಲಾಗುತ್ತದೆ.

**೨೯. ಕೆರ್ಪು :** ಕೆರ್ಪು ಎಂಬುದು ಹಿಂದಿನವರು ಮರಹತ್ತಲು ಬಳಸುತ್ತಿದ್ದ ಬಿದಿರಿನ ಸಾಧನ. ಉದ್ದವಾಗಿ, ನೇರವಾಗಿರುವ ಬಿದಿರನ್ನು ಕಡಿದು ಅದನ್ನು ಒಣಗಿದ ನಂತರ ಕೆರ್ಪಾಗಿ ಉಪಯೋಗಿಸ ಲಾಗುತ್ತಿತ್ತು. ಅದಕ್ಕೆ ಬಲ ಹಾಗೂ ಎಡ ಬದಿಗೆ ಕಾಲಿಡುವಷ್ಟು ಬಿದಿರಿನ ಗಂಟನ್ನು ಉಳಿಯ ಬಿಡಲಾಗುತ್ತದೆ. ಹತ್ತುವವವ ಸಲೀಸಾಗಿ ಒಂದು ಭಾಗಕ್ಕೆ ಎಡಕಾಲು ಇನ್ನೊಂದು ಭಾಗಕ್ಕೆ ಬಲಗಾಲನ್ನಿಡುತ್ತಾ ಮರ ಹತ್ತಬೇಕು. ಈ ತಂತ್ರವನ್ನೇ ಮಾದರಿಯಾಗಿಸಿ ಪ್ರಸ್ತುತ ಕಬ್ಬಿಣದ ಕೆರ್ಪನ್ನು ಶೋಧಿಸಲಾಗಿದೆ.

**೩೦. ಕೈಕುಂಟು :** ಕೈಕುಂಟು ಎಂದು ಸಣ್ಣ ಬಟ್ಟೆಯ ತುಂಡಿಗೆ ಹೇಳುತ್ತಾರೆ. ಇದು ಅಡುಗೆ ಮನೆಯಲ್ಲಿ ಸಾಮಾನ್ಯವಾಗಿ ಕಾಣ ಸಿಗುತ್ತಿತ್ತು. ಒಲೆಯಿಂದ ಬಿಸಿ ಬಿಸಿ ಪಾತ್ರೆಗಳನ್ನು ಇಳಿಸಲು ಏರಿಸಲು ಇದನ್ನು ಬಳಸುತ್ತಾರೆ. ಮಸಿಯ ಪ್ರಭಾವದಿಂದ ಸದಾ ವಿರೂಪಗೊಂಡು ಬಿದ್ದಿರುತ್ತಿತ್ತು.

**೩೧. ಕೈಪ್ಪುಳು :** ಕೈಪ್ಪುಳು ಎಂಬುದು ಒಣಗಲು ಹಾಕಿದ ಭತ್ತವನ್ನು ರಾಶಿ ಹಾಕಲು/ರಾಶಿ ಮಾಡಲು ಬಳಸುತ್ತಿದ್ದ ಸಾಧನವಾಗಿದೆ. ಮರದ ಹಲಗೆಗೆ 'ಕಡೆ' (ಮರದ ತುಂಡೊಂದನ್ನು) ಸೇರಿಸಿ ಸಾಧಾರಣವಾಗಿ ಹಾರೆಯನ್ನೇ ಇದು ಹೋಲುವಂತೆ ಇದನ್ನು ತಯಾರಿಸಲಾಗುತ್ತದೆ. ಇದು ಕೇವಲ ಭತ್ತ ರಾಶಿ ಮಾಡಲು ಬಳಸುವುದಲ್ಲದೆ, ಅಡಿಕೆ ರಾಶಿ ಮಾಡಲು ಕೂಡ ಬಳಸುತ್ತಾರೆ.

**೩೨. ಕೈಸಟ್ಟುಗ :** ಕೈ ಸಟ್ಟುಗವನ್ನು ಕೆಲವರು 'ತರಂಬುಟ್ಟಿ' ಎಂದು ಕೂಡ ಕರೆಯುತ್ತಾರೆ. ಇದು ನೋಡಲು ವೃತ್ತಾಕಾರವಾಗಿದ್ದು ಮರದಿಂದ ಮಾಡಲ್ಪಟ್ಟಿರುತ್ತದೆ. ಅನ್ನ ಬಸಿಯಲು ಇದನ್ನು ಬಳಸುತ್ತಾರೆ. ನಡುಭಾಗ ತೋರಿಕೆಗೆ ಸ್ವಲ್ಪ ಗುಂಡಿಯತಿರುತ್ತದೆ. ಉಪ್ಪು ನುರಿಯಲು ಕೂಡ ಇದನ್ನು ಬಳಸುತ್ತಾರೆ. ಹಬ್ಬದ ದಿನದ ಸಂದರ್ಭದಲ್ಲಿ ತರುಂಬುಟ್ಟಿಯ ಮೇಲೆ ಬಾಳೆ ಎಲೆಯನ್ನು ಹಾಕಿ ಅದರ ಮೇಲೆ ಬಡಿಸಿ 'ಹಿರಿಯರಿಗೆ' ಎಂದು ಇಡುವ ಸಂಪ್ರದಾಯವಿತ್ತು.

**೩೩. ಕೊಪ್ಪು ಸರಪಳಿ :** ಕೊಪ್ಪು ಸರಪೊಳಿ ಎಂಬುದು ಹಿಂದೆ ಹೆಂಗಸರು ಕಿವಿಗೆ ಧರಿಸುತ್ತಿದ್ದ ಒಂದು ಆಭರಣವಾಗಿತ್ತು. ಕೊಪ್ಪು ಎಂಬುದು ಮುಗುಳಿಯ ಆಕಾರದ ಆಭರಣ. ದ್ರಾಕ್ಷಿಯಂತೆ ಅನೇಕ ಮುತ್ತುಗಳನ್ನು ಇದು ಹೊಂದಿದ್ದು ಸರಪೊಳಿ ಎಂಬುದು ಸರದ ರೂಪದಲ್ಲಿದ್ದು ತಲೆಕೂದಲಿಗೆ ಸಿಕ್ಕಿಸುವ ಕ್ರಮವನ್ನು ಅದು ಹೊಂದಿತ್ತು. ಸರಪಳಿಯ ಉದ್ದೇಶವೇನೆಂದರೆ ಕೊಪ್ಪು ಈ ಸರಪೊಳಿಯ ಸಾಧನದಿಂದ ಎದ್ದು ತೋರುವುದು. ಇಲ್ಲವಾದಲ್ಲಿ ಅದು ಅಡ್ಡ ಬೀಳುತ್ತಿತ್ತು.

**೩೪. ಕೊಂಡೆ :** ಇದು ಹಾಲನ್ನು ಅಳೆಯುವ ಸಾಧನ. 'ಕುಡ್ತೆ' ಎಂದು ಕೂಡ ಇದನ್ನು ಕರೆಯುತ್ತಾರೆ. ಹಾಲು ಮಾರುವ ಪ್ರತಿ ಮನೆಯಲ್ಲೂ ಇದು ಹಿಂದೆ ಇರುತ್ತಿತ್ತು. ಆದರೆ ಇಂದು ಲೀಟರ್‌ಗಳ ಹಾವಳಿಯಿಂದ ಇದು ಮರೆಯಾಗಿ ಕಾಲಗರ್ಭ ಸೇರಿಕೊಂಡಿದೆ.

**೩೫. ಕೋರ್ದಗೂಡು :** ಕೋಳಿ ಗೂಡು ಎಂಬುದು ಇತ್ತೀಚಿನ ದಿನಗಳಲ್ಲಿ ಮರೆಯಾಗುತ್ತಿರುವ ಇನ್ನೊಂದು ವಿಧದ ಪರಿಕಲ್ಪನೆ, ಹಿಂದೆಲ್ಲಾ ಮನೆಯ ಸುತ್ತಮುತ್ತಲ ಪರಿಸರವನ್ನು ಸ್ವಚ್ಛಮಾಡಲು ನೆರವಾಗುತ್ತಿದ್ದ ಕೋಳಿಗಳಿಗೆ ವ್ಯವಸ್ಥಿತವಾದ ಗೂಡಿನ ವ್ಯವಸ್ಥೆಯೊಂದಿತ್ತು. ಮಣ್ಣಿನಿಂದ ಮೇಲ್ಗಡೆ ಸೊಪ್ಪು, ಎಲೆ ಹಾಕಿ ಅದಕ್ಕೆ ಮಣ್ಣ ಮೆತ್ತಿ ಕೋಳಿಗೂಡು ರೂಪಿಸುತ್ತಿದ್ದರು. ಮಾರುದ್ದ ಈ ಕೋಳಿಗೂಡು ಹರಡಿಕೊಂಡಿತ್ತು. ಮನೆಯ ಒಲೆಯ ಬೂದಿಯನ್ನು ದಿನವೂ ಕೋಳಿಗೂಡಿನೊಳಗೆ ಹಾಕಲಾಗುತ್ತಿತ್ತು. ಅದು ಕೋಳಿಗಳಿಗೆ ಬಿಸಿ ಬಿಸಿ ಅನುಭವ ನೀಡುತ್ತಿತ್ತು. ಈ ರೀತಿ ಸಾಕಿದ ಕೋಳಿಗಳನ್ನು ಮನೆಗೆ ನೆಂಟರು ಬಂದಾಗ ಅಥವಾ ಹಬ್ಬಹರಿದಿನಗಳಲ್ಲಿ ಪದಾರ್ಥ ಮಾಡಿ ತಿನ್ನುತ್ತಿದ್ದರು.

**೩೬. ಕೋಪೆ :** ಮೀನು ಮಾರುಕಟ್ಟೆ ಕೆಲವು ವರ್ಷಗಳ ಹಿಂದೆ ಪ್ರಸ್ತುತ ಸ್ಥಿತಿಯಂತಿರಲಿಲ್ಲ. ಮೀನುಗಳನ್ನು ಪ್ಲಾಸ್ಟಿಕ್ ಚೀಲಗಳಲ್ಲಿ ನೀಡುವ ಪದ್ಧತಿಯೂ ಇರಲಿಲ್ಲ. ಆವಾಗ 'ದಡ್ಪಲೆ' ಎಂಬ ಮುಳ್ಳಿನ ಗಿಡದ ನಾರಿನಲ್ಲಿ ಮೀನನ್ನು ಸಾಲಾಗಿ ಜೋಡಿಸಿ ನೇತಾಡಿಸಿಕೊಂಡು ಬಂದು ಜನ ಸಾರು ಮಾಡುತ್ತಿದ್ದರು. ಈ ನಾರನ್ನು ಮೀನಿನ ಕಿವಿ ಭಾಗದಿಂದ ತೂರಿಸಿ ಬಾಯಿಂದ ಹೊರ ತೆಗೆಯಲಾಗುತ್ತಿತ್ತು. ಇದನ್ನು **'ಕೋಪೆ'** ಎಂದು ಕರೆಯುತ್ತಿದ್ದರು.

**೩೭. ಕೌಲಿಗೆ :** ಕೌಲಿಗೆ ಎಂಬುದು ದೇವತಾಕಾರ್ಯಗಳಲ್ಲಿ ಬಳಕೆ ಮಾಡುವ ವಿಶೇಷ ಸಲಕರಣೆ ಹಿಂದೆಯೆಲ್ಲಾ ದೇವರ ಕಾರ್ಯಗಳಾದಂತಹ 'ಮುಡಿಪು ಶುದ್ಧ' ಯುಗಾದಿಯ ಸಂದರ್ಭದಲ್ಲಿ ಇದನ್ನು ಬಳಸುತ್ತಿದ್ದರು. ಇದರ ಕೆಳಭಾಗದಲ್ಲಿ ಮೂರು ಗುಳ್ಳೆಯಾಕಾರದ ರಚನೆಯಿರುತ್ತದೆ. ಇಂದು ಇದು ಕೇವಲ ದೇವಸ್ಥಾನಗಳಿಗೆ ಮಾತ್ರ ಸೀಮಿತವಾದಂತಿದೆ.

**೩೮. ಗದ್ದಗ :** ಇದು ಮಣ್ಣಿನಿಂದ ಮಾಡಿದ ಪ್ಲೇಟ್ (ಇಂದಿನ ಭಾಷೆಯಲ್ಲಿ) ಆಗಿದೆ. ಅಂದರೆ ಪಿಂಗಾಣಿಯಲ್ಲಿ ಸಾರು ಹಾಕಿ ಊಟ ಮಾಡುವ ಪದ್ಧತಿಯಲ್ಲಿ ಪಿಂಗಾಣಿಯನ್ನು ಹಿಂದಿನವರು ಗದ್ದಗ ಎನ್ನುತ್ತಿದ್ದರು. ಮಣ್ಣಿನಿಂದ ಮಾಡಿದ್ದರಿಂದ ಸ್ವಲ್ಪ ಎಚ್ಚರ ತಪ್ಪಿದರೂ ಬಿದ್ದು ಹಾಳಾಗುತ್ತಿತ್ತು. ಪ್ರಸ್ತುತ ಸ್ಟೀಲ್ ಹಾಗೂ ಅಲ್ಯೂಮಿನಿಯಂ ಹಾವಳಿಯಿಂದ ಇದು ಕಾಣಸಿಗುವುದಿಲ್ಲ.

**೩೯. ಗಿಂಡ್ಯ :** ಇದೊಂದು ಸಂಪ್ರದಾಯ ಹಳ್ಳಿಯ ಜನರಲ್ಲಿ ಬೆಳೆದಿದ್ದು, ದಿನವೂ ಬೆಳಗೆದ್ದು ಹಾಲು ಕರೆದು ದೇವರ ಸ್ಟಾಂಡಿನಲ್ಲಿ ಇಡುವುದು ಸಂಪ್ರದಾಯವಾಗಿತ್ತು. ಈ ರೀತಿ ತಂಬಿಗೆಯಾಕಾರದ ಹಾಲನ್ನು ಇಡುವ ವಸ್ತುವಿಗೆ ಗಿಂಡ್ಯ ಎಂದು ಕರೆಯುತ್ತಾರೆ.

೪೦. **ಗಿಳಿ :** ಕೆಲವು ವರ್ಷಗಳ ಹಿಂದೆ ಮನೆಯ ಎದುರಿನ ಜಗುಲಿಯಲ್ಲೋ, ವರಾಂಡದಲ್ಲೋ ಒಂದು ಮರದ ರಚನೆಯಿರುತ್ತಿತ್ತು. ಅದಕ್ಕೆ ಕೊಕ್ಕಿನಾಕಾರದ ರಚನೆಯಿದ್ದು ಮನೆಗೆ

ವಾಪಾಸಾದ ಮನೆ ಮಂದಿ ಪಕ್ಕನೆ ತಮ್ಮ ಅಂಗಿ ಬಿಚ್ಚಿ ಅಲ್ಲಿಡುವರು. ಇದು ಇಂದಿನ ಹ್ಯಾಂಗರ್‌ಗಳಿಂದ (hanger) ಬಹಳ ಅಪರೂಪವಾಗುತ್ತಿದೆ.

**೪೧. ಗಾಡಿಲಾಟನೆ :** ಹಿಂದಿನ ಕಾಲದಲ್ಲಿ ಮದುವೆಯ ದಿಬ್ಬಣ ಅಥವಾ ದೂರದ ಪ್ರಯಾಣಕ್ಕಾಗಲಿ ಎತ್ತಿನ ಗಾಡಿಯಲ್ಲೊಂದು ಸೀಮೆಎಣ್ಣೆಯ ಲಾಟಿನ್ ಇಡುತ್ತಿದ್ದರು. ಅದು ಮುಂದೆ ಗಾಡಿ ಲಾಟನ್ ಎಂದೇ ಹೆಸರಾಗಿ ಕೈಯಲ್ಲಿ ಹಿಡಿದುಕೊಂಡು ನಡೆದರೂ ಗಾಡಿಲಾಟನ್ ಎಂದೇ ಹೇಳಲ್ಪಟ್ಟಿತು. ಮನೆಗಳಿಗೆ ವಿದ್ಯುತ್ ಇಲ್ಲದ ಕಾಲದಲ್ಲಿ ಮನೆಯ ಜಗುಲಿಯಲ್ಲಿ ಹೊತ್ತಿಸಿ ಇದನ್ನು ನೇತಾಡಿಸಿ ಇಡುತ್ತಿದ್ದರು.

**೪೨. ಗುರ್ಕೆ :** ಗುರ್ಕೆಯನ್ನು ಹಿಂದೆ ಬಚ್ಚಲ ಮನೆಯಲ್ಲಿ ನೀರು ಕಾಯಿಸಲು ಉಪಯೋಗಿಸುತ್ತಿದ್ದರು. ಇದನ್ನು ಮಣ್ಣಿನಿಂದಲೇ ಮಾಡುತ್ತಿದ್ದರು. ಹಿಂದಿನ ಕಾಲದಲ್ಲಿ ಅವಿಭಕ್ತ ಕುಟುಂಬಗಳೇ ಅಧಿಕವಾಗಿದ್ದು ಮನೆಯಲ್ಲಿ ಅಧಿಕ ಜನರು ಇದ್ದು ಒಂದು ಗುರ್ಕೆಯಿಂದಲೇ ಸ್ನಾನ ಮಾಡಬೇಕಾಗಿ ಬರುತ್ತಿದ್ದರಿಂದ ಅದರ ಗಾತ್ರವೂ ತೀರಾ ದೊಡ್ಡದಿರುತ್ತಿತ್ತು. ಕೆಲವು ಅನುಕೂಲಸ್ಥರ ಮನೆಯಲ್ಲಿ ತಾಮ್ರದ ಗುರ್ಕೆಗಳೂ ಇರುತ್ತಿದ್ದವು. ಪ್ರಸ್ತುತ ಅಲ್ಯೂಮಿನಿಯಂ ಗುರ್ಕೆಗಳು ಹೆಚ್ಚು ಪ್ರಸಿದ್ಧಿಯಲ್ಲಿವೆ.

**೪೩. ಚೀಪು :** ಚೀಪು ಎಂಬುದು ಮನೆಯ ಭದ್ರತೆಗಾಗಿ ಒಳಗಿನಿಂದ ಹಾಕುತ ಚಿಲಕ. ಹಿಂದೆಯೆಲ್ಲ ಮನೆಯ ಯಜಮಾನ ರಾತ್ರಿ ಊಟವಾದ ಮೇಲೆ 'ಚೀಪು ಹಾಕಿದ್ದಿಯೋ ಹೇಗೆ?' ಎಂದು ಪ್ರಶ್ನಿಸುವ ಕಾಲವೊಂದಿತ್ತು. ಇಂದು ಇವುಗಳ ಸ್ಥಾನದಲ್ಲಿ ನೆಟ್ ಬೋಲ್ಟ್‌ಗಳು ಬಂದಿವೆ.

**೪೪. ಚೆನ್ನೆದ ಮಣೆ :** ಚೆನ್ನದ ಮಣೆಯೆಂಬುದು ಜನಪದ ಕ್ರೀಡೆಯ ಒಂದು ಸಾಧನ. ಈ ಮಣೆಯಲ್ಲಿ ಎರಡೂ ಕಡೆ ಹನ್ನೆರಡರಂತೆ ೨೪ ಗುಳಿಗಳಿರುತ್ತದೆ. 'ಗುರ್‌ಗುಂಜಿ' ಎಂಬ ಕಾಯಿಯನ್ನು ಚೆನ್ನೆದ ಮಣೆಯ ಆಟದಲ್ಲಿ ಬಳಸುತ್ತಾರೆ. ಇದು ಬೇಸಾಯದಿಂದ ಬೆಂದ ಜೀವಕ್ಕೆ ಮುದ ನೀಡುತ್ತದೆ. ಬರಬರುತ್ತಾ ಇದು ಕ್ರಿಕೆಟ್, ಫುಟ್‌ಬಾಲ್‌ಗಳ ಸುಳಿಗೆ ಸಿಕ್ಕಿ ಜನಮಾನಸದಿಂದ ಮರೆಯಾಗಿ ಹೋಗಿದೆ. ಈ ಆಟವನ್ನು ಅವಳಿ – ಜವಳಿ ಮಕ್ಕಳಾಗಲೀ, ಗಂಡ–ಹೆಂಡತಿಯಾಗಲೀ ಇನ್ನೊಬ್ಬರ ಮಧ್ಯಸ್ಥಿಕೆಯಿಲ್ಲದೆ ಆಡಬಾರದೆಂಬ ಮಾತು ಕೂಡ ಚಾಲ್ತಿಯಲ್ಲಿದೆ.

**೪೫. ಚೆರಿಯೆ :** ಚೆರಿಯೆ ಎಂಬುದು ಮನೆ ಬಳಕೆ ವಸ್ತು. ಇಂದು ಜನಮಾನಸದಿಂದ ದೂರ ಸರಿದಿದೆ. ಚೆರಿಯೆ ಎಂದರೆ ಬೈ ಹುಲ್ಲನ್ನು ಸುರುಳಿ ಸುರುಳಿಯಾಗಿ ಸುತ್ತಿ ವೃತ್ತಾಕಾರವಾಗಿ ರೂಪಿಸಿ, ಒಲೆಯ ಮೇಲಿದ್ದ ಆಹಾರದ ಪಾತ್ರೆಯನ್ನು ಇದರ ಮೇಲೆ ತೆಗೆದಿಡುತ್ತಾರೆ. ಹಿಂದೆಯೆಲ್ಲಾ ಮಣ್ಣಿನ ಪಾತ್ರೆಗಳಾದ ಕಾರಣ ಅವುಗಳ ಸಂರಕ್ಷಣೆಗಾಗಿ ಹೀಗೆ ಮಾಡುತ್ತಿದ್ದುದು ಒಂದು

ಕಾರಣವಾದರೆ ಬೇಯಿಸಿದ ಆಹಾರವನ್ನು ನೆಲದ ಮೇಲಿಡಬಾರದೆಂಬ ನಂಬಿಕೆಯೂ ಈ ಕ್ರಿಯೆಯೊಂದಿಗೆ ತಳಕು ಹಾಕಿಕೊಂಡಿದೆ.

**೪೬. ಚೆಪ್ಪುದ ಪೊಟ್ಟಿ** : ಚೆಪ್ಪುದ ಪೊಟ್ಟಿ ಎಂಬುದು ಸುಲಿದ ತೆಂಗಿನಕಾಯಿಯ ಸಿಪ್ಪೆಯನ್ನು ತೆಗೆದು ಅದರೊಳಗಿನ ನಾರನ್ನು ಚೆನ್ನಾಗಿ ಉಜ್ಜಿದಾಗ ಸಿಗುವ ನಾರಿನಂತಹ ರಚನೆ. ಇದನ್ನು ಹಳ್ಳಿಗಳಲ್ಲಿ ಪಾತ್ರೆ ತೊಳೆಯಲು ಬೂದಿಯೊಡನೆ ಬಳಸುತ್ತಾರೆ. ಕೆಲವು ರೈತ ಜನರು ಸ್ನಾನ ಮಾಡಲು ಕೂಡ ಇದನ್ನು ಬಳಸುತ್ತಿದ್ದರು.

**೪೭. ಡಬ್ಬಣೊ** : ಇಂದು ಜನ ಸಾಮಾನ್ಯರ ನಡುವಿನಿಂದ ದೂರ ಸರಿಯುತ್ತಿರುವ ವಸ್ತುಗಳಲ್ಲಿ ಡಬ್ಬಣ ಕೂಡ ಒಂದಾಗಿದೆ. ಸಾಮಾನ್ಯವಾಗಿ ಗೋಣಿಗಳನ್ನು ಭದ್ರವಾಗಿ ಹೊಲಿಯಲು ಬಳಸುವ, ಸೂಜಿಗಿಂತ ತುಸು ಬಲಿಷ್ಠವಾದ ಸಾಧನವೇ ಡಬ್ಬಣ 'ಬಕ್' ಎಂಬ ನೂಲನ್ನು (ಹಗ್ಗವನ್ನು) ಹೊಲಿಯಲು ಬಳಸುತ್ತಾರೆ. ಬೇರೆ ನೂಲನ್ನು ಕೂಡ ಬಳಸುವ ಪರಿಪಾಠ ಇದೆ.

**೪೮. ತಪಲೆ** : ಒರಂಕ್ (ಸ್ನಾನ ಮಾಡುವ ಸಾಧನ)ದ ನಂತರ ಬಂದ ಸಾಧನಗಳಲ್ಲಿ ತಪಲೆಯೂ ಒಂದು. ಅಲ್ಯೂಮಿನಿಯಂ ತಾಮ್ರದ ತಪಲೆಗಳು ಕಾಲಕ್ರಮೇಣ ಕಾಣಿಸಿಕೊಂಡವು. ಆದರೆ ಅವು ಹೆಚ್ಚು ಕಾಲ ಬಾಳಲಿಲ್ಲ. ಇಂದು ಪ್ಲಾಸ್ಟಿಕ್ ಮಗ್‌ಗಳೇ ಅಧಿಕವಾಗಿ ಗೋಚರಿಸುತ್ತಿವೆ.

**೪೯. ತಕ್ಕಣ** : ಕಾಲಗರ್ಭದಲ್ಲಿ ಹುದುಗಿ ಹೋಗಿರುವ ವಸ್ತುಗಳಲ್ಲಿ ತಕ್ಕಣ(ಚಾಪೆ)ವೂ ಒಂದಾಗಿದೆ. ಮಗುವನ್ನು ಮಲಗಿಸಲು ಮಗುವಿಗಾಗಿಯೇ ವಿಶೇಷವಾಗಿ ಹೆಣೆದ ಚಾಪೆಗಳಲ್ಲಿ ಇದು ಒಂದು. ಇದರ ಆಕಾರ ಕೇವಲ ಒಂದು ತೊಟ್ಟಿಲಿನ ಆಕಾರಕ್ಕೆ ಸೀಮಿತವಾಗಿರುತ್ತದೆ. ಮುಂಡೋವ್ ಎಂಬ ಮುಳ್ಳಿನ ಒಲಿಯಿಂದ ಈ ಚಾಪೆ ತಯಾರಿಸಲಾಗುತ್ತಿತ್ತು.

**೫೦. (ಮುಳ್ಳು) ತಕ್ಕಡಿ** : ಮನೆ ಮನೆಯಲ್ಲೂ ಹಿಂದೆ ಒಂದು ತಕ್ಕಡಿ ಇದ್ದೇ ಇರುತ್ತಿತ್ತು. ತಾವು ಬೆಳೆದ ಗೆಣಸು, ಸಿಹಿ ಗೆಣಸು, ಸುವರ್ಣ ಗೆಡ್ಡೆ ಮೊದಲಾದ ಫಲವಸ್ತುಗಳನ್ನು ಇದೇ ತಕ್ಕಡಿ ಮೂಲಕ ರೈತರು ವಿನಿಮಯ ಅಥವಾ ಮಾರಾಟ ಮಾಡಿಕೊಳ್ಳುತ್ತಿದ್ದರು. ತಕ್ಕಡಿಯ ಮೇಲ್ಗಡೆಯಿರುವ ಮುಳ್ಳು ನಿರ್ಣಾಯಕ ಪಾತ್ರ ವಹಿಸುತ್ತಿತ್ತು. ಇಂದಿನ ದಿನಗಳಲ್ಲಿ ಆಧುನಿಕ ತೂಕದ ಅಳತೆ ಮಾನಗಳು ಮಾರುಕಟ್ಟೆಯಲ್ಲಿರುವುದರಿಂದ ತಕ್ಕಡಿ ಮೂಲೆಗೆ ಸರಿದಿದೆ.

**೫೧. ತರ್ಕತ್ತಿ** : ತರ್ಕತ್ತಿ ಎಂಬುದು ಶೇಂದಿ ತೆಗೆಯಲು ಹೋಗುವಾಗ ಇಟ್ಟುಕೊಳ್ಳುವ ಹರಿತವಾದ ಕತ್ತಿಯಾಗಿತ್ತು. ಇದನ್ನು ಸೊಂಟದಲ್ಲಿ ಇಟ್ಟುಕೊಳ್ಳುತ್ತಿದ್ದರು. ತರ್ಕತ್ತಿಯ ಹರಿತದ ಕುರಿತಾಗಿ 'ಹೆಬ್ಬಾವನ್ನು ಸಿಗಿದು ಹಾಕಿದ' ಕಥೆಯೊಂದು ತುಳುನಾಡಿನಲ್ಲಿ ಚಾಲ್ತಿಯಲ್ಲಿದೆ.

**೫೨. ತಟ್ಟಿ (ಮಡಲ್) :** ಮಡಲ್ ತಟ್ಟಿ ಎಂಬುದು ಕೆಲವು ವರ್ಷಗಳ ಹಿಂದೆ ಹಳ್ಳಿಯ ಸಭೆ ಸಮಾರಂಭಗಳಲ್ಲಿ ರಾರಾಜಿಸುತ್ತಿತ್ತು. ಇಂದು ಮಾತ್ರ ಆ ಸ್ಥಳದಲ್ಲಿ ಶಾಮಿಯಾನಗಳು ಶೋಭಿಸುತ್ತವೆ. ಕೆಲವು ದಿನಗಳ ಹಿಂದೆಯೇ ತೆಂಗಿನ ಗರಿಯನ್ನು (ಮಡಲನ್ನು) ನೀರಿನಲ್ಲಿ ನೆನೆಯಲು ಹಾಕಿ ನಂತರ ಅದನ್ನು ಸರಿಯಾಗಿ ನೇಯಲಾಗುತ್ತದೆ. ಈ ತಟ್ಟಿಗಳನ್ನು ಮನೆಯ ಅಂಗಳಕ್ಕೆ ನೆರಳಿಗಾಗಿ ಹಾಸುತ್ತಾರೆ. ಮನೆಯ ಅಟ್ಟಕ್ಕೂ ಇದನ್ನು ಹಾಸುವುದುಂಟು. ಇದು ಬೇಡಿಕೆಯಲ್ಲಿದ್ದರೂ ನುರಿತ ತಯಾರಿಕಾದಾರರಿಲ್ಲದೆ ನಶಿಸಿ ಹೋಗುತ್ತಿದೆ.

**೫೩. ತಡ್ಪೆ :** ಕಾಡಿನಲ್ಲಿ ದೊರೆಯುವ ದಪ್ಪ (ತೋರ) ಇರುವ ಬಿಳಲುಗಳನ್ನು ಸಿಗಿದು ಅದನ್ನು ತೆಗೆದು ತಡ್ಪೆಯನ್ನು ತಯಾರಿಸುತ್ತಿದ್ದರು. ಅಕ್ಕಿ, ಭತ್ತ, ಗೋಧಿ ಮೊದಲಾದವುಗಳಲ್ಲಿ ಇರುವ ಕಲ್ಲು, ಧೂಳು ಮುಂತಾದವನ್ನು ತೆಗೆಯಲು ಇದನ್ನು ಬಳಸುತ್ತಿದ್ದರು. ಹಳ್ಳಿ ಪ್ರದೇಶದಲ್ಲಿ ಇಂದೂ ಕೂಡ ತಡ್ಪೆ ಬಳಕೆಯಲ್ಲಿದೆ.

**೫೪. ತಾರ್ ಬುಗುಡಿ :** 'ತಾರ್‌ಬುಗುಡಿ' ಎಂಬುದು ಹಿಂದಿನ ಕಾಲದಲ್ಲಿ ಮಹಿಳೆಯರು ಕಿವಿಗೆ ಧರಿಸುತ್ತಿದ್ದ ಆಭರಣವಾಗಿತ್ತು. ಮಂಗಳೂರು ಮಲ್ಲಿಗೆಯ ಮೊಗ್ಗಿನ ತರಹದ ರಚನೆಯಿಂದ ಈ ಆಭರಣ ಕೆಂಪು ಮುತ್ತನ್ನು ಹೊಂದಿರುತ್ತಿತ್ತು. ಇದನ್ನು ಕಿವಿಯ ನಡುಭಾಗಕ್ಕೆ ಧರಿಸಲಾಗುತ್ತಿತ್ತು.

**೫೫. ತಿರ್ಪುದ ಪೂ :** 'ತಿರ್ಪುದ ಪೂ; ಎಂಬುದು ಕೂಡ ಕೆಲಕಾಲದ ಹಿಂದೆ ಮಾನಿನಿಯರ ಶೃಂಗಾರ ಆಭರಣವಾಗಿತ್ತು. ಇದನ್ನು ಜಡೆಗೆ ಮುಡಿಯಲಾಗುತ್ತಿತ್ತು. ಇದು ಸುಂದರ ಬಳ್ಳಿಯಾಕಾರದ ರಚನೆಗಳನ್ನು ಹೊಂದಿರುತ್ತಿತ್ತು. ಅಲ್ಲಿ ಒಂದು ಸುರುಳಿಯಾಕಾರದ ರಚನೆಯಿದ್ದು ಅದನ್ನು ತಿರುಗಿಸಿದಂತೆ ತಲೆಕೂದಲುಗಳು ಈ ಸುರುಳಿಯೊಳಗೆ ಸೇರಿ ಈ ಹೂ ಬೀಳದಂತೆ ಭದ್ರಪಡಿಸುತ್ತಿದ್ದವು.

**೫೬. ತಿಪ್ಪಿದ ಕೈಲ್ :** 'ತಿಪ್ಪಿದ ಕೈಲ್'ಗಳು ಸ್ಟೀಲ್ ಸೌಟುಗಳು ಬರುವುದಕ್ಕಿಂತ ಮೊದಲು ಮನೆ ಮನೆಯಲ್ಲೂ ಇದ್ದವು. ತೆಂಗಿನಕಾಯಿಯ ಗೆರಟೆಯನ್ನೇ ಅನ್ನದ ಸೌಟನ್ನಾಗಿ, ಸಾಂಬಾರಿಗೆ ಸೌಟಾಗಿ ಬಳಸುತ್ತಿದ್ದ ಜನತೆ ಬರಬರುತ್ತಾ ಈ ಗೆರಟೆ ಸೌಟನ್ನೇ ಪೂರ್ಣವಾಗಿ ನಿರ್ಲಕ್ಷಿಸಿ, ಪ್ರಸ್ತುತ ಸ್ಟೀಲ್ ಸೌಟುಗಳನ್ನೇ ಅಧಿಕವಾಗಿ ಉಪಯೋಗಿಸುತ್ತಿದ್ದಾರೆ.

**೫೭. ದಾನೆ :** 'ದಾನೆ' ಎಂದರೆ ಅತೀ ದೊಡ್ಡ ಸೌಟು. ಮನೆಯಲ್ಲಿ ವಿಶೇಷ ಸಭೆ, ಸಮಾರಂಭಗಳು ಏರ್ಪಾಡಾದರೆ 'ದಾನೆ' ಬಲು ಮುಖ್ಯವಾದ ಪಾತ್ರವನ್ನು ಆ ದಿನ ವಹಿಸುತ್ತಿದ್ದವು. ದೊಡ್ಡ ಹಂಡೆಯಲ್ಲಿ ಖಾದ್ಯಗಳನ್ನು ತಯಾರಿಸುವಾಗ ಅದನ್ನು ಮಗುಚಲು, ಹದಮಾಡಲು ಈ ದಾನೆಗಳು ಬಳಕೆಯಾಗುತ್ತದೆ. ಸಾಮಾನ್ಯವಾಗಿ ಇವು ಅಡಿಕೆಯ ಸಲಾಕೆಯಿಂದ ಮತ್ತು ತೆಂಗಿನ

ಕೊತ್ತಳಿಗೆಯಿಂದ ಈ ದಾನೆಗಳನ್ನು ತಯಾರಿಸಲಾಗುತ್ತಿತ್ತು. ಈಗ ಈ ಸ್ಥಾನಗಳನ್ನು ಕಬ್ಬಿಣದ ಸೌಟುಗಳು ತುಂಬಿವೆ.

**೫೮. ದೆಂಗ** : ದೆಂಗದ ಕಲ್ಪನೆ ಅನಾದಿ ಕಾಲದಿಂದಲೂ ಬೆಳೆದು ಬಂದಿದೆ. ಒಲೆಯ ಮೇಲ್ಗಡೆ ಸಣ್ಣದಾದ ಅಟ್ಟೊಳಿಗೆಯನ್ನೇ ಹೋಲುವ ಈ ದೆಂಗದಲ್ಲಿ ಮಳೆಗಾಲದಲ್ಲಿ ಬೆಚ್ಚನೆ ಅನೇಕ ವಸ್ತುಗಳು ಇಟ್ಟಿರಲ್ಪಟ್ಟಿರುತ್ತದೆ. ಹಳ್ಳಿಯ ಹಂಚಿನ ಮನೆಗಳಲ್ಲಿ ಇಂದೂ ಕೂಡ ಈ ವ್ಯವಸ್ಥೆ ಇದೆ.

**೫೯. ದೊಂದಿ** : ರಾತ್ರಿಯ ಕಾರ್ಯಕ್ರಮದಲ್ಲೆಲ್ಲಾ ಹಿಂದೆ ಇಂದಿನ ಹಾಗೆ ಗ್ಯಾಸ್‌ಲೈಟ್ ಆಗಲಿ, ವಿದ್ಯುತ್ ದೀಪವಾಗಲೀ, ಜನರೇಟರ್ ಆಗಲೀ ಇರಲಿಲ್ಲ. ದೊಡ್ಡ ಕೋಲಿಗೆ ಹತ್ತಿಯ ಬಟ್ಟೆ ಕಟ್ಟಿ, ಅದಕ್ಕೆ ಸೀಮೆಎಣ್ಣೆಯೋ, ತೆಂಗಿನೆಣ್ಣೆಯೋ, ಎಳ್ಳೆಣ್ಣೆಯನ್ನೋ ಹಾಕಿ ಹೊತ್ತಿಸಲಾಗುತ್ತಿತ್ತು. ಇದು ಇಡೀ ಪ್ರದೇಶವನ್ನೇ ತನ್ನ ಪ್ರಭೆಯಿಂದ ಬೆಳಗಿಸುತ್ತಿತ್ತು. ಇದನ್ನು ದೊಂದಿ ಅಥವಾ ಪಂಜು ಎಂದು ಕರೆಯುತ್ತಾರೆ.

**೬೦. ನತ್ತ್** : ನತ್ತ್ ಎಂಬುದು ಮೂಗಿಗೆ ಧರಿಸುವ ಸೌಂದರ್ಯದ ಆಭರಣವಾಗಿದೆ. ಎರಡು ಮೂಗಿನ ತೂತಿನ ನಡುವೆ ಈ ಆಭರಣಗಳನ್ನು ಧರಿಸುತ್ತಾರೆ. ಹೆಂಗಸರು ಮಾತ್ರ ಈ ಆಭರಣಗಳನ್ನು ಧರಿಸುತ್ತಿದ್ದರು. ಇಂದು ಈ ರೀತಿಯ ಆಭರಣಗಳು ಎಲ್ಲೂ ನೋಡಲು ಸಿಗುತ್ತಿಲ್ಲ.

**೬೧. ನೈತ್ತರಿಯ** : ನೈತ್ತರಿಯ ಎಂಬುದು ಬೆಣ್ಣೆಯನ್ನು ಸಂಗ್ರಹಿಸಿಡುವ ಮಣ್ಣಿನ ಸಾಧನ. ಇದಕ್ಕೆ ಮುಚ್ಚಳವಾಗಿ ಇಂದಿನ ಹಾಗೆ ವಿವಿಧ ರೀತಿಯ ಮುಚ್ಚಳಗಳಿರಲಿಲ್ಲ. ಬದಲಾಗಿ ಹತ್ತಿಯ ಬಟ್ಟೆಯನ್ನೇ ಅದರ ಬಾಯಿಗೆ ಸುತ್ತಿ ಕಟ್ಟಲಾಗುತ್ತಿತ್ತು. ಇದರಲ್ಲಿ ಬೆಣ್ಣೆ ಹಾಳಾಗದೆ ಹಲವು ಸಮಯ ರಕ್ಷಿಸಿ ಇಡಲಾಗುತ್ತಿತ್ತು.

**೬೨. ಪಡ್ಯ** : ಪಡ್ಯ ಎಂಬುದು ಎಲೆ ಅಡಿಕೆ ತಿನ್ನುವ ವಯಸ್ಕರಿಗೆ (ಪ್ರಾಯಸ್ಕರಿಗೆ) ಕೂತು ಕೊಂಡಲ್ಲಿಯೇ ಉಗುಳಲು ಅನುಕೂಲವಾಗಿರುವ ಒಂದು ಸಾಧನ. ಮುದುಕರು ಅತ್ತಿಂದಿತ್ತ ಇತ್ತಿಂದತ್ತ ಓಡಾಡುವುದನ್ನು ತಪ್ಪಿಸುವ ಸಲುವಾಗಿ ಪಡ್ಯವನ್ನು ಬಳಸಲಾಗುತ್ತದೆ. ಕೆಳಗಡೆ ನೀಳವಾದ ರಚನೆಯಿದ್ದರೆ ನಡುಭಾಗದಲ್ಲಿ ಉಬ್ಬಿನಂಥ ರಚನೆಯಿರುತ್ತದೆ. ಅದರ ನಂತರ ಬಾಯಿ ಮೇಲಕ್ಕೆ ಬಂದಂತೆಲ್ಲಾ ಉಗುಳಲು ಅನುಕೂಲವಾಗುವಂತೆ ತೆರೆದಿರುತ್ತದೆ.

**೬೩. ಪಂತ್ಯ (ಪಂಥ್ಯ)** : ಪಂತ್ಯ ಎಂಬುದು ಸಭೆ ಸಮಾರಂಭಗಳಿಂದ ಮರೆಯಾಗುತ್ತಿರುವ ಒಂದು ಪದ್ಧತಿ. ಅಡಿಕೆ ಮರವನ್ನು ಎರಡಾಗಿ ಸಿಗಿದು ಸಮಾರಂಭದಲ್ಲಿ ಊಟಕ್ಕೆ ಕುಳಿತುಕೊಳ್ಳಲು ಇವನ್ನು ಹಾಸುತ್ತಾರೆ. ಇದರಲ್ಲಿ ಕುಳಿತುಕೊಂಡವರು ಯಾರೂ ಬಡಿಸಿದ ಹಾಗೇ

ತಿನ್ನಲಿಕ್ಕಿಲ್ಲ. ಮನೆಯ ಯಜಮಾನನ ಆದೇಶ ಕೂಡ ಇಡೀ ಸಮೂಹಕ್ಕೆ ಬಡಿಸಿದ ನಂತರ ಹೊರಬೀಳುತ್ತದೆ. 'ನಾವೆಲ್ಲಾ ಒಂದೇ' ಎಂಬ ಐಕ್ಯತೆಯ ಸಂಕೇತ ಇದಾಗಿದೆ.

**೬೪. ಪಂಚಕುರುವೆ :** ಪಂಚಕುರುವೆ ಎಂಬುದು ಅತ್ಯಂತ ಪವಿತ್ರವಾದದ್ದು. ದೇವತಾ ಕಾರ್ಯಗಳಿಗೆ ಇದನ್ನು ಬಳಸಲಾಗುತ್ತದೆ. ಅಕ್ಕಿಯ ಅಳತೆಮಾನ ಸೇರಿದಂತೆ ಇದು ರಚಿತಗೊಂಡಿರುತ್ತದೆ. ದೇವರ ಮುಂದೆ ಒಂದು ಸೇರು, ಮೂರು ಸೇರು ಅಕ್ಕಿಯನ್ನಿಡಲು ಪಂಚಕುರುವೆಯನ್ನು ಬಳಸುತ್ತಿದ್ದರು. ಇದರಲ್ಲೂ ಅನೇಕ ವಿಭಾಗಗಳಿತ್ತು. ಕೆಲವು ಯುಗಾದಿಯ ದಿನದಂದು ಮಾತ್ರ ಬಳಸಲ್ಪಡುತ್ತಿದ್ದರೆ ಇನ್ನು ಕೆಲವು ಭೂತ ತಂಬಿಲಗಳ ಸಂದರ್ಭದಲ್ಲಿ ಮಾತ್ರ ಬಳಸುತ್ತಾರೆ. ಅಷ್ಟರವರೆಗೆ ಇದು ಅಟ್ಟದಲ್ಲಿರುತ್ತವೆ.

**೬೫. ಪಲ್ಲಯಿ :** ಪಲ್ಲಯಿ ಎಂದರೆ ಊಟ ಮಾಡಲು ಬಳಸುವ ಮಣ್ಣಿನ ಬಟ್ಟಲು. ಇದು ಅಗಲವಾಗಿರುತ್ತದೆ. ಸ್ಟೀಲ್, ಅಲ್ಯುಮಿನಿಯಂ ಬಟ್ಟಲುಗಳು ಬರುವ ಹಿಂದೆ ಎಲ್ಲಾ ಮನೆಗಳಲ್ಲೂ ಪಲ್ಲಯಿಯನ್ನೇ ಊಟ ಮಾಡಲು ಬಳಸುತ್ತಿದ್ದರು. ಇದನ್ನು ಅತ್ಯಂತ ಜಾಗರೂಕತೆಯಿಂದ ತೊಳೆದು ತೆಗೆದಿಡುತ್ತಿದ್ದರು.

**೬೬. ಪಾಟೆ :** ಇದು ತಪಲೆಯ ನಂತರದ ಸಮಯದಲ್ಲಿ ಜನರು ಸ್ನಾನ ಮಾಡಲು ಉಪಯೋಗಿಸಿದ ವಸ್ತು. ಪಾಟೆಗಳು ಬೇರೆ ಬೇರೆ ಗಾತ್ರದಲ್ಲಿ ದೊರೆಯುತ್ತಿದ್ದು ಜನರು ತಮ್ಮ ಆರ್ಥಿಕ ಸ್ಥಿತಿಗತಿಗೆ ಅನುಗುಣವಾಗಿ ಚಿಕ್ಕ ಇಲ್ಲವೆ ದೊಡ್ಡ ಪಾಟೆಗಳನ್ನು ಉಪಯೋಗಿಸುತ್ತಿದ್ದರು.

**೬೭. ಪಾರೆಂಕಿ :** ಪಾರೆಂಕಿ ಎಂಬುದು ತೆಂಗಿನಕಾಯಿ ಸುಲಿಯುವ ಒಂದು ಸಾಧನ. ಮರದ ಒಂದು ತುಂಡಿಗೆ ಕಬ್ಬಿಣದ ತುಂಡನ್ನು ಹೊಡೆದು ಚೂಪಾದ (ಹರಿತವಾದ) ಭಾಗದಿಂದ ತೆಂಗಿನಕಾಯಿಯ ಸಿಪ್ಪೆ ಸುಲಿಯಲಾಗುತ್ತಿತ್ತು. ಇದರಲ್ಲಿ ಕತ್ತಿಯಿಂದ ತೆಂಗಿನಸಿಪ್ಪೆ ತೆಗೆಯುವುದಕ್ಕಿಂತ ಸುಲಭವಾಗಿ ಮತ್ತು ವೇಗವಾಗಿ ತೆಂಗಿನ ಸಿಪ್ಪೆ ತೆಗೆಯಬಹುದಾಗಿದೆ.

**೬೮. ಪಾವು :** ಪಾವು ಎಂಬುದು ಅಕ್ಕಿಯನ್ನು ಅಳೆಯುವ ಒಂದು ಸಾಧನ. ಒಂದು ಸೇರು ಅಕ್ಕಿಯಾಗಲು ಈ ಮಾನದಲ್ಲಿ ನಾಲ್ಕು ಪಾವು ಅಕ್ಕಿ ಬೇಕಾಗುತ್ತದೆ. ಸೇರಿನ ನಂತರದ ಕಿರಿಯ ಮಾಪನ ಇದು. ಬಿದಿರಿನ ಪಾವು. ತಾಮ್ರದ ಪಾವುಗಳನ್ನು ಹಿಂದೆ ಕಾಣಬಹುದಾಗಿತ್ತು. ಇಂದು ಇವು ನೋಡಲು ಅಪರೂಪವಾಗಿವೆ.

**೬೯. ಪೇಲೆ :** ಇದು ಸೀಮೆ ಎಣ್ಣೆಯನ್ನು ಚಿಮಿಣಿಗೆ ತುಂಬಿಸಲು ಬಳಸುತ್ತಿದ್ದ ಒಂದು ವಸ್ತು. ಇದು ಸೀಮೆ ಎಣ್ಣೆ ಚೆಲ್ಲುವುದನ್ನು ತಪ್ಪಿಸುತ್ತದೆ. ಮೇಲೆ ಇದು ದೊಡ್ಡ ಬಾಯಿ ಹೊಂದಿದ್ದು ಕೆಳಗೆ ಬಂದಂತೆಲ್ಲಾ ಕೊಕ್ಕರೆಯ ಕೊಕ್ಕಿನಂತೆ ಪೇಲೆ ಕಿರಿದಾಗುತ್ತಾ ಸಾಗುತ್ತದೆ.

**೭೦. ಪೈಕ್ :** ಪೈಕ್ ಎಂದರ ಒಲಿಯಿಂದ ಮಾಡಿದಂತಹ ಒಂದು ಚಾಪೆಯಂತಹ ರಚನೆ. ಆದರೆ ಇದರಲ್ಲಿ ಹಣ (ಚಿಲ್ಲರೆ) ಮೊದಲಾದವುಗಳನ್ನು ತುಂಬಿಸಿಡುತ್ತಿದ್ದರು. ಈಗೀಗಿನ ಸೂಟ್‌ಕೇಸ್, ಪೆಟ್ಟಿಗೆಗಳು ಬಂದ ನಂತರ ಇಂತಹ ಪೈಕ್‌ಗಳು ಕಡಿಮೆಯಾಗಿವೆ.

**೭೧. ಬಲ :** ಬಲ ಎಂದರೆ ಪುಲ್ಲು ಎಂಬ ಹುಲ್ಲಿನಿಂದ ಅಥವಾ ಬಿಳಲಿನಿಂದಲೂ ಮಾಡಿದ ಒಂದು ಜೋಕಾಲಿಯಂತಹ ರಚನೆ. ಇದರಲ್ಲಿ ಹಾಲು, ಬೆಣ್ಣೆ ಮೊದಲಾದವುಗಳನ್ನು ಇಟ್ಟಿರುತ್ತಾರೆ. ಒಣ ಮೀನಿಗೂ ಕೂಡ ಕೆಲವೊಮ್ಮೆ ಇಲ್ಲಿಯೇ ಸ್ಥಾನ. ಯಾಕೆಂದರೆ ಇಲ್ಲಿಗೆ ಬೆಕ್ಕು ಬರಲು ಸಾಧ್ಯವಿಲ್ಲ. ಇದು ಅನೇಕರ ಮನೆಯಲ್ಲಿ ಹಿಂದೆ ನೇತಾಡುತ್ತಿತ್ತು. ಆದರೆ ಪ್ರಸ್ತುತ ಕಾಣದಾಗಿದೆ.

**೭೨. ಬಲೆ :** ತಲೆಗೆ ಹೆಂಗಸರು ಹಾಕುವ ಸೂಡಿಗೆ ಇದನ್ನು ಹಿಂದೆ ಕಟ್ಟುತ್ತಿದ್ದರು. ಇದು ಬಲೆಯಾಕಾರದಲ್ಲಿಯೇ ಇರುತ್ತಿತ್ತು. ಇತ್ತೀಚಿನ ದಿನಗಳಲ್ಲಿ ಸೂಡಿ ಹಾಕುವ ಜನರೂ ಕಡಿಮೆ ಯಾಗಿದ್ದಾರೆ. ಬಲೆಯ ಉಪಯೋಗವೂ ಇಲ್ಲದಾಗಿದೆ.

**೭೩. ಬಲಿಪು (ಕಿಟಕಿ) :** ಇದೊಂದು ರೀತಿಯ ವಿಶಿಷ್ಟ ಮಾದರಿಯ ಕಿಟಕಿಯಾಗಿದೆ. ವಾಸ್ತವವಾಗಿ ಎರಡು ಪದರಗಳ ರೂಪದಲ್ಲಿ ಮರದ ಹಲಗೆಯನ್ನು ಕೆತ್ತಿ ಕತ್ತರಿಯಾಕಾರದಂತೆ ಮಾಡಲಾಗುತ್ತದೆ. ರಾತ್ರಿಯಾದ ನಂತರ ಒಂದು ಹಲಗೆಯನ್ನು ಸ್ವಲ್ಪ ತಳ್ಳಿದರೆ ಇಡೀ ಕಿಟಕಿಯೇ ಭದ್ರವಾಗಿ ಮುಚ್ಚಿಹೋಗಿ ಹೊರಗಡೆ ಏನೂ ಕಾಣಿಸುವುದಿಲ್ಲ. ಒಂದು ಸ್ವಲ್ಪ ಎಳೆದು ಅದೇ ಪದರವನ್ನು ಸರಿಸಿದರೆ ಖಾಲಿ ಜಾಗದಲ್ಲಿ ಕುಳಿತ ಎರಡನೇ ಅಟ್ಟಿಯ ರಚನೆಗಳು ಒಂದರ ಮೇಲೊಂದರಂತೆ ಕೂತು ಹೊರಗಡೆ ಸಂಪೂರ್ಣ ಕಾಣುವುದು. ಈ ಕಿಟಕಿ ಕೂಡ ಇಂದು ಜನಮಾನಸದಿಂದ ಮರೆಯಾಗಿದೆ.

**೭೪. ಬಾಜಿರದ ಕಂಬ :** ಇದು ಹಿರಿಯ ಮನೆತನಗಳ ಮನೆಯಲ್ಲಿ ಕಂಡು ಬರಬಹುದಾದ ಒಂದು ಕಂಬ. ಸಾಮಾನ್ಯವಾಗಿ ಮನೆಯ ಒಳಪ್ರವೇಶದ ಸಂದರ್ಭದಲ್ಲೇ ಈ ಕಂಬ ಕಾಣಸಿಗುತ್ತದೆ. ಇದು ಮರದ ಕಂಬವಾಗಿದ್ದು ಮನೆಯ ಘನತೆ, ಗೌರವಗಳನ್ನು ನಿರ್ಧರಿಸುವ ಮೌಲ್ಯವುಳ್ಳದ್ದು ಆಗಿರುತ್ತಿತ್ತು.

**೭೫. ಬಿಸಲೆ :** ಬಿಸಲೆಯೆಂಬುದನ್ನು ನೆಸಲೆ ಎಂದು ಕೂಡ ಕರೆಯುತ್ತಿದ್ದರು. ಇದು ಮಣ್ಣಿನಿಂದ ಮಾಡಿರುವಂಥದ್ದಾಗಿದ್ದು. ಆಹಾರದ ಪೌಷ್ಟಿಕಾಂಶ ಸತ್ವವನ್ನು ಹೀರಿಕೊಳ್ಳುವಂಥದ್ದು ಆಗಿರಲಿಲ್ಲ. ಆದರೆ ತರುವಾಯ ಬಂದಂತಹ ಅಲ್ಯೂಮಿನಿಯಂ ಪಾತ್ರೆಗಳು ಬಳಕೆಯಲ್ಲಿ

ಸರಳವಾದ್ದರಿಂದ ಜನ ಮಣ್ಣಿನ ಬಿಸಲೆಯನ್ನು ಬಳಕೆಯನ್ನು ಕಡಿಮೆ ಮಾಡಿದ್ದಾರೆ. ಆದರೆ ಈಗಲೂ ಮೀನು, ಮಾಂಸದ ಅಡುಗೆಗೆ ಕೆಲವು ಮನೆಗಳಲ್ಲಿ ಮಣ್ಣಿನ ಬಿಸಲೆಯನ್ನೇ ಉಪಯೋಗಿಸುತ್ತಾರೆ.

**೭೬. ಭರಣಿ :** ಮಣ್ಣಿನ ಭರಣಿ ಇಂದು ಮರೆಯಾಗುತ್ತಿರುವ ವಸ್ತುಗಳಲ್ಲಿ ಒಂದಾಗಿದೆ. **'ಉಪ್ಪಡ್ ಪಚ್ಚಿಲ್'** ಎಂಬ ಒಂದು ಹಲಸಿನ ಕಾಯಿಯ ತೊಳೆಯನ್ನು ಭರಣಿಯಲ್ಲಿ ಹಾಕಿಡಲಾಗುತ್ತದೆ. ಅದಕ್ಕೆ ಮಣ್ಣಿನದೇ ಮುಚ್ಚಳವೂ ಇರುತ್ತದೆ. ಕೆಲವು ಮನೆಗಳಲ್ಲಿ ಉಪ್ಪಿನಕಾಯಿಯನ್ನು ಇದೇ ಭರಣಿ ಯಲ್ಲಿ ಸಾಕಿಡುತ್ತಿದ್ದರು.

**೭೭. ಭರ್ಚಿ :** ಇದು ಕೃಷಿಕರು ಬಳಸುತ್ತಿದ್ದ ಬೇಟೆಯ ಒಂದು ಆಯುಧ, ತಾವು ಬೆಳೆಸಿದ ಬೆಳೆಗಳಿಗೆ ಪ್ರಾಣಿಗಳ ಹಾವಳಿ ಅಧಿಕವಾದಾಗ ಎಲ್ಲಾ ನಾಗರಿಕರು ಸೇರಿ ಬೇಟೆಗೆ ಹೊರಡುತ್ತಾರೆ. ಈ ಸಂದರ್ಭದಲ್ಲಿ ಭರ್ಚಿ ಹಂದಿ, ಮೊಲಗಳ ಸಂಹಾರಕ್ಕೆ ಮೂಲ ಕಾರಣವಾಗುತ್ತದೆ. ಕೆಲವರ್ಷಗಳಿಂದಾಚೆಗೆ ಬೇಟೆಯಾಡುವುದನ್ನು ನಿಷೇಧಿಸಲಾಗಿದೆ.

**೭೮. ಮರಾಯಿ :** ಮರಾಯಿಗಳು ಒಂದು ಸಮಯದಲ್ಲಿ ಜನರ ಜೀವನದ ಅವಿಭಾಜ್ಯ ಅಂಗವಾಗಿದ್ದುವು. ಮರಾಯಿಯೆಂದರೆ ಅವು ಬೇರೆ ಬೇರೆ ಉದ್ದೇಶಗಳಿಗಾಗಿ ಉಪಯೋಗ ಮಾಡುವಂತಹದ್ದಾಗಿದೆ. ಅನ್ನ ಬಸಿಯುವ ಮರಾಯಿ, ಅಕ್ಕಚ್ಚಿನ ಮರಾಯಿ, ಉಪ್ಪಿನ ಮರಾಯಿ ಗಳೆಂಬ ಬಹುವಿಧಧ ಮರಾಯಿಗಳು ಚಾಲ್ತಿಯಲ್ಲಿದ್ದವು. ಇಂದು ಇವುಗಳೂ ಸಹ ಅಪರೂಪವಾಗಿದೆ.

**೭೯. ಮಡ್ಡಿ ಬೇಯಿಸುವ ಪಾತ್ರೆ :** ಮಡ್ಡಿ ಬೇಯಿಸುವುದು ಗ್ರಾಮೀಣ ಪ್ರದೇಶದಲ್ಲಿ ಒಂದು ನಿತ್ಯದ ಕಾಯಕವಾಗಿತ್ತು. ದನಕರುಗಳಿಗೆ ವಿವಿಧ ಮಾದರಿಯ ಸೊಪ್ಪನ್ನು ಒಟ್ಟಿಗೆ ಸೇರಿಸಿ ಮಡ್ಡಿಯಂತೆ ಮಾಡಿ ನೀಡಲಾಗುತ್ತಿತ್ತು. ಇದನ್ನು ಬೇಯಿಸಲು ಪ್ರತ್ಯೇಕವಾದ ಒಂದು ಪಾತ್ರೆಯೇ ಇರುತ್ತಿತ್ತು. ಅದನ್ನು **'ಮಡ್ಡಿದ ಕರ'** ಎಂದು ಕರೆಯುತ್ತಿದ್ದರು.

**೮೦. ಮದನ ಕೈ :** ಮದನ ಕೈ ಎಂಬುದು ಮರದ ಹಲಗೆ, ದೆಂಗದ ಅಡ್ಡಗಳನ್ನು ಹಿಡಿದು ಕೊಳ್ಳಲು ಅನುಕೂಲವಾಗುವಂತೆ ಗೋಡೆಗೆ ಬಡಿದು ಅದರಲ್ಲಿ ಹಲಗೆ ಇಡುವ ಕ್ರಮ. ಈ ಹಿಡಿಗೆಯನ್ನು ಮದನ ಕೈ ಎಂದೆನ್ನುವರು.

**೮೧. ಮಣೆ :** ಮಣೆ ಎಂಬುದು ಸಂಪ್ರದಾಯಸ್ಥರ ಮನೆಯ ಸಂಸ್ಕಾರದ ಪ್ರತೀಕವಾದ ಆಸನ. ಬಂದವರಿಗೆ ಮಣೆ ಹಾಕುವುದು' ಎಂಬ ಮಾತು ಇದರಿಂದಲೇ ಚಾಲ್ತಿಯಲ್ಲಿದೆ. ಇದು ಗಾತ್ರದಲ್ಲಿ ಸಣ್ಣದಾಗಿದ್ದು ಹಲಗೆಗೆ ಎರಡು ಕಾಲುಗಳನ್ನು ಮಾಡಿಟ್ಟಿರಲಾಗುತ್ತದೆ. ಊಟ ಮಾಡಲು

ಇದೊಂದು ವಿಶೇಷ ಆಸನ. ಇಂದು ಡೈನಿಂಗ್ ಟೇಬಲ್‌ಗಳಿಂದಾಗಿ ಮಣೆಯ ಮೇಲೆ ಕುಳಿತುಕೊಳ್ಳುವವರು ಕಡಿಮೆಯಾಗಿದ್ದಾರೆ.

**೮೨. (ಸೇಮದಡ್ಡ) ಮಣೆ** : ಬಿಳಲು ಬಿಳಲಿನಂತಹ ವಿಶೇಷ ತಿಂಡಿಯೇ ಶಾವಿಗೆ. ಶಾವಿಗೆ ಮಣೆ ಈ ವಿಸ್ತೃತ ಮಾದರಿಯದ್ದಾಗಿದೆ. ಹಿಂದೆ ಶಾವಿಗೆ ಮಣೆಯೆಂದರೆ ಅದು ಮರದಿಂದ ಮಾಡಲಾಗುತ್ತಿತ್ತು. ನಾಲ್ಕಾರು ಮನೆಯವರು ಒಂದೆಡೆ ಸೇರಿ ತಿಂಡಿ ಒತ್ತುತ್ತಿದ್ದರು. ನಂತರ ಒಟ್ಟಿಗೆ ತಿನ್ನುತ್ತಿದ್ದರು. ಇಂತಹ ಹೊಂದಾಣಿಕೆ ಇಂದಿನ ದಿನಗಳಲ್ಲಿ ಕಡಿಮೆಯಾಗಿದೆ.

**೮೩. ಮಡು** : ಕಟ್ಟಿಗೆಯನ್ನು ತುಂಡು ತುಂಡು (ಮುರಿ) ಮಾಡಿ ಸಿಗಿದು ಹಾಕಲು ಮಡು ಅತ್ಯಂತ ಅಗತ್ಯ. ಇದಕ್ಕೆ ಹರಿತವಾದ ಬಾಯಿ ಇರುತ್ತದೆ. ಕೆಳಗಡೆ ಅದಕ್ಕೆ ಒಂದು ಕಟ್ಟೆ ಇರುತ್ತದೆ. ಇಲ್ಲಿ ಸರಿಯಾದ ಮರದ ತುಂಡು (ಕೀಲು) ಹಾಕಿ ಭದ್ರ ಮಾಡಿದ ನಂತರ ಕಟ್ಟಿಗೆ ಸೀಳಲಾಗುತ್ತಿತ್ತು. ಇಂದೂ ಕೂಡ ಹಳ್ಳಿಯ ಬಹುತೇಕ ಮನೆಗಳಲ್ಲಿ ಮಡು ಇದ್ದರೂ, ಕಟ್ಟಿಗೆ ಸೀಳುವವರ ಸಂಖ್ಯೆ ಕಡಿಮೆಯಾಗಿದೆ.

**೮೪. ಮಂತ್** : ಹಾಲಿಗೆ ಹೆಪ್ಪು ಹಾಕಿದ ನಂತರ ಮಜ್ಜಿಗೆ ಕಡೆಯಲು ಹಿಂದಿನವರು ಬಳಸುತ್ತಿದ್ದ ಒಂದು ಸಾಧನವೇ ಮಂತ್. ಗದೆಯಾಕಾರದ ರಚನೆಯನ್ನು ಇದು ಹೊಂದಿದ್ದು ತುದಿಯಲ್ಲಿ ಸೀಳು ಸೀಳಾದ ರಚನೆಯಿರುತ್ತದೆ. ಇಂದು ಇದರ ಬಳಕೆ ಕಡಿಮೆಯಾಗಿದೆ.

**೮೫. ಮಾಂದ್ರ (ಮಾಂಬಲ)** : ಇದು ಮಾವಿನ ಹಣ್ಣಿನಿಂದ ಮಾಡುವ ವಿಶೇಷವಾದ ಒಂದು ಖಾದ್ಯ, ಮಾವಿನ ಹಣ್ಣಿನಿಂದ ಅದರ ಗೆರಟೆಯನ್ನು ಬೇರ್ಪಡಿಸಿ ಮೆಣಸು, ಉಪ್ಪುಗಳೊಂದಿಗೆ ಚೆನ್ನಾಗಿ ರುಬ್ಬಿ ನಂತರ ಅದನ್ನು ಒಣಗಲಿಟ್ಟು ಮಾಂದ್ರ ತಯಾರಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಇದರ ಬಳಕೆಯೂ ಕಡಿಮೆಯಾಗಿದೆ.

**೮೬. ಮುಂಗೈ ಸರಪೊಳಿ** : ಇದು ಬಂಗಾರದ ಆಭರಣ, ಹೆಂಗಸರ ಕೈಗೆ ಇದನ್ನು ತೊಡಿಸಲಾಗುತ್ತದೆ. ಅದರಲ್ಲೂ ಮುಂಗೈಯಿಂದ ತೋಳಿನವರೆಗೆ ಇದನ್ನು ಕಟ್ಟಲಾಗುತ್ತಿತ್ತು.

**೮೭. ಮುರ್ನಾಲಿ** : ಇದೊಂದು ಕಬ್ಬಿಣದ ಸಾಧನ, ನೋಡಲು ದೋಣಿಯಾಕಾರ ದಲ್ಲಿರುತ್ತದೆ. ಮೊನೆ ಅತ್ಯಂತ ಚೂಪಾಗಿರುತ್ತದೆ. ಮೊನೆ ಕಿರಿದಾಗಿದ್ದರೆ ಅದರ ಹಿಡಿಗೆ ಬರುವಾಗ ಅಗಲವಾಗಿರುತ್ತದೆ. ಇದರ ಮೂಲಕ ಅಕ್ಕಿಯ ಮುಡಿಗೆ ಚುಚ್ಚಲಾಗುವುದು. ಹೊರ ತೆಗೆದಾಗ ಅಕ್ಕಿ ಹೊರ ಬರುತ್ತದೆ. ಇದು ಅಕ್ಕಿ ಪರೀಕ್ಷೆಯ ಒಂದು ಪರಿಕರ.

**೮೮. ಸೇರು :** ಸೇರು ಎಂದರೆ ಅಕ್ಕಿಯನ್ನು ಅಳೆಯುವ ಒಂದು ಸಾಧನವಾಗಿದೆ. ಒಂದು ಸೇರಿಗೆ ನಾಲ್ಕು ಪಾವು ಅಕ್ಕಿ ತುಂಬುತ್ತದೆ. ಕಿಲೋ ಗ್ರಾಂ ಅಳತೆ ಪ್ರಾರಂಭವಾಗುವುದಕ್ಕೆ ಮುಂಚೆ ಸೇರಿನಿಂದಲೇ ಅಕ್ಕಿಯನ್ನು ಅಳತೆ ಮಾಡುತ್ತಿದ್ದರು. ಹದಿನಾಲ್ಕು ಸೇರು ಅಕ್ಕಿ ಒಂದು ಕಳಸೆ ಆಗುತ್ತಿತ್ತು.

**೮೯. ಸಂಕೋಲೆ :** ಹಿಂದಿನ ಕಾಲದಲ್ಲಿ ಬಾಗಿಲುಗಳು ಸುಂದರವಾದ ಸಂಕೋಲೆ ಹಾಗೂ ಕುಂಡಲಗಳನ್ನು ಹೊಂದಿರುತ್ತಿದ್ದವು. ಈ ಸಂಕೋಲೆಗಳನ್ನು ಸಿಕ್ಕಿಸಲು ದಾರಂದಕ್ಕೆ ಚಿಲಕಗಳಿದ್ದು ಅವುಗಳಿಗೆ ಸಂಕೋಲೆ ಸೇರಿಸಿ ಬೀಗ ಹಾಕುತ್ತಿದ್ದರು. ಇಂದು ಇಂತಹ ಸಂಕೋಲೆಗಳು ಅಪರೂಪವಾಗಿವೆ.

**೯೦. ಸೂಟೆ :** 'ಸೂಟೆ' ಎಂಬ ಪದವನ್ನು ತೆಂಗಿನ ಒಣಗರಿಯಿಂದ ಕಟ್ಟಿದ ಒಂದು ಕಟ್ಟಿನಂತಹ ರಚನೆಗೆ ಹೇಳುತ್ತಾರೆ. ಮುಖ್ಯವಾಗಿ ತುಳುನಾಡಿನ ಪ್ರಮುಖ ಆಚರಣೆಯಾದ ಭೂತ ಕೋಲದ ಸಂದರ್ಭದಲ್ಲಿ ಸೂಟೆ ಭೂತಕ್ಕೆ ದಾರಿ ತೋರಿಸುವ ಕೆಲಸವನ್ನು ನಿರ್ವಹಿಸುತ್ತದೆ. ಇದಲ್ಲದೆ ಹಿಂದಿನ ಕಾಲದಲ್ಲಿ ದೀಪಗಳು, ಚಾರ್ಟುಗಳು ಆವಿಷ್ಕಾರಗೊಂಡಿರಲಿಲ್ಲ. ಆಗ ಸೂಟೆ ದಾರಿ ಹೋಕರಿಗೂ ಲೈಟ್‌ಗಳ ರೀತಿಯಲ್ಲಿ ಉಪಯೋಗವಾಗುತ್ತಿತ್ತು.

**೯೧. ಸೋಗಲೆ :** ಸೋಗಲೆ ಎಂಬುದನ್ನು ಒಲೆಯಲ್ಲಿ ಬಹಳ ಹಿಂದೆ ಕಾಣಬಹುದಾಗಿತ್ತು. ಒಂದು ಒಲೆಯಿಂದ ಇನ್ನೊಂದು ಒಲೆಗೆ ಬೆಂಕಿ ಹೋಗುವಂತೆ ಎರಡು ಒಲೆಗಳ ಮಧ್ಯೆ ಇರುವ ತೂತಿಗೆ ಸೋಗಲೆ ಎನ್ನುತ್ತಿದ್ದರು. ಇಂದು ಈ ವಿಧಾನ ಕೂಡ ಬಹು ವಿರಳವಾಗಿ ಉಪಯೋಗವಾಗುತ್ತದೆ.

**೫.೬.೦. ವಾದ್ಯ ಪರಿಕರಗಳು :**

ಅನೇಕ ಬಗೆಯ ವಾದ್ಯಗಳ ಬಳಕೆಯನ್ನು ಪುತ್ತೂರು ಪರಿಸರದ ಜನಪದರು ಬಳಸಿಕೊಂಡು ಬಂದಿದ್ದಾರೆ. ವಾದ್ಯಗಳಲ್ಲಿ ಮುಖ್ಯವಾಗಿ ಚರ್ಮವಾದ್ಯಗಳು, ಗಾಳಿವಾದ್ಯಗಳು, ತಂತಿವಾದ್ಯಗಳು ಮತ್ತು ಲೋಹವಾದ್ಯಗಳೆಂದು ವಿಂಗಡಿಸುತ್ತಾರೆ. ದುಡಿ, ತೆಂಬರೆ, ಡೋಲಂ, ಹಲಗೆ, ಈರಣ, ಕರಂಡೆ, ಸಮ್ಮೇಳ, ತಾಸೆ, ದೋಲಗಂಟೆ, ಪಟಾರಿ, ನಗಾರಿ, ಚೆಂಡೆ, ಮದ್ದಲೆ ಇವು ಚರ್ಮವಾದ್ಯಗಳು. ಕೊಳಲು, ವಾಲಗ, ಕೊಂಬು, ಬಾಮ್ಕೆ, ಕಹಳೆ, ಶಂಖ ಇವು ಗಾಳಿವಾದ್ಯಗಳು. ತಂಬೂರಿ, ತಂತಿವಾದ್ಯ, ಜಾಗಟೆ, ತಾಳ, ಕೊಳಲು, ಚಕ್ರತಾಳ, ಘಂಟಾಮಣಿ ಇವು ಲೋಹ ವಾದ್ಯಗಳು.

ಇಲ್ಲಿನ ಕಾಡುಗಳಲ್ಲಿ ಹಿಂದೆ ಬಿದಿರು ಧಾರಾಳವಾಗಿ ಬೆಳೆಯುತ್ತಿತ್ತು. ಸಪೂರವಾದ ಬಿದಿರನ್ನು ಕತ್ತರಿಸಿ ತಂದು ಒಣಗಿಸಿ ಅದಕ್ಕೆ ಏಳು ತೂತು ಕೊರೆದು ಸುಲಭವಾಗಿ ಕೊಳಲು ತಯಾರಿಸುತ್ತಿದ್ದರು. ಹುಲ್ಲು ಮೈದಾನಗಳಲ್ಲಿ ಕೊಳಲು ಬಾರಿಸಿಕೊಂಡು ದನಮೇಯಿಸುವುದೆಂದರೆ ಹುಡುಗರಿಗೆ ಬಹಳ ಇಷ್ಟ. ಕಾಡಿನಲ್ಲಿ, ಕಾಡಿನ ಪಕ್ಕದಲ್ಲಿ ವಾಸಿಸುವ ಕೊರಗರು ಮತ್ತಿತರ ಬುಡಕಟ್ಟು ಜನಾಂಗದವರು ಕೊಳಲು ಬಾರಿಸುವುದರಲ್ಲಿ ನಿಪುಣರು. ಈಗಲೂ ಕೂಡ ನವರಾತ್ರಿಯ ಸಮಯದಲ್ಲಿ, ವಿವಿಧ ಜನಪದ ಕುಣಿತಗಳಲ್ಲಿ ಕೊರಗ ವೇಷ ಹಾಕುವವರು ಕೈಯಲ್ಲೊಂದು ಕೊಳಲು ಹಿಡಿದು ಊದಿಕೊಂಡು ಕುಣಿತ ನಡೆಸುವುದು ಪದ್ಧತಿ. ಈ ವಾದ್ಯವನ್ನು ಹುಟ್ಟುಹಾಕಿದವರು ಕೊರಗರು ಎಂದು ಹೇಳಬಹುದು.

ಭೂತಾರಾಧನೆಯ ಸಂದರ್ಭದಲ್ಲಿ ಪಕ್ಕವಾದ್ಯವಾಗಿ ಬಳಸುವ ಚರ್ಮ ವಾದ್ಯ ತೆಂಬರೆ, ನಲಿಕೆ ಜನಾಂಗದವರು ತಮ್ಮ ಭೂತ ಕುಣಿತ, ಆಟಿ ಕಳೆಂಜ, ಸೋಣದ ಜೋಗಿ, ಮಾದಿರ, ಮಂಕಾಳಿ ಕುಣಿತ ಮುಂತಾದ ಎಲ್ಲಾ ಜನಪದ ಕುಣಿತಗಳಿಗೂ ತೆಂಬರೆಯನ್ನು ಬಳಸುತ್ತಾರೆ. ಸುಮಾರು ಒಂದು ಅಡಿಯಷ್ಟು ಉದ್ದ ಮುಕ್ಕಾಲು ಅಡೀ ವ್ಯಾಸದ ಮರದ ಟೊಳ್ಳು ಕುತ್ತಿ (ಮರಿಗೆ)ಯ ಎರಡೂ ಬದಿಗಳಿಗೆ ಚರ್ಮ ಮುಚ್ಚಿ ಹಗ್ಗದಿಂದ ಬಿಗಿದಾಗ ತೆಂಬರೆ ನಿರ್ಮಾಣವಾಗುತ್ತದೆ. ಸಣ್ಣ ಕೋಲಿನಿಂದ ಒಂದು ಮುಖಕ್ಕೆ ಬಾರಿಸಿ ತೆಂಬರೆ ಬಾರಿಸುತ್ತಾರೆ. ತೆಂಬರೆಗಿಂತ ಆಕಾರ ಮತ್ತು ಗಾತ್ರದಲ್ಲಿ ಹಿರಿದಾದ ವಾದ್ಯವನ್ನು ಡೋಲು ಎನ್ನುತ್ತಾರೆ. ಡೋಲಿನಲ್ಲಿ ಬೇರೆ ಬೇರೆ ಆಕಾರದ ಮತ್ತು ಗಾತ್ರದ ಡೋಲುಗಳಿವೆ. ಡೋಲು ಬಾರಿಸುವುದರಲ್ಲಿಯೂ ಕೂಡ ಕೊರಗರು ಕುಶಲಿಗಳು. ಹಿಂದೆ ಡೊಂಬರಾಟದವರು ತಮ್ಮ ಆಟಕ್ಕೆ ಹಿಮ್ಮೇಳವಾಗಿ ಡೋಲು ಬಾರಿಸುತ್ತಿದ್ದರು. ಕೊರಗರು ಕೊಳಲು ಊದಿಕೊಂಡು ಡೋಲು ಬಾರಿಸಿಕೊಂಡು ಹಿಂದೆ ಮನೆ ಮನೆಗೆ ಬಂದು ಕುಣಿಯುತ್ತಿದ್ದರು. ಮೊದಲು ಬೆಳೆ ಏಣೇಲು ಕೊಯ್ಲು ಆದ ಬಳಿಕ ಈ ಕುಣಿತ ಹೆಚ್ಚಾಗಿ ನಡೆಯುತ್ತಿತ್ತು. ಇದನ್ನು ಬೊಂತೆಲ್‌ದ ನಲಿಕೆ ಎನ್ನುತ್ತಿದ್ದರು.

ಇಲ್ಲಿನ ಸಂಸ್ಕೃತಿಯಲ್ಲಿ ಡೋಲು ಮಹತ್ವದ ಸ್ಥಾನ ಪಡೆದಿದೆ. ದೇವಾಲಯಗಳಲ್ಲಿ ನಡೆಯುವ ಪೂಜೆ, ಉತ್ಸವಗಳ ಸಂದರ್ಭದಲ್ಲಿ, ಭೂತ ಕೋಲದಲ್ಲಿ, ಮೆರವಣಿಗೆ, ಅಂಕ, ಆಯನ, ಕಂಬಳದಲ್ಲಿ ಡೋಲಿನ ಹಿಮ್ಮೇಳ ಬೇಕೆ ಬೇಕು. ಕೆಲವೊಂದು ಜಾತಿಯವರ ಉತ್ತರ ಕ್ರಿಯೆಯ ಸಂದರ್ಭದಲ್ಲಿ ಡೋಲು ಬಾರಿಸುವ ಪದ್ಧತಿ ಇದೆ. ಅತಿ ಪ್ರಸಿದ್ಧಿ ಪಡೆದ ಬೃಹತ್ ಗಾತ್ರದ ಡೋಲು ಬಪ್ಪನಾಡು ಶ್ರೀ ದುರ್ಗಾ ಪರಮೇಶ್ವರಿ ದೇವಸ್ಥಾನದಲ್ಲಿದೆ.

ದುಡಿ ಎಂದರೆ ಚರ್ಮವಾದ್ಯ, ಮಧ್ಯೆ ಸಪೂರವಾಗಿದ್ದು ಎರಡೂ ಕಡೆ ಒಂದೇ ಅಳತೆಯ ಪರಿಧಿಯನ್ನು ವೃತ್ತಾಕಾರದ ಬಾಯಿಯನ್ನು ಹೊಂದಿರುವ ವಾದನ ಸಾಮಗ್ರಿ. ಇದು ಡಮರುಗವನ್ನು ಹೋಲುತ್ತದೆ. ಮದ್ದಲೆಯ ಕುತ್ತಿ ಮಧ್ಯೆ ಉಬ್ಬಿರುತ್ತದೆ. ದುಡಿಯ ಕುತ್ತಿ ಮಧ್ಯೆ ಸಪೂರವಾಗಿರುತ್ತದೆ. ಟೊಳ್ಳಾಗಿರುವ ಕುತ್ತಿಯನ್ನು ಕಳ್ಳಿ, ಕನಪಡಿ ಇಲ್ಲವೇ ಹಲಸಿನ ಮರದಿಂದ

ತಯಾರಿಸುತ್ತಾರೆ. ಇದರ ಎರಡೂ ಬಾಯಿಗೂ ಚರ್ಮದ ಮುಚ್ಚಿಗೆ ಇರುತ್ತದೆ. ಮುಚ್ಚಿಗೆಗೆ ಉಡ, ಮಂಗ ಅಥವಾ ಕಾಡುಬೆಕ್ಕಿನ ಚರ್ಮವನ್ನು ಬಳಸುತ್ತಾರೆ. ಒಂದೊಂದು ಬಾಯಿಗೆ ಒಂದೊಂದು ಜಾತಿಯ ಚರ್ಮವನ್ನು ಹೊದಿಸಿದಾಗ ಸ್ವರದಲ್ಲಿ ಏರಿಳಿತಗಳನ್ನು ತರಲು ಸುಲಭವಾಗುತ್ತದೆ[೫೩]. ಚೆನ್ನು ಕುಣಿತ, ಪಿಲಿ–ಪಂಜಿ ಕುಣಿತ, ಕರಂಗೋಲು ಮುಂತಾದ ಜನಪದ ಕುಣಿತಗಳನ್ನು ದುಡಿಯನ್ನು ಬಳಸುತ್ತಾರೆ.

**೫.೭.೦. ಕೃಷಿ ಪರಿಕರಗಳು :**

ಪುತ್ತೂರು ಪರಿಸರದಲ್ಲಿ ಕೃಷಿ ಅನಾದಿ ಕಾಲದಿಂದಲೂ ಇದ್ದು, ಕೃಷಿಗೆ ಸಂಬಂಧಿಸಿದ ಅನೇಕ ಜಾನಪದ ಪರಿಕರಗಳೂ ಚಾಲ್ತಿಯಲ್ಲಿದ್ದವು ಅವುಗಳಲ್ಲಿ ಪ್ರಮುಖವಾದವು ಈ ರೀತಿ ಇವೆ.

**೧. ಅಟ್ಟೆ :** ಭತ್ತದ ಗದ್ದೆ ಹೊಂದಿರುವವರು ಅನೇಕ ವರ್ಷಗಳ ಹಿಂದೆ ಇಂತಹ ಒಂದು ಸಾಧನವನ್ನು ಬಳಸುತ್ತಿದ್ದರು. ಚಕ್ರದಾಕಾರದಲ್ಲಿ ಬೆತ್ತದಿಂದ ಮಾಡಿದಂತಹ ಒಂದು ರಚನೆ. ಅದರ ನಡು ಮಧ್ಯದಲ್ಲಿ ತಲೆಗೆ ಹೊಂದಿಕೊಳ್ಳುವಂತಹ ವೃತ್ತಕಾರದ ರಚನೆಯಿರುತ್ತದೆ. ಇದು ಕಟಾವು ಮಾಡಿದ ಭತ್ತವನ್ನು ಗದ್ದೆಯಿಂದ ಹೊತ್ತು ತರಲು ಸಹಾಯಕವಾಗುತ್ತಿತ್ತು. ಇದರ ನಾಲ್ಕು ಭಾಗಗಳಲ್ಲೂ ನಾಲ್ಕು ಗುಳಿಯಿರುತ್ತದೆ. ಅದಕ್ಕೆ ಹಗ್ಗ ಪೋಣಿಸಿ ಭತ್ತದ ತೆನೆಗಳನ್ನು ಸಾಂಗವಾಗಿ ಜೋಡಿಸಿ ಹೊತ್ತು ತರಲಾಗುತ್ತದೆ.

**೨. ಅರ :** 'ಅರ' ಎಂಬುದು ಗರಗಸವನ್ನು ಹರಿತಮಾಡಲು ಬಳಸುತ್ತಿದ್ದ ಒಂದು ಸಾಧನ. ಒಂದು ಗೇಣಿನಷ್ಟು ಉದ್ದವಿರುತ್ತದೆ. ಕಬ್ಬಿಣದಿಂದ ಮಾಡಲ್ಪಟ್ಟಿದ್ದು ಒಂದು ಸೆಂಟಿ ಮೀಟರಿನಷ್ಟು ದಪ್ಪವಿರುತ್ತದೆ. ಅದರ ಮೇಲ್ಮೈ ಮೇಲೆ ಓರೆ ಓರೆ ಗೆರೆಗಳಿರುತ್ತದೆ.

**೩. ಆನೆ ಪಡಿ :** ಭತ್ತ ಕಟಾವು ಆದ ನಂತರ ತೆನೆಯಿಂದ ಭತ್ತವನ್ನು ಬೇರ್ಪಡಿಸಲು ಬಳಸುವ ಮರದ ಒಂದು ರಚನೆ. ಕಿಟಕಿಯಾಕಾರದ ಮರದ ವಸ್ತುವಿನಂತೆ ಇರುತ್ತದೆ. ಮಂಚದ ರೀತಿಯಲ್ಲಿ ನಾಲ್ಕು ಕಾಲುಗಳನ್ನು ಹೊಂದಿದೆ. ಇದಕ್ಕೆ ಭತ್ತದ ತೆನೆಗಳನ್ನು ರಭಸವಾಗಿ ಹೊಡೆದಾಗ ಭತ್ತದ ಕಾಳು ಮತ್ತು ಬೈಹುಲ್ಲು ಬೇರೆ ಬೇರೆಯಾಗುತ್ತದೆ. ಇದನ್ನು ಆನೆ ಪಡಿ ಎಂದೆನ್ನುತ್ತಾರೆ.

**೪. ಈಸ್‌ಮೂಲು (ಗೊಬ್ಬರದ ಕೊಕ್ಕೆ) :** ಈಸ್‌ಮೂಲು ಎಂಬುದು ರೈತರು ತಮ್ಮ ಹಟ್ಟಿಯ ಗೊಬ್ಬರ ತೆಗೆಯಲು ಬಳಸುತ್ತಿದ್ದ ತ್ರಿಶೂಲಾಕಾರದ ರಚನೆ. ಹಿಂದಿನ ಕಾಲದಲ್ಲಿ ಹಟ್ಟಿಗೆ ಸೊಪ್ಪು ಅಥವಾ ತರಗೆಲೆಗಳನ್ನು ಹಾಕುತ್ತಿದ್ದರು. ದನಕರುಗಳು ಅಲ್ಲೇ ಸೆಗಣಿ ಮಾಡಿ ತುಳಿದಾಗ ಇದು ಗೊಬ್ಬರವಾಗಿ ಮಾರ್ಪಡುತ್ತಿತ್ತು. ಇದನ್ನು ತೆಗೆದು ಭಟ್ಟಿಗಳಲ್ಲಿ ತುಂಬಿಸಲು ಈ ಈಸ್‌ಮೂಲ್ ಉಪಯೋಗವಾಗುತ್ತಿತ್ತು.

**೫. ಉಜ್ಜೆರ್ :** ಕನ್ನಡದಲ್ಲಿ ಒನಕೆ ಎನ್ನುವ 'ಉಜ್ಜೆರ್' ಇತ್ತೀಚಿನ ದಿನಗಳಲ್ಲಿ ಜನಮಾನಸ ದಿಂದ ದೂರ ಸರಿಯುತ್ತಿದೆ. ಭತ್ತ ಕುಟ್ಟಲು ಉಪಯೋಗಿಸುವ ಒನಕೆ ಭತ್ತದ ಹೊಟ್ಟು ಮತ್ತು ಅಕ್ಕಿಯನ್ನು ಬೇರ್ಪಡಿಸುತ್ತದೆ. ಉಜ್ಜೆರ್‌ನ ಬದಲಿಗೆ ಹಲ್ಲರ್‌ಗಳು ಕ್ಷಿಪ್ರ ಕ್ರಾಂತಿಯನ್ನೇ ಮಾಡಿವೆ. ಇದರೊಂದಿಗೆ ಭತ್ತ ಕುಟ್ಟುವ ಹಾಡುಗಳೂ ಕಣ್ಮರೆಯಾಗುತ್ತಿವೆ.

**೬. ಏತ :** ಇದು ನೀರಾವರಿಯ ಒಂದು ಪದ್ಧತಿ. ವಿದ್ಯುತ್ತಿನ ಸಂಪರ್ಕವಿಲ್ಲದೆ ಕೇವಲ ಕೈಚಳಕ ಹಾಗೂ ಬುದ್ಧಿವಂತಿಕೆಯಿಂದ ಇದನ್ನು ನಿರ್ವಹಿಸಲಾಗುತ್ತದೆ. ಮೊದಲಿಗೆ ಎರಡು ಕಂಬಗಳನ್ನು ಬಾವಿ ಅಥವಾ ಕೆರೆಯ ಬದಿಗೆ ಹಾಕಲಾಗುತ್ತದೆ. ಎರಡು ಕಂಬಗಳ ನಡುವಿನ ಅಂತರ ಸುಮಾರು ೩ ಅಥವಾ ೪ ಅಡಿಗಳಷ್ಟು ಇರುತ್ತದೆ. ಅನಂತರ ಅದಕ್ಕೆ ಬಾವಿಗೆ ರಾಟೆ ಸಿಕ್ಕಿಸುವ ತರಹದ ಅಡ್ಡಿಮರ ಹಾಕಲಾಗುವುದು. ಈ ಅಡ್ಡ ಮರಕ್ಕೆ ಅಡ್ಡವಾಗಿ ಇನ್ನೊಂದು 'ಬೆರಿ ಮರ' ಎಂದು ಕಟ್ಟಲಾಗುವುದು. ಅದರ ಒಂದು ಕಡೆಗೆ ಕಲ್ಲು ಕಟ್ಟಲಾಗುವುದು. ಇನ್ನೊಂದು ಕಡೆಗೆ ಬಿದಿರಿನ ಒಂದು ಕೊಕ್ಕೆ ಕಟ್ಟಿ ಮರಾಯಿ (ತಾಳೆ ಮತ್ತು ಈದ್ ಮರ)ಯನ್ನು ಬಾವಿಗಿಳಿಸಿ ನೀರೆತ್ತಲಾಗುವುದು. ನಂತರ ನೀರನ್ನು 'ದಂಬೆ'ಯ ಮೂಲಕ ಹರಿಸಿ ತೋಟಕ್ಕೆ ಹಾಯಿಸಲಾಗುವುದು. ಇಂತಹ ಸಾಧನವನ್ನು 'ಏತ' ಎಂದು ಕರೆಯುವರು.

**೭. ಕದಿಕೆ :** ಕದಿಕೆ ಎಂಬುದು ರೈತಾಪಿ ವರ್ಗ ತಾವು ಬೆಳೆದ ವಸ್ತುಗಳನ್ನು ಕಟಾವು ಮಾಡಿದ ನಂತರ ಸಂರಕ್ಷಣೆಗೆ ಮಾಡಿಸಲು ಉಪಯೋಗಿಸುತ್ತಿದ್ದ ಬಿದಿರಿನ ಸಾಧನ. ಹೆಚ್ಚು ಕಡಿಮೆ ರಚನೆಯಲ್ಲಿ ಅಟ್ಟೊಳಿಗೆಯನ್ನೇ ಇದು ಹೋಲುತ್ತದೆ. ಭತ್ತ, ಅಡಿಕೆ, ಸಂರಕ್ಷಣೆಗಾಗಿ ಇದನ್ನು ಬಳಸುತ್ತಿದ್ದರು.

**೮. ಕಬೆಕ್ಕೋಲು :** ಕಬೆಕ್ಕೋಲು ಎಂಬುದು ಇಂಗ್ಲಿಷ್ ಭಾಷೆಯ ವೈ(Y) ಅಕ್ಷರ ದಾಕಾರದ ರಚನೆಯಂತಹ ಬಿದಿರು ಅಥವಾ ಮರದ ಕೋಲು. ಕಬೆ ಎಂದರೆ ಕೊಂಬು ಎಂಬಂತಹ ಅರ್ಥ ಬರುತ್ತದೆ. ಇದನ್ನು ಕೆಲಸ ಮಾಡುವ ವೇಳೆಯಲ್ಲಿ ಬಿದಿರು ಅಥವಾ ಯಾವುದೇ ಮುಳ್ಳನ್ನು ಒತ್ತಟ್ಟಿಗೆ ಸರಿಸಲು ಬಳಸುತ್ತಾರೆ.

**೯. ಕಲಪ್ಪು :** ಅಡಿಕೆಯನ್ನು ಮಣ್ಣಿನಲ್ಲಿ ಹಾಕಿಟ್ಟು ಮೊಳಕೆಯೊಡೆಯುವಂತೆ ಮಾಡಿ ಸರಿಯಾದ ಆಯ್ಕೆ ಮಾಡಿ ಮುಂದೆ ಸೂಕ್ತ ಜಾಗದಲ್ಲಿ ನೆಡುವುದು ಅಡಿಕೆ ಕೃಷಿಯ ಪದ್ಧತಿ. ಹೀಗೆ ಅನೇಕ ಅಡಿಕೆ ಬೀಜಗಳನ್ನು ಒಂದೆಡೆ ಬಿತ್ತಿದಾಗ ಅದನ್ನು ಕಲಪ್ಪು ಎಂದು ಕರೆಯುತ್ತಾರೆ.

೧೦. **ಕಂಚಾಡ್ಪೆ** : ಭತ್ತದ ಅಥವಾ ಅಕ್ಕಿಯ ಹೊಟ್ಟನ್ನು ಅದರಿಂದ ಬೇರ್ಪಡಿಸಲು ಬಳಸುವ ಒಂದು ಸಾಧನ. ಇದರಲ್ಲಿ ಸಾಮಾನ್ಯವಾಗಿ ಕಣ್ಣು ಕಣ್ಣುಗಳಿರುತ್ತದೆ. ಜಾಲಿಸುವ 'ತಡ್ಪೆ'ಗಿಂತ ಗಾತ್ರದಲ್ಲಿ ಇದು ಸಣ್ಣದಾಗಿರುತ್ತದೆ.

೧೧. **ಕಾಂಗ** : ಕಾಂಗ ಎಂಬುದು ಗೇರು ಬೀಜ ಹೆಕ್ಕಲು ಬಳಸುತ್ತಿದ್ದ ಒಂದು ಸಾಧನ. ಅಡಿಕೆ ಹೆಕ್ಕಲು ಕೂಡ ಇದನ್ನು ಬಳಸುತ್ತಾರೆ. ಇದನ್ನು ಕಾಡಿನಲ್ಲಿ ಸಿಗುವ ಬಿಳಲನ್ನು ಸಿಗಿದು, ಅದನ್ನು ಹೆಣೆದು ಮಾಡುತ್ತಾರೆ.

೧೨. **ಕುಂಟಾನ್** : ಕುಂಟಾನ್ ಎಂಬುದು ತುಳುನಾಡಿನ ಕೃಷಿ ಪರಿಕರಗಳಲ್ಲಿ ಒಂದು. ಬಾವಿ ತೋಡುವ ಸಂದರ್ಭದಲ್ಲಿ ವೃತ್ತಾಕಾರ ಸಮಗೊಳಿಸಲು, ನೆಲ ಏರುಪೇರಾಗಿದ್ದರೆ ಸರಿಗೊಳಿಸಲು ಗುಂಡಿ ತೋಡಲು ಈ ಎಲ್ಲಾ ಕಾರ್ಯಗಳಿಗಾಗಿ ಕುಂಟಾನ್ ಬಳಸಲ್ಪಡುತ್ತದೆ.

೧೩. **ಕುರ್ಕಿಲಿ (ಕುರ್ಕಿಲಿ)** : ಬುಟ್ಟಿ ಹೆಣೆಯುವಂತೆಯೇ ಹೆಣೆಯುವ ಇನ್ನೊಂದು ಸಾಧನವೇ ಕುರ್ಕಿಲಿ. ಮಳೆಗಾಲದಲ್ಲಿ ನೇಜಿ ನಾಟಿ ಅಥವಾ ಭತ್ತದ ಕೊಯ್ಲು ಮುಂತಾದ ಸಮಯದಲ್ಲಿ ಹಟ್ಟಿಗೆ ಸೊಪ್ಪು ಅಥವಾ ತರಗೆಲೆ ತರಲು ಸಮಯವಿರುವುದಿಲ್ಲ ಅದಕ್ಕಾಗಿ ಬೇಸಿಗೆ ಕಾಲದಲ್ಲೇ ತರಗೆಲೆಗಳನ್ನು ರಾಶಿ ಮಾಡಿ. ಅದನ್ನು 'ಕುರ್ಕಿಲಿ'ನಲ್ಲಿ ತುಂಬಿಸಿ ತರುತ್ತಾರೆ. ಇದನ್ನು ಕಾಡಿನಲ್ಲಿ ದೊರೆಯುವ ಬಿಳಲುಗಳನ್ನು ಉಪಯೋಗಿಸಿ ಹೆಣೆದು ತಯಾರಿಸುತ್ತಾರೆ. ಇದನ್ನು ಹೆಣೆಯುವಾಗ ಒಂದು ಬಿಳಲು ಅಡ್ಡವಾಗಿ ಹಾದುಹೋದರೆ ಇನ್ನೊಂದು ಬಿಳಲು ನೇರವಾಗಿ ಹೋಗುತ್ತದೆ. ಅಡ್ಡ ಹಾಗೂ ನೇರ ಬಿಳಲಿನ ಮಧ್ಯೆ ಚೌಕಾಕಾರದ ಇಲ್ಲವೆ ವೃತ್ತಾಕಾರದ ರಚನೆಯು ಕಂಡುಬರುತ್ತದೆ.

೧೪. **ಕುಂಡಲೊ** : ಕುಂಡಲೊ ಎಂಬುದು ನೊಗದ ಎರಡೂ ಬದಿಗೆ ರಿಂಗ್‌ನಾಕಾರದ ಕಬ್ಬಿಣದ ರಚನೆ. ಇದನ್ನು ಎತ್ತು ಅಥವಾ ಕೋಣಗಳನ್ನು ಉಳಲು ಕಟ್ಟುವಾಗ ಎತ್ತಿನ ಕೊರಳಿನ ಹಗ್ಗವನ್ನು ಈ ಕುಂಡಲಕ್ಕೆ ಕಟ್ಟುತ್ತಾರೆ. ಒಂದು ರೀತಿಯ ಆಭರಣವನ್ನು ಕುಂಡಲ ಎಂದು ಕರೆಯುತ್ತಾರೆ.

೧೫. **ಕೊರಂಬು** : ಕೊರಂಬು ಎಂಬುದು ಮಳೆಗಾಲದಲ್ಲಿ ರೈತರು ಬೇಸಾಯ ಮಾಡಿಕೊಳ್ಳುವಾಗ ಹಾಕಿಕೊಳ್ಳುವ ಒಂದು ವಿಶಿಷ್ಟ ರಕ್ಷಾ ಕವಚ. ಇದನ್ನು ಬಿದಿರಿನಿಂದ ಹೆಣೆದು ಮಾಡಿರುತ್ತಾರೆ. ಅದರ ಮೇಲೆ ನೀರು ಸೋರದಂತೆ 'ಕೊರಂಬುದೆರೆ' ಪಾಲಶದ ಸೊಪ್ಪು (ಎಲೆ) ಚಿಪ್ಪೊಟ್ಟುವಿನ ಎಲೆಗಳನ್ನು ಪೋಣಿಸಲಾಗುತ್ತದೆ. ಇದು ಬಿದಿರಿನಿಂದ ಮಾಡಿರುವುದರಿಂದ ಮಡಚಿಡಲು ಸಾಧ್ಯವಾಗುವುದಿಲ್ಲ. ಕೆಲವು ವರ್ಷಗಳಿಂದೀಚೆಗೆ ಈ ಎಲ್ಲಾ ಅಗತ್ಯವಾದ ಎಲೆಗಳು ಲಭ್ಯವಾಗುತ್ತಿಲ್ಲ. ಜೊತೆಗೆ ಕೊರಂಬು ಹೆಣೆಯುವವರೂ ಇಲ್ಲವಾಗಿದ್ದಾರೆ.

**೧೬. ಕೊದಂಟಿ** : ಹಲ್ಲು ಹೋದ ಮುದುಕರು ವೀಳ್ಯದೆಲೆಯ ಹವ್ಯಾಸದವರಾಗಿದ್ದರೆ ವೀಳ್ಯ, ಅಡಿಕೆ ಸುಣ್ಣವನ್ನು ಸೇರಿಸಿ ಉಜಿಡೆಯಲ್ಲಿಟ್ಟು ಕೊದಂಟಿ ಎಂಬ ಸಾಧನದಿಂದ ಗುದ್ದುತ್ತಾರೆ. ಇದರ ಉಪಯೋಗ ಈಗ ಕಡಿಮೆಯಾಗಿದೆ.

ಊರಿನ ದನಗಳು ಕೆಲವು ಬಾರಿ ಎಲ್ಲಿಂದಾದರೂ ನುಗ್ಗಿ ಗದ್ದೆಯಲ್ಲಿರುವ ಭತ್ತವನ್ನು ತಿನ್ನುತ್ತಿದ್ದವು. ಹೀಗೆ ಅಂತಹ ದನಗಳ ಕಾಟ ತಡೆಯಲು ದನ ಸಾಕುವವರು ಅದು ಸುಲಭವಾಗಿ ಎಲ್ಲಿಗೂ ಹೋಗಬಾರದೆಂದು ಅದರ ಕೊರಳಿಗೆ ಮರದ ತುಂಡೋ ಅಥವಾ ಮರದ ಕೊತ್ತಲಿಗೆಯೋ ಕಟ್ಟಿ ಬಿಡುತ್ತಾರೆ. ಇದನ್ನು ಕೊದಂಟಿ ಎಂದು ಕರೆಯುತ್ತಿದ್ದರು.

**೧೭. ಕೊರುಂಗೆ** : ಕೊರುಂಗೆ ಎಂಬುದು ನೀರನ್ನು ತೋಟಕ್ಕೆ ಹಾಯಿಸುತ್ತಿದ್ದಾಗಿನ ಸಂದರ್ಭದಲ್ಲಿ ಬಳಸುವ ಸಾಧನ. ಏತ ನೀರಾವರಿ ಹಾಗೂ ಒಡ್ಡು ನೀರು ಬೇಸಾಯ ಸಂದರ್ಭದಲ್ಲಿ ನೀರನ್ನು ಉರ್ಕದಲ್ಲಿ ಕಟ್ಟಿ ಈ ಕೊರುಂಗೆ ಮೂಲಕ ಗಿಡಕ್ಕೆ ಹಾಯಿಸಲಾಗುತ್ತದೆ. ಇದನ್ನು 'ಈಂದ್' ಮರದ ಗರಿಯಿಂದ ಮಾಡಲಾಗುತ್ತದೆ.

**೧೮. ಕೊಳಂದಿ** : ಇದು ಕೋಣ ಕಟ್ಟುವಂತಹ ಒಂದು ಉಚ್ಚಮಟ್ಟದ ಸರಪಳಿ ಕೋಣಗಳು ಎಷ್ಟು ಬಲಿಷ್ಟವಾಗಿರುತ್ತವೆ ಎಂದರೆ ಅವು ತಮ್ಮ ಕೊರಳಿಗೆ ಕಟ್ಟಿದ ಸಾಧಾರಣ ಹಗ್ಗಗಳನ್ನು ಎಳೆದು ತುಂಡು ಮಾಡುತ್ತವೆ. ಅದಕ್ಕಾಗಿ ಕಬ್ಬಿಣದ ಸಂಕೋಲೆಗಳಿಂದ ಕಟ್ಟುತ್ತಾರೆ. ಬೇಡಿಯ ರಚನೆಯಂತಹ ಈ ಕಬ್ಬಿಣದ ಸರಪಳಿಯನ್ನು ಕೊಳಂದಿ ಎಂದು ಕರೆಯುತ್ತಾರೆ.

**೧೯. ಗೂನ** : ಗೂನ ಎಂಬುದು ದೊಡ್ಡದಾದ ಮರದ ತುಂಡನ್ನು ಸೀಳಲು ಬಳಸುವ ಕಬ್ಬಿಣದ ಒಂದು ತುಂಡು ಮೊನೆ ಹರಿತವಾಗಿದ್ದು ಹಿಂಭಾಗ ಚಮ್ಮಡಿಯಲ್ಲಿ ಹೊಡೆಯಲು ಅನುಕೂಲ ವಾಗುವಂತಿರುತ್ತದೆ. ಇಂದು ಮರದ ಡಿಪ್ಪೋದಲ್ಲಿ ಮಾತ್ರ ಬಳಕೆಯಾಗುತ್ತಿದೆ.

**೨೦. ಡಾಮಸ್** : 'ಡಾಮಸ್' ಎಂಬ ಸಾಧನವನ್ನು ಅಂಗಳ ಸಜ್ಜುಗೊಳಿಸಲು ಬಳಸುತ್ತಾರೆ. ಮಣ್ಣಿನ ಅಂಗಳದಲ್ಲಿ ಮಣ್ಣನ್ನು ಚೆನ್ನಾಗಿ ಕಲಸಿ ಅಂಗಳಕ್ಕೆ ಬೇಕಾದ ರೀತಿಯಲ್ಲಿ ಹಾಕಿ ನಂತರ ಡಾಮಸ್‌ನಲ್ಲಿ ಹೊಡೆದು ಸಾಧಾರಣ ಸಮಗೊಳಿಸಲಾಗುವುದು. ಇದು ಸ್ವಲ್ಪ ಉದ್ದವಾದ ಹಲಗೆಯನ್ನು ಹೊಂದಿದ್ದು ನಿಂತುಕೊಂಡು ನೆಲವನ್ನು ಗುದ್ದುವಂತೆ ಇದನ್ನು ಸಿದ್ಧಪಡಿಸಲಾಗುತ್ತಿತ್ತು.

**೨೧. ದುಡಿಬಲ್ಲ್** : ನಿಯಂತ್ರಣಕ್ಕೆ ಸಿಗದ ದನ, ಎತ್ತು ಅಥವಾ ಕೋಣಗಳ ಮುಸುಡಿಗೆ ಕಟ್ಟುವ ಹಗ್ಗವನ್ನು ದುಡಿಬಲ್ಲ್ ಎಂದು ಕರೆಯುತ್ತಾರೆ. ಪ್ರಸ್ತುತ ಇವು ನೋಡಲು ಸಿಗುವುದಿಲ್ಲ.

**೨೨. ದೋಂಟಿ** : ಸಮೃದ್ಧವಾಗಿ ಬೆಳೆದ ಕಂಗು, ತೆಂಗು, ತೋಟಗಳು, ಜೊತೆಗೆ ಗೇರು ಬೀಜದಂತಹ ಬೆಳೆಗಳು. ಇಂತಹ ಬೆಳೆಯ ಫಸಲು ತೆಗೆಯಲು ದೋಂಟಿ ಬಳಸುತ್ತಾರೆ. ಬಾನೆತ್ತರಕ್ಕೆ

ಬೆಳೆದ ಬಿದಿರನ್ನು ಕಡಿದು ಅದರ ಮುಳ್ಳು ತೆಗೆದು ಕೊಕ್ಕೆ ಕಟ್ಟಿ ಅದನ್ನು ದೋಂಟಿಯಾಗಿ ರೂಪಿಸಲಾಗುತ್ತದೆ.

**೧೩. ನೇಗಿಲು :** ನೇಗಿಲು ಎಂಬುದನ್ನು ತುಳುವಿನಲ್ಲಿ 'ನಾಯರ್' ಎಂದು ಕರೆಯುತ್ತಾರೆ. ಇದರ ಮೂಲಕ ಹೊಲವನ್ನು ಉಳುತ್ತಾರೆ. ಎತ್ತು ಕೋಣಗಳನ್ನು ಈ ರೀತಿಯ ಬೇಸಾಯದಲ್ಲಿ ಬಳಸುತ್ತಾರೆ. ಗದ್ದೆ ಉಳುವ ಯಂತ್ರಗಳು ಬಂದ ಮೇಲೆ ನೇಗಿಲು ಮೂಲೆಗುಂಪಾಗಿದೆ.

**೨೪. ನೊಗ :** ನೊಗ ಎಂಬುದು ಗದ್ದೆ ಉಳುವಾಗಿನ ಸಂದರ್ಭದಲ್ಲಿ ಎತ್ತು, ಕೋಣಗಳ ಕೊರಳಿಗೆ, ಅಂದರೆ ಎರಡೂ ಎತ್ತುಗಳಿಗೆ ಸಿಗುವಂತೆ ಕಟ್ಟುವ ಸಾಧನ. ಇದು ನೋಡಲು ಸುಂದರವಾಗಿತ್ತು. ಎತ್ತುಗಳು, ಒಂದೇ ರೀತಿ ಸಾಗಲು ಸಹಕರಿಸುತ್ತವೆ. ಇದರಲ್ಲಿ ಎರಡು ಕುಂಡಲಗಳಿದ್ದು ಅದನ್ನು ಉಪಯೋಗಿಸಿ ಎತ್ತಿನ ಹಗ್ಗ ಹಾಗೂ ನೊಗದ ಕುಂಡಲಗಳನ್ನು ಒಂದು ಗೂಡಿಸಲಾಗುವುದು.

**೨೫. ಪಣೋರ್ :** ಪಣೋರ್ ಎಂದರೆ ನೆಲದ ಮಣ್ಣನ್ನು ಉಳಲು ಬಳಸುವ ಕಬ್ಬಿಣದ ಹರಿತವಾದ ಸಾಧನ ರೈತರು ಬೇಸಾಯದ ಸಮಯದಲ್ಲಿ ಇದನ್ನು ನೇಗಿಲಿನ ಕೆಳಭಾಗಕ್ಕೆ ಆಣಿಯಿಂದ ಹೊಡೆಯುತ್ತಿದ್ದರು. ಇದು ನೆಲಕ್ಕೆ ತಾಗಿ ಮಣ್ಣು ಅಡಿಮೇಲಾಗಿ ಬೀಳುತ್ತಿತ್ತು.

**೨೬. ಪರ್ದಕತ್ತಿ :** ಇದು ಕೊಯಿಲಿಗೆ ಬಂದ ಭತ್ತ ಕಟಾವು ಮಾಡಲು ಬಳಸುವ ಒಂದು ಕತ್ತಿ. ಇದರ ಬಾಯಿಗೆ ಗರಗಸದಂತೆ ಆದರೆ ಚಿಕ್ಕದಾದ ಕೊಕ್ಕೆಗಳ ರೀತಿ ಮಾಡಿರುತ್ತಾರೆ. ಇದು ಪೈರನ್ನು ಬೇಗನೆ ತುಂಡು ಮಾಡುತ್ತದೆ. ಈ ಕತ್ತಿ ಸಪೂರವಾಗಿಯೂ ಇರುತ್ತದೆ.

**೨೭. ಪಿಕ್ಕಾಸ್ :** ಭೂಮಿ ಅಗೆಯಲು ಬಳಸುವ ಒಂದು ಸಾಧನವೇ ಪಿಕ್ಕಾಸು. ಹಿಂದೆ ಜನರೆಲ್ಲಾ ತಾವೇ ಪರಿಶ್ರಮಪಟ್ಟು ಎಷ್ಟೋ ವಿಶಾಲ ಜಾಗಗಳನ್ನು ಸಮತಟ್ಟು ಮಾಡುತ್ತಿದ್ದರು. ಈ ಸಮಯದಲ್ಲಿ ಭೂಮಿಯನ್ನು ಅಗೆಯಲು ಅತ್ಯಂತ ಬಲಿಷ್ಠವಾದ ಪಿಕ್ಕಾಸ್ ಉಪಯೋಗಿಸುತ್ತಿದ್ದರು. ಪಿಕ್ಕಾಸ್‌ನಿಂದ ಅಗೆಯಲು ಅತ್ಯಂತ ಗಟ್ಟಿ (ಶಕ್ತಿಯುತ) ಜನರು ಬೇಕಾಗಿತ್ತು. ಬುಲ್ಡೋಜರ್‌ಗಳು ಬಂದ ಮೇಲೆ ಪಿಕ್ಕಾಸ್‌ನಿಂದ ಅಗೆಯುವ ಕಷ್ಟಕರವಾದ ಕೆಲಸ ಕಡಿಮೆಯಾಗಿದೆ.

**೨೮. ಭಟ್ಟಿ :** ಇದನ್ನು ಸಾಮಾನ್ಯವಾಗಿ ಕುತ್ತರಿ ತಯಾರಿಸುವಂತಹ ಮಾದೆರ್ ಮತ್ತಿತರ ಬಿಳಲುಗಳಿಂದಲೇ ಮಾಡುತ್ತಾರೆ. ಇದರಲ್ಲಿ ಗೊಬ್ಬರದ ಮತ್ತು ಮಣ್ಣಿನ ಭಟ್ಟಿ ಎಂಬ ಎರಡು ವಿಧಗಳಿವೆ. ಗೊಬ್ಬರದ ಭಟ್ಟಿ ಗಾತ್ರದಲ್ಲಿ ತುಸು ದೊಡ್ಡದಾಗಿರುತ್ತದೆ. ಮಣ್ಣಿನ ಭಟ್ಟಿಗಳು ಸ್ವಲ್ಪ ಚಿಕ್ಕದಾಗಿರುತ್ತವೆ. ಇಂದು ಫೈಬರ್ ಭಟ್ಟಿಗಳು ಬಂದು ಬಿಳಲಿನಿಂದ ತಯಾರಿಸಿದ ಭಟ್ಟಿಗಳು ವಿರಳವಾಗಿವೆ.

**೨೯. ಮೊಟ್ಟತ್ತಿ :** ಮೊಟ್ಟತ್ತಿ ಎಂದರೆ ಅಡಿಕೆ ಸಿಪ್ಪೆ ಕೀಳುವ ಸಾಧನ. ಕತ್ತಿಯಾಕಾರದ ಕತ್ತಿಯದೇ ರಚನೆ ಹೊಂದಿರುವ ಕಬ್ಬಿಣವನ್ನು ಮರದಿಂದ ಮಾಡಿದ ಮಣೆಗೆ ಅಳವಡಿಸಿ ಅಡಿಕೆ ಸುಲಿಯಲಾಗುತ್ತದೆ. ಇತ್ತೀಚಿನ ದಿನಗಳಲ್ಲಿ ಅಡಿಕೆ ಸುಲಿಯುವ ಯಂತ್ರಗಳು ಬರುತ್ತಿರುವುದರಿಂದ ಮೊಟ್ಟತ್ತಿಯ ಪ್ರಾಮುಖ್ಯತೆ ಕಡಿಮೆಯಾಗುತ್ತಿದೆ.

**೩೦. ಮೊಟ್ಟೆ ಪಲಯಿ :** ನೇಗಿಲಿನಿಂದ ಗದ್ದೆಯನ್ನು ಉತ್ತು ಆದ ನಂತರ ಆ ಮಣ್ಣನ್ನು ಸಮಗೊಳಿಸಲು ಕೋಣಗಳಿಗೆ ನೇಗಿಲಿನ ರೀತಿಯ ಉದ್ದದ ಹಿಡಿ ಇರುವ ಒಂದು ಹಲಗೆಯನ್ನು ಕಟ್ಟಲಾಗುತ್ತದೆ. ಇದರ ಮೇಲೆ ನಿಂತು ಕೋಣಗಳನ್ನು ಮುನ್ನಡೆಸಿದಾಗ, ಮಣ್ಣೆಲ್ಲವೂ ಸಮತಟ್ಟಾಗುತ್ತದೆ. ಈ ಸಾಧನವನ್ನು ಮೊಟ್ಟೆ ಪಲಯಿ ಎಂದು ಕರೆಯುತ್ತಾರೆ. ಹೆಚ್ಚಾಗಿ ಗದ್ದೆಯನ್ನು ಉತ್ತುಬಿತ್ತುವ ಸಮಯದಲ್ಲಿ ಮೊಟ್ಟೆ ಪಲಯಿ ಕೋಣಗಳಿಗೆ ಕಟ್ಟಿ ಗದ್ದೆಯನ್ನು ಸಮತಟ್ಟು ಗೊಳಿಸುತ್ತಾರೆ.

ಹೀಗೆ ಅನೇಕ ವಿಧಧ ಗೃಹ, ವಾದ್ಯ ಹಾಗೂ ಕೃಷಿ ಪರಿಕರಗಳನ್ನು ಪುತ್ತೂರಿನ ಜನರು ಬಳಸುತ್ತಿದ್ದು, ಅವು ಸಂಸ್ಕೃತಿಯ ಹಿರಿಮೆಯನ್ನು ಪ್ರತಿಬಿಂಬಿಸುತ್ತದೆ.

ಈ ಮೇಲಿನ ಹೆಚ್ಚಿನ ಉಪಕರಣಗಳು ತುಳುನಾಡಿನಾದ್ಯಂತ ಪ್ರಚಲಿತವಾಗಿವೆ. ಆದರೆ ಅಧಿಕ ಸಂಖ್ಯೆಯಲ್ಲಿ ಇವುಗಳ ಬಳಕೆ ಪುತ್ತೂರು ಭಾಗದಲ್ಲಿ ಕಾಣಬಹುದು. ಇಲ್ಲಿನ ಹೆಚ್ಚಿನ ಭಾಗವು ಕೃಷಿ ಪ್ರಧಾನವಾಗಿರುವುದರಿಂದ ಅವುಗಳ ಬಳಕೆಯೂ ಹೆಚ್ಚು ಎನ್ನಬಹುದು. ತುಳು ಭಾಷೆಯನ್ನು ಇಲ್ಲಿ ಅಧಿಕವಾಗಿ ಮಾತನಾಡುವುದರಿಂದ ಈ ಕೃಷಿ ಉಪಕರಣಗಳ ಹೆಸರುಗಳು ತುಳು ಶಬ್ದಗಳನ್ನೇ ಬಳಸುತ್ತವೆ. ಕನ್ನಡ, ಕೊಂಕಣಿ, ಬ್ಯಾರಿ ಮಾತೃಭಾಷೆ ಇರುವವರೂ ಇವುಗಳನ್ನು ಬಳಸುತ್ತಿದ್ದರೂ ಅವರು ತುಳು ಶಬ್ದಗಳನ್ನು ಸ್ವಲ್ಪ ಬದಲಾವಣೆಯ ಮೂಲಕ ಈ ಕೃಷಿ ಉಪಕರಣಗಳನ್ನು ಗುರುತಿಸುತ್ತಾರೆ. ಹೆಚ್ಚಿನವು ಗಳನ್ನು ತುಳು ಹೆಸರಿನಿಂದಲೇ ಕರೆಯುತ್ತಾರೆ. ಕನ್ನಡ, ಕೊಂಕಣಿ ಮತ್ತು ಬ್ಯಾರಿ ಭಾಷೆಯಲ್ಲಿ ವಿಶೇಷ ಕೃಷಿ ಉಪಕರಣಗಳು ಕಾಣಸಿಗುವುದಿಲ್ಲ.

### ೫.೮.೦ ಹಬ್ಬಗಳು :

### ೫.೮.೧ ಹಿಂದೂ ಹಬ್ಬಗಳು :

ಜೀವನ ಒಂದು ಹೋರಾಟವಾಗಿರುವಾಗ, ಅದರಲ್ಲಿ ಉಲ್ಲಾಸವನ್ನು ತುಂಬಿ, ಬದುಕನ್ನು ಬಾಳುವುದಕ್ಕೆ, ಚುರುಕುಗೊಳಿಸುವ ಸಾಧನಗಳಲ್ಲಿ ಹಬ್ಬಗಳು–ಉತ್ಸವಗಳು ಸೇರುತ್ತವೆ. ಇವುಗಳು ಧಾರ್ಮಿಕ ಕ್ರಿಯೆಗಳಾಗಿ ಕಾಣಬರುವುದಿದ್ದರೂ, ಇವುಗಳ ಸಾಮಾಜಿಕ ಬೆಲೆ ಮಹತ್ವದ್ದು. ಅದರ ಸಾಂಸ್ಕೃತಿಕ ಅಂಶ ಗಣನೀಯವಾದದ್ದು.

ಪುತ್ತೂರಿನ ಭೌಗೋಳಿಕ ಹಿನ್ನೆಲೆ ಇಲ್ಲಿಯ ಜೀವನನ್ನು ವಿಶಿಷ್ಟಗೊಳಿಸುವುದಕ್ಕೆ ಪೂರಕವಾಗಿದ್ದು ಎಲ್ಲ ಹಂತಗಳಲ್ಲಿಯೂ ಪ್ರಾದೇಶಿಕ ಬಣ್ಣವನ್ನು ಗುರುತಿಸಬಹುದಾಗಿದೆ. ಭೂತಾರಾಧನೆ, ನಾಗಮಂಡಲ, ದಕ್ಕೆಬಲಿ ಮೊದಲಾದ ವಿಶಿಷ್ಟ ಆಚರಣೆಗಳೂ ಇವೆ.

ಪಂಚಾಂಗ ಪ್ರಾರಂಭವಾಗುವುದು ಚಾಂದ್ರಯುಗಾದಿಯಿಂದ. ಈ ಲೆಕ್ಕಾಚಾರ ಒಪ್ಪಿಕೊಳ್ಳುವವರಿಗೆ ಇದು ಹೊಸ ವರ್ಷದ ಆರಂಭ. ಸೌರಮಾನವನ್ನು ಒಪ್ಪಿಕೊಳ್ಳುವವರಿಗೆ ಸೌರಯುಗಾದಿ (ವಿಷು) ಹೊಸವರ್ಷದ ಆರಂಭ. ಇವು ಕೆಲವು ದಿನಗಳ ಅಂತರದಲ್ಲಿ ಬರುತ್ತವೆ. ವರ್ಷದ ಆರಂಭ ವರ್ಷವಿಡೀ ನಡೆಯುವುದರ ಶಕುನವಾಗಬಹುದೆಂಬ ನಂಬಿಕೆಯಿರುವುದರಿಂದ ಆ ದಿನ ಬಹಳ ಅಚ್ಚುಕಟ್ಟು ಇರುತ್ತದೆ. ಉಡುಪು-ಊಟಗಳಲ್ಲಿ ಶುಚಿರುಚಿಯಾಗುವ ವ್ಯವಸ್ಥೆ ಇರುತ್ತವೆ. ಮನೆದೇವರ ಸನ್ನಿಧಿಯಲ್ಲಿ ಹಿಂದಿನ ದಿನವೇ ವಿಧ ವಿಧ ಫಲವಸ್ತುಗಳನ್ನು (ತೆಂಗು, ಗೇರು, ಮಾವು, ಸೌತೆ, ತೊಂಡೆ-ಇತ್ಯಾದಿ ಹಣ್ಣು ತರಕಾರಿಗಳು) ಅಚ್ಚುಕಟ್ಟಾಗಿ ಜೋಡಿಸಿಡುತ್ತಾರೆ. ಒಟ್ಟಿಗೆ ಒಂದು ಕನ್ನಡಿಯನ್ನು ಇಡುತ್ತಾರೆ. ದೇವರನ್ನು ಅಲಂಕಾರ ಮಾಡಿ ಆರತಿ ಇರುತ್ತದೆ. ಮರುದಿನ ಬೆಳಗ್ಗೆ ಎದ್ದವರೇ ಈ ಕನ್ನಡಿಯಲ್ಲಿ ಮುಖ ನೋಡಿಕೊಂಡು ದೇವರಿಗೆ ನಮಸ್ಕಾರ ಮಾಡುವ ಕ್ರಮವಿದೆ. ಈ ವ್ಯವಸ್ಥೆಗೆ 'ಕಣಿ' ಇಡುವುದು ಎಂದು ಹೇಳುತ್ತಾರೆ. ಕಿರಿಯರೆಲ್ಲಾ ಹಿರಿಯರಿಗೆ ನಮಸ್ಕಾರ ಮಾಡಿ ಆಶೀರ್ವಾದ ಪಡೆಯುತ್ತಾರೆ. ಯುಗಾದಿಯಂದು ಮನೆ ತುಂಬಿಸಿಕೊಳ್ಳಬೇಕೆನ್ನುವ ದೃಷ್ಟಿ ಇರುವುದರಿಂದ ನಿಷ್ಠಾವಂತ ಹಿರಿಯರು ಆ ದಿನ ಏನೂ ಹಣ ಖರ್ಚು ಮಾಡದಂತೆ ನೋಡಿಕೊಳ್ಳುತ್ತಾರೆ.

ಹಿಂದೂಗಳು ಹಬ್ಬಕ್ಕಾಗಿ ಶ್ರಾವಣಮಾಸದವರೆಗೆ ಕಾಯಬೇಕು. ಶ್ರಾವಣಮಾಸದಲ್ಲಿ ಬರುವ ಶುಕ್ರವಾರಗಳಲ್ಲಿ ಶ್ರಾವಣ ಶುಕ್ರವಾರವೆಂಬ ಪೂಜಾಚರಣೆ ಇದೆ. ಈ ಮಾಸದಲ್ಲಿ ಪ್ರತಿನಿತ್ಯವೂ ಹೊಸ್ತಿಲನ್ನು ಅಲಂಕರಿಸಿ, ಹೂಗಳಿಂದ ಶೃಂಗರಿಸುತ್ತಾರೆ. ಹೊಸ್ತಿಲಲ್ಲಿ ಜೇಡಿಮಣ್ಣಿನಿಂದ ವಿವಿಧ ರಂಗೋಲೆ ಚಿತ್ರಗಳನ್ನು ಬಿಡಿಸಿ, ಗರಿಕೆ ಹುಲ್ಲು ರತ್ನಗಂಧಿ, ಹುರುಳಿ-ಹೆಸರು ಕಾಳುಗಳ 'ಮೊಳಕೆ' ಹೂ ಇತ್ಯಾದಿಗಳಿಂದ ಅಲಂಕರಿಸುತ್ತಾರೆ. ನಿತ್ಯ ತುಳಸೀಪೂಜೆ ಇರುತ್ತದೆ. ಕೆಲವರಲ್ಲಿ ಶುಕ್ರವಾರ ಮುಖ್ಯವಾಗಿ ಆಚರಿಸುತ್ತಾರೆ. ಈ ಶುಕ್ರವಾರ ಗಳಲ್ಲಿ ಪೂಜೆಯಲ್ಲಿ ಬಳಸಿದ ಹೂಗಳನ್ನು ಹಿಡಕೊಂಡು ತಮ್ಮ ಅಕ್ಕಪಕ್ಕದಲ್ಲಿರುವ ಇಷ್ಟಬಾಂಧವರಲ್ಲಿ ಹೋಗಿ ಅದನ್ನು ಸಮರ್ಪಿಸಿ, ಹಿರಿಯರಿಗೆ ನಮಸ್ಕರಿಸುವುದಿದೆ. ಇದನ್ನು ಸೋಣ ಶುಕ್ರವಾರವಾಗಿಯೂ ಆಚರಿಸುತ್ತಾರೆ. ಬ್ರಾಹ್ಮಣೇತರರಲ್ಲಿ ಈ ಮಾಸದ ಶನಿವಾರಗಳಲ್ಲಿ ಗಂಡಸರು ವಿಶಿಷ್ಟವಾಗಿ ವ್ರತ ಆಚರಿಸುವುದಿದೆ. ಒಪ್ಪೊತ್ತು ಊಟ ಮಾತ್ರ ಮಾಡುತ್ತಾರೆ. ಮತ್ತು ಅಂದು ಮಾಂಸಾಹಾರ ವರ್ಜ್ಯ, ಕೊನೆಯ ದಿನ ಹೊಸ್ತಿಲ ಪೂಜೆ ಮಾಡುವಾಗ ಸಿಹಿಭಕ್ಷ್ಯ ನಿವೇದಿಸುತ್ತಾರೆ.

೧. **ಆಟಿ ಅಮವಾಸ್ಯೆ** : ಸೋಣದ ಹಿಂದಿನ ತಿಂಗಳಾದ 'ಆಟಿ'ಯಲ್ಲಿ ಬರುವ ಅಮವಾಸ್ಯೆಯನ್ನು 'ಆಟಿ ಅಮವಾಸ್ಯೆ' (ಆಟಿದ ಅಮಾಸೆ)ಯೆಂದು ಕರೆದು ಅದನ್ನು ಆಚರಿಸುವ ಕ್ರಮ ವಿಶಿಷ್ಟವಾದುದಾಗಿದೆ. ಆ ದಿನ ಬೆಳಗ್ಗೆ 'ಸಪ್ತಪರ್ಣ'ದ ಎನ್ನುವ ಮರದ (ತುಳುವಿನಲ್ಲಿ ಪಾಲೆದ ಮರ ಎನ್ನುತ್ತಾರೆ). ಚಕ್ಕೆ ಎಬ್ಬಿಸಿ ಅದರ ರಸವನ್ನು ಮೆಣಸಿನ ಕಾಳು, ಅಜವಾನ (ಓಮ) ಇತ್ಯಾದಿ ಸೇರಿಸಿ ಕುಡಿಯುತ್ತಾರೆ. ನಿಜವಾಗಿ ಇದು ಹಬ್ಬದ ಆಚರಣೆಯಲ್ಲಿ ಕುಡಿಯುವ ಔಷಧಿ. ಈ ಮರದ ಚಕ್ಕೆಯನ್ನು ಕಲ್ಲಿನಿಂದ ಗುದ್ದಿಯೇ ತೆಗೆಯಬೇಕೆನ್ನುವ ಮಟ್ಟಿನ ಶ್ರದ್ಧೆಯೂ ಇದೆ. ಇದರ ಕಾವು ಶಮನಕ್ಕಾಗಿ ತೆಂಗಿನಕಾಯಿ ಹಾಕಿದ ಗಂಜಿ ಮೊದಲಾದ ತಂಪು ವಸ್ತುಗಳನ್ನು ಉಣ್ಣುತ್ತಾರೆ. ಇದೇ ದಿನ ವಯಸ್ಕರಲ್ಲಿ ಸಾಧ್ಯವಿರುವವರು ಸಮುದ್ರಸ್ನಾನ ಮಾಡುತ್ತಾರೆ. ಪಿತೃತರ್ಪಣವೂ ಈ ದಿನ ನಡೆಯುತ್ತದೆ.

೨. **ನಾಗರಪಂಚಮಿ** : ನಾಗರಪಂಚಮಿ ಸಾರ್ವತ್ರಿಕವಾದ ಹಬ್ಬ, ನಾಗಾರಾಧನೆ ಪುರಾತನವೂ ಬಹುವ್ಯಾಪ್ತಿಯೂ ಆಗಿದೆ. 'ನಗುನಗುತ್ತಾ ಬಂತು ನಾಗರಪಂಚಮಿ' ಎನ್ನುವ ಸಂತಸ. ಬಹುಶಃ ನಾಗ ಒಂದೇ (ಗೋವು ಬಿಟ್ಟರೆ) ಸಜೀವವಾದ ದೇವರು. ಆಗಾಗ ದರ್ಶನ ಕೊಡುವ ದೇವರು. ಬಾವುಕರ ಪಾಲಿಗೆ ಅನುಗ್ರಹಿಸಬಲ್ಲ, ಹಾಗೆಯೇ ಶಿಕ್ಷಿಸಲೂ ಬಲ್ಲ ದೇವರು. ಹೀಗಾಗಿ ನಾಗನ ಆವಾಸ ಹುತ್ತಕ್ಕೂ, ನಾಗನ ರೂಪ ಇರುವ ಕಲ್ಲಿಗೂ ಪೂಜೆ ಸಲ್ಲುತ್ತದೆ. ನಾಗವಿಗ್ರಹಕ್ಕೆ (ನಾಗಕಲ್ಲು) ಹಾಲು ಅಥವಾ ಸೀಯಾಳ (ಎಳನೀರು) ಎರೆಯುತ್ತಾರೆ. ಇದಕ್ಕೆ ತನು ಎರೆಯುವುದು ಎನ್ನುತ್ತಾರೆ. ನಾಗರಪಂಚಮಿಯ ದಿನ ಎಲ್ಲ ಮನೆಯವರೂ ತನು ಎರೆಯಿಸುತ್ತಾರೆ. ಕೆಲವು ಮನೆಯವರಿಗೆ ಅವರದೇ ಆದ 'ನಾಗಬನ' ಇರುತ್ತದೆ. ಇಲ್ಲಿ ನಾಗಪ್ರತಿಷ್ಠೆ ಮಾಡಿಸಿರುತ್ತಾರೆ. ಇತರರು ಇಂಥವರ ಬನಗಳಿಗೆ ಹೋಗುತ್ತಾರೆ. ಅಶ್ವತ್ಥಕಟ್ಟೆಯಲ್ಲೂ ನಾಗಬನಗಳಿರುತ್ತವೆ. ನಾಗಬನದ ಭೂಮಿಯನ್ನು ಯಾವ ಕಾರಣಕ್ಕೂ ಅಗೆಯ ಬಾದರು. ನಾಗರಪಂಚಮಿ ಹೆಂಗಸರಿಗೆ ಬಹಳ ನಿಷ್ಠೆಯ ಹಬ್ಬ. ಅಂದು ಸಿಹಿತಿಂಡಿಯನ್ನು ಮಾಡಬೇಕೆನ್ನುವುದು ಕ್ರಮ. ಮುಳ್ಳು ಸೌತೆಕಾಯಿ ಕಡುಬು, ಅರಸಿನ ಎಲೆಯಲ್ಲಿ ಮಾಡುವ ಕಡುಬು ಪ್ರಮುಖವಾದುದು.

೩. **ಶ್ರೀಕೃಷ್ಣ ಜನ್ಮಾಷ್ಟಮಿ** : ಶ್ರೀಕೃಷ್ಣ ಜನ್ಮಾಷ್ಟಮಿ (ಗೋಕುಲಾಷ್ಟಮಿ) ಎಲ್ಲ ಮನೆಯಲ್ಲಿ ಆಚರಿಸಲ್ಪಡುವ ದೊಡ್ಡ ಹಬ್ಬಗಳಲ್ಲಿ ಒಂದು. ಆ ದಿನ ಭಕ್ತರು ಉಪವಾಸವಿದ್ದು, ಗೀತಾಪಾರಾಯಣ ಮಾಡುತ್ತಾ ಮಧ್ಯರಾತ್ರಿಯ ಹೊತ್ತು ಪೂಜೆ ಸಲ್ಲಿಸುತ್ತಾರೆ. ಗೋಕುಲಾಷ್ಟಮಿಗೆ ಸಂಬಂಧಪಟ್ಟಂತೆ ಮಾರನೆಯ ದಿನ ನಡೆಯುವ 'ಮೊಸರುಕುಡಿಕೆ' ಎಂಬ ಕಾರ್ಯಕ್ರಮ ಆಕರ್ಷಣೀಯವಾಗಿದ್ದು, ಇಲ್ಲಿಗೆ ವಿಶಿಷ್ಟವಾದುದು.

**೪. ದೀಪಾವಳಿ ಹಬ್ಬ** : ಬಹುವ್ಯಾಪಕವಾಗಿ ಮತ್ತು ಸಂಭ್ರಮದಲ್ಲಿ ನಡೆಯುವ ಹಬ್ಬ ದೀಪಾವಳಿ. ಇದು ಮೂರು ದಿನ ಆಚರಿಸಲ್ಪಡುವ ಹಬ್ಬ. ನರಕ ಚತುರ್ದಶಿಯಂದು ಆರಂಭವಾಗುವ ಈ ಹಬ್ಬದಲ್ಲಿ ಪ್ರಮುಖ ವಿಧಿ ತೈಲಾಭ್ಯಂಜನ–ಎಣ್ಣೆ ಹಾಕಿ ಸ್ನಾನ ಮಾಡುವುದು. ಮೊದಲ ದಿನವೇ ಹಂಡೆಗೆ ನೀರು ತುಂಬಿಡುತ್ತಾರೆ. ನೀರು ತುಂಬಿಸುವ ಹೊತ್ತಿನಲ್ಲಿ ಜಾಗಟೆ ಬಾರಿಸಬೇಕು. ಹಂಡೆಗೂ ಹೂವಿನ ಹಾರ ಕಟ್ಟಿ ಸಿಂಗರಿಸುತ್ತಾರೆ. ನರಕ ಚತುರ್ದಶಿಯಂದು ಚಂದ್ರೋದಯದ ಸಮಯದಲ್ಲಿ ಮೈ ಕೈಗೆಲ್ಲ ಎಣ್ಣೆ ಹಚ್ಚಿ ಸ್ನಾನ ಮಾಡುತ್ತಾರೆ. ಕೆಲವರಲ್ಲಿ ಮುದುಕರು, ಚಿಕ್ಕ ಮಕ್ಕಳು ಹಿಂದಿನ ದಿನ ಸಂಜೆಯೇ ಸ್ನಾನ ಪೂರೈಸುವುದಿದೆ. ಮಾರನೆಯ ದಿನ ಅಮವಾಸ್ಯೆಯಂದು ಧನಲಕ್ಷ್ಮೀ ಪೂಜೆ. ಅದೇ ದಿನ ಮುಖ್ಯವಾಗಿ ದೀಪಾವಳಿ. ಪ್ರತಿಪದೆಯಂದು ಗೋಪೂಜೆ ಮಾಡುತ್ತಾರೆ. ಗೋಪೂಜೆಯಂದು ಹಾಲು ಕೊಡುವ ಹಸು ಪ್ರಮುಖವಾಗಿ, ಎಲ್ಲ ಆಕಳುಗಳಿಗೂ ಪೂಜೆ ಸಲುತ್ತದೆ. ಅ ದಿನ ಎಲ್ಲ ಹಸು ಕರುಗಳಿಗೆ ಸ್ನಾನಮಾಡಿಸಿ, ಅವುಗಳನ್ನು ಸಿಂಗರಿಸಿ ಪೂಜೆ ಮಾಡುತ್ತಾರೆ. ಗೊಂಡೆ ಹೂವಿನ ಮಾಲೆ ಮಾಡಿ ಹಾಕುತ್ತಾರೆ. ಧನಲಕ್ಷ್ಮೀ ಪೂಜೆಯಂದು ಕೆಲವು ಮಂದಿ ವ್ಯಾಪಾರಿಗಳು, ಮಾರನೆಯ ದಿನ ಧಾನ್ಯಲಕ್ಷ್ಮೀ ಪೂಜೆಯಂದು ಇನ್ನೂ ಕೆಲವರು, ಅಂಗಡಿ ಪೂಜೆ ಮಾಡುತ್ತಾರೆ. ಅಂಗಡಿಯನ್ನು ದೀಪಗಳ ಮಾಲೆಯಿಂದ, ತಳಿರುತೋರಣ ಗಳಿಂದ ಸಿಂಗರಿಸುವುದಲ್ಲದೆ, ಪಟಾಕಿ ಮದ್ದನ್ನು ಬಹಳವಾಗಿ ಸುಡುತ್ತಾರೆ. ಎಲ್ಲಿ ನೋಡಿದರಲ್ಲಿ ಆಕಾಶದಲ್ಲಿ ಗೂಡು ದೀಪಗಳು ಬೆಳಗುತ್ತಿದ್ದರೆ, ಅಮವಾಸ್ಯೆಯ ದಟ್ಟ ಕತ್ತಲಲ್ಲಿ ಹಣತೆಗಳು ಮಿನುಗುತ್ತವೆ.

ದೀಪಾವಳಿ ಮುಖ್ಯವಾಗಿ ರೈತರಿಗೆ ದೊಡ್ಡ ಹಬ್ಬ. ದೀಪಾವಳಿಯ ಮೊದಲೇ ಬತ್ತದ ಕೊಯ್ಲು ಆಗಿ ಅಂಗಳದಲ್ಲಿ ಬತ್ತದ ರಾಶಿ ಇರುತ್ತದೆ. ಕೃಷಿಯೆಲ್ಲ ಮುಗಿದಹಾಗಿರುತ್ತದೆ. ಹೀಗಿರುವುದರಿಂದ ನರಕ ಚತುರ್ದಶಿಯ ಎಣ್ಣೆ ಸ್ನಾನ ರೈತರಿಗೆ ಹೆಚ್ಚು ಅರ್ಥಯುಕ್ತವಾಗುತ್ತದೆ. ಅಲ್ಲದೆ ರೈತರು ಗೋಪೂಜೆಯ ದಿನ ಹಸುಗಳನ್ನೆ ಅಲ್ಲದೆ, ಕೃಷಿಯಲ್ಲಿ ಪಾಲುಗೊಳ್ಳುವ ಎಲ್ಲ ಪಶುಗಳಿಗೆ ಸ್ನಾನ ಮಾಡಿಸಿ ಅವುಗಳಿಗೂ ಕೃಷಿಯ ಕೆಲಸಕ್ಕೆ ಮುಕ್ತಾಯ ಹೇಳುತ್ತಾರೆ. ಹಟ್ಟಿ, ಮನೆಗಳನ್ನು ಶುಚಿಗೊಳಿಸುತ್ತಾರೆ. ಅಲ್ಲದೆ ತಮ್ಮ ವ್ಯವಸಾಯ ಸಾಧನ ಸಲಕರಣೆಗಳನ್ನೆಲ್ಲಾ (ನೊಗ, ನೇಗಿಲು ಇತ್ಯಾದಿ) ಪೂಜಿಸಿ (ಆಯುಧ ಪೂಜೆ) ಅದನ್ನು ಅಚ್ಚುಕಟ್ಟಾಗಿ ಇಡುತ್ತಾರೆ. ಈ ದಿನಗಳಲ್ಲಿ ನಿತ್ಯವಿಧವಿಧವಾದ ತಿಂಡಿತಿನಿಸುಗಳನ್ನು ಮಾಡುತ್ತಾರೆ. ಯಾವ ಕೆಲಸಕಾರ್ಯಗಳಿಗೂ ಈ ಅವಧಿಯಲ್ಲಿ ರಜೆ. ಬೇಯಿಸಿದ ಬತ್ತ ಇಡಬಾರದು. ಭೂಮಿ ಅಗೆಯಬಾರದು, ಎಂದರೆ ದೀಪಾವಳಿಯಲ್ಲಿ ಇಲ್ಲಿಯ ರೈರಿಗೆ ಬಹು ಮಹತ್ವದ ಭಾಗ ಬಲೀಂದ್ರನನ್ನು ಕರೆಯುವ ಕ್ರಮದಲ್ಲಿದೆ. ಬಲಿಪಾಡ್ಯದಂದು ಮುಖ್ಯವಾಗಿ, ಮೊದಲಿನ ದಿನವೂ ಸೇರದಂತೆ ಇದನ್ನು ಮಾಡುತ್ತಾರೆ.

ವಾಮನನಿಂದ ಪಾತಾಳಲೋಕಕ್ಕೆ ತಳ್ಳಲ್ಪಟ್ಟ ಬಲಿ, ಪ್ರತಿವರ್ಷವೂ ತನ್ನ ರಾಜ್ಯಕ್ಕೆ ಬಂದು ಹೋಗುತ್ತಾನೆಂದು ನಂಬಿಕೆ.

**೫. ಕೆಡ್ಡಸ (ಕೆಡ್ಡೆಸ)** : ತುಳುವಾಡಿಕೆಯ ರೈತವರ್ಗದ ಹಬ್ಬ. ಇದನ್ನು ಮೂರು ಅಥವಾ ನಾಲ್ಕು ದಿನ ಆಚರಿಸುತ್ತಾರೆ. ಮಕರ ಮಾಸ ೨೭ರಿಂದ ಕುಂಭ ಸಂಕ್ರಮಣದವರೆಗೆ, ಎಂದರೆ ಸಾಮಾನ್ಯವಾಗಿ ಫೆಬ್ರವರಿ ಎರಡನೆಯ ವಾರದಲ್ಲಿ ಬರುತ್ತದೆ. ಈ ಅವಧಿಯಲ್ಲಿ ಭೂಮಿದೇವಿ ಬಹಿಷ್ಠೆಯಾಗುವಳೆಂಬ ಕಲ್ಪನೆ. ಈ ಕಾರಣವಾಗಿ ಈ ನಾಲ್ಕು ದಿವಸಗಳಲ್ಲಿ ರೈತರು. ಭೂಮಿಗೆ ತಮ್ಮ ನೊಗ ನೇಗಿಲು ಇತರ ಸಲಕರಣೆಗಳನ್ನು ತಗಲಿಸಲೂ ಕೂಡದು, ಆದ್ದರಿಂದ ರೈತರಿಗೆ ಪೂರ್ಣ ವಿಶ್ರಾಂತಿ, ಮೊದಲ ದಿನ 'ಕುಡಾರಿ'ಎನ್ನುವ ತಿನಸು ತಯಾರಿಸುತ್ತಾರೆ. (ಕುಡು=ಹುರುಳಿ, ಅರಿ=ಅಕ್ಕಿ) ಅಕ್ಕಿ, ಹುರುಳಿ ಮತ್ತು ಕಡಲೆ ಹೆಸರು ಕಾಳುಗಳನ್ನು ಹುರಿದು ಅವುಗಳನ್ನು ಬೆರೆಸಿ, ಗೋಟು ತೆಂಗಿನಕಾಯಿ ತುಂಡುಮಾಡಿ ಬೆರಸಿ ಮಕ್ಕಳಿಗೆ ತಿನ್ನಲು ಕೊಡುತ್ತಾರೆ. ಈ ಮೊದಲು ಇದಕ್ಕೆ ಎಣ್ಣೆ ಬೆರೆಸಿ ಭೂಮಿಗೆ ಸಮರ್ಪಿಸುವುದಿದೆ. ಮೊದಲ ಮೂರು ದಿವಸಗಳಲ್ಲಿ ರೈತರು ವಿಧವಿಧವಾದ ತಿನಸುಗಳನ್ನು ಮಾಡುತ್ತಾರೆ. ಕುಂಭ ಸಂಕ್ರಮಣದಂದು ಭೂಮಿದೇವಿ ಸ್ನಾನಗೈದು ಶುಚಿಯಾಗುತ್ತಾಳೆ ಎನ್ನುವುದನ್ನು ಸಾಂಕೇತಿಕವಾಗಿ ಸೂಚಿಸು ತ್ತಾರೆ. ಆ ದಿನ ಮುತ್ತೈದೆಯರು ಎಣ್ಣೆ, ಸೀಗೆ, ಅರಸಿನ, ಕುಂಕುಮ, ಹೂ, ಕರಿಮಣಿ ಇತ್ಯಾದಿಗಳನ್ನು ಬಾಳೆ ಎಲೆ ತುದಿಯಲ್ಲಿಟ್ಟು ತುಳಸಿಕಟ್ಟೆಯಲ್ಲಿ ಇಡುತ್ತಾರೆ.

**೬. ಮಹಾಶಿವರಾತ್ರಿ** : ಚಾಂದ್ರಮಾನ ವರ್ಷದಲ್ಲಿ ಬರುವ ಕೊನೆಯ ದೊಡ್ಡ ಹಬ್ಬ ಮಹಾ ಶಿವರಾತ್ರಿ. ಶಿವರಾತ್ರಿಯಂದು ಉಪವಾಸ ಜಾಗರಣೆ ಇದೆ. ರಾತ್ರಿ ಪೂಜೆ ಆದ ಮೇಲೆ 'ಫಲಹಾರ' ಮಾಡಬಹುದು. ರಾತ್ರಿ ಕಟ್ಟುನಿಟ್ಟಾಗಿ ಜಾಗರಣೆ ಮಾಡಲೇಬೇಕೆನ್ನುವ ದೃಷ್ಟಿಯಿಂದ ಎಲ್ಲ ಮನೆಯವರನ್ನು ಎಚ್ಚರವಿರಿಸುವ ಒಂದು ಕ್ರಮ ರೂಢಿಯಲ್ಲಿದೆ. ಮಕ್ಕಳು ಯುವಕರು ಮನೆಮನೆಗಳಿಗೆ ಹೋಗಿ ಕಲ್ಲೆಸೆಯುತ್ತಾರೆ. ಆದರೆ ಇದು ಆಮೇಲೆ ಮನರಂಜನೆಗೆ ಅವಕಾಶಕೊಟ್ಟಿತು. ಯಾರ ಯಾರದೋ ಮನೆಯ ಹೊರಗಿರುವ ಏನೇನೋ ವಸ್ತುಗಳನ್ನು ಇತರ ಇನ್ಯಾರದೋ ಮನೆಯ ಮುಂದೆ ವಿಶಿಷ್ಟ ರೀತಿಯಲ್ಲಿ ಇರಿಸುವುದು ಇತ್ಯಾದಿ ಎಲ್ಲ ನಡೆಯುತ್ತದೆ. ಒಂದು ಮನೆಯಿಂದ ತಂದದ್ದನ್ನು ಸ್ವಂತಕ್ಕೆ ಬಳಸದಿರುವ ನಿಷ್ಠೆ ತೋರಿಸುತ್ತಾರೆ. ಆದರೆ ಮಾರ್ಗ ಮಧ್ಯೆ ಕಲ್ಲು ಇರಿಸುವಂತ ಉಪಟಳ ಮಾಡುವುದಿದೆ.

ಹೀಗೆ ಹಿಂದುಗಳು ಯುಗಾದಿಯಿಂದ ಪ್ರಾರಂಭಿಸಿ, ಆಟಿ ಅಮವಾಸ್ಯೆ, ನಾಗರ ಪಂಚಮಿ, ಶ್ರೀಕೃಷ್ಣ ಜನ್ಮಾಷ್ಟಮಿ, ಕೆಡ್ಡಸ, ಮಹಾಶಿವರಾತ್ರಿ ಹಾಗೂ ದೀಪಾವಳಿ ಹಬ್ಬಗಳನ್ನು ಆಚರಿಸುವುದ ರೊಂದಿಗೆ ಆಯಾ ಹಬ್ಬಗಳ ವೈಶಿಷ್ಟ್ಯತೆಗಳನ್ನು ಸಾರುವ ಹಾಗೂ ಬದುಕಿನಲ್ಲಿ ಶಾಂತಿ–

ನೆಮ್ಮದಿ, ಆರೋಗ್ಯ-ಐಶ್ವರ್ಯ ಮುಂತಾದವುಗಳು ದೇವರಿಂದ ತಮಗೆ ಲಭಿಸಲಿ ಎಂದು ಈ ಹಬ್ಬಗಳ ಸಂಧರ್ಭದಲ್ಲಿ ದೇವರಲ್ಲಿ ಬೇಡಿಕೊಂಡು, ಬದುಕಿಗೊಂದು ಅರ್ಥವನ್ನು ಕೊಟ್ಟು, ತಮ್ಮ ಸಂಸ್ಕೃತಿಯನ್ನು ಉಳಿಸಿ ಬೆಳೆಸುವುದರೊಂದಿಗೆ ಇತರರೊಂದಿಗೆ ಸೌಹಾರ್ದತೆಯಿಂದ ಬದುಕುತ್ತಾರೆ.

**೫.೮.೨. ಕ್ರೈಸ್ತರ ಹಬ್ಬಗಳು :**

೧. **ಕನ್ಯೆ ಮರಿಯಮ್ಮಳ ಜನ್ಮದಿನ :** ಪ್ರತಿವರ್ಷ ಸಪ್ಟಂಬರ್ ೮ ರಂದು ಇದನ್ನು ಆಚರಿಸುತ್ತಾರೆ. ಹಬ್ಬದ ಮುಂಚಿತವಾಗಿ ಒಂಬತ್ತು ದಿನಗಳಿಂದ ಆ ದಿನದವರೆಗೆ ಪ್ರತಿದಿನ ಬೆಳಗ್ಗೆ ಇಗರ್ಜಿಗಳಲ್ಲಿ ಕನ್ಯಾಮರಿಯಮ್ಮನ ಸ್ವಾಗತ ಕೋರಿ ಹೂಗಳನ್ನು ಹರಡುತ್ತಾರೆ. ಇದನ್ನು ಕೊರಳು ಹಾಕುವ ಹಬ್ಬ ವಾಗಿಯೂ ಆಚರಿಸುತ್ತಾರೆ. ಆ ದಿನ ಮುಂಜಾನೆ ಪೈರಿನ ಹೊಸ ತೆನೆಗಳನ್ನು ಧರ್ಮಗುರುಗಳು ಕ್ರಿಸ್ತನ ಹೆಸರಿನಲ್ಲಿ ಪವಿತ್ರಗೊಳಿಸಿ ಪ್ರತಿ ಮನೆಯ ಸದಸ್ಯರಿಗೆ ಹಂಚುತ್ತಾರೆ. ಈ ತೆನೆಗಳನ್ನು ಮನೆಗಳಿಗೆ ಕೊಂಡೊಯ್ಯು ವಾಗ ಮನೆಗಳಲ್ಲಿ ಜ್ಯೋತಿ ಬೆಳಗಿಸಿ ಸ್ವಾಗತಿಸುತ್ತಾರೆ. ತೆನೆಗಳಿಂದ ಕಾಳು ತೆಗೆದು ತೆಂಗಿನಹಾಲಿನಲ್ಲಿ ಸೇರಿಸಿ ಎಲ್ಲರೂ ಸೇವಿಸುತ್ತಾರೆ. ಪರವೂರಿನಲ್ಲಿರುವವರಿಗೆ ಅಕ್ಕಿ ಕಾಳುಗಳನ್ನು ಅಂಚೆಯ ಮೂಲಕ ಕಳುಹಿಸು ತ್ತಾರೆ. ಮಧ್ಯಾಹ್ನದ ಊಟದಲ್ಲಿ ಕಡಿಮೆ ಎಂದರೆ ಏಳು ಬಗೆ ಪಲ್ಯಗಳಿರಬೇಕು.

**೨.ಕ್ರಿಸ್‌ಮಸ್ ಹಬ್ಬ :** ಡಿಸೆಂಬರ್ ತಿಂಗಳ ೨೫ ರಂದು ಕ್ರಿಸ್‌ಮಸ್ ಹಬ್ಬವನ್ನು ಆಚರಿಸುತ್ತಾರೆ. ಅದರ ಹಿಂದಿನ ರಾತ್ರಿಯೇ ಚರ್ಚ್‌ಗಳನ್ನು ವಿದ್ಯುತ್ ದೀಪಗಳಿಂದ ಅಲಂಕರಿಸುತ್ತಾರೆ. ಪ್ರತಿ ಚರ್ಚ್‌ಗಳಲ್ಲಿ ಮತ್ತು ಕೆಲವು ಮನೆಗಳಲ್ಲೂ ಗೋದಳಿಯನ್ನು ನಿರ್ಮಿಸಿ, ಏಸುಕ್ರಿಸ್ತರ ಜನ್ಮದಿನವನ್ನು ಅತ್ಯಂತ ವಿಜೃಂಭಣೆಯಿಂದ ಆಚರಿಸುತ್ತಾರೆ. ಇಗರ್ಜಿಗಳಲ್ಲಿ ವಿಶೇಷ ಪೂಜೆ, ಕ್ರೈಸ್ತಧರ್ಮ ಗ್ರಂಥಗಳ ಪಠನ ಇತ್ಯಾದಿ ಇದ್ದು, ಅಂದಿನ ರಾತ್ರಿಯನ್ನು ಜಾಗರಣೆ ಮಾಡಿ ಕಳೆಯುತ್ತಾರೆ. ಮನೆಯಲ್ಲಿ ವಿವಿಧ ರೀತಿಯ ತಿಂಡಿ ತಿನಿಸುಗಳನ್ನು ಮಾಡಿ ನೆರೆಹೊರೆಯವರಿಗೂ ಹಂಚಿ ಸಂಭ್ರಮಿಸುತ್ತಾರೆ. ಕೇಕ್ ಪ್ರಮುಖ ತಿಂಡಿ. ಇದನ್ನು ಕ್ರಿಸ್‌ಮಸ್ ಕೇಕ್ ಎಂದೇ ಕರೆಯುತ್ತಾರೆ. ಈ ಸಮಯದಲ್ಲಿ ಸಾಂತಾಕ್ಲೋಸ್ ವೇಷಹಾಕಿ ಚರ್ಚಿನಲ್ಲಿರುವ ಪ್ರತಿಯೊಂದು ಮನೆಗಳಿಗೆ ತೆರಳಿ ಕ್ರಿಸ್‌ಮಸ್ ಗೀತೆಗಳನ್ನು ಹಾಡುತ್ತಾ, ಕ್ರೈಸ್ತನ ಜನನದ ಸಂದೇಶವನ್ನು ಸಾರುತ್ತಾರೆ.

**೩.ಈಸ್ಟರ್ ಹಬ್ಬ :** ಪ್ರತಿಯೊಬ್ಬ ಕ್ರೈಸ್ತರಿಗೂ ಕ್ರಿಸ್‌ಮಸ್ ಹಬ್ಬದಷ್ಟೇ ವಿಶೇಷವಾದ ಹಬ್ಬ ಈಸ್ಟರ್. ಇದು ಗುಡ್‌ಫ್ರಾಯ್‌ಡೇ ಆಗಿ ಮೂರನೇ ದಿನ ಆದಿತ್ಯವಾರ ಈ ಹಬ್ಬ ಬರುತ್ತದೆ. ಇದು ಏಸುಕ್ರಿಸ್ತನ ಪುನರುತ್ಥಾನವಾದ ದಿನ. ಶುಭ ಶುಕ್ರವಾರ ಏಸುಕ್ರಿಸ್ತರನ್ನು ಶಿಲುಬೆಗೇರಿಸಿ ಮನುಷ್ಯ ಜನ್ಮ

ಅಲ್ಲಿಗೆ ಕೊನೆ ಯಾಗುತ್ತದೆ. ಆದರೆ ಮೂರನೆ ದಿನ ಮತ್ತೆ ಪುನರುತ್ಥಾನಗೊಂಡು ಹಲವು ವ್ಯಕ್ತಿಗಳಿಗೆ ಪ್ರಮುಖವಾಗಿ ಅವರ ತಾಯಿ ಮತ್ತು ಹನ್ನೆರಡು ಮಂದಿ ಶಿಷ್ಯಂದಿರಿಗೆ ಕಾಣಿಸಿಕೊಳ್ಳುತ್ತಾರೆ. ಇದರಿಂದ ಅವರಲ್ಲಿ ಹೊಸ ಹುರುಪು ಬಂದು ಆ ಶಿಷ್ಯರು ಕ್ರೈಸ್ತ ಧರ್ಮ ಪ್ರಚಾರಕ್ಕೆ ತೊಡಗುತ್ತಾರೆ. ಈಸ್ಟರ್ ಹಬ್ಬದಂದೂ ರಾತ್ರಿ ವಿಶೇಷ ಪೂಜೆ, ಬೈಬಲ್ ಪಠನವಿದ್ದು, ಚರ್ಚುಗಳಲ್ಲಿ ವಿಶೇಷ ಸಂಭ್ರಮವಿರುತ್ತದೆ. ಈ ಹಬ್ಬಕ್ಕೆ ಮನೆಯಲ್ಲಿಯೂ ಔತಣಕೂಟವನ್ನು ಏರ್ಪಡಿಸುತ್ತಾರೆ.

**೪. ಸಾಂತಮೇರಿ (ಸಾಂತ್‌ಮೇರಿ)** : ಪ್ರತಿಯೊಂದು ಚರ್ಚುಗಳಲ್ಲಿಯೂ ಆ ಚರ್ಚಿನ ಸಂತರ ಜನ್ಮದಿನ ವನ್ನು ವಾರ್ಷಿಕ ಹಬ್ಬ ಸಾಂತ್‌ಮೇರಿಯಾಗಿ ಆಚರಿಸುತ್ತಾರೆ. ಇಲ್ಲಿ ಆಯಾ ಚರ್ಚಿನ ಸಂತರು ಜನಿಸಿದ ದಿನಾಂಕ ಬರುವ ಹತ್ತಿರದ ಬುಧವಾರದಂದು ಆಚರಿಸುತ್ತಾರೆ. ಒಂದು ಚರ್ಚಿನ ಸಾಂತಮಾರಿ ಆಚರಿಸುವಾಗ ಆ ತಾಲೂಕಿನಲ್ಲಿ ಯಾವ ಚರ್ಚಿನಲ್ಲೂ ಈ ಹಬ್ಬ ಆಚರಿಸುವುದಿಲ್ಲ. ಈ ಹಬ್ಬಕ್ಕೆ ಎಲ್ಲಾ ನೆಂಟರು ಮನೆಗೆ ಬಂದು ಹೋಗುವುದು ವಾಡಿಕೆ. ಚರ್ಚ್‌ನಲ್ಲಿ ಅಂದು ವಿಶೇಷವಾದ ಪೂಜೆ ಇರುತ್ತದೆ. ಅನೇಕ ಧರ್ಮಗುರುಗಳು ಈ ಪೂಜೆಯಲ್ಲಿ ಭಾಗವಹಿಸುತ್ತಾರೆ.

ಕ್ರೈಸ್ತರಿಗೆ ಪ್ರಮುಖ ಹಬ್ಬ ಕ್ರಿಸ್ಮಸ್ ಆದರೂ ಅದರೊಂದಿಗೆ ಕನ್ಯ ಮರಿಯಮ್ಮನವರ ಹಬ್ಬ, ಈಸ್ಟರ್ ಹಬ್ಬ, ಸಾಂತ್ ಮೇರಿ ಹಬ್ಬಗಳನ್ನು ಆಚರಿಸುವುದರೊಂದಿಗೆ ಅವರ ಸಂಸ್ಕೃತಿಯನ್ನು ಪೋಷಿಸಿ ಕೊಂಡು ಬರುತ್ತಾರೆ. ಈ ಹಬ್ಬಗಳ ಆಚರಣೆಯಿಂದ ಅವರ ಬದುಕಿನಲ್ಲಿ ಧನ್ಯತೆಯ ಭಾವನೆ ಉಂಟಾಗಿ ಬದುಕಿಗೊಂದು ಅರ್ಥ ಸಿಗುತ್ತದೆ.

**೫.೮.೩. ಮುಸ್ಲಿಮ್ ಹಬ್ಬಗಳು :**

**೧.ಮೊಹರಮ್ :** ಮೊಹರಮ್‌ನ ತಿಂಗಳು ಇಸ್ಲಾಮೀ ಇತಿಹಾಸದಲ್ಲಿ ದುಃಖದ ತಿಂಗಳಾಗಿದೆ. ಏಕೆಂದರೆ ಮೊಹರಮ್ ಹತ್ತರಂದು ಪ್ರವಾದಿಯವರ ಮೊಮ್ಮಗ ಹುಸೈನ್ ಕರ್ಬಲಾ ಮೈದಾನದಲ್ಲಿ ಹುತಾತ್ಮರಾದರು[೨೪]. ಅವರು ಹುತಾತ್ಮರಾದುದನ್ನು ನೆನಪಿಸುತ್ತಾ ಮೊಹರಮ್ ಹತ್ತನ್ನು ದುಃಖದ ದಿನವಾಗಿ ಆಚರಿಸಲಾಗುತ್ತದೆ. ಪ್ರವಾದಿಯವರು ಮೊಹರ್ರಮ್ ಒಂಭತ್ತು ಮತ್ತು ಹತ್ತರಂದು ಉಪವಾಸವಿಡಲು ಆದೇಶಿಸಿದ್ದು ಈ ದಿನಗಳನ್ನು ಅಶೂರ ಎಂದು ಕರೆಯಲಾಗುತ್ತದೆ[೨೫].

ಬಿಜಾಪುರವನ್ನು ಶಾಹಿ ಸುಲ್ತಾನರು ಆಳುತ್ತಿದ್ದ ಸಂದರ್ಭದಲ್ಲಿ ಮೊಹರ್ರಮ್ ದಿನದ ಆಚರಣೆಯು ಪ್ರಸಿದ್ಧಿಗೆ ಬಂತೆಂದು ಪ್ರೊ. ಬಿ. ಎಂ. ಇಚ್ಲಂಗೋಡು ತಮ್ಮ ತುಳುನಾಡಿನ ಬ್ಯಾರಿಗಳು

ಎಂಬ ಕೃತಿಯಲ್ಲಿ ತಿಳಿಸಿದ್ದಾರೆ. ಪುತ್ತೂರು ಪ್ರದೇಶದಲ್ಲಿ ಮೊಹರಮ್‌ನ ಆಚರಣೆಯು ಬಿಜಾಪುರದ ಕೊಡುಗೆಯಾಗಿದ್ದರೂ ಇದರಲ್ಲಿ ಹಲವು ರೀತಿಯ ಪ್ರಾಂತೀಯ ಬದಲಾವಣೆಗಳು ಕಂಡು ಬರುತ್ತವೆ.

**೨. ಈದ್ ಮಿಲಾದ್** : ಈದ್‌ಮಿಲಾದ್ ಮುಸ್ಲಿಮರ ಇನ್ನೊಂದು ಪ್ರಮುಖ ಹಬ್ಬವಾಗಿದೆ. ಪ್ರವಾದಿಯವರ ಜನ್ಮದಿನವನ್ನು ಈದ್‌ಮಿಲಾದ್ ಎಂದು ಆಚರಿಸಲಾಗುತ್ತದೆ. ರಬೀಉಲ್ ಅವ್ವಲ್ ೧೨ ಪ್ರವಾದಿಯವರ ಜನ್ಮದಿನವಾಗಿದ್ದು ಇದೇ ದಿನಾಂಕದಂದು ಪ್ರವಾದಿಯವರು ನಿಧನರಾಗಿದ್ದರು[೨೬]. ಆದ್ದರಿಂದ ಈ ದಿನದ ಆಚರಣೆಯು ಪ್ರವಾದಿಯವರ ಜನನ ಮರಣವೆರಡನ್ನೂ ಸಂಕೇತಿಸುತ್ತದೆ. ಈ ಇಡೀ ತಿಂಗಳನ್ನು ಪ್ರವಾದಿಯವರ ತಿಂಗಳಾಗಿ ಆಚರಿಸಲಾಗುತ್ತದೆ. ಮುಸ್ಲಿಮರು ಈ ತಿಂಗಳಲ್ಲಿ ತಮ್ಮ ಮನೆಗಳಲ್ಲಿ ಮೌಲೂದ್ ಪಠಣ ಮಾಡುತ್ತಾರೆ. ಹಾಗೂ ಬಡವರಿಗೆ ಉಣ ಬಡಿಸುತ್ತಾರೆ. ಇದು ಮುಖ್ಯವಾಗಿ ಇಲ್ಲಿಯ ಬ್ಯಾರಿಗಳ ಸಂಪ್ರದಾಯ.

ಮೌಲೂದ್ ಪಠಿಸುವುದರಿಂದ ದೇವನ ಹಾಗೆಯೇ ಪ್ರವಾದಿಯವರ ಪ್ರೀತಿ ರಕ್ಷಣೆಗೆ ಪಾತ್ರರಾಗುತ್ತೇವೆ ಎಂಬ ಬಲವಾದ ನಂಬಿಕೆಯನ್ನು ಇಲ್ಲಿಯ ಬ್ಯಾರಿಗಳು ಹೊಂದಿದ್ದಾರೆ. ಇದು ಹಬ್ಬದ ಸಂಭ್ರಮದಲ್ಲಿ ಹಾಡುವ ಗೀತೆಯಾಗಿದ್ದು ಇದರಲ್ಲಿ ಪ್ರವಾದಿಯವರ ಗುಣಗಾನ ಮಾಡುತ್ತಾ ಅವರನ್ನು ಕೊಂಡಾಡಲಾಗಿದೆ.

**೩.ರಾತೀಬ್, ಝಿಕ್ರ್ ಅಥವಾ ಗ್ಯೆರ್‌ವಿಲ್ ಶರೀಫ್** : ಪ್ರವಾದಿಯವರ ಜನ್ಮ ದಿನದಂತೆ ಬಗ್ದಾದ್‌ನ ಸಂತರಾದ ಶೇಖ್ ಮೊಹಿಯುದ್ದೀನ್ ಅಬ್ದುಲ್ ಖಾದರ್ ಜೀಲಾನಿಯವರ ಜನ್ಮದಿನವನ್ನು ಸ್ಮರಿಸಲಾಗುತ್ತದೆ. ಮುಸ್ಲಿಮ್ ಸಮುದಾಯದಲ್ಲಿ ಇವರು ಅತ್ಯಂತ ಗೌರವಕ್ಕೆ ಪಾತ್ರರಾದ ಸಂತರಾಗಿದ್ದಾರೆ. ಇವರನ್ನು ಕೊಂಡಾಡುವ ಗಾನವನ್ನು ರಚಿಸಲಾಗಿದ್ದು ಇದನ್ನು ಮೊಹಿಯುದ್ದೀನ್ ಮಾಲ ಎಂದು ಕರೆಯಲಾಗುತ್ತದೆ[೨೮]. ಮಾಪಿಳ್ಳೆ ವಿದ್ವಾಂಸರು ದೇವನ ಮಹಿಮೆಯನ್ನು ಕೊಂಡಾಡುವ ಗೀತೆಗಳನ್ನು ರಚಿಸಿದ್ದು ಅವುಗಳನ್ನು ರಾತೀಬ್ ಮತ್ತು ಝಿಕ್ರ್ ಎಂದು ಕರೆಯಲಾಗುತ್ತದೆ. ದೇವರ ಮಹಿಮೆಯನ್ನು ಕೊಂಡಾಡುವ ಪಂಕ್ತಿಗಳಿರುವ ಈ ಗೀತೆಯನ್ನು ಅತ್ಯಂತ ಮಧುರವಾಗಿ ಪುನರುಚ್ಚರಿಸಲಾಗುತ್ತದೆ. ರಾತೀಬ್‌ನಲ್ಲಿ ಅತ್ಯಂತ ಪ್ರಸಿದ್ಧವಾದ ರಾತೀಬ್ ಮೊಹಿಯುದ್ದೀನ್ ರಾತೀಬ್ ಮತ್ತು ಕುತುಬೀಯ್ಯತ್ ಆಗಿದೆ. ಕುತುಬಿಯ್ಯತನ್ನು ದಫ್‌ನೊಂದಿಗೆ ಹಾಡಲಾಗುತ್ತದೆ. ಇದನ್ನು ದಫ್ ರಾತೀಬ್ ಎಂದೂ ಕರೆಯಲಾಗುತ್ತದೆ[೨೯]. ಪುತ್ತೂರಿನ ಗ್ರಾಮಾಂತರ ಪ್ರದೇಶಗಳಲ್ಲಿ ಮೌಲೂದ್ ಓದುತ್ತಾ, ಬೆಳಗ್ಗಿನ ಸಮಯ ದಲ್ಲಿ ಮನೆಮನೆಗೆ ಊಟವನ್ನು ಹಂಚಿ ಇದನ್ನು ಆಚರಿಸುತ್ತಾರೆ. ಇತರ ದಿನಗಳಲ್ಲಿ ಇದನ್ನು ನಿರ್ದಿಷ್ಟ ಕಾರಣಕ್ಕಾಗಿರುವ ಹರಕೆ (ನೇರ್ಚೆ)ಯಾಗಿ ಆಚರಿಸಲಾಗುತ್ತದೆ. ಇದನ್ನು ಆಚರಿಸುವುದರಿಂದ ದೇವನ ಹಾಗೂ ಸಂತರ ಪ್ರೀತಿಗೆ ಪಾತ್ರರಾಗುವರು ಎಂಬ ನಂಬಿಕೆಯಿದೆ.

**೪. ಬರಾಅತ್ :** ಬರಾಅತ್ ಎಂಬುದು ಮುಸ್ಲಿಮ್ ಸಮುದಾಯದಲ್ಲಿ ಸಾಮಾನ್ಯವಾಗಿರುವ ಒಂದು ಆಚರಣೆಯಾಗಿದೆ. ಇದನ್ನು ಶಅಬಾನ್ ತಿಂಗಳ ಹದಿನೈದನೇ ದಿನದಂದು ಆಚರಿಸಲಾಗುತ್ತದೆ. ಈ ದಿನವನ್ನು ಅಲ್ಲಾಹ್ ಮನುಷ್ಯನ ಜೀವನೋಪಾದಿಯಾಗಿರುವ ಆಹಾರವನ್ನು ನಿರ್ಧರಿಸುವಂತಹ ಹಾಗೂ ಮನುಷ್ಯನ ಅದೃಷ್ಟವನ್ನು ನಿರ್ಧರಿಸುವ ದಿನ ಎಂದು ನಂಬುತ್ತಾರೆ. ಈ ಕಾರಣಕ್ಕಾಗಿಯೇ ಈ ದಿನ ಸೂರ್ಯಾಸ್ತನ ನಂತರ ಉಪಾಸನೆಗಳನ್ನು ನೆರವೇರಿಸುತ್ತಾರೆ. ಮುಸ್ಲಿಮರೆಲ್ಲರೂ ಸೂರಃ ಯಾಸೀನ್ (ಕರ್‌ಅನ್‌ನ ಒಂದು ಅಧ್ಯಾಯ), ಸೂರಃ ಫಾತಿಹ (ಕುರ್‌ಅನ್‌ನ ಪ್ರಥಮ ಅಧ್ಯಾಯ)ವನ್ನು ಓದುತ್ತಾರೆ ಹಾಗೂ ದೇವನಲ್ಲಿ ತನ್ನ ಜೀವಿತಾವಧಿಯನ್ನು ದೀರ್ಘಗೊಳಿಸಲು ಅದೇ ರೀತಿ ತನಗೂ ತನ್ನ ಕುಟುಂಬಕ್ಕೂ ಮಕ್ಕಳಿಗೂ ಅಗತ್ಯ ಆಹಾರವನ್ನು ಕರುಣಿಸಲು ಪ್ರಾರ್ಥನೆ (ದುಆ)ಯನ್ನು ನೆರವೇರಿಸಲಾಗುತ್ತದೆ.

**೫. ಈದುಲ್ ಫಿತ್ರ್ ಅಥವಾ ಚೆರಿಯ ಪೆರ್ನಾಲ್ :** ಈದ್ ಅಥವಾ ಪೆರ್ನಾಲ್ ಹಬ್ಬವನ್ನು ಇಲ್ಲಿಯ ಎಲ್ಲಾ ಮುಸಲ್ಮಾನರು ಆಚರಿಸುತ್ತಾರೆ. ಇದು ರಮ್ಜಾನ್ ತಿಂಗಳ ಉಪವಾಸದ ಕೊನೆಯ ದಿನ ಆಚರಿಸುತ್ತಾರೆ. ವಿಧವಿಧದ ಖಾದ್ಯಗಳನ್ನು ತಯಾರಿಸಿ ಹೊಸಬಟ್ಟೆಯನ್ನು ಧರಿಸಿ ತುಂಬಾ ಸಡಗರ ದೊಂದಿಗೆ ಮುಸಲ್ಮಾನರು ಆಚರಿಸುತ್ತಾರೆ. ಈದ್‌ನ ದಿನ ಮಸೀದಿಯಲ್ಲಿ ಸಾಮೂಹಿಕ ಪ್ರಾರ್ಥನೆಯನ್ನು ಸಲ್ಲಿಸಲಾಗುತ್ತದೆ. ಈ ದಿನ ಬಂಧು–ಮಿತ್ರರ ಮನೆಗಳಿಗೂ ಭೇಟಿ ನೀಡುವುದು ಕ್ರಮ. ಈದ್‌ನ ದಿನ ಆಹಾರಧಾನ್ಯವನ್ನು ವ್ಯಕ್ತಿಯೋರ್ವನ ಮೇಲೆ ೨.೬ ಕಿಲೋ ಗ್ರಾಂ ನಂತೆ ಈದ್ ನಮಾಝ್ ನಿರ್ವಹಿಸುವ ಮೊದಲು ವಿತರಿಸಲಾಗುವುದು. ಈ ಝಕಾತ್‌ನ ದಾನವು ಪ್ರತಿಯೋರ್ವ ಅನುಕೂಲಸ್ಥ ಅರ್ಹ ಮುಸ್ಲಿಮನ ಮೇಲೆ ಕಡ್ಡಾಯವಾಗಿದೆ. ಪುತ್ತೂರಿನ ಎಲ್ಲಾ ಮುಸ್ಲಿಮರು ಇದನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ಫಿತ್ರ್ ಝಕಾತ್‌ನ ಮಹತ್ವದ ಆಧಾರದಲ್ಲೇ ಈ ಹಬ್ಬವನ್ನು ಈದುಲ್ ಫಿತ್ರ್ ಎಂದು ಕರೆಯಲಾಗುತ್ತದೆ. ಈ ಹಬ್ಬದಂದು ಬಡವರಿಗೆ ವಿವಿಧ ಮೂಲಗಳಿಂದ ಝಕಾತ್ (ಕಡ್ಡಾಯ ದಾನ) ದೊರೆಯುವುದರಿಂದ ಅವರೂ ಈ ಹಬ್ಬವನ್ನು ಸಂಭ್ರಮದಿಂದ ಆಚರಿಸುತ್ತಾರೆ. ಇದು ಬಡವರ ಹಬ್ಬವಾಗಿದೆ.

**೬. ಈದುಲ್ ಅಝ್‌ಹಾ ಅಥವಾ ಬಕ್ರೀದ್ :** ಈದುಲ್ ಅಝ್‌ಹಾವನ್ನು ಸಾಮಾನ್ಯವಾಗಿ ಬಕ್ರೀದ್ ಅಂದರೆ ದೊಡ್ಡ ಹಬ್ಬ ಎಂದು ಕರೆಯುತ್ತಾರೆ. ಬ್ಯಾರಿಗಳು ಇದನ್ನು ಬೆಲಿಯ ಪೆರ್ನಾಲ್ ಎಂದು ಕರೆಯುತ್ತಾರೆ. ಇದನ್ನು ಈದುಲ್ ಫಿತ್ರ್‌ನಂತೆಯೇ ಆಚರಿಸಲಾಗುತ್ತದೆ. ಇಲ್ಲಿ ಫಿತ್ರ್‌ನ ರೂಪದಲ್ಲಿ ಧಾನ್ಯಕ್ಕೆ ಬದಲಾಗಿ ಉಳ್ಳವರು ಕುರಿಮಾಂಸ, ದನದ ಮಾಂಸಗಳನ್ನು ಬಡಬಗ್ಗರಿಗೆ, ಸಂಬಂಧಿಕರಿಗೆ ಈದ್ ನಮಾಝ್‌ನ ನಂತರ ಹಂಚುತ್ತಾರೆ.

ಈದ್‌ಗಾಹ್‌ಗಳಲ್ಲಿ ಈದುಲ್ ಫಿತ್ರ್‌ನಂತೆ ಈ ಹಬ್ಬದಂದೂ ಪ್ರಾರ್ಥನೆ ಸಲ್ಲಿಸಲಾಗುತ್ತದೆ. ಬಕ್ರೀದ್ ಎಂದರೆ ಬಲಿದಾನದ ಹಬ್ಬವಾಗಿದ್ದು ದೇವನಿಗಾಗಿ ಬಲಿದಾನಗಳನ್ನು ಅರ್ಪಿಸುವುದು ಈ ಹಬ್ಬದ ಮಹತ್ವವಾಗಿದೆ. ಈದ್ ನಮಾಝ್‌ನ ನಂತರ ದೇವನ ಹೆಸರಿನಲ್ಲಿ ಜಾನುವಾರುಗಳನ್ನು ಬಲಿ ಕೊಡಲಾಗುವುದು ಮತ್ತು ಅದನ್ನು ಬಡಬಗ್ಗರಿಗೆ ಹಂಚಲಾಗುವುದು. ಇಸ್ಲಾಮಿನ ಸಂಪ್ರದಾಯದಂತೆ ಪ್ರತಿಯೋರ್ವ ವ್ಯಕ್ತಿ ಅಥವಾ ಒಂದು ಕುಟುಂಬ ಸಾಮರ್ಥ್ಯವಿದ್ದಲ್ಲಿ ಈ ಬಲಿದಾನವನ್ನು ನೀಡುವುದು ಕಡ್ಡಾಯವಾಗಿದೆ. ಪ್ರವಾದಿ ಇಬ್ರಾಹಿಂ (ಅಬ್ರಹಾಂ) ತನ್ನ ಮಗ ಇಸ್ಮಾಯಿಲ್‌ರನ್ನು ಬಲಿ ಕೊಡಲು ತಯಾರಾದಾಗ ಅದರ ಬದಲು ಆಡೊಂದು ಅಲ್ಲಿ ಪ್ರತ್ಯಕ್ಷಗೊಂಡು ಅವರು ಪವಾಡ ಸದೃಶವಾಗಿ ಪಾರಾದ ಘಟನೆಯನ್ನು ನೆನಪಿಸಲಿಕ್ಕಾಗಿ ಈ ಹಬ್ಬವನ್ನು ಆಚರಿಸಲಾಗುತ್ತದೆ. ಹೀಗೆ ಪ್ರವಾದಿ ಇಬ್ರಾಹಿಮ್‌ರ ಸಂಪ್ರದಾಯವನ್ನು ಜಾನುವಾರುಗಳನ್ನು ಬಲಿ ನೀಡುವ ಮೂಲಕ ನೆನಪಿಸಲಾಗುತ್ತದೆ.

ಮುಸ್ಲಿಮರು ತಿಂಗಳಿಗೊಂದು ಹಬ್ಬ ಆಚರಿಸುತ್ತಾರೆ. ಈ ಎಲ್ಲಾ ಹಬ್ಬಗಳನ್ನು ಆಚರಿಸುವಾಗ ಅವರಲ್ಲಿಯ ಒಗ್ಗಟ್ಟು ವ್ಯಕ್ತಪಡಿಸಲು ಇವು ಒಂದು ಸಾಧನ. ಪ್ರತಿಯೊಂದು ಹಬ್ಬಕ್ಕೂ ಹೊಸ ಉಡುಪು ಧರಿಸಿ ತಮ್ಮ ಬದುಕಿನ ಕಷ್ಟಗಳನ್ನು ಮರೆಯಲು ಪ್ರಯತ್ನಿಸುತ್ತಾರೆ. ಈ ಹಬ್ಬಗಳ ಆಚರಣೆಯಿಂದ ಅವರ ಸಂಸ್ಕೃತಿಯೂ ಪೋಷಿಸಲ್ಪಡುತ್ತದೆ.

### ೫.೯.೦. ಜನಪದ ಐತಿಹ್ಯಗಳು

**ಕೆದ್ದೊಟೆಯ ಕೆರೆ (ಸರೋವರ)ಯೊಂದಕ್ಕೆ ಸಂಬಂಧಪಟ್ಟ ಚಲ್ಲಮೇರನ ಐತಿಹ್ಯ.** (ಕುಂತೂರು ಗ್ರಾಮ, ಪುತ್ತೂರು ತಾಲೂಕು)

ಕೆಡ್ಡಸದ ಬೇಟೆಗಾಗಿ ಚಲ್ಲಮೇರ ಎಂಬವನು ಕಲೆಂಜಿಮಲೆಗೆ ಹೋಗುತ್ತಾನೆ. ಕಾಡಿನ ಮಧ್ಯದಲ್ಲಿ ಆತ ಸುತ್ತಲೂ ಬೆಂಕಿಯಿಂದ ಆವರಿಸಲ್ಪಟ್ಟ ಅದರಿಂದ ಪಾರಾಗಲು ಪೇಚಾಡುತ್ತಿದ್ದ ಸರ್ಪವೊಂದನ್ನು ಕಾಣುತ್ತಾನೆ. ಸರ್ಪದ ತೀಕ್ಷ್ಣ ವಿಷದ ಅರಿವಿದ್ದ ಚಲ್ಲನು ಅದರ ತಂಟೆ ತನಗೆ ಬೇಡವೆಂದು ತನ್ನ ಪಾಡಿಗೆ ತಾನು ಹೋಗುತ್ತಿರಲು ಆ ಸರ್ಪವು ತನ್ನನ್ನು ರಕ್ಷಿಸುವಂತೆ ಚಲ್ಲಮೇರನಲ್ಲಿ ಮೊರೆಯಿಡುತ್ತದೆ. ಸುತ್ತಲೂ ಆವರಿಸಿಕೊಂಡಿರುವ ಬೆಂಕಿಯ ಮಧ್ಯದಿಂದ ಸರ್ಪವನ್ನು ತಾನು ಹೇಗೆ ಪಾರುಮಾಡಲೆಂದು ಚಲ್ಲನು ಯೋಚಿಸುತ್ತಿರಲು ಆ ಸರ್ಪವು ಆತನ ಬಳಿಯಿದ್ದ ಬಿಲ್ಲನ್ನು ಮುಂದಕ್ಕೆ ಚಾಚಲು ಹೇಳುತ್ತದೆ. ಅದರಂತೆ ಆತನು ತನ್ನ ಬಿಲ್ಲನ್ನು ಬೆಂಕಿ ಮಧ್ಯದಲ್ಲಿದ್ದ ಸರ್ಪದತ್ತ ಚಾಚಲು ಅದಕ್ಕೆ ಸುತ್ತಿಕೊಂಡು ಹಾವು ಹೊರ ಬರುತ್ತದೆ[೩೦]. ಆದರೆ ಅದು ಚಲ್ಲನನ್ನು ಅಷ್ಟಕ್ಕೆ ಬಿಡದೆ ತನ್ನನ್ನು ಯಾವುದಾದರೂ ತಂಪು ಜಾಗಕ್ಕೆ ಕೊಂಡುಹೋಗಿ ಬಿಡುವಂತೆ

ಯಾಚಿಸುತ್ತದೆ. ಆಗ ಚಲ್ಲಮೇರನು ಅದರ ಆಜ್ಞಾಪಾಲಕನಂತೆ ಅದನ್ನು ಹೊತ್ತುಕೊಂಡು ಕಲೆಂಜಿಮಲೆಯಿಂದಿಳಿದು ಪಶ್ಚಿಮ ದಿಕ್ಕಿಗೆ ಮುಖ ಮಾಡಿ ಹೊರಡುತ್ತಾನೆ.

ಹೀಗೆ ಬರುವಾಗ ದಾರಿಯಲ್ಲಿ ಆಯಾಸ ಪರಿಹಾರವಾಗಿ ಕೆಲವೆಡೆ ಹಾವನ್ನು ಕೆಳಗಿಳಿಸಿ ವಿಶ್ರಮಿಸಿಕೊಂಡನೆಂದೂ, ಹಾಗೆ ವಿಶ್ರಮಿಸಿಕೊಂಡ ಸ್ಥಳಗಳನ್ನು ಈಗ ನೆಲ್ಲ, ಮಾಣಿಗ, ಚಲ್ಲಮೇರನ ಪಳ್ಳಗಳೆಂದು ಕರೆಯಲಾಗುತ್ತದೆಂದೂ, ಅಲ್ಲೆಲ್ಲ ಬೇಸಿಗೆಯಲ್ಲೂ ನೀರನ್ನು ಕಾಣಬಹುದೆಂದೂ ಜನಪದ ಹೇಳಿಕೆಯಿದೆ.

ಚಲ್ಲಮೇರನು ಹಾವಿನೊಂದಿಗೆ ಮತ್ತೂ ಮುಂದಕ್ಕೆ ಬಂದು ತಂಪಾದ ನೆರಳಿನಿಂದ ಕೂಡಿದ ನೀರಿನ ಹಳ್ಳವಿರುವ ಪ್ರದೇಶವೊಂದನ್ನು ತಲುಪಲು ಹಾವು ತನಗದು ಪ್ರಶಕ್ತವಾದ ಸ್ಥಳವೆಂದು ಹೇಳಿದುದರಿಂದ ಅಲ್ಲಿ ಅದನ್ನಿಳಿಸುತ್ತಾನೆ. ತದನಂತರ ಆ ಸರ್ಪವು ಚಲ್ಲನಿಗೆ ಪ್ರತ್ಯುಪಕಾರ ರೂಪದಲ್ಲಿ ನಿಧಿಯೊಂದನ್ನು ನೀಡುವ ಉದ್ದೇಶದಿಂದ ಅದನ್ನು ಎಳೆದುಕೊಂಡು ಬರುವ ಪ್ರಯತ್ನದಲ್ಲಿದ್ದಾಗ ವಾದ್ಯ, ನಗಾರಿ, ಕೊಂಬುಗಳ ಕಿವಿಗಡಚಿಕ್ಕುವ ಗದ್ದಲವುಂಟಾಗಿ ಅದರಿಂದ ಹೆದರಿದ ಚಲ್ಲನು 'ಮಾಯಿಲ್ತಿ' 'ಮಾಯಿಲ್ತಿ' ಎಂದು ತನ್ನ ಹೆಂಡತಿಯ ಹೆಸರಿಡಿದು ಕೂಗುತ್ತಾ ಪಕ್ಕದಲ್ಲಿದ್ದ ಗುಡ್ಡ ಹತ್ತಿ ಓಡುತ್ತಾನೆ. (ಹಾಗಾಗಿ ಆ ಗುಡ್ಡಕ್ಕೆ 'ಮಾಯಿಲ್ತಿ ಗುಡ್ಡೆ'ಯೆಂಬ ಹೆಸರು ಪ್ರಾಪ್ತವಾಯಿತೆಂದು ತಿಳಿಯಲಾಗುತ್ತದೆ) ನಿಧಿಯನ್ನು ತಂದ ಸರ್ಪವು ಚಲ್ಲನಿಗಾಗಿ ಹುಡುಕುತ್ತಾ ಅದನ್ನು ಸುಮಾರು ಎಪ್ಪತ್ತು ಕಡೆ ಎಳೆಯುತ್ತದೆ. ಇದರಿಂದ ಅಲ್ಲಿ ಎಪ್ಪತ್ತು ಮೂಲೆಗಳು ಉಂಟಾಗುತ್ತವೆ. ಕೊನೆಗೂ ಚಲ್ಲನನ್ನು ಕಾಣದೆ ನಿರಾಸೆಗೊಂಡ ಸರ್ಪವು ಆತನಿಗಾಗಿ ತಂದ ನಿಧಿಯು ಅಲ್ಲಿನ ತೇವಭರಿತ ನೆಲದಲ್ಲಿ ಹೂತುಹೋಗಲು ಆದಷ್ಟು ಭಾಗದಲ್ಲಿ ನೀರು ಮೇಲೆ ಬಂದು ಈಗಿರುವ ವಿಶಾಲ ಕೆರೆ ನಿರ್ಮಾಣವಾಯಿತು.

### ೫.೯.೧. ಪ್ರಾಣಿ ಐತಿಹ್ಯ

**ನರಿಮೊಗರು (ಪುರುಸೆರೆ ಕಟ್ಟೆ) :** ಹಿಂದೆ ಈ ಊರಿನಲ್ಲಿದ್ದ ಬಡ ಜೈನನೊಬ್ಬ ದನಿಕನೊಬ್ಬನಿಂದ ಹಣ ಸಾಲ ಪಡೆಯುತ್ತಾನೆ. ಆಗ ಅದಕ್ಕೆ ಪ್ರತಿಯಾಗಿ ಒತ್ತೆಯಿಡಲು ತನ್ನ ಬಳಿ ಬೇರೆ ವಸ್ತುವೇನೂ ಇಲ್ಲದಿದ್ದುದರಿಂದ ತನ್ನ ಸ್ವಾಮಿನಿಷ್ಠ ನಾಯಿಯನ್ನೇ ಒತ್ತೆಯಾಗಿ ನೀಡುತ್ತಾನೆ. ಹೀಗಿರಲು ಒಂದು ದಿನ ಆ ಧನಿಕರ ಮನೆಗೆ ಕಳ್ಳರು ನುಗ್ಗಿ ಚಿನ್ನಾಭರಣಗಳ ಪೆಟ್ಟಿಗೆಯನ್ನು ದೋಚುತ್ತಾರೆ. ಇದನ್ನು ಗಮನಿಸಿದ ನಾಯಿಯು ಕಳ್ಳರನ್ನು ಬೆನ್ನಟ್ಟಿ ಓಡಿಸುತ್ತದೆ. ಹಾಗೆ ಓಡಿಸುವ ಭರದಲ್ಲಿ ಕಳ್ಳರ ಕೈಯಿಂದ ಚಿನ್ನಾಭರಣಗಳ ಪೆಟ್ಟಿಗೆಯು ಬಿದ್ದುಹೋಗಿ ಮತ್ತೆ ಧನಿಕರ ಕೈ ಸೇರುತ್ತದೆ. ನಾಯಿಯ ಸ್ವಾಮಿನಿಷ್ಠೆ ಸೇವಾತತ್ಪರತೆಗಳನ್ನು ನೋಡಿ ಮೆಚ್ಚಿದ ಆ ಸಾಹುಕಾರನು ಅದು ಎಸಗಿದ ಉಪಕಾರದಿಂದಾಗಿ, ಅದರ

ಒಡೆಯನ ಋಣ ಸಂದಾಯವಾಯಿತೆಂದು ಬಗೆದು. ಅಲ್ಲಿನ ಘಟನಾವಳಿಗಳನ್ನು, ತನ್ನ ಮನದ ಅಭಿಮತವನ್ನು ಓಲೆಯೊಂದರಲ್ಲಿ ವಿವರವಾಗಿ ಬರೆದು, ಅದನ್ನು ಆ ನಾಯಿಯ ಕೊರಳಿಗೆ ಕಟ್ಟಿ, ಅದರ ಒಡೆಯನ ಬಳಿಗೆ ಕಳುಹಿಸಿಕೊಡುತ್ತಾನೆ. ತನ್ನ ಬಳಿಗೆ ಬರುತ್ತಿರುವ ನಾಯಿನ್ನು ದೂರದಿಂದಲೇ ಗಮನಿಸಿದ ಬಡ ಜೈನನು ದಂಗಾಗುತ್ತಾನೆ. ತನ್ನ ಸಾಲ ಸಂದಾಯವಾಗುವ ಮುನ್ನವೇ ನಾಯಿಯು ಧನಿಕನ ಬಳಿಯಿಂದ ಓಡಿ ಬಂದಿರಬೇಕೆಂದೂ, ಆ ಮೂಲಕ ತಾನು ಧನಿಕನಿಗಿತ್ತ ಮಾತನ್ನು ಮೀರಿದಂತಾಯಿತೆಂದೂ ಸಿಟ್ಟು, ಅವಮಾನಗಳು ಏಕಕಾಲದಲ್ಲಿ ಕಾಣಿಸಿಕೊಂಡು, ಅದರ ಭರದಲ್ಲಿ ಹಿಂದು–ಮುಂದು ನೋಡದೆ ನಾಯಿಯನ್ನು ಹೊಡೆದು ಸಾಯಿಸುತ್ತಾನೆ. ಮತ್ತೆ ನಾಯಿಯ ಕೊರಳನ್ನು ನೋಡಲಾಗಿ ಓಲೆಯೊಂದು ಆತನ ಗಮನ ಸೆಳೆಯುತ್ತದೆ. ಅದನ್ನು ಓದಿ, ವಾಸ್ತವ ಸಂಗತಿಯೆಲ್ಲಾ ಮನವರಿಕೆಯಾಗಿ ಆತ ತನ್ನ ಅಚಾತುರ್ಯದ ನಡತೆಗಾಗಿ ಪಶ್ಚಾತ್ತಾಪ ಪಡುತ್ತಾನೆ. ನಾಯಿಯ ಸ್ಮರಣಾರ್ಥ ದೂಪೆ (ಗೋರಿ–ಸಮಾಧಿ) ಯೊಂದನ್ನು ನಿರ್ಮಿಸಿ ಶ್ರದ್ಧಾಂಜಲಿ ಅರ್ಪಿಸುತ್ತಾನೆ. ತನಗೆ ಮಕ್ಕಳಿಲ್ಲದಿದ್ದರೂ ತನ್ನ ಬಂಧುಗಳಲ್ಲಿ ತಾನು ಸತ್ತಾಗ ತನ್ನ ಗೊರಿಯನ್ನು ಆ ನಾಯಿಯ ಗೋರಿಯ ಪಕ್ಕದಲ್ಲೇ ಕಟ್ಟಿಸಬೇಕೆಂದು ಹೇಳುತ್ತಾನೆ[೩೧].

**ಕೊಂಬಾರು (ಮಣಿಮುಂಡ) :** ಪುತ್ತೂರು ತಾಲೂಕಿನ ಮಣಿಮುಂಡ (ಕೊಂಬಾರು) ಎಂಬಲ್ಲಿ ಲಭ್ಯವಿರುವ ನಾಯಿ ಕಟ್ಟೆಗೆ ಸಂಬಂಧಿಸಿದ ಐತಿಹ್ಯವೂ ಇದುವರೆಗೆ ನೋಡಿದ ನಾಯಿ ಸಮಾಧಿ ಐತಿಹ್ಯಗಳಲ್ಲಿನ ಮೂಲ ಆಶಯವನ್ನೇ ಹೊಂದಿದ್ದು, ಕೆಲವು ಪೂರಕ ಸನ್ನಿವೇಶಗಳಷ್ಟೆ ವ್ಯತ್ಯಸ್ತವಾಗಿದೆ. ಇಲ್ಲಿ ಬ್ರಿಟಿಷ್ ಅಧಿಕಾರಿಗಳಿ ಅಂಚೆ ರವಾನೆಗಾಗಿ ಊರಿನ ಜೈನನೊಬ್ಬನು (ಬೊಮ್ಮಿ ಸೆಟ್ಟಿ) ತನ್ನ ನಾಯಿಯನ್ನು ಕೊಟ್ಟನೆಂದಿದೆ. ನಾಯಿಯ ಪ್ರಾಮಾಣಿಕ ಸೇವೆಯನ್ನು ಕಂಡು ಮೆಚ್ಚಿ ಮುಂದಕ್ಕೆ ಅದನ್ನು ದುಡಿಸಿಕೊಳ್ಳಲು ಇಷ್ಟಪಡದ ಬ್ರಿಟಿಷ್ ಅಧಿಕಾರಿಗಳು ಅದನ್ನು ಬೊಮ್ಮಿ ಸೆಟ್ಟಿಯ ಬಳಿಗೆ ತಿರುಗಿ ಕಳುಹಿಸಿಕೊಟ್ಟರೆಂದಿದೆ. ನಂತರದ ಘಟನಾವಳಿಗಳೆಲ್ಲ ಹಿಂದಿನ ಐತಿಹ್ಯಗಳಲ್ಲಿ ಇರುವಂತೆಯೂ ಇದೆ[೩೨].

**೫.೯.೨.ಪೌರಾಣಿಕ ಸನ್ನಿವೇಶಗಳಿಗೆ ಸಂಬಂಧಪಟ್ಟ ಸ್ಥಳೈತಿಹ್ಯಗಳು**

**ಕೆದ್ದೊಟೆ ಕೆರೆಗೆ ಸಂಬಂಧಪಟ್ಟ ಐತಿಹ್ಯ** (ಕುಂತೂರು ಗ್ರಾಮ, ಪುತ್ತೂರು ತಾಲೂಕು)

ಪಾಂಡವರು ವನವಾಸದಲ್ಲಿದ್ದಾಗ ಯಕ್ಷ–ಪ್ರಶ್ನೆಗೊಳಗಾದ 'ವಿಷ ಸರೋವರ'ವಿದು. ಅವರು ಅಂದು ಈ ಸರೋವರದ (ಕೆರೆಯ) ನೀರನ್ನು ಕುಡಿದು ಮೂರ್ಛೆ ಹೋಗಿ ಬಿದ್ದುದರಿಂದಲಾಗಿಯೇ ಇದಕ್ಕೆ 'ವಿಷ ಸರೋವರ'ವೆಂದು ಹೆಸರಾಯಿತು. ಸಮೀಪದ

ಬನದೊಳಗಿರುವ ಐದು ವಿಗ್ರಹಗಳು ಪಂಚ ಪಾಂಡವರದು. ಯಕ್ಷಪ್ರಶ್ನೆ ನಡೆದುದರ ಕುರುಹಿಗಾಗಿ ಯಕ್ಷನ (ಯಮಧರ್ಮನ) ಅಪೇಕ್ಷೆಯಂತೆ ಸ್ವತಃ ಪಾಂಡವರೇ ತಮ್ಮ ಮೂರ್ತಿಗಳನ್ನು ಅಲ್ಲಿರಿಸಿ ಹೋದರು.

ಸಮೀಪದಲ್ಲಿ ಹರಿಯುವ ಕುಮಾರಧಾರಾ ನದೀ ಪ್ರದೇಶಕ್ಕೂ ಪಾಂಡವರು ದ್ರೌಪದಿ ಸಮೇತರಾಗಿ ಬಂದಿದ್ದಾರೆ. ಅಲ್ಲಿ ದ್ರೌಪದಿಯು ಮಿಂದು, ಬಟ್ಟೆ ಒಗೆದು, ತನ್ನ ಒದ್ದೆ ಸೀರೆಯನ್ನು ಒಣಗಲು ಹಾಕಿದ ಕುರುಹನ್ನು ಪಕ್ಕದ ಬಂಡೆಯ ಮೇಲೆ ಇಂದಿಗೂ ಕಾಣಬಹುದು[೩೩].

**೫.೯.೩. ಧಾರ್ಮಿಕ ವಿಧಿ – ನಿಷೇಧಗಳಿಗೆ ಸಂಬಂಧಿಸಿದ ಐತಿಹ್ಯ.** (ಕೇಪು ಉಳ್ಳಾಲ್ತಿ ಕ್ಷೇತ್ರ)

ಕೇಪು ಎಂಬಲ್ಲಿ ಪ್ರಸಿದ್ಧ ಉಳ್ಳಾಲ್ತಿ ಕ್ಷೇತ್ರವಿದೆ. ಅಲ್ಲಿ ವರ್ಷಂಪ್ರತಿ ಉಳ್ಳಾಲ್ತಿ ನೇಮ ನಡೆಯುತ್ತದೆ. ಉಳ್ಳಾಲ್ತಿ ನೇಮದಲ್ಲಿ 'ನೆರಿಜಪ್ಪುಡುನೆ' ಎಂಬ ಸಂದರ್ಭವು ವಿಶಿಷ್ಟತೆಯಿಂದ ಕೂಡಿದೆ. ಈ ಉತ್ಸವ ಭಾಗವನ್ನು ಸ್ತ್ರೀಯರು ಯಾರೂ ನೋಡಬಾರದೆಂಬ ಧಾರ್ಮಿಕ ನಿಷೇಧವೊಂದು ರೂಢಿಯಲ್ಲಿದೆ. ನೋಡಿದರೆ ಏನಾಗುತ್ತದೆಂಬುದನ್ನು ವಿವರಿಸುವ ಐತಿಹ್ಯವೂ ಬಳಕೆಯಲ್ಲಿದೆ. ಹಿಂದೆ ಒಬ್ಬಾಕೆ ಮೀನು ಮಾರುವ ಹೆಂಗಸು ನೆರಿಜಪ್ಪುಡುನ ಸನ್ನಿವೇಶವನ್ನು ನೋಡಿಬಿಟ್ಟರೆ ಏನಾಗುತ್ತದೆಂಬ ಹಟದಿಂದ ನೇಮ ನಡೆಯತ್ತಿದ್ದ ಗದ್ದೆಯ ಮೇಲ್ಬದಿಯಲ್ಲಿರುವ ದಿಬ್ಬದ ಮೇಲೆ ನಿಂತು ಉತ್ಸವವನ್ನು ನೋಡಿಯೇ ಬಿಟ್ಟಳಂತೆ. ತಕ್ಷಣ ಆಕೆ ಮೀನಿನ ಬುಟ್ಟಿಯ ಸಹಿತ ಅಲ್ಲಿಯೇ ಕಲ್ಲಾಗಿ ಬಿಟ್ಟಳಂತೆ. ಅದೇ ಎಂದು ತಿಳಿಯಲಾಗುವ ಕಲ್ಲನ್ನು ನಾವು ಈಗಲೂ ಅಲ್ಲಿ ಕಾಣಬಹುದು[೩೫].

**೫.೯.೪.ಪೌರಾಣಿಕ ವ್ಯಕ್ತಿಗಳು – ಭೀಮ :** (ಪುತ್ತೂರು ತಾಲೂಕು, ಕಬಕ ಸಮೀಪದ ಅಳಿಕೆ ಮಜಲು)

ಭೀಮನ ಪ್ರಯತ್ನದ ಫಲವಾಗಿ, ಅರಗಿನರಮನೆಯಿಂದ ಪಾರಾಗಿ ಬಂದ ಪಾಂಡವರು ಹಿಡಿಂಬ ವನವನ್ನು ಕಳೆದು ಏಕ ಚಕ್ರ ನಗರದ ಬ್ರಾಹ್ಮಣರ ಆಶ್ರಯದಲ್ಲಿರುತ್ತಾರೆ. ಆ ಸಂದರ್ಭದಲ್ಲಿ ಅವರಿದ್ದ ಊರಿಗೆ ಗುಡ್ಡದ ಮೇಲಿನ ಬಕಾಸುರನಿಂದಲಾಗಿ ಅಪರಿಹಾರ್ಯವಾದ ವಿಪತ್ತೊಂದು ಎದುರಾಗಿತ್ತು. ಊರವರೇ ಮಾಡಿಕೊಂಡಿದ್ದ ಒಪ್ಪಂದದ ಪ್ರಕಾರ ಪ್ರತಿಯೊಂದು ಮನೆಯಿಂದ ಸರದಿಯಂತೆ ಒಂದು ಬಂಡಿ ಅನ್ನ, ಅದಕ್ಕೆ ಸಹ ಭಕ್ಷ್ಯ – ಭೋಜ್ಯಗಳು, ಒಂದು ಜತೆ ಎತ್ತು. ಒಬ್ಬ ಆಳು – ಇಷ್ಟನ್ನು ಅವನಿಗೆ ಆಹಾರವಾಗಿ ಕಳುಹಿಸಿ ಕೊಡಬೇಕಿತ್ತು. ಪಾಂಡವರು ಆಶ್ರಯ ಪಡೆದಿದ್ದ ಬ್ರಾಹ್ಮಣರ ಮನೆಯ ಸರದಿ ಬಂದಾಗ ಅವರ ಮನೆಯಿಂದ ಬಕಾಸುರನಿಗೆ ಆಹಾರವಾಗಿ ಯಾರು ಹೋಗುವುದೆಂಬ ವಿಷಯದಲ್ಲಿ ಚರ್ಚೆ ನಡೆಯಿತು. ಇದನ್ನು ಕೇಳಿಕೊಂಡ ಕುಂತಿಯು ತನ್ನ ಹೊಟ್ಟೆ

ಬಾಕ ಮಗನಾದ ಭೀಮನನ್ನು ಕಳುಹಿಸುವುದಾಗಿ ಮನೆಯವರನ್ನು ಒಪ್ಪಿಸಿದಳು. ಅದರಂತೆ ಅನ್ನದ ಬಂಡಿಯನ್ನು ಬಕಾಸುರನ ಗುಡ್ಡದತ್ತ ಹೊಡೆದುಕೊಂಡು ಹೋದ ಭೀಮನು ಅದರಲ್ಲಿದ್ದ ಅನ್ನ - ಭಕ್ಷ್ಯ ಭೋಜ್ಯಗಳನ್ನೆಲ್ಲಾ ತಾನು ದಾರಿಯುದ್ದಕ್ಕೂ ಉಣ್ಣುತ್ತಾ ಸಾಗಿದನು. ಊಟದ ಮಧ್ಯೆ ಆತನಿಗೆ ನಿಣ್ಣಗೆ (ಬಾಯೊಳಗಿನ ಒಂದು ಭಾಗ) ಕಲ್ಲೊಂದು ಸಿಲುಕಿಕೊಂಡಿತು. ಅದನ್ನಾತ ತೆಗೆದು ಬಿಸಾಡಿದನು. ಅದುವೇ ಈಗ 'ನಿಣ್ಣೆಕಲ್ಲು' ಎಂಬ ಹೆಸರಿನಿಂದ (ಪುತ್ತೂರು ತಾಲೂಕು ಕಬಕ ಸಮೀಪದ ಅಳಿಕೆ ಮಜಲು ಎಂಬಲ್ಲಿ) ಪ್ರಸಿದ್ಧವಾಗಿದೆ[೫೬].

## ೫.೧೦.೦ ಅಸಾಮಾನ್ಯ ಸ್ತ್ರೀಯರು,

**ತುಳುನಾಡ ಸಿರಿ.** (ಹೊನ್ನಮ್ಮ, ಕುಪ್ಪೆಟ್ಟಿ, ಪುತ್ತೂರು ತಾಲೂಕು, ಗಿರಿಜಮ್ಮ, ಪಂಜಳ, ಪುತ್ತೂರು ತಾಲೂಕು)

ಸತ್ಯನಾಪುರಂದರ ಮನೆಯಲ್ಲಿ ಬಿರುಮಾಳ್ವರಿಗೆ ಬೆರ್ಮರ ವರಪ್ರಸಾದ ರೂಪವಾಗಿ ಸಿಂಗಾರದ ಪುರ್ಪದಲ್ಲಿ ಹುಟ್ಟಿದ ಸಿರಿಯು ಮುಂದೆ ಬೆಳೆದು ದೊಡ್ಡವಳಾಗುತ್ತಾಳೆ. ಅವಳಿಗೆ ಬಸರೂರು ಬೀಡಿನ ಶಂಕರಿ ಪೂಂಜೆದಿಯ ಮಗ ಕಾಂತಣ ಪೂಂಜನೊಂದಿಗೆ ಮದುವೆಯಾಗುತ್ತದೆ. ಮದುವೆಗೆ ಮುನ್ನವೇ ಕಾಂತಣನಿಗೆ ಸೂಳೆ ಸಿದ್ದುವಿನ ಸಂಗವಿರುತ್ತದೆ. ಹೀಗಾಗಿ ಸಿರಿ-ಕಾಂತಣರ ದಾಂಪತ್ಯ ಜೀವನ ಸುಖಮಯವಾಗಿ ಸಾಗುವುದಿಲ್ಲ. ಸತ್ಯನಾಪುರದ ಅಜ್ಜರ (ಬಿರುಮಾಳ್ವ) ಆಶ್ರಯದಲ್ಲಿ ಸಿರಿಯು ಪುತ್ರ ಕುಮಾರನನ್ನು ಪಡೆಯುತ್ತಾಳೆ. ಕುಮಾರನ ದರ್ಶನ-ಸ್ಪರ್ಶ ಕಾರಣದಿಂದ ಬಿರುಮಾಳ್ವರು ಸಾವನ್ನಪ್ಪುತ್ತಾರೆ. ಗಂಡನೊಂದಿಗೆ ಮನಸ್ತಾಪವಾಗಿ ಆತನ ಸಂಬಂಧವನ್ನು ಕಡಿದೊಗೆದು ಸಖಿದಾರು ಮತ್ತು ಕುಮಾರ ನೊಂದಿಗೆ ಸಿರಿಯು ಸತ್ಯನಾಪುರದರ ಮನೆಯಿಂದ ಹೊರಬೀಳುತ್ತಾಳೆ. ದಾರಿಯುದ್ದಕ್ಕೂ ಎದುರಾದ ಅಡ್ಡಿ -ಆತಂಕಗಳನ್ನು ತನ್ನ ಮಾಯಾಶಕ್ತಿಯಿಂದ (ದೈವಿಕ ಶಕ್ತಿ) ಕಳೆದೊಗೆದು, ತನಗೆ ಒಳಿತುಂಟು ಮಾಡಿದವರನ್ನು ಹರಸಿ, ಕೆಡುಕು ಬಗೆದವರನ್ನು ಶಪಿಸಿ, ದಾರಿಯಲ್ಲಿ ಸಾಗುತ್ತ ಅಬ್ಬನಡ್ಕದ ಗುಡ್ಡ ಮುಟ್ಟಿದರು. ಸಿರಿಯು ಅಲ್ಲಿನ ಗೋಳಿಮರದ ರೆಂಬೆಯೊಂದಕ್ಕೆ ಕುಮಾರನ ತೊಟ್ಟಿಲಿನ ಕಟ್ಟಿ ರಾಮರಾಗ ಹಾಡಲು ತೊಡಗಿದಳು.

ಪಕ್ಕದ ಕಾಡಿಗೆ ಬೇಟೆಗೆಂದು ಬಂದಿದ್ದ ಬೋಳದರಮನೆಯ ಅರಸು ಸಹೋದರನಾದ ಬಿಳಿಯ ದೇಸಿಂಗ ಮತ್ತು ಕರಿಯ ದೇಸಿಂಗರು ಸಿರಿಯ ಹಾಡಿಗೆ ಮನಸೋತು ಅವಳನ್ನು ತಮ್ಮವಳನ್ನಾಗಿಸುವ ಆಸೆಯಿಂದ ನಾಮುಂದು ತಾಮುಂದೆಂದು, ಮೊದಲು ಆಕೆಯೆಡೆಗೆ ತಲುಪಿದವರೇ ಆಕೆಯನ್ನು ವರಿಸುವುದೆಂದೂ - ಸ್ಪರ್ಧೆಯಿಂದ ಓಡಿಬರುತ್ತಾರೆ. ಆದರೆ ಸಿರಿಯ ವರ್ತನೆ 'ಅಣ್ಣಂದಿರೆ' ಎಂದು ಆಕೆ ಅವರನ್ನು ಸಂಭೋಧಿಸಿದ ರೀತಿ ಇವುಗಳಿಂದ ಅವರ ಮನಸ್ಸು

ಪರಿವರ್ತನೆಯಾಗುತ್ತದೆ. ಆಕೆಯನ್ನು ತಂಗಿಯಾಗಿ ಸ್ವೀಕರಿಸಿ ತಮ್ಮ ಅರಮನೆಗೆ ಕರೆಯುತ್ತಾರೆ. ಒಪ್ಪಿಗೆ ಸೂಚಿಸಿ ಆಕೆಯನ್ನು ಕರೆದುಕೊಂಡು ಹೋಗುವ ಸನ್ನಾಹಕ್ಕಾಗಿ ಸಹೋದರರಿಬ್ಬರು ಅರಮನೆಗೆ ಹೋದ ಸಂದರ್ಭದಲ್ಲಿ ಸಿರಿಯು ಬೋಳದ ಬಯಲಿಗಿಳಿದು ಅಲ್ಲಿಯೂ ಕೆಲವೆಡೆ ತನ್ನ ಮಾಯಾಶಕ್ತಿಯನ್ನು ತೋರಿಸಿ ದಾರು ಮತ್ತು ಪುತ್ರ ಕುಮಾರನನ್ನು ಮಾಯ ಮಾಡುತ್ತಾಳೆ. ಮಾತಿನಂತೆ ಬಿಳಿಯ ದೇಸಿಂಗ ಮತ್ತು ಕರಿಯ ದೇಸಿಂಗರು ಸಕಲ ಸಂಭ್ರಮದಿಂದ ಆಕೆಯನ್ನು ಬೋಳದರಮನೆಗೆ ಕರೆದುಕೊಂಡು ಹೋಗುತ್ತಾರೆ. ಮುಂದೆ ಆ ಸಹೋದರರಿಬ್ಬರು ಸಿರಿಯನ್ನು ಕೊಟ್ರಾಡಿಗುತ್ತು ಕೊಡ್ಸರಾಳ್ವನಿಗೆ ಮರುಮದುವೆ ಮಾಡಿ ಕೊಡುತ್ತಾರೆ. ಸಾಮುವೆಂಬಾಕೆಯನ್ನು ಮೊದಲೇ ಮದುವೆಯಾಗಿದ್ದ ಆಳ್ವನಿಗೂ ಇದು ಎರಡನೆಯ ಸಂಬಂಧವಾಗಿತ್ತು. ಹೀಗಾಗಿ ಕೆಲವೊಂದು ಸಂದರ್ಭಗಳಲ್ಲಿ ಅವರೊಳಗೆ (ಮುಖ್ಯವಾಗಿ ಸಾಮುವಿಗೆ) ಸವತಿ ಮತ್ಸರ ತಲೆದೋರಿತಾದರೂ ಕಾಲಕ್ರಮೇಣ ಅವೆಲ್ಲಾ ಮಾಯವಾಗಿ ಅವರಿಬ್ಬರೂ ಅನ್ಯೋನ್ಯತೆಯಿಂದ ಕೊಡ್ಸಾರಾಳ್ವನ ಜೊತೆ ಬಾಳುತ್ತಾರೆ. ಹೀಗಿರಲು ಸಿರಿ ಬಸುರಿಯಾಗಿ ಸೊನ್ನೆಯೆಂಬ ಹೆಣ್ಣು ಮಗುವನ್ನು ಹೆತ್ತು ತಾನು ಮಾಯವಾಗುತ್ತಾಳೆ[೩೭].

ನರಿಮೊಗರು ಮತ್ತು ಕೊಂಬಾರು ಐತಿಹ್ಯಗಳು ಪ್ರಾಣಿಗಳಿಗೆ ಸಂಬಂಧಿಸಿದ ಐತಿಹ್ಯಗಳಾಗಿದ್ದು, ಇಲ್ಲಿ ಬರುವ ನಾಯಿಯು ಪ್ರಾಮಾಣಿಕವಾಗಿದ್ದು ಅದರ ನೆನಪಿಗಾಗಿ ಆ ಊರುಗಳಿಗೆ ನಾಯಿಯ ಹೆಸರಿಡುವುದರ ಮೂಲಕ ಅದನ್ನು ಸ್ಮರಿಸಲಾಗುತ್ತದೆ. ಚಲ್ಲಮೇರನ ಐತಿಹ್ಯದಲ್ಲಿ ಕೆರೆಯು ಹೇಗೆ ನಿರ್ಮಾಣವಾಯಿತು ಎಂದು ಉಲ್ಲೇಕಿಸಲಾಗಿದೆ. ತುಳುನಾಡು ಸಿರಿ ಐತಿಹ್ಯದಲ್ಲಿ ಒರ್ವ ಅಸಾಮಾನ್ಯ ಸ್ತ್ರೀಯ ಕುರಿತಾಗಿ ತಿಳಿಸಲಾಗಿದೆ. ಈ ಐತಿಹ್ಯಗಳಿಂದಾಗಿ ಪುತ್ತೂರಿನ ಪರಿಸರದಲ್ಲಿರುವ ಅನೇಕ ಊರುಗಳಿಗೆ ಆ ಹೆಸರು ಬರಲು ಕೆಲವು ಬಲವಾದ ಕಾರಣಗಳಿರುವುದು ತಿಳಿದು ಬರುತ್ತದೆ. ಈ ಐತಿಹ್ಯಗಳಿಂದ ಪತ್ತೂರಿನ ವಿಶೇಷತೆಗಳನ್ನು ತಿಳಿಯಬಹುದಾಗಿದೆ.

## ಅಡಿ ಟಿಪ್ಪಣಿ

೧. ಕೊಂಕಣಿ ಕ್ರೈಸ್ತರ ಜಾನಪದ – ಕ್ಯಾಥರಿನ್ ರಾಡ್ರಿಗಸ್, ಕಟಪಾಡಿ ಪುಟ ೧೨೩.

೨. ಹಾಡಿನ ಚೂಡಾಮಣಿ – ಕೇಶವ ಭಟ್ಟ ಪುಟ ೧೨

೩. ತುಳುವ ಅಧ್ಯಯನ ಕೆಲವು ವಿಚಾರಗಳು – ಬಿ. ಎ. ವಿವೇಕ್ ರೈ ಪುಟ – ೧

೪. ತುಳುವ ಅಧ್ಯಯನ ಕೆಲವು ವಿಚಾರಗಳು – ಬಿ. ಎ. ವಿವೇಕ್ ರೈ ಪುಟ – ೩೫

೫. ನುಡಿ ಸಿಂಗಾರ – ಗಣೇಶ್ ಅಮೀನ್ ಸಂಕಮಾರ್ ಪುಟ ೧೪.

೬. ಪೆರಿಮೆ – ಕರ್ನಾಟಕ ಬ್ಯಾರಿ ಸಾಹಿತ್ಯ ಅಕಾಡೆಮಿ – (ಸಂ.) ಬಿ.ಎಂ. ಇಚ್ಲಂಗೋಡು ಪುಟ ೧೭೨.

೭. ಬ್ಯಾರಿಗಳಲ್ಲಿ ಪಾಟ್ ಒಂದು ವಿವೇಚನೆ – ಮಹಮ್ಮದ್ ಇಸಾಕ್ ಅಗ್ನಾಡಿ (ಪೆರಿಯ ಪುಟ ೧೨೯)

೮. ಪೆರಿಮ – (ಸಂ.) ಬಿ. ಎಂ. ಇಚ್ಲಂಗೋಡು ಪುಟ ೧೩೫.

೯. ನವಮಿ, ೯ನೇ ತಾಲೂಕು ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ ಪುಟ ೭೪

೧೦. ನವಮಿ ೯ನೇ ತಾಲೂಕು ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ ಪುಟ ೭೬

೧೧. ನವಮಿ ೯ನೇ ತಾಲೂಕು ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ ಪುಟ ೭೮

೧೨. ತಾಳಮದ್ದಳೆ – ವಿಜಯ ನಳಿನಿ ಆರ್. ಹೆಗಡೆ ಪುಟ ೧೩೧

೧೩. ತಾಳಮದ್ದಳೆ – ವಿಜಯ ನಳಿನಿ ಆರ್. ಹೆಗಡೆ ಪುಟ ೧೩೨

೧೪. ಕನ್ನಡ ಸಂಘ ದಶಕದ ಸಾಧನೆ (ಸಂ.) ಬೋಳಂತಕೋಡಿ ಈಶ್ವರಭಟ್ ಪುಟ – ೪

೧೫. ತಾಳಮದ್ದಳೆ – ವಿಜಯ ನಳಿನಿ ಆರ್. ಹೆಗಡೆ ಪುಟ ೧೩೩

೧೬. ತಾಳಮದ್ದಳೆ – ವಿಜಯ ನಳಿನಿ ಆರ್. ಹೆಗಡೆ ಪುಟ೧೩೪

೧೭. ದೇರಾಜೆ ಸೀತಾರಾಮಯ್ಯ ಜೀವನ ಸಾಧನೆ ವಿ.ಜೆ. ಮೊಳೆಯಾರ

೧೮. ಜಾನಪದ ಪರಿಸರ ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್ ಪುಟ ೮೩

೧೯. ತುಳುವ ಜಾನಪದ ಕೆಲವು ನೋಟಗಳು – ಅಮೃತ ಸೋಮೇಶ್ವರ

೨೦. ತುಳುವ ಜಾನಪದ ಕೆಲವು ನೋಟಗಳು – ಅಮೃತ ಸೋಮೇಶ್ವರ ಪುಟ ೧೦

೨೧. ದಕ್ಷಿಣ ಕನ್ನಡ ಜಿಲ್ಲೆಯ ಬೈರರು – ಪಾಂಡುರಂಗ ಡಿ. ಆರ್. ಪುಟ ೧೪೦

೨೨. ದ. ಕ. ಜಿಲ್ಲೆಯ ಬೈರರು – ಪಾಂಡುರಂಗ ಡಿ. ಆರ್. ಪುಟ ೧೪೦.

೨೩. ಜಾನಪದ ಪರಿಸರ, ಪಾಲ್ತಾಡಿ ರಾಮಕೃಷ್ಣ ಆಚಾರ್ ಪುಟ ೧೭

೨೪. ತುಳುನಾಡಿನ ಬ್ಯಾರಿಗಳು ಪುಟ ೧೧೮

೨೫. ತುಳುನಾಡಿನ ಬ್ಯಾರಿಗಳು ಪುಟ ೧೧೮

೨೬. ತುಳುನಾಡಿನ ಬ್ಯಾರಿಗಳು ಪುಟ ೧೧೮

೨೭. ತುಳುನಾಡಿನ ಬ್ಯಾರಿಗಳು ಪುಟ ೧೧೯

೨೮. ತುಳುನಾಡಿನ ಬ್ಯಾರಿಗಳು ಪುಟ ೧೨೦

೨೯. ತುಳುನಾಡಿನ ಬ್ಯಾರಿಗಳು ಪುಟ ೧೨೦

೩೦. ಐತಿಹ್ಯ ಮತ್ತು ಪುರಾಣ – ಎ. ಸುಬ್ಬಣ್ಣ ರೈ ಪುಟ ೬೬೬.

೩೧. ವ್ಯಕ್ತ : ಸೇಡಿಯಾಪು ಕೃಷ್ಣ ಭಟ್.

೩೨. ವ್ಯಕ್ತ : ನೋಣಪ್ಪ ಗೌಡ ಕೊಂಬಾರು, ಪುತ್ತೂರು ತಾಲೂಕು

೩೩. ತುಳು ಸಾಹಿತ್ಯ ಚರಿತ್ರೆ ಪುಟ ೬೬೯

೩೪. ತುಳು ಸಾಹಿತ್ಯ ಚರಿತ್ರೆ ಪುಟ ೬೬೯–೬೭೦.

೩೫. ತುಳು ಸಾಹಿತ್ಯ ಚರಿತ್ರೆ ಪುಟ ೬೭೪

೩೬. ತುಳು ಸಾಹಿತ್ಯ ಚರಿತ್ರೆ ಪುಟ ೬೭೪

# ಅಧ್ಯಾಯ – ೬

## ಸಾಂಘಿಕ ಚಟುವಟಿಕೆಗಳು

# ಅಧ್ಯಾಯ – ೬

# ಸಾಂಘಿಕ ಚಟುವಟಿಕೆಗಳು

**೬.೧.೦. ಪೀಠಿಕೆ**

ಪುತ್ತೂರಿನಲ್ಲಿ ಪ್ರಮುಖ ಮೂರು ಕನ್ನಡ ಸಂಘಗಳಿದ್ದು ಅವು ಕನ್ನಡ ಸಾಹಿತ್ಯ ಅಭಿವೃದ್ಧಿಗೆ ತಮ್ಮದೇ ಆದ ರೀತಿಯಲ್ಲಿ ಶ್ರಮಿಸುತ್ತಿವೆ. ೧೯೭೫ರ ಸುಮಾರಿಗೆ ಸ್ಥಾಪಿತವಾದ ಈ ಸಂಸ್ಥೆಗಳು ಪರಸ್ಪರ ಒಂದಾಗಿ ಕಾರ್ಯನಿರ್ವಹಿಸುತ್ತಿವೆ. ಶಿವರಾಮ ಕಾರಂತರಿಂದ ಸ್ಥಾಪಿತವಾದ ಬಾಲವನವು ಮಕ್ಕಳ ಸರ್ವತೋಮುಖ ಅಭಿವೃದ್ದಿಗಾಗಿ ಶ್ರಮಿಸುತ್ತಿದೆ. ಈ ಕನ್ನಡ ಸಂಘಗಳು ವರ್ಷದಲ್ಲಿ ಅನೇಕ ಬಾರಿ ಸಾಹಿತ್ಯ ಚಟುವಟಿಕೆಗಳನ್ನು ಹಮ್ಮಿಕೊಳ್ಳುವುರ ಮೂಲಕ ಇಲ್ಲಿನ ಜನರಲ್ಲಿ ಸಾಹಿತ್ಯದಲ್ಲಿ ಆಸಕ್ತಿಯನ್ನು ಉಂಟುಮಾಡುವಲ್ಲಿ ಯಶಸ್ವಿಯಾಗಿವೆ. ಪುತ್ತೂರಿನ ಪ್ರಮುಖ ಸಂಘಸಂಸ್ಥೆಗಳು ಹೀಗಿವೆ –

**೬.೧.೧ ಕಾರಂತರ ಬಾಲವನ :**

ಮಕ್ಕಳ ಬಗೆಗೆ ಅಪಾರವಾದ ಕಾಳಜಿ ವಹಿಸಿದ ಶಿವರಾಮ ಕಾರಂತರು ಮಕ್ಕಳ ಶಿಕ್ಷಣದಲ್ಲಿ ಹೊಸತನ ತರಲು ಸಾಕಷ್ಟು ಪ್ರಯೋಗಗಳನ್ನು ಕೈಗೊಂಡಿದ್ದರು. ಇದಕ್ಕಾಗಿ ೩೩ನೆಯ ವಯಸ್ಸಿನಲ್ಲಿಯೇ ಪುತ್ತೂರಿನಿಂದ ೩ ಕಿಮೀ. ದೂರದಲ್ಲಿ ೬ ಎಕರೆ ಜಮೀನನ್ನು ಖರೀದಿಸಿ ನೆಲೆಸಿದರು. ನಾಲ್ಕಾರು ವಿದ್ಯಾರ್ಥಿಗಳಿಗೆ ಶಾಲೆ ತೆರೆದರು (೧೯೩೫) ಉಪಾಧ್ಯಾಯ ನಾರಾಯಣರಾಯರಿಗೆ ಬೆಲಾರ್ಡನ ಶಿಕ್ಷಣ ವಿಧಾನದ ಬಗೆಗಿನ ಬರಹಗಳು, ಇತರ ಚಿತ್ರಗಳನ್ನು ಹಾಗೂ ಲೇಖನಗಳನ್ನು ಒದಗಿಸಿದರು. (ಆಡುತ್ತಾ ಕಲಿ ಪ್ರಯೋಗದ ಬಗೆಗೆ) ಮಕ್ಕಳಿಗಾಗಿ ನವಿಲು, ಜಿಂಕೆ, ಮಂಗ, ಹಾವು, ಹೆಬ್ಬಾವುಗಳಿರುವ ಮೃಗಾಲಯ ವನ್ನು ಅಭಿವೃದ್ಧಿಗೊಳಿಸಿದರಲ್ಲದೆ, ಆಡಲು ಇಳುಕಲು, ರೈಲು ಹಾಗೂ ಇರಲು ವಸತಿ ಗೃಹ ಸ್ಥಾಪಿಸಿದ್ದರು. ಈ ಸ್ಥಳವನ್ನು ಬಾಲವನ ಎಂದು ನಾಮಕರಣ ಮಾಡಿದರು.

ಶಿವರಾಮ ಕಾರಂತರು ಪುತ್ತೂರಿನಲ್ಲಿ ನೆಲೆಸಿರುವಾಗ ಮಕ್ಕಳೊಂದಿಗೆ ಬೆರೆತು, ಮಕ್ಕಳಿಗಾಗಿ ನಿರ್ಮಾಣ ಮಾಡಿರುವ ಸ್ಥಳವೇ ಬಾಲವನ. ಸುಮಾರು ನಾಲ್ಕು ದಶಕಗಳ ಕಾಲ ಬಾಲವನದಲ್ಲಿ ನೆಲೆಸಿದ್ದ ಶಿವರಾಮ ಕಾರಂತರು ಅದರ ಸರ್ವಾಂಗೀಣ ಪ್ರಗತಿಗಾಗಿ ಶ್ರಮಿಸಿದರು[೧]. ೧೯೭೪ರಲ್ಲಿ ಪುತ್ತೂರನ್ನು ಬಿಟ್ಟು ಸಾಲಿಗ್ರಾಮ ಸೇರಿದರು. ಇದರಿಂದ ಮುಂದೆ ಬಾಲವನ ಅನಾಥವಾಯಿತು.ಅನಾಥವಾದ ಬಾಲವನ ವನ್ನು ಸರಕಾರ ವಹಿಸಿಕೊಂಡರೆ ಅದೊಂದು ಪ್ರೇಕ್ಷಣೀಯ ಸ್ಥಳವಾಗಬಹುದು ಎಂದು ಇಲ್ಲಿಯ ಜನ ನಂಬಿದ್ದರು. ೧೯೭೮ರಲ್ಲಿ ಬಾಲವನವನ್ನು ಸರಕಾರ

ಖರೀದಿಸಿದಾಗ ಈ ನಿಟ್ಟಿನಲ್ಲಿ ಮೊದಲ ದಿಟ್ಟ ಹೆಜ್ಜೆಯಿಡುತ್ತಿದೆ ಎಂಬ ಸಂತೋಷ ಪುತ್ತೂರಿನ ಕನ್ನಡ ಅಭಿಮಾನಿಗಳದಾಯಿತು. ತಾವು ಬಿಟ್ಟು ಕೊಟ್ಟ ಸ್ಥಳದಲ್ಲಿ ಮಕ್ಕಳ ಆಸಕ್ತಿಯನ್ನು ಕುದುರಿಸಿ ಅವರ ಜ್ಞಾನ – ಅನುಭವ ದಿಗಂತವನ್ನು ವಿಸ್ತರಿಸುವ ವ್ಯವಸ್ಥೆ ಇರಬೇಕೆಂದು ಕಾರಂತರು ಬಯಸಿದ್ದರು. ೧೯೮೦ರಲ್ಲಿ ರಾಜ್ಯ ಸರಕಾರವು ಬಾಲವನವನ್ನು ಅಭಿವೃದ್ಧಿ ಗೊಳಿಸುವ ಉದ್ದೇಶದಿಂದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಹಸ್ತಾಂತರಿಸಿತು. ಸುಮಾರು ನಾಲ್ಕು ವರ್ಷಗಳ ಕಾಲ ಮೌನವಾಗಿದ್ದ ಈ ಇಲಾಖೆಯ ದಕ್ಷಿಣ ಕನ್ನಡ ಜಿಲ್ಲಾ ಸಹಾಯಕ ನಿರ್ದೇಶಕರು ೧೨-೯-೧೯೮೪ರಂದು ಪುತ್ತೂರು ಕರ್ನಾಟಕ ಸಂಘದ ಅಧ್ಯಕ್ಷರಿಗೆ ಪತ್ರವೊಂದನ್ನು ಬರೆದು ಬಾಲವನವನ್ನು ವ್ಯವಸ್ಥಿತವಾಗಿ ಅಭಿವೃದ್ಧಪಡಿಸಲು ಸಲಹೆ ಸೂಚನೆಗಳು ಅಗತ್ಯವಾಗಿದ್ದು, ಅದಕ್ಕಾಗಿ ಪುತ್ತೂರು ಪರಿಸರದ ಪ್ರಸಿದ್ಧ ಹಾಗೂ ಆಸಕ್ತ ವ್ಯಕ್ತಿಗಳ ಅಥವಾ ಸಂಘ–ಸಂಸ್ಥೆಗಳ ಮುಖ್ಯಸ್ಥರ ವಿವರವನ್ನು ನೀಡುವಂತೆ ಕೇಳಿತ್ತು.

ಇದಕ್ಕೆ ಉತ್ತರವಾಗಿ ಕರ್ನಾಟಕ ಸಂಘದ ಅಧ್ಯಕ್ಷರು, ಪುತ್ತೂರಿನ ಐದು ಮಂದಿ ಸಾಹಿತಿ – ಸಮಾಜ ಸೇವಾಕರ್ತರ ಹೆಸರುಗಳನ್ನು ಕಳುಹಿಸಿದರಲ್ಲದೆ, ಬಾಲವನವನ್ನು ಅಭಿವೃದ್ಧಿಗೊಳಿಸುವ ಸಲುವಾಗಿ ಈ ಕೆಳಗಿನ ಸಲಹೆಗಳನ್ನು ನೀಡಿದರು.

ಬಾಲವನ ಅಭಿವೃದ್ಧಿಗೆ ತಯಾರಿಸುವ ಯೋಜನೆ ಸಮಗ್ರ ರೂಪದಲ್ಲಿದ್ದು ಅದನ್ನು ಹಂತ–ಹಂತವಾಗಿ ಕಾರ್ಯರೂಪಕ್ಕೆ ತರಬೇಕು. ಯೋಜನೆಯು ಮುಂದೆ ಹೇಳಿದ ಅಂಶಗಳನ್ನು ಒಳಗೊಂಡಿರಬೇಕು ಎಂದು ತಿಳಿಸಿತು.

- ಮಕ್ಕಳ ಮಾನಸಿಕ ಮತ್ತು ದೈಹಿಕ ಬೆಳವಣಿಗೆಗೆ ಪೂರಕವಾದ ಆಟದ ಮೈದಾನ, ಉದ್ಯಾನ, ಈಜುಕೊಳ, ಯೋಗಾಸನ ಮತ್ತು ವ್ಯಾಯಾಮ ಶಾಲೆ ಪುಸ್ತಕ ಭಂಡಾರ, ಒಳಾಂಗಣ, ಆಟಗಳ ವ್ಯವಸ್ಥೆ, ರಂಗಮಂದಿರ, ನಿರುಪದ್ರವಿ ಪ್ರಾಣಿಗಳುಳ್ಳ ಚಿಕ್ಕ ಮೃಗಾಲಯ ಇತ್ಯಾದಿ.
- ಕಾರಂತರ ಜೀವನ – ಕೃತಿಗಳಿಗೆ ಸಂಬಂಧಪಟ್ಟ ವಸ್ತು ಸಂಗ್ರಹ ಮತ್ತು ಪ್ರದರ್ಶನಾಲಯ.
- ಸಾಹಿತ್ಯಾಭಿಮಾನಿಗಳಿಗೆ ಮತ್ತು ಸಂಶೋಧಕರಿಗೆ ಅನುಕೂಲವಾದ ಶ್ರೇಷ್ಠ ಮಟ್ಟದ ಗ್ರಂಥ ಭಂಡಾರ ಮತ್ತು ತಾತ್ಕಾಲಿಕ ವಸತಿಗೆ ಕುಟೀರಗಳು.
- ನಾಟಕ, ಯಕ್ಷಗಾನ ಮತ್ತು ಚಲನಚಿತ್ರ ತರಬೇತಿ ಕೇಂದ್ರ.

ಮುಂದೆ ಕರ್ನಾಟಕ ಸಂಘದ ಮನವಿಗಳು, ಪತ್ರಿಕೆಗಳಲ್ಲಿನ ಟೀಕೆ ಇತ್ಯಾದಿಗಳಿಂದ ಎಚ್ಚರಗೊಂಡ ಸರಕಾರ ಕಟ್ಟಡದ ದುರಸ್ಥಿಗೆಂದು ೭೩ ಸಾವಿರ ರೂಪಾಯಿ ಮಂಜೂರು ಮಾಡಿತು. ಇದರ ಫಲವಾಗಿ ಕಾರಂತರ ಹರ್ಷ ಮುದ್ರಣಾಲಯವಿದ್ದ ಕಟ್ಟಡ ದುರಸ್ಥಿಗೊಂಡಿತು. 'ನಾಟ್ಯ ಶಾಲಾ' ಎಂಬ ಹೆಸರನ್ನು ಹೊತ್ತ ಈ ಕಟ್ಟಡ ಸದಾ ಬೀಗಮುದ್ರೆ ಹೊಂದಿದ್ದು ಇತ್ತೀಚಿನವರೆಗೆ ಯಾವುದೇ

ನಾಟ್ಯ ಕಾರ್ಯಕ್ರಮಕ್ಕೆ ರಂಗಸ್ಥಳ ಒದಗಿರಲಿಲ್ಲ. ವಾಸದ ಮನೆ ಅಧ್ಯಯನ ಕೊಠಡಿ ಹಾಗೂ ಇತರ ಕಟ್ಟಡಗಳು ಶಿಥಿಲಗೊಂಡಿದ್ದು ಕುಸಿದು ಬೀಳುವಂತಿದ್ದವು. ಚಿಮ್ಮುತ್ತಿರುವ ಉತ್ಸಾಹ, ಲವಲವಿಕೆ ಮತ್ತು ನಿರಂತರ ಚಟುವಟಿಕೆಗಳ ತಾಣವಾಗಿದ್ದ ಬಾಲವನ ನಿರ್ಜನವಾಗಿ ಅಲ್ಲಿಯ ಮರಗಿಡಗಳಿಗೆ ಕೂಡ ರಕ್ಷಣೆ ಇಲ್ಲದಾಯಿತು.

ಬಾಲವನದ ದುಸ್ಥಿತಿಯನ್ನು ಗಮನಿಸಿ ತುರ್ತು ಸಹಾಯ ನೀಡುವಂತೆ ಕೋರಿ ಕರ್ನಾಟಕ ಸಂಘದ ಅಧ್ಯಕ್ಷರು ೧೯೮೭ರ ಫೆಬ್ರವರಿ ೯ರಂದು ಆಗಿನ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರಿಗೆ ಪತ್ರ ಬರೆದಾಗ, ಮುಖ್ಯಮಂತ್ರಿಗಳು 'ಈ ವಿಷಯವನ್ನು ಕೂಡಲೇ ಪರಿಶೀಲಿಸಲು ಸರಕಾರದ ಕಾರ್ಯದರ್ಶಿ, ವಾರ್ತಾ ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆಯವರಿಗೆ ಸೂಚಿಸಿದ್ದೇನೆ' ಎಂಬ ಉತ್ತರ ಬಂತು.

ಆದರೆ ಮೂರು ಇಲಾಖೆಗಳ ಮತ್ತು ರಾಜ್ಯ ಸರಕಾರದ ಕಾರ್ಯದರ್ಶಿಗಳು 'ಕೂಡಲೇ ಪರಿಶೀಲಿಸಲು' ಕೈಗೆತ್ತಿಕೊಂಡ ವಿಷಯದ ಬಗೆಗೆ ಮುಂದೆ ಏನಾಯಿತೋ ತಿಳಿಯದು. ಆರ್ಥಿಕ ಸಹಾಯ ಮಾತ್ರ ಲಭಿಸಲಿಲ್ಲ.

ಇಂಥ ಪರಿಸ್ಥಿತಿಯಲ್ಲಿ ಬಾಲವನವು ಪೂರ್ಣವಾಗಿ ಹಾಳುಬೀಳುವ ಮೊದಲೇ ಅದನ್ನು ಜೀವಂತ ಸಾಂಸ್ಕೃತಿಕ ಕೇಂದ್ರವಾಗಿ ರೂಪಿಸಲು ನ್ಯಾಸವೊಂದನ್ನು ರಚಿಸುವುದು ಸೂಕ್ತವೆಂದೂ ಇದರ ಹೊಣೆಯನ್ನು ಹೊರಲು ತಾವು ಸಿದ್ಧರೆಂದೂ ಪುತ್ತೂರಿನ ಒಂಬತ್ತು ಮಂದಿ ಸಾಹಿತ್ಯಪ್ರಿಯ ಸಮಾಜ ಸೇವಾಸಕ್ತರು ೧೯೮೮ರ ಫೆಬ್ರವರಿ ೧೬ರಂದು ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರಿಗೆ ಕಾಗದ ಬರೆದರು. ಆದರೆ ಇದೂ ಯಶಸ್ವಿಯಾಗಲಿಲ್ಲ. ಮುಂದೆ ೨೦೦೮ರ ವರೆಗೂ ಯಾವುದೇ ಮಹಾನ್ ಕಾರ್ಯಗಳಾಗದೆ ಬಾಲವನ ಮೂಲೆ ಗುಂಪಾಯಿತು.

೨೦೦೮ರ ಕೊನೆಯ ಹೊತ್ತಿಗೆ ಪುತ್ತೂರಿಗೆ ಸಹಾಯಕ ಕಮಿಷನರ್ ಅಗಿ ಆಗಮಿಸಿದ ಹರೀಶ್‌ಕುಮಾರ್ ಬಾಲವನದ ಅಭಿವೃದ್ಧಿಯ ಬಗ್ಗೆ ಆಸಕ್ತಿವಹಿಸಿದರು. ಇವರು ಅಧಿಕಾರ ವಹಿಸಿ ಕೊಂಡು ಒಂದು ತಿಂಗಳ ಒಳಗಾಗಿ ಪುತ್ತೂರಿನ ಪ್ರಮುಖ ಸಾಹಿತಿಗಳನ್ನು ಮತ್ತು ಪುತ್ತೂರಿನ ಎಲ್ಲಾ ಶಿಕ್ಷಣ ಸಂಸ್ಥೆಗಳ ಮುಖ್ಯಸ್ಥರ ಸಭೆಯನ್ನು ಕರೆದು ಬಾಲವನದ ಅಭಿವೃದ್ಧಿಯ ಬಗ್ಗೆ ಚರ್ಚಿಸಿದರು.

ಸರಕಾರ ಬಾಲವನದ ಅಭಿವೃದ್ಧಿಗೆ ಯೋಜನೆಗಳನ್ನು ಕೈಗೊಳ್ಳುವಂತೆ ಮಾಡಲು ಸ್ವತಃ ಪ್ರಯತ್ನಿಸಿದ ಸಹಾಯಕ ಕಮಿಷನರ್ ಬಾಲವನಕ್ಕೆ ಈಜುಕೊಳ, ರಂಗಮಂಟಪ, ಮುಂತಾದವುಗಳನ್ನು ವ್ಯವಸ್ಥೆಗೊಳಿಸುವುದರಲ್ಲಿ ಯಶಸ್ವಿಯಾದರು.

೨೦೦೮ ರ ನವೆಂಬರ್, ಡಿಸೆಂಬರ್ ತಿಂಗಳ ನಂತರ ಪ್ರತಿ ಆದಿತ್ಯವಾರ ಒಂದೊಂದು ಶಿಕ್ಷಣ ಸಂಸ್ಥೆಗಳಿಂದ ಅಥವಾ ಇತರ ಸಂಘ ಸಂಸ್ಥೆಗಳ ಆಶ್ರಯದಲ್ಲಿ ಸಾಂಸ್ಕೃತಿಕ, ಶೈಕ್ಷಣಿಕ

ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಜನರು ಬಾಲವನದ ಕಡೆ ಬರುವಂತೆ ಮಾಡುವಲ್ಲಿಯೂ ಯಶಸ್ವಿಯಾದರು. ಪುತ್ತೂರಿನ ಹಲವು ಜನರನ್ನು ಸಂದರ್ಶಿಸಿ ೫ ಲಕ್ಷಕ್ಕೂ ಮೇಲ್ಪಟ್ಟು ದೇಣಿಗೆ ಸಂಗ್ರಹಿಸಿ ಈಜುಕೊಳವನ್ನು ಮರು ನಿರ್ಮಾಣ ಮಾಡಿ ಪ್ರತಿನಿತ್ಯ ಹಲವು ನಗರವಾಸಿಗಳು ಅಲ್ಲಿಗೆ ಬರುವಂತೆ ಮಾಡಿದ್ದಾರೆ. ಹರ್ಷ ಮುದ್ರಣಾಲಯವಿದ್ದ ಕಟ್ಟಡದಲ್ಲಿ ಗ್ರಂಥಾಲಯ ವ್ಯವಸ್ಥೆಗೊಳಿಸಿ ಹಲವು ಸಾಹಿತ್ಯ ಪ್ರಿಯರಿಗೆ ದಿನನಿತ್ಯ ಅಲ್ಲಿಗೆ ಬರಲು ಪ್ರೇರಣೆಯಾಗುವಂತೆ ಮಾಡಿದ್ದಾರೆ. ೨೦೧೦ರಲ್ಲಿ ಬಯಲು ರಂಗಮಂದಿರ ನಿರ್ಮಾಣ ಮಾಡಿ ಅದರಲ್ಲಿ ಅನೇಕ ಕಾರ್ಯಕ್ರಮಗಳೂ ನಡೆಯುತ್ತಿವೆ.

ಬಾಲವನ ಈಗ ಉತ್ಸಾಹದಿಂದ ಜನರ ಆಕರ್ಷಣೆಯ ಕೇಂದ್ರವಾಗಿ ಬೆಳೆಯುತ್ತಿವೆ. ಆದರೆ ಸಹಾಯಕ ಕಮೀಷನರ್ ಆಗಿರುವ ಹರೀಶ್‌ಕುಮಾರ್ ನಿರ್ಗಮನದ ನಂತರವೂ ಬಾಲವನ ಜನಪ್ರಿಯ ವಾಗಿಯೇ ಮುಂದುವರಿಯಬೇಕಾದರೆ ಸ್ಥಳೀಯ ಆಸಕ್ತ ಜನರ ಸಹಕಾರ ಅತ್ಯಗತ್ಯ. ಸಹಾಯಕ ಕಮೀಷನರ ನೇತೃತ್ವದಲ್ಲಿ ಅಸ್ಥಿತ್ವದಲ್ಲಿ ಇರುವ ಬಾಲವನ ಅಭಿವೃದ್ಧಿ ಸಮಿತಿ ಮುಂದೆಯೂ ಇದೇ ರೀತಿ ದಕ್ಷವಾಗಿ ಕಾರ್ಯನಿರ್ವಹಿಸಿದರೆ ಬಾಲವನ ಸದಾಕಾಲ ಜನಾಕರ್ಷಣೆಯ ಕೇಂದ್ರವಾಗಿ ಮುಂದುವರಿಯುತ್ತದೆ.

**೬.೧.೨. ಪುತ್ತೂರು ಕರ್ನಾಟಕ ಸಂಘ :**

ಪುತ್ತೂರು ಕರ್ನಾಟಕ ಸಂಘವನ್ನು ಸ್ಥಾಪಿಸಿದರು ಶಿವರಾಮ ಕಾರಂತರು. ೧೯೫೨ರಲ್ಲಿ ಹಿರಿಯ ಸಾಹಿತಿಗಳಾದ ಉಗ್ರಾಣ ಮಂಗೇಶರಾವ್ ಕಡವ ಶಂಭುಶರ್ಮ, ಎ.ಪಿ. ಸುಬ್ಬಯ್ಯ, ಬೆಳ್ಳೆ ರಾಮಚಂದ್ರ ಮೊದಲಾದವರ ನೆರವಿನಿಂದ ಅವರು ಸಂಘವನ್ನು ಪ್ರಾರಂಭಿಸಿದರು. ಪಟ್ಟಣದ ಸಾಹಿತ್ಯ ಚಟುವಟಿಕೆಗಳಿಗೆ ವೇದಿಕೆಯಾಗಿ ರೂಪುಗೊಂಡ ಕರ್ನಾಟಕ ಸಂಘದ ಮೂಲಕ ಖ್ಯಾತ ಸಾಹಿತಿಗಳನ್ನು ಕಂಡು ಕೇಳುವ ಸದವಕಾಶ ಪುತ್ತೂರಿನವರಿಗೆ ಲಭಿಸಿತು.

ಮಾಸ್ತಿ ವೆಂಕಟೇಶ ಅಯ್ಯಂಗಾರ್, ರಾಜರತ್ನಂ, ವಿ. ಸೀತಾರಾಮಯ್ಯ ನಾ. ಕಸ್ತೂರಿ, ಜಿ.ಟಿ. ನಾರಾಯಣರಾವ್ ಹಾಗೂ ಇತರರು ಕರ್ನಾಟಕ ಸಂಘದ ಆಶ್ರಯದಲ್ಲಿ ಭಾಷಣ ನೀಡಿದರು. ಕಾರಂತರ ಭೇಟಿಗಾಗಿ ಬರುತ್ತಿದ್ದ ಲೇಖಕರನ್ನೂ ಕವಿ ಮಿತ್ರರನ್ನೂ ಅವರು ಕರ್ನಾಟಕ ಸಂಘಕ್ಕೆ ಆಹ್ವಾನಿಸಿ ಕಾರ್ಯಕ್ರಮ ನಡೆಸುತ್ತಿದ್ದರು.

ಪ್ರಾರಂಭದ ಹಲವು ವರ್ಷ ಕರ್ನಾಟಕ ಸಂಘವು ಪುಸ್ತಕ ಪ್ರಕಟಣೆಗೆ ಹೊರಡದಿದ್ದರೂ ಸಂದರ್ಭ ಬಂದಾಗ ಕೃತಿ ಬಿಡುಗಡೆಗೆ ಅವಕಾಶ ಕಲ್ಪಿಸಲಾಗುತ್ತಿತ್ತು[೨]. ಶಿವರಾಮ ಕಾರಂತರು

ಸಂಪಾದಿಸಿ ಪ್ರಕಾಶಿಸಿದ ಬತ್ತಲೇಶ್ವರ ಕವಿಯ 'ಕೌಶಿಕ ರಾಮಾಯಣ' ಸಂಘದ ವೇದಿಕೆಯಲ್ಲಿ ಬಿಡುಗಡೆ ಗೊಂಡಿತು. ಅಂದಿನ ದಿನಗಳಲ್ಲಿ ಸಾಹಿತ್ಯಕ ಚಟುವಟಿಕೆಗಳಿಗೆ ಹಾಜರಾಗುತ್ತಿದ್ದ ಆಸಕ್ತರ ಸಂಖ್ಯೆ ಕಡಿಮೆ ಯಾಗಿದ್ದರೂ ಪದಾಧಿಕಾರಿಗಳು ನಿರುತ್ಸಾಹಗೊಳ್ಳದೆ ಸಾಧ್ಯವಾದಷ್ಟು ಉಪನ್ಯಾಸ, ಕವನ ವಾಚನಗಳನ್ನು ನಡೆಸುತ್ತಿದ್ದರು.

ಪ್ರಸ್ತುತ ಪುರಂದರ ಭಟ್ ಕರ್ನಾಟಕ ಸಂಘದ ಅಧ್ಯಕ್ಷರಾಗಿದ್ದು ಅವರ 'ಅನುರಾಗ ವಠಾರ' ಅನಾನ್ಯ ಸಾಂಸ್ಕೃತಿಕ ಚಟುವಟಿಕೆಗಳ ತಾಣವಾಗಿದೆ. ಪಟ್ಟಣದ ಹೃದಯ ಭಾಗದಲ್ಲಿರುವ ತಮ್ಮ ಮನೆಯ ಅಟ್ಟವನ್ನು ಅವರು ಸಜ್ಜುಗೊಳಿಸಿ ಸಹೃದಯರ ಸೂಕ್ತ. ಕಲಾಪಗಳಿಗೆ ಉಚಿತವಾಗಿ ಒದಗಿಸುತ್ತಿದ್ದಾರೆ. ಕರ್ನಾಟಕ ಸಂಘ, ಎಚ್ಚರ ಬಳಗ, ದೃಶ್ಯ, ಪುತ್ತೂರು ಹವ್ಯಾಸಿ ಪತ್ರಕರ್ತರ ಸಂಘ, ಕನ್ನಡ ಸಾಹಿತ್ಯ ಪರಿಷತ್, ತುಳುಕೂಟ, ಚುಟುಕು ಸಾಹಿತ್ಯ ಪರಿಷತ್, ಕುಶಲ ಹಾಸ್ಯಪ್ರಿಯರ ಸಂಘ ಮುಂತಾದ ಹಲವು ಸಂಘಗಳು ಇಲ್ಲಿಂದಲೇ ಕಾರ್ಯವೆಸಗುತ್ತಿವೆ.

ನಾಡಿನ ಖ್ಯಾತ ಚಿಂತಕರಾದ ಲಕ್ಷ್ಮೀಶ ತೋಳ್ಪಾಡಿಯವರು ವೇದ, ಉಪನಿಷತ್, ಪುರಾಣ, ಕಾವ್ಯಗಳ ಸಾಪ್ತಾಹಿಕ ಪ್ರವಚನದ ಸರಣಿಯನ್ನು ಕೆಲವು ವರ್ಷಗಳಿಂದ ಸತತವಾಗಿ ನಡೆಸಿಕೊಡುತ್ತಿದ್ದಾರೆ. ವಠಾರದ ಅಷ್ಟಮಿ ಇಲ್ಲಿನ ಇನ್ನೊಂದು ವಿಶೇಷ. ಅನುರಾಗ ವಠಾರದ ನಿರಂತರ ಜ್ಞಾನ ಸತ್ರದ ಜತೆಗೆ ವರ್ಷಕ್ಕೊಮ್ಮೆ ನೆರವೇರುವ ಸಾಹಿತ್ಯ–ಸಂಸ್ಕೃತಿ ಹಬ್ಬವು ಕಳಶಪ್ರಾಯವಾಗಿದೆ. ಇದರ ಖ್ಯಾತಿಯನ್ನು ತಿಳಿದ ಊರ–ಪರವೂರ ಲೇಖಕರು ಕಲಾವಿದರು ತಮ್ಮ ಕಲಾಪಗಳನ್ನು ಏರ್ಪಡಿಸಲು ಇಲ್ಲಿಗೆ ಬರುತ್ತಿದ್ದಾರೆ.

**ದತ್ತಿ ಸ್ಥಾಪನೆ :**

ಶಿವರಾಮ ಕಾರಂತರು ಪುತ್ತೂರನ್ನು ಬಿಟ್ಟು ಸಾಲಿಗ್ರಾಮಕ್ಕೆ ಹೋಗಿ ನೆಲೆಸಿದ ಮೇಲೆ ಕರ್ನಾಟಕ ಸಂಘದ ಚಟುವಟಿಕೆಗಳು ಸ್ವಲ್ಪ ಸಮಯ ಕುಂಠಿತವಾದಂತೆ ತೋರಿದರೂ ಪಟ್ಟಣದ ಸಾಹಿತ್ಯ ಪ್ರಿಯರು ಅದಕ್ಕೆ ಕಾಯಕಲ್ಪ ಮಾಡುವಲ್ಲಿ ಯಶಸ್ವಿಯಾದರು. ಎನ್. ಸುಬ್ರಹ್ಮಣ್ಯಂ, ಮುಳಿಯ ಕೃಷ್ಣ ಭಟ್, ಬೋಳಂತಕೋಡಿ ಈಶ್ವರ ಭಟ್, ವಿ. ಬಿ. ಮೊಳೆಯಾರ್, ಬಿ. ಪುರಂದರ ಭಟ್ ಮತ್ತು ಗೆಳೆಯರು ಸಂಘದ ಕಾರ್ಯಕ್ರಮಗಳನ್ನು ಚುರುಕು ಗೊಳಿಸಿದರು.

ಶಿವರಾಮ ಕಾರಂತರು ಜ್ಞಾನಪೀಠ ಪ್ರಶಸ್ತಿ ಪಡೆದ (೧೯೭೭) ನಂತರ ಅವರನ್ನು ಸಂಮಾನಿಸುವ ಸಂದರ್ಭದಲ್ಲಿ ಆರುಸಾವಿರ ರೂಪಾಯಿ ನಿರಖು ಠೇವಣಿಯಾಗಿಟ್ಟ ಅವರ ಹೆಸರಿನಲ್ಲಿ ದತ್ತಿ ಯೊಂದನ್ನು ಸ್ಥಾಪಿಸಲಾಯಿತು. ಪ್ರಾಯೋಗಿಕವಾಗಿ ಸ್ಥಳೀಯ ಕಾಲೇಜು ವಿದ್ಯಾರ್ಥಿಗಳಿಗೆ ಸೀಮಿತವಾಗಿದ್ದ ಸಾಹಿತ್ಯ ಸ್ಪರ್ಧೆಗಳು ಉತ್ತೇಜಕ ಪ್ರತಿಕ್ರಿಯೆ ಕಂಡುಬಾರದ್ದರಿಂದ ದತ್ತಿ ಹಣದ ಬಡ್ಡಿಯನ್ನು

ಸಾಹಿತ್ಯ ಉಪನ್ಯಾಸಗಳಿಗೆ ಉಪಯೋಗಿಸಿ ಅಂತಹ ಉಪನ್ಯಾಸಗಳನ್ನು ಸಣ್ಣ ಪುಸ್ತಕಗಳಾಗಿ ಹೊರತರುವ ಯೋಜನೆಯೊಂದನ್ನು ಸಂಘವು ಹಾಕಿಕೊಂಡಿದೆ. ಈಗ ಠೇವಣಿಯ ಮೊತ್ತ ರೂಪಾಯಿ ಹತ್ತುಸಾವಿರವನ್ನು ಮೀರಿದೆ.

ಕರ್ನಾಟಕ ಸಂಘವು ಉತ್ತಮ ಮಟ್ಟದ ಸಾಹಿತ್ಯ ಗೋಷ್ಠಿಗಳನ್ನು ನಡೆಸಿದ್ದು ಇವುಗಳಲ್ಲಿ ಶಿವರಾಮ ಕಾರಂತ, ಗೋವಿಂದ ಪೈ ಹಾಗೂ ರಾಜರತ್ನಂ ಅವರ ಕೃತಿಗಳ ಕುರಿತಾದ ವಿಚಾರ ಸಂಕಿರಣಗಳು ಮತ್ತು ಕರಾವಳಿ ಮಹಿಳೆಯರ ಸಾಹಿತ್ಯಗೋಷ್ಠಿ ಉಲ್ಲೇಖನೀಯ. ಸಂಘದ ತ್ರಿದಶಮಾನೋತ್ಸವ ಅಂಗವಾಗಿ ದೇರಾಜೆ ಸೀತಾರಾಮಯ್ಯ, ಎಸ್.ಆರ್. ಚಂದ್ರ, ಅಗ್ರಾಳ ಪುರಂದರ ರೈ ಮತ್ತು ಪಿ. ಕೆ. ನಾರಾಯಣರನ್ನು ಸಂಮಾನಿಸಲಾಗಿದೆ.

### ಕರ್ನಾಟಕ ಸಂಘದ ಪ್ರಕಟಣೆಗಳು

| | | |
|---|---|---|
| ❖ ಮಹಾಯುದ್ಧಕ್ಕೆ ಮುನ್ನ | ಗೀತೆಯ ಮೇಲೆ ವ್ಯಾಖ್ಯಾನ | ಲೇ: ಲಕ್ಷ್ಮೀಶ ತೋಳ್ಪಾಡಿ<br>ಪ್ರ : ೧೯೮೦ |
| ❖ ಸಂಸ್ಕೃತಿ | ಪ್ರೌಢ ಪ್ರಬಂಧ | ಲೇ : ಮುಳಿಯ ತಿಮ್ಮಪ್ಪಯ್ಯ<br>ಪ್ರ : ೧೯೮೧ |
| ❖ ಹುಚ್ಚು ಹೊಳೆ | ಕಾದಂಬರಿ | ಲೇ. : ಮುಳಿಯ ಕೃಷ್ಣ ಭಟ್ಟ<br>ಪ್ರ : ೧೯೮೨ |
| ❖ ಗೋವಿಂದ ಪೈ ನೋಟ | ವಿಮರ್ಶೆ | ಲೇ. : ವಿವಿಧ ಲೇಖಕರು<br>ಪ್ರ. : ೧೯೮೩ |
| ❖ ವಿವೇಚನೆ | ವಿಶ್ಲೇಷಣಾತ್ಮಕ ಪ್ರಬಂಧಗಳು | ಲೇ. : ತೆಕ್ಕುಂಜ ದಾಮೋದರ ಭಟ್<br>ಪ್ರ. : ೧೯೮೩ |
| ❖ ಎಂ.ಎನ್.ಕಾಮತ್ ಜೀವನ ಮತ್ತು ಸಾಧನೆ ಒಂದು ಪರಿಚಯ | | ಲೇ. : ಜಿ. ವರದರಾಯ ಪೈ<br>ಪ್ರ. : ೧೯೮೩ |
| ❖ ಕರ್ಣಚರಿತೆ | ಕಾವ್ಯ ಸಂಗ್ರಹ | ಸಂಗ್ರಾಹಕ : ಹರಿನಾರಾಯಣ ಮಾಡಾವು<br>ಪ್ರ. : ೧೯೮೪ |
| ❖ ವಿವಕ್ಷೆ | ಪ್ರೌಢ ಪ್ರಬಂಧಗಳು | ಲೇ. : ಎ. ವಿ. ನಾವಡ<br>ಪ್ರ. : ೧೯೮೪ |

| | | |
|---|---|---|
| ❖ ಅಮರನಾಥ ದರ್ಶನ | ಪ್ರವಾಸ ಕಥನ | ಲೇ. : ಶಿರಂಕಲ್ಲು ಈಶ್ವರ ಭಟ್ಟ<br>ಪ್ರ. : ೧೯೮೪ |
| ❖ ಲಕ್ಷ್ಮಣ ರೇಖೆ | ಕವನಗಳ ಸಂಗ್ರಹ | ಲೇ. : ಡಿ. ಮಹಾಲಿಂಗ ಭಟ್ಟ<br>ಪ್ರ. : ೧೯೮೫ |
| ❖ ಹವ್ಯಕ ಗಾದೆಗಳು | ಗಾದೆಗಳ ಸಂಗ್ರಹ | ಸಂಗ್ರಾಹಕರು :<br>ಡಾ। ಶ್ರೀಕೃಷ್ಣ ಭಟ್ ಅರ್ತಿಕಜೆ<br>ಪ್ರ. : ೧೯೮೫ |
| ❖ ರಾಜರತ್ನಂ ಕೃತಿಗಳು | ವಿಮರ್ಶೆ | ಲೇ. : ವಿವಿಧ ಲೇಖಕರು<br>ಪ್ರ. : ೧೯೮೬ |
| ❖ ನಿರಂಜನ ಅಭಿನಂದನ | ಅಭಿನಂದನ ಗ್ರಂಥ | ಪ್ರಧಾನ ಸಂಪಾದಕರು :<br>ಬೋಳಂತಕೋಡಿ ಈಶ್ವರ ಭಟ್ಟ<br>ಸಹ ಸಂಪಾದಕರು :<br>ವಿ. ಬಿ. ಮೊಳೆಯಾರ ಮತ್ತು<br>ವಿ. ಬಿ. ಅರ್ತಿಕಜೆ<br>ಪ್ರ. : ೧೯೮೬ |
| ❖ ನೆನಪು ೩೦ | ಭಾಷಣಗಳ ಮತ್ತು<br>ಲೇಖನಗಳ ಸಂಗ್ರಹ | ಸಂಪಾದಕರು :<br>ಬೋಳಂತಕೋಡಿ ಈಶ್ವರ ಭಟ್ಟ<br>ವಿ.ಬಿ. ಮೊಳೆಯಾರ ಮತ್ತು<br>ವಿ. ಬಿ. ಅರ್ತಿಕಜೆ<br>ಪ್ರ. : ೧೯೮೭ |
| ❖ ಉಗ್ರಾಣ ಸಂಪುಟ–೧ | ಉಗ್ರಾಣ ಮಂಗೇಶ<br>ರಾಯರ ಕೃತಿಗಳ<br>ಸಂಗ್ರಹ | ಸಂಪಾದಕರು :<br>ಬಿ. ಲೀಲಾಭಟ್<br>ಪ್ರ. : ೧೯೮೭ |
| ❖ ಬಡೆಕ್ಕಿಲ ವೆಂಕಟರಮಣ<br>ಭಟ್ಟರು – ಜೀವನ ಮತ್ತು ಸಾಧನೆ | | ಲೇ. : ಅಮೃತ ಸೋಮೇಶ್ವರ<br>ಪ್ರ. : ೧೯೮೮ |
| ❖ ಉಗ್ರಾಣ ಸಂಪುಟ – ೨ | ಉಗ್ರಾಣ ಮಂಗೇಶ<br>ರಾಯರ ಕೃತಿಗಳ<br>ಸಂಗ್ರಹ | ಸಂಪಾದಕರು : ಬಿ. ಲೀಲಾಭಟ್<br>ಪ್ರ. : ೧೯೮೮ |
| ❖ ಅನುಪಮಾ ಅಭಿನಂದನ | ಅಭಿನಂದನ ಗ್ರಂಥ | ಪ್ರಧಾನ ಸಂಪಾದಕರು :<br>ಬೋಳಂತಕೋಡಿ ಈಶ್ವರಭಟ್<br>ಸಹ ಸಂಪಾದಕರು :<br>ವಿ. ಬಿ. ಮೊಳೆಯಾರ ಮತ್ತು |

| | | |
|---|---|---|
| | | ವಿ. ಬಿ. ಅರ್ತಿಕಜೆ<br>ಪ್ರ : ೧೯೮೮ |
| ❖ ಶಕ್ತಿಯ ಶೋಧನೆಯಲ್ಲಿ | ಸಂಶೋಧನ<br>ಪ್ರವಾಸ ಕಥನ | ಲೇ. : ಬಿ. ಲೀಲಾಭಟ್<br>ಪ್ರ : ೧೯೮೯ |
| ❖ ಕನ್ನಡ ಕಾದಂಬರಿ ಪಿತಾಮಹ ಗುಲ್ವಾಡಿ ವೆಂಕಟರಾವ್ ಬದುಕು ಬರಹ | ಜೀವನ ಮತ್ತು ಸಾಧನೆ | ಸಂಪಾದಕರು :<br>ಸಂತೊಷ ಕುಮಾರ ಗುಲ್ವಾಡಿ<br>ಪ್ರ :: ೧೯೮೯ |
| ❖ ಸಾಹಿತ್ಯ ದೃಷ್ಟಿ | ಭಾಷಣಗಳ ಮತ್ತು ಲೇಖನಗಳ ಸಂಗ್ರಹ | ಲೇ. : ಕಯ್ಯಾರ ಕಿಞ್ಞಣ್ಣ ರೈ<br>ಪ್ರ : ೧೯೮೯ |
| ❖ ಪಡೆಯಬಲ್ಲವರಿಗೆ | ಕವನ ಸಂಗ್ರಹ | ಲೇ. : ಸುವರ್ಣ ಚಂದ್ರಶೇಖರ<br>ಪ್ರ : ೧೯೯೦ |
| ❖ ಕಾರಂತರ ಕಾದಂಬರಿಗಳು ಮಹಾರಾಷ್ಟ್ರೀಯರ ದೃಷ್ಟಿಯಲ್ಲಿ | ಮರಾಠಿಯಲ್ಲಿ ಬಂದ ವಿಮರ್ಶೆಗಳು ಅನುವಾದ | ಮೂಲ : ಡಾ। ಸುಧಾಕರ ಶಂ. ದೇಶಪಾಂಡೆ<br>ಅನುವಾದ : ವಿರೂಪಾಕ್ಷ ಕುಲಕರ್ಣಿ<br>ಪ್ರ : ೧೯೯೦ |
| ❖ ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಅಧುನೀಕರಣದ ಪ್ರಕ್ರಿಯೆ | ವಿಮರ್ಶೆ | ಲೇ. : ಟಿ.ಪಿ. ಅಶೋಕ<br>ಪ್ರ : ೧೯೯೦ |
| ❖ ಎಮ್.ಎನ್. ಕಾಮತ್ ಕೃತಿಗಳು ಸಂಪುಟ – ೧ | ಕೃತಿ ಸಂಗ್ರಹ | ಸಂ. : ಬಿ. ಲೀಲಾಭಟ್<br>ಪ್ರ : ೧೯೯೧ |
| ❖ ಕಾರಂತರ ಕಾದಂಬರಿಗಳಲ್ಲಿ ನಿಸರ್ಗ | ವಿಮರ್ಶೆ | ಲೇ. : ಪ್ರೊ. । ಎಸ್. ಅನಂತನಾರಾಯಣ<br>ಪ್ರ : ೧೯೯೧ |
| ❖ ನಮ್ಮ ಸುಬ್ಬಣ್ಣ | ಲೇಖನಗಳ ಸಂಗ್ರಹ | ಸಂಪಾದಕರು :<br>ಬೋಳಂತಕೋಡಿ ಈಶ್ವರ ಭಟ್ಟ<br>ಪ್ರ : ೧೯೯೧ |
| ❖ ಜನಪದ ಕುಣಿತಗಳು | ಪರಿಚಯ ಕೃತಿ | ಲೇ. : ಪಾಲ್ತಾಡಿ ರಾಮಕೃಷ್ಣ ಆಚಾರ್<br>ಪ್ರ : ೧೯೯೨ |
| ❖ ಶಿಕ್ಷಣ ಕಾರಂತರ ದೃಷ್ಟಿ–ಸೃಷ್ಟಿ | ವಿಮರ್ಶೆ | ಲೇ. : ಮಹಾಬಲೇಶ್ವರ ರಾವ್<br>ಪ್ರ : ೧೯೯೨ |

| | | |
|---|---|---|
| ❖ ವಿಚಾರ ಪ್ರಪಂಚ | ಲೇಖನಗಳ ಸಂಗ್ರಹ | ಲೇ.: ಸೇಡಿಯಾಪು ಕೃಷ್ಣ ಭಟ್ಟ<br>ಪ್ರ. : ೧೯೯೨ |
| ❖ ಎಮ್. ಎನ್. ಕಾಮತ್ ಕೃತಿಗಳು ಸಂಪುಟ–೨ | ಕೃತಿ ಸಂಗ್ರಹ | ಸಂಪಾದಕರು : ಬಿ. ಲೀಲಾಭಟ್<br>ಪ್ರ. : ೧೯೯೨ |
| ❖ ನೆನಪು ಸಿಹಿ – | ಅನುಭವ ಕಥನ | ಲೇ. : ಪ್ರೊ. ಎಂ. ಸೂರ್ಯನಾರಾಯಣಪ್ಪ<br>ಪ್ರ. : ೧೯೯೩ |
| ❖ ಯರ್ಮುಂಜ ರಾಮಚಂದ್ರ ಬದುಕು–ಬರಹ | ಜೀವನ ಮತ್ತು ಸಾಧನೆ | ಲೇ. : ಪ್ರೊ ವೇಣುಗೋಪಾಲ ಕಾಸರಗೋಡು<br>ಪ್ರ. : ೧೯೯೩ |
| ❖ ಪ್ರಸ್ತುತ | ಯಕ್ಷಗಾನ ವಿಮರ್ಶೆ | ಲೇ. : ಎಂ. ಪ್ರಭಾಕರ ಜೋಶಿ<br>ಪ್ರ. : ೧೯೯೩ |
| ❖ ಎಮ್.ಎನ್. ಕಾಮತ್ ಕೃತಿಗಳು ಸಂಪುಟ–೩ | ಕೃತಿ ಸಂಗ್ರಹ | ಸಂಪಾದಕರು : ಬಿ. ಲೀಲಾಭಟ್<br>ಪ್ರ. : ೧೯೯೩ |
| ❖ ಎ. ಕೆ. ರಾಮಾನುಜನ್ ನೆನಪಿನ ಸಂಪುಟ | ಲೇಖನಗಳ ಸಂಗ್ರಹ | ಸಂಪಾದಕರು : ಟಿ.ಪಿ. ಅಶೋಕ<br>ಪ್ರ. : ೧೯೯೩ |
| ❖ ನಾಡಿ ನಿರಂಜನರ ಆಯ್ದ ಪತ್ರಗಳು | | ಸಂಪಾದಕರು : ಶ್ರೀಮತಿ ತೇಜಸ್ವಿನಿ ನಿರಂಜನ<br>ಪ್ರ. : ೧೯೯೪ |
| ❖ ಬಿ.ವಿ. ಕಾರಂತ ಜೀವನ ಮತ್ತು ಸಾಧನೆ | ವ್ಯಕ್ತಿ – ಕೃತಿ | ಸಂಪಾದಕರು : ಮುರಳೀಧರ ಉಪಾಧ್ಯ<br>ಪ್ರ. : ೧೯೯೪ |
| ❖ ಎಮ್.ಎನ್. ಕಾಮತ್ ಕೃತಿಗಳು ಸಂಪುಟ–೪ | | ಸಂಗ್ರಹ ಸಂಪಾದಕರು : ಬಿ. ಲೀಲಾಭಟ್<br>ಪ್ರ. : ೧೯೯೪ |

**ಬೃಹತ್ ಗ್ರಂಥಗಳು :**

ಓದುಗರ ಬೆಂಬಲ ಮತ್ತು ವಿದ್ವಾಂಸರ ಪ್ರಶಂಸೆಗಳಿಂದ ಸ್ಫೂರ್ತಿಗೊಂಡ ಸಂಘವು ೧೯೮೬ರಲ್ಲಿ 'ನಿರಂಜನ ಅಭಿನಂದನ' ಎಂಬ ಹೆಸರಿನಿಂದ ಬಹುಮುಖ ಪ್ರತಿಭೆಯ ಸಾಹಿತಿ ನಿರಂಜನರ ಸಮಗ್ರ ಜೀವನ, ಕೃತಿ ವಿಮರ್ಶೆಯುಳ್ಳ ಬೃಹತ್ ಗ್ರಂಥ ಪ್ರಕಟಿಸುವ ಧೈರ್ಯ ಮಾಡಿತು. ಇದರ ಬೆನ್ನಿಗೇ ಲೇಖಕ ಉಗ್ರಾಣ ಮಂಗೇಶರಾಯರ ಸಮಗ್ರ ಸಾಹಿತ್ಯವನ್ನು ಉಗ್ರಾಣ-೧ ಮತ್ತು ಉಗ್ರಾಣ ೨ ಸಂಪುಟಗಳಲ್ಲಿ ಬೆಳಕಿಗೆ ತಂದು ಕನ್ನಡಿಗರಿಗೆ ಒಪ್ಪಿಸಿತು. ೧೯೮೮ರಲ್ಲಿ ೮೪ ಲೇಖಕ-ಲೇಖಕಿಯರ ಬರಹ ಗಳನ್ನೊಳಗೊಂಡ 'ಅನುಪಮಾ ಅಭಿನಂದನ' ಗ್ರಂಥ ಹೊರಬಂತು. ಸಣ್ಣ ಪುಟ್ಟ ಕೃತಿಗಳನ್ನು ಕೂಡ ಮುದ್ರಿಸಿ ಮಾರುವುದು ಕಷ್ಟವಾಗಿರುವ ಈ ದಿನಗಳಲ್ಲಿ ದೊಡ್ಡ ಬೆಲೆಯ ವೈಚಾರಿಕ ಹಿನ್ನೆಲೆಯ ಹೊತ್ತಗೆಗಳನ್ನು ಲೀಲಾಜಾಲವಾಗಿ ಉತ್ಪಾದಿಸಿ ಸಾಹಿತ್ಯಾಸಕ್ತರಿಗೆ ನೀಡಿರುವುದು ಕರ್ನಾಟಕ ಸಂಘದ ಶಕ್ತಿ ಸಾಮರ್ಥ್ಯಗಳಿಗೆ ದ್ಯೋತಕವಾಗಿದೆ.

ಉಗ್ರಾಣ ಸಂಪುಟಗಳನ್ನು ಸಂಪಾದಿಸಿಕೊಟ್ಟ ಪ್ರೊ| ಲೀಲಾಭಟ್ಟರ ವಿಶಿಷ್ಟ ಪ್ರವಾಸ ಕಥನ 'ಶಕ್ತಿಯ ಶೋಧನೆಯಲ್ಲಿ' ಹಾಗೂ ವಿವಿಧ ಲೇಖಕರ 'ಗುಲ್ವಾಡಿ ವೆಂಕಟರಾವ್ ಬದುಕು-ಬರಹ' ಕೃತಿಗಳೂ ಕರ್ನಾಟಕ ಸಂಘದ ಮೂಲಕ ಹೊರಬಂದ ಪುಸ್ತಕಗಳು, ಹಿರಿಯ ಸಾಹಿತಿ ಹಾಗೂ ಕನ್ನಡ ಹೋರಾಟಗಾರ ಕಯ್ಯಾರ ಕಿಞ್ಞಣ್ಣ ರೈಯವರ ಭಾಷಣಗಳು ಮತ್ತು ಲೇಖನಗಳ ಸಂಕಲನ 'ಸಾಹಿತ್ಯ ದೃಷ್ಟಿ' ಮುದ್ರಣಗೊಂಡಿದೆ.

ಈ ರೀತಿ ಕರ್ನಾಟಕ ಸಂಘವು ಪುತ್ತೂರಿನ ಪರಿಸರದಲ್ಲಿ ಕನ್ನಡ ಸಾಹತ್ಯದ ಬೆಳವಣಿಗೆಗೆ ಸ್ಥಳೀಯವಾಗಿ ಪ್ರೋತ್ಸಾಹ ನೀಡಿ, ಕನ್ನಡ ಸಾಹತ್ಯವನ್ನು ಬೆಳೆಸಿಕೊಂಡು ಬಂದಿದೆ.

**೬.೧.೩. ಕನ್ನಡ ಸಂಘ ಸಂತ ಫಿಲೋಮಿನಾ ಕಾಲೇಜು, ಪುತ್ತೂರು :**

ಸಂತ ಫಿಲೋಮಿನಾ ಕಾಲೇಜಿನ ಹಾಗೂ ಪರಿಸರದ ಕನ್ನಡಾಭಿಮಾನಿಗಳಿಗೆ ಕ್ರಿಯಾತ್ಮಕ ಚಟುವಟಿಕೆ ನಡೆಸಲು ಸೂಕ್ತ ವೇದಿಕೆಯೊಂದರ ಅವಶ್ಯಕತೆಯನ್ನು ಮನಗಂಡು ೧೯೭೫ರ ನವೆಂಬರ್ ತಿಂಗಳಲ್ಲಿ ಕನ್ನಡ ಸಂಘವನ್ನು ರೂಪುಗೊಳಿಸಲಾಯಿತು[೩]. ಪ್ರಾರಂಭದಲ್ಲಿ ಅದು ವಿದ್ಯಾರ್ಥಿ, ವಿದ್ಯಾರ್ಥಿನಿಯರಲ್ಲಿರುವ ಭಾಷಣ, ಲೇಖನ, ನಟನೆ, ಹಾಡುಗಾರಿಕೆ ಮುಂತಾದ ಪ್ರತಿಭೆಗಳನ್ನು ಗುರುತಿಸಿ ಪ್ರೋತ್ಸಾಹಿಸುವ, ಸದಸ್ಯರಿಂದ ರಚಿತವಾದ ಯಾವುದಾದರೊಂದು ಕಿರು ಹೊತ್ತಗೆಯನ್ನು ಪ್ರತಿವರ್ಷ ಪ್ರಕಟಿಸುವ, ಕನ್ನಡ ಸಾಹಿತ್ಯ, ಸಂಸ್ಕೃತಿ-ಕಲೆಗಳಲ್ಲಿ ಪರಿಣತರಾದವರನ್ನು ಬರಮಾಡಿಸಿ ಉಪನ್ಯಾಸ-ವಿಚಾರ- ಸಂಕಿರಣ-ಸಮ್ಮೇಳನಗಳನ್ನು ಏರ್ಪಡಿಸುವ ಮತ್ತು ಕನ್ನಡದ ಕವಿ-ಲೇಖಕ-ಕಲಾವಿದರನ್ನು ಸಂಮಾನಿಸುವ ಉದ್ದೇಶಗಳನ್ನು ಹೊಂದಿತ್ತು. ಅಲ್ಲದೆ ಹಳೆ

ವಿದ್ಯಾರ್ಥಿಗಳು ಸಂಘದ ಸದಸ್ಯರಾಗಿ ಕಾಲೇಜಿನೊಂದಿಗೆ ನಿರಂತರ ಸಂಬಂಧವನ್ನು ಹೊಂದುವಂತೆ ಮಾಡುವ ಹಾಗೂ ರಕ್ಷಕರ ಅಭಿಮಾನಿಗಳ ಗಮನವನ್ನು ಮತ್ತೆ ಸಂಸ್ಥೆಯ ಕಡೆಗೆ ಸೆಳೆಯುವ ಗುರಿಯನ್ನು ಇಟ್ಟುಕೊಂಡಿತ್ತು .

ಸಂಘವನ್ನು ಕಟ್ಟಿ ಬೆಳೆಸಿದ ಸಂಸ್ಥಾಪಕರಿಗೆ ಆ ಮೊದಲ ದಿನದ ನೆನಪು ಇನ್ನೂ ಹಸುರಾಗಿಯೇ ಇದೆ. ಆಗ ಕಾಲೇಜಿನ ಪ್ರಿನ್ಸಿಪಾಲರಾಗಿದ್ದವರು. ರೆ। ಫಾ। ಹೆನ್ರಿ ಕ್ಯಾಸ್ಟಲಿನೋ ಅವರು. ಕ್ರೈಸ್ತ ಸಂಸ್ಥೆಯಾದರೂ ಕನ್ನಡ ಸಂಘದ ಸಂಚಾಲಕರಾಗಿ ಇವರು ಮೊತ್ತಮೊದಲ ಸ್ಥಾಪಕ ಅಧ್ಯಕ್ಷರಾದ ವಿ. ಬಿ. ಮೊಳೆಯಾರರ ಬೆನ್ನಿಗೆ ನಿಂತರು. ಆಗ ಪಿ. ಎಂ.ವಿ. ಭಟ್ಟರು ಕಾರ್ಯದರ್ಶಿಯಾಗಿದ್ದರೆ, ಎಚ್. ನಾರಾಯಣ ರೈ, ವೈ. ಕೇಶವಯ್ಯ ಮತ್ತು ಕು। ಪ್ರಸನ್ನ ಪದಾಧಿಕಾರಿಗಳಾಗಿದ್ದರು[೪].

**ಸಂಘದ ಚಟುವಟಿಕೆಗಳು :**

ಕಳೆದ ಮೂವತ್ತೈದು ವರ್ಷಗಳಿಂದ ಕನ್ನಡಸಂಘ ತನ್ನ ಉದ್ದೇಶಿತ ಗುರಿಯಂತೆ ವೈವಿಧ್ಯಮಯವಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಬಂದಿದೆ. ಈ ಸಂಘ ಕಾಲೇಜಿಗಷ್ಟೇ ಸೀಮಿತ ಗೊಳಿಸದೆ ಮಹತ್ವದ ಕನ್ನಡಪರ ವೇದಿಕೆಯಾಗಿ ನಾಡುನುಡಿಗೆ, ನೇರವಾಗಿ ಸ್ಪಂದಿಸಿದೆ. ಭಾವಗೀತ, ತರಬೇತಿ, ಯಕ್ಷಗಾನ ತರಬೇತಿ, ನೃತ್ಯ ನಾಟಕ ಸಂಗೀತ ತರಬೇತಿ, ಭಾಷಣ ಕಲೆಗೆ ಪ್ರೋತ್ಸಾಹ, ಸಂಮಾನ, ಗೋಷ್ಠಿ – ಹೀಗೆ ಅನೇಕ ಬಗೆಗಳಲ್ಲಿ ನಿರಂತರ ಸ್ಪಂದಿಸುತ್ತಾ ಬಂದಿದೆ.

**ಕಲಾ ತರಬೇತಿ :** ರಾಗ ತಾಳದ ಪರಿಚಯವಿಲ್ಲದೆ ಚಲನಚಿತ್ರಗಳ ಹಾಡನ್ನು ಒಟ್ಟಾರೆ ಗುಣಿಗುಣಿಸುವ ವಿದ್ಯಾರ್ಥಿಗಳಲ್ಲಿ ಭಾವಗೀತೆಗಳ ಸುಸೂತ್ರ ಹಾಡುಗಾರಿಕೆಯನ್ನು ಕಲಿಸುವ ಉದ್ದೇಶದಿಂದ ಸಂಘ ಭಾವಗೀತ ತರಬೇತಿ ಶಿಬಿರವನ್ನು ಅನೇಕ ಬಾರಿ ಏರ್ಪಡಿಸಿತ್ತು. ಆಸಕ್ತಿಯುಳ್ಳ ಹಾಡುವ ವಿದ್ಯಾರ್ಥಿಗಳನ್ನು ಒಟ್ಟಾಗಿಸಿ ನಾಡಿನ ಪ್ರಸಿದ್ಧ ಕವಿತಾವಾಚಕರಾದ ಶ್ರೀ ಬೆಂಡರವಾಡಿ ಸುಬ್ರಹ್ಮಣ್ಯ ಶರ್ಮ ಅವರಿಂದ ತರಬೇತಿ ನೀಡಲಾಯಿತು. ನಿರೀಕ್ಷೆಯಂತೆ ಒಳ್ಳೆಯ ಪ್ರತಿಕ್ರಿಯೆ ಪ್ರಕಟವಾಗಿ ತರಬೇತಿ ಪಡೆದ ಅನೇಕ ವಿದ್ಯಾರ್ಥಿಗಳು ಸ್ಥಳೀಯ ರಾಜ್ಯೋತ್ಸವ, ನಾಡಹಬ್ಬ, ಸ್ವಾತಂತ್ರ್ಯೋತ್ಸವ ಸಮಾರಂಭಗಳಲ್ಲಿ ಹಾಡ ತೊಡಗಿದರು. ಜೊತೆಗೆ ಪ್ರತ್ಯೇಕ ರಸಮಂಜರಿ ಕಾರ್ಯಕ್ರಮ ಕೊಡುವಷ್ಟರ ಮಟ್ಟಿಗೆ ಹಾಡುವಲ್ಲಿ ಪ್ರಾವೀಣ್ಯವನ್ನು ಗಳಿಸಿದ ವಿದ್ಯಾರ್ಥಿಗಳು ಸ್ಥಳೀಯ ಹಂತದಲ್ಲಿ ಜನಪ್ರಿಯತೆಯನ್ನು ಪಡೆದರು.

ಪ್ರತಿವರ್ಷ ಕನ್ನಡ ಸಂಘ 'ಕಾಲೇಜು ಡೇ' ಸಂದರ್ಭದಲ್ಲಿ ತನ್ನ ವಾರ್ಷಿಕೋತ್ಸವವನ್ನು ಪ್ರತ್ಯೇಕವಾಗಿ ಆಚರಿಸುವುದರೊಂದಿಗೆ ಆ ಸಂದರ್ಭದಲ್ಲೇ ವಿದ್ಯಾರ್ಥಿಗಳಿಗೆ ಭಾವಗೀತ, ಚಿತ್ರಗೀತ, ಏಕಪಾತ್ರಾಭಿನಯ, ಪ್ರಬಂಧ, ಛದ್ಮವೇಷ, ರಂಗವಲ್ಲಿ, ಹೂದಾನಿ ವಿನ್ಯಾಸ ಮೊದಲಾದ ಸ್ಪರ್ಧೆಗಳನ್ನು ನಡೆಸಿ ಬಹುಮಾನ ನೀಡಿ ಪ್ರೋತ್ಸಾಹಿಸುತಿತ್ತು[೫].

**ಯಕ್ಷಗಾನ ತರಬೇತಿ** : ಜಿಲ್ಲೆಯ ಅತ್ಯಂತ ಜನಪ್ರಿಯ ಕಲಾ ಮಾಧ್ಯಮವಾದ ಯಕ್ಷಗಾನದ ನೃತ್ಯ-ಅಭಿನಯಗಳಲ್ಲಿ ವಿದ್ಯಾರ್ಥಿಗಳಿಗೆ ತರಬೇತಿ ನೀಡಿ ಪ್ರದರ್ಶನಗಳಿಗೆ ಅವಕಾಶ ಕಲ್ಪಸುವುದಕ್ಕಾಗಿ ಕನ್ನಡ ಸಂಘವು ಅವಕಾಶ ಕಲ್ಪಿಸಿದೆ[೬]. ಯಕ್ಷಗಾನದ ಪರಂಪರೆಯ ವೈಶಿಷ್ಟ್ಯವನ್ನು ಉಳಿಸಿಕೊಂಡು ಬರುವುದು ಹವ್ಯಾಸಿ ತಂಡಗಳಿಂದ ಮಾತ್ರ ಸಾಧ್ಯ ಎಂದು ಮನಗಂಡ ಕನ್ನಡ ಸಂಘ, ಯಕ್ಷಗಾನದಲ್ಲಿ ಸಾಕಷ್ಟು ಅಭ್ಯಾಸ-ಸಂಶೋಧನೆ ನಡೆಸಿದ ತರುಣ ಶ್ರೀ ಸತ್ಯಶಂಕರ ಬೊಳ್ಳಾವ ಅವರು ನಿರ್ದೇಶಕರಾಗಿ ತರಬೇತಿ ಕೊಡಲು ಮುಂದೆ ಬಂದರು. ಕಾಲೇಜಿನ ವಾರ್ಷಿಕೋತ್ಸವ ಸಂದರ್ಭಗಳಲ್ಲೂ ಪ್ರಗತಿ ಪಂಥದ ದ್ವಿತೀಯ ಅಖಿಲ ಕರ್ನಾಟಕ ಸಮ್ಮೇಳನ (ಪುತ್ತೂರು) ಸಂದರ್ಭದಲ್ಲೂ ತರಬೇತಿ ಕೇಂದ್ರದ ವಿದ್ಯಾರ್ಥಿ ಗಳು ಬೇರೆ ಬೇರೆ ಪ್ರಸಂಗಗಳನ್ನು ಸಮರ್ಥವಾಗಿ ಅಭಿನಯಿಸಿದರು.

**ನೃತ್ಯ, ನಾಟಕ, ಸಂಗೀತ** : ಸದಸ್ಯರಿಗೆ ಮನೋರಂಜನೆ ಒದಗಿಸುವುದರೊಂದಿಗೆ ಎಳೆಯ ಹಾಗೂ ಯುವ ಕಲಾವಿದರಿಗೆ ಪ್ರೋತ್ಸಾಹ ಸ್ಫೂರ್ತಿ ನೀಡುವ ಉದ್ದೇಶದಿಂದ ಕನ್ನಡ ಸಂಘವು ನೃತ್ಯ, ನಾಟಕ ಮತ್ತು ನಾನಾ ಬಗೆಯ ಸಂಗೀತಾತ್ಮಕ ಚಟುವಟಿಕೆಗಳಿಗೆ ಆಸ್ಪದ ನೀಡುತ್ತಾ ಬಂದಿದೆ. ಕೋಟಿಕಾರಿನ ನಾಟ್ಯಾಚಾರ್ಯ ಶ್ರೀ ಮೋಹನ ಕುಮಾರರ ಶಿಷ್ಯೆಯರಾದ ಕು। ರಾಜಶ್ರೀ, ಕು। ವೈಜಯಂತಿ ಮತ್ತು ಕು। ಸುಜಾತ ಇವರು ನಡೆಸಿಕೊಟ್ಟ ಶಾಸ್ತ್ರೀಯ ಭರತನಾಟ್ಯ ಪ್ರದರ್ಶನ ಸ್ಮರಣೀಯವಾಗಿದೆ. ಮಕ್ಕಳ ವರ್ಷದ ನೆನಪಿಗಾಗಿ ಸಂಯೋಜಿಸಲಾದ ಸಂತ ಕ್ಸೇವಿಯರ್ ಮತ್ತು ಲಿಟ್ಲ್ ಫ್ಲವರ್ ಶಾಲೆಗಳ ಹಾಗೂ ವಿಶ್ವಕಲಾನಿಕೇತನದ ಕಿರಿಯರ ನೃತ್ಯ ವೈವಿಧ್ಯ ಪ್ರೇಕ್ಷಕರಿಗೆ ಖುಷಿ ನೀಡಿದೆ. ಕಾಲೇಜಿನ ಪ್ರಾಧ್ಯಾಪಕರಾದ ಎಂ.ಎಲ್. ಭಟ್ ಹಾಗೂ ಎಂ. ದತ್ತಾತ್ರೇಯರಾವ್ ಸ್ವತಃ ಶಾಸ್ತ್ರೀಯ ಸಂಗೀತವನ್ನು ಪ್ರಸ್ತುತಪಡಿಸಿ ದುದಲ್ಲದೆ ಆಸಕ್ತ ವಿದ್ಯಾರ್ಥಿಗಳಿಗೂ ಹೀಗೆ ಗಾನ ವೇದಿಕೆಯೇರುವ ಅವಕಾಶ ಹಲವು ಬಾರಿ ದೊರೆತಿದೆ. ವಿದ್ಯಾರ್ಥಿ ವೃಂದದವರೇ ಭಾಗವಹಿಸಿದ 'ಕರ್ಣಾವಸಾನ' ತಾಳಮದ್ದಳೆ ಇನ್ನೊಂದು ವಿಶೇಷ ಕಾರ್ಯಕ್ರಮ[೭].

**ಭಾಷಣ ಕಲೆ** : ವಿದ್ಯಾರ್ಥಿ-ವಿದ್ಯಾರ್ಥಿನಿಯರಲ್ಲಿ ಮಾತುಗಾರಿಕೆಯ ಕಲೆಯನ್ನು ರೂಢಿಸಿ ಕೊಳ್ಳುವ ಸಲುವಾಗಿ ಸಂಘವು ಸಾಕಷ್ಟು ಅವಕಾಶಗಳನ್ನು ಒದಗಿಸುತ್ತಿದೆ. ಇದಕ್ಕಾಗಿ ಭಾಷಣ ತರಬೇತಿ, ಭಾಷಣಸ್ಪರ್ಧೆ, ಚರ್ಚಾಗೋಷ್ಠಿ, ಸಾಹಿತ್ಯ ಶಿಬಿರ, ವಿಚಾರ ಸಂಕಿರಣ, ಕೃತಿ ವಿಮರ್ಶೆಗಳು

ಸೇರಿವೆ. ಕನ್ನಡ ಸಂಘದ ಸದಸ್ಯರು ಜಿಲ್ಲಾಮಟ್ಟದ ಹಲವು ಸ್ಪರ್ಧೆಗಳಲ್ಲಿ ಭಾಗವಹಿಸಿ ಬಹುಮಾನಗಳನ್ನು ಗೆದ್ದುಕೊಂಡಿರುವುದು ಈ ಬಗೆಯ ಕಾರ್ಯಕ್ರಮಗಳ ಸಾಮರ್ಥ್ಯಕ್ಕೆ ಸಾಕ್ಷಿಯಾಗಿದೆ[೮].

ಸಂಘವು ನಡೆಸುತ್ತಿರುವ ಶ್ರೀ ಶೇಣಿ ಗೋಪಾಲಕೃಷ್ಣ ಭಟ್ ದತ್ತಿನಿಧಿ ಅಂತರ ಕಾಲೇಜು ಭಾಷಣ ಸ್ಪರ್ಧೆಯು ಇಡೀ ಮಂಗಳೂರು ವಿಶ್ವವಿದ್ಯಾನಿಲಯ ಹಾಗೂ ಕಾಸರಗೋಡು ಪ್ರದೇಶದ ವಿದ್ಯಾರ್ಥಿ ಗಳಿಗೆ ಪ್ರತಿವರ್ಷ ಅತ್ಯುತ್ತಮ ಅವಕಾಶವನ್ನು ನೀಡುತ್ತಾ ಬಂದಿದೆ. ಕೊಡಗು, ದಕ್ಷಿಣಕನ್ನಡ, ಉಡುಪಿ, ಕಾಸರಗೋಡಿನ ಅನೇಕ ಪ್ರತಿಭಾವಂತ ವಿದ್ಯಾರ್ಥಿಗಳು ಈ ಸ್ಪರ್ಧೆಯಲ್ಲಿ ಬಹುಮಾನಗಳನ್ನು ಗಳಿಸಿದ್ದಾರೆ.

**ಶ್ರೀಶೇಣಿ ಸಂಮಾನ :** ಕನ್ನಡ ಸಂಘದ ವಿಶೇಷ ಕಾರ್ಯಕ್ರಮಗಳಲ್ಲಿ ಬಹುಕಾಲ ಅಭಿಮಾನಿಗಳ ಸ್ಮೃತಿಪಟಲದಲ್ಲಿ ಉಳಿಯುವಂಥದ್ದು ಯಕ್ಷರಂಗದ ದಿಗ್ಗಜರುಗಳಲ್ಲಿ ಒಬ್ಬರಾದ ಶ್ರೀ ಶೇಣಿ ಗೋಪಾಲಕೃಷ್ಣ ಭಟ್ಟರ ಸಂಮಾನ್ (೨೪-೦೧-೧೯೮೧). 'ಯಕ್ಷಗಾನದ ಪರಂಪರೆಯ ಹೆಸರಿನಲ್ಲಿ ನಡೆದು ಬಂದಿರುವುದು ಎಲ್ಲವೂ ಸ್ವೀಕಾರಾರ್ಹ ಎಂದು ಒಪ್ಪಲು ಸಾಧ್ಯವಾಗದು. ಐದು ದಶಕಗಳ ಹಿಂದಿನ ಯಕ್ಷಗಾನರಂಗ ಭೂಮಿಯ ಸ್ವರೂಪವನ್ನು ಗಮನಿಸಿದರೆ ತಿಳಿಯುವುದು. ಯಕ್ಷಗಾನ ಉಳಿಯಬೇಕು, ಬೆಳೆಯಬೇಕು ಎಂಬುದಾಗಿ ಪ್ರಾಮಾಣಿಕ ಕಾಳಜಿಯುಳ್ಳ ಕಲಾವಿದರು, ವಿಮರ್ಶಕರು ಮತ್ತು ಟೀಕಾಕಾರರು ತಮ್ಮ- ತಮ್ಮಷ್ಟಕ್ಕೆ ಏನನ್ನಾದರೂ ಹೇಳುವ ಬದಲು ಎಲ್ಲರೂ ಸೇರಿ ಚರ್ಚಿಸಿ ಅದರ ರೂಪ ನಿಷ್ಕರ್ಷೆ ಮಾಡ ಬೇಕಾಗಿದೆ' ಎಂದು ಸಂಮಾನಿತರಾದ ಶೇಣಿಯವರು ಅಭಿಪ್ರಾಯಪಟ್ಟರು.

**ಚೈತನ್ಯ ಗ್ರಂಥಮಾಲೆ :** ಕನ್ನಡ ಸಂಘದ ಅತಿ ಮಹತ್ವಪೂರ್ಣ ಕನ್ನಡಪರ ಸಾಹಸಗಳಲ್ಲಿ ಗ್ರಂಥ ಪ್ರಕಟಣೆಯೂ ಒಂದು. ಈ ಮಾಲಿಕೆಯಲ್ಲಿ ಸಂಘ ಈವರೆಗೆ ೨೨ ಕೃತಿಗಳನ್ನು ಪ್ರಕಟಿಸಿದೆ. ಈ ಮಾಲಿಕೆಯ ಮೊದಲ ಕೃತಿ ೧೯೭೬ ರಲ್ಲಿ ಪ್ರಕಟವಾದ ವಿವಿಧ ಕವಿಗಳ 'ಚೈತನ್ಯ' ಕವನ ಸಂಕಲನ. ಮೂವತ್ತು ಕವಿತೆಳಿರುವ ಈ ಸಂಕಲನದಲ್ಲಿ ನಾಡಿನ ಅನೇಕ ಹಿರಿಯ ಕವಿಗಳೊಂದಿಗೆ ಆಗ ತಾನೆ ಕಾಲೇಜಿನಲ್ಲಿ ಪಿ.ಯು.ಸಿ. ಪದವಿ ತರಗತಿಗಳಲ್ಲಿ ಓದುತ್ತಿದ್ದ ಎಳೆಯ ಕವಿಗಳ ಕವಿತೆಗಳೂ ಸೇರಿವೆ. ಈ ಸಂಕಲನದ ಮೂಲಕ ಬೆಳಕಿಗೆ ಬಂದ ಬಾಲ ಸುಬ್ರಹ್ಮಣ್ಯ ಕಂಜರ್ಪಣೆ, ಸುರೇಶ್ ಕಂಜರ್ಪಣೆ, ಮೊದಲಾದವರು ಇಂದು ಪ್ರತಿಭಾವಂತ ಕವಿಗಳಾಗಿ ಬರಹಗಾರರಾಗಿ ಹೊರಹೊಮ್ಮಿದ್ದಾರೆ.

**ಚೈತನ್ಯ-೨ :** ದಕ್ಷಿಣ ಕನ್ನಡದ ಹಲವಾರು ಉದಯೋನ್ಮುಖ ಬರಹಗಾರರ ಕಥೆಗಳನ್ನು ಒಳಗೊಂಡ ಸಂಕಲನ. ಭಾರತೀಸುತರ ನೆನಪಿಗೆ ಅರ್ಪಿತವಾದ ಈ ಕೃತಿಯ ಕತೆಗಳು ಬದುಕಿನ

ಅನಂತ ಮುಖಗಳಲ್ಲಿ ಕೆಲವನ್ನು ಅನಾವರಣಗೊಳಿಸುತ್ತದೆ. ಸಾಂಪ್ರದಾಯಿಕ, ಕೌಟುಂಬಿಕ ಮತ್ತು ಹೊಸ ತಂತ್ರಗಳ ಕತೆಗಳನ್ನು ಇಲ್ಲಿ ಕಾಣಬಹುದು. ಶಂಪಾ ದೈತೋಟ, ಎ.ಪಿ. ಮಾಲತಿ, ಶ್ರೀ ಪಡ್ರೆ, ಬೊಳುವಾರು ಮಹಮ್ಮದ್ ಕುಂಞಿ, ಜಿ.ಎಸ್. ಉಬರಡ್ಕ ಮೊದಲಾದವರ ಕಥೆಗಳು ಈ ಸಂಕಲನದಲ್ಲಿವೆ. ಕತೆಯ ಆಯ್ಕೆಯಲ್ಲಿ ಸಂಪಾದಕರು ಯಶಸ್ವಿಯಾಗಿದ್ದಾರೆ. ನಿರೂಪಣೆ ಮತ್ತು ಸಂಭಾಷಣೆಗಳಲ್ಲಿ ಬಹುತೇಕ ಒಂದೇ ಜಿಲ್ಲೆಯವರು ಬರೆದಿರುವ ಇಲ್ಲಿಯ ಕಥೆಗಳಲ್ಲಿ ವೈವಿಧ್ಯವನ್ನೂ ಕಾಣಬಹುದು.

**ಚೈತನ್ಯ – ೩** : ಒಂಬತ್ತು ಮಂದಿ ಹಿರಿಯ ವಿದ್ವಾಂಸರ ವೈಚಾರಿಕ ಲೇಖನಗಳ ಸಂಕಲನ 'ಒಂಬತ್ತು ಪ್ರಬಂಧಗಳು' ವಿಷಯ ವೈವಿಧ್ಯ, ವಿಶ್ಲೇಷಣಾತ್ಮಕ ಗುಣ, ವಿಮರ್ಶೆ, ನಿರೂಪಣಾ ವೈಖರಿಗಳಿಂದ ಇಲ್ಲಿಯ ಪ್ರಬಂಧಗಳು ತಮ್ಮದೇ ಆದ ವೈಶಿಷ್ಟ್ಯಗಳನ್ನು ಪಡೆದಿವೆ. ಎಂ. ರಾಜ ಗೋಪಾಲಚಾರ್ಯ, ಕೃ.ಭ. ಪೆರ್ಲ, ಬಡೆಕ್ಕಿಲ ರಾಮಭಟ್, ತಾಳ್ತಜೆ ವಸಂತ ಕುಮಾರ್, ಕೆ. ಕುಶಾಲಪ್ಪ ಗೌಡ, ಎಂ. ರಾಮಚಂದ್ರ, ಪಾಲ್ತಾಡಿ ರಾಮಕೃಷ್ಣ ಆಚಾರ್, ಸುಬ್ರಾಯ ಚೊಕ್ಕಾಡಿ, ಪಿ.ಎಂ.ವಿ. ಭಟ್ ಅವರ ಲೇಖನಗಳು ಇಲ್ಲಿವೆ.

**ಚೈತನ್ಯ – ೪ 'ತುಣುಕು-ತುಳುಕು'** : ಚೈತನ್ಯ ಮಾಲಿಕೆಯ ನಾಲ್ಕನೆಯ ಕೃತಿ. ಇದು ಚುಟುಕು, ಮುಕ್ತಕ, ಹನಿಕವನ, ತ್ರಿಪದಿಗಳ ಸಂಕಲನ, ಈ ಕೃತಿಯ ಉದ್ದೇಶವನ್ನು ಸಂಪಾದಕರು ಹೀಗೆ ದಾಖಲಿಸಿದ್ದಾರೆ. ಅನಂತ ಮುಖವಾದ ಬದುಕನ್ನು ತನ್ನದೇ ಮಿತಿಯಲ್ಲಿ ಗಮನಿಸುವ ಬೆಳಕಿಂಡಿಗಳು ಈ ಕೃತಿಯಲ್ಲಿವೆ. ಇಲ್ಲಿಯ ಕಿರಿಯ ಸಾಲುಗಳಲ್ಲಿ ಕೆಣಕು, ಮೊನಚು, ವ್ಯಂಗ್ಯ, ಹಾಸ್ಯಗಳ ವೈವಿದ್ಯಗಳೊಂದಿಗೆ ಆಳಕ್ಕೆ ಇಳಿಯುವ, ಎತ್ತರಕ್ಕೇರುವ ಯತ್ನವೂ ನಡೆದಿದೆ' ಬಹುಶಃ ಇದರಿಂದಾಗಿಯೇ ಇದೊಂದು ಹೊಸಬಗೆಯ ಸಂಕಲನವಾಗಿ ಗಾತ್ರದಲ್ಲಿ ಸಣ್ಣದಾದರೂ ಸಾಹಿತ್ಯಾಸಕ್ತರ ಗಮನ ಸೆಳೆದಿದೆ.

**ಚೈತನ್ಯ – ೫ ಅಪರೂಪ** : ಶಾಸ್ತ್ರಗಳನ್ನು ಸಾಹಿತ್ಯದ ರುಚಿಗೆ ಅಳವಡಿಸಿದ ಅಪರೂಪದ ಕೃತಿಯೆಂದು ಹೆಸರು ಪಡೆದ 'ಅಪರೂಪ' ಐತಿಹಾಸಿಕ ವ್ಯಕ್ತಿ ಚಿತ್ರಗಳು ಮತ್ತು ಪದ್ಧತಿಗಳನ್ನು ಕುರಿತು ಇದೆ. ಈ ಪುಸ್ತಕ ಬರೆದವರು ವಿ.ಬಿ. ಅರ್ತಿಕಜೆ ಮತ್ತು ಡಾ। ಬಿ. ಸುರೇಂದ್ರ ರಾವ್ ಇತಿಹಾಸಕ್ಕೆ ಸೇರಿದ ಹೂಣ ದೊರೆ ಅಟ್ಟಿಲ, ನೆಪೋಲಿಯನ್, ಹಿಟ್ಲರ್ ಇವರ ಪೌರುಷ ಮತ್ತು ದೌರ್ಬಲ್ಯಗಳನ್ನು ವಿಕಾರ ಮತ್ತು ವಿಚಾರಗಳನ್ನು, ಅಮಾನವೀಯವಾದ ಸತೀ ಸಹಗಮನ, ಅಮಾನುಷ ದಂಡನೆಗಳನ್ನು ಇತಿಹಾಸದ ಆಧಾರದಿಂದ ಇಲ್ಲಿ ಚಿತ್ರಿಸಲಾಗಿದೆ. ಹೆಸರಿನಂತೆ ಇದೊಂದು ಅಪರೂಪದ ಕೃತಿ.

**ಚೈತನ್ಯ – ೬ :** ಮದರ್ ತೆರೇಸಾ (೧೯೮೧) : ಮಾನವೀಯ ಸೇವಾತತ್ಪರತೆಗಾಗಿ ನೋಬೆಲ್ ಬಹುಮಾನ ಪಡೆದ ಮಹಾಮಹಿಳೆ ಮದರ್ ತೆರೇಸಾ ಕುರಿತು ವಿ.ಬಿ. ಮೊಳೆಯಾರ, ಬೋಳಂತಕೋಡಿ ಈಶ್ವರಭಟ್ಟ ಮತ್ತು ಹರಿನಾರಾಯಣ ಮಾಡಾವು ರಚಿಸಿದ ಕೃತಿ 'ಮದರ್ ತೆರೇಸಾ. ಈ ಕೃತಿಯು ಕೇರಳದ ಕಲ್ಲಿಕೋಟೆ ವಿಶ್ವವಿದ್ಯಾನಿಲಯದ ಪದವಿಪೂರ್ವ ತರಗತಿಗೆ ಪಠ್ಯವಾಗಿತ್ತು. ಈ ಕೃತಿಯ ಒಂದು ಭಾಗ (ಬಾಲ್ಯದ ದಿನಗಳು) ಕೇರಳ ಪಾಠಾವಳಿ ೧೦ನೆ ತರಗತಿಯ ಪಠ್ಯದಲ್ಲಿ ಸೇರ್ಪಡೆ ಗೊಂಡಿದೆ.

**ಚೈತನ್ಯ – ೭ :** ಸುಖದ ಹಾದಿ (೧೯೮೧) ಕಾದಂಬರಿಗಾರ್ತಿ ಎ.ಪಿ. ಮಾಲತಿ ಅವರ ಚಿಂತನೆಗಳ ಸಂಕಲನ 'ಸುಖದ ಹಾದಿ' ಜೀವನ ಸಂಕೀರ್ಣತೆಯ ನಡುವೆ ಅಸ್ಥಿರ ಮನಸ್ಸಿನಿಂದ ಒದ್ದಾಡುವ ಮನಸ್ಸಿಗೆ ಸುಖದ ಸೂತ್ರಗಳನ್ನು ಕಲ್ಪಿಸಿ ಸಾಂತ್ವನ ಹೇಳುವ ಕೃತಿ. ಒಂಟಿತನ, ನೋವು ಕೀಳರಿಮೆಯಿಂದ ನರಳಿ ಸುಖದ ಹಾದಿಗೆ ವಿಮುಖವಾದ ಮನಸ್ಸಿಗೆ ಇಲ್ಲಿ ಚೇತೋಹಾರಿ ನೆಮ್ಮದಿಯ ಸಲಹೆಗಳು ಸಿಗುತ್ತವೆ. ಈ ಕೃತಿಗೆ ರಾಜ್ಯ ಸಾಹಿತ್ಯ ಅಕಾಡಮಿಯ ಬಹುಮಾನ ದೊರಕಿದೆ.

**ಚೈತನ್ಯ – ೮ :** ಅಂಗ–ರಾಗ (೧೯೮೨) 'ಅಂಗರಾಗ' ಪ್ರೊ. ಹರಿನಾರಾಯಣ ಮಾಡಾವು ಅವರ ಮೊದಲ ಕವನಸಂಕಲನ 'ಪ್ರೇಮ ಪ್ರಣಯ' ಪ್ರೇರಿತ ಬಹುಪಾಲು ಕವಿತೆಗಳು ಅನನ್ಯ. ತಾರುಣ್ಯದ ಸಂಭ್ರಮದೊಂದಿಗೆ ವಿಚಾರವೂ ತುಂಬಿದೆ.

**ಚೈತನ್ಯ – ೯ :** ಜಿ.ಎನ್. ಲಕ್ಷ್ಮಣ ಪೈಯವರ ಬದುಕು ಬರಹ (೧೯೮೮) ಪುತ್ತೂರಿನಲ್ಲಿ ಹುಟ್ಟಿ ಬೆಳೆದ ಜನಪ್ರಿಯ ಬಾಲಸಾಹಿತಿ ಜಿ.ಎನ್. ಲಕ್ಷ್ಮಣ ಪೈ ಇವರ ಬದುಕು ಬರಹಗಳ ಬಗ್ಗೆ ಅವರ ಪುತ್ರ ಜಿ. ವರದರಾಯ ಪೈ ಅವರು ಬರೆದ ಕೃತಿಯೇ 'ಜಿ.ಎನ್. ಲಕ್ಷ್ಮಣ ಪೈ ಯವರ ಬದುಕು ಬರೆಹ'

**ಚೈತನ್ಯ – ೧೦ :** ಮಾರಿಬಲೆ ಬೀಸಿತ್ತು (೧೯೮೪) ಹತ್ತನೆಯ ವಾರ್ಷಿಕ ಕೃತಿಯಾಗಿ ಮೂಡಿಬಂದ ಪಡಾರು ಮಹಾಬಲೇಶ್ವರ ಭಟ್ಟರ 'ಮಾರಿಬಲೆ ಬೀಸಿತ್ತು' ಹೃದಯಂಗಮ ಕತೆಗಳ ಚಿಕ್ಕ ಸಂಕಲನ, ಪಡಾರು ಅವರು ಸುಮಾರು ಮೂರು ದಶಕಗಳ ಹಿಂದೆ ಅನೇಕ ಉತ್ತಮ ಕತೆಗಳನ್ನು ಕನ್ನಡಕ್ಕೆ ನೀಡಿದ ಕಥೆಗಾರರು. ಅವರು ಬರೆದ ಕತೆಗಳಲ್ಲಿ ವಸ್ತುವಿನ ದೃಷ್ಟಿಯಿಂದ ಉತ್ತಮವಾದ ಏಳು ಕತೆಗಳು ಇಲ್ಲಿ ಸಂಕಲನಗೊಂಡಿವೆ.

**ಚೈತನ್ಯ – ೧೧ :** ಯುರೋಪ್ ನೆನಪುಗಳು' (ಪ್ರವಾಸ ಕಥನ ೧೯೮೫) ಭಾರತ – ಗ್ರೀಸ್ ದೇಶಗಳ ನಡುವಿನ ಸಾಂಸ್ಕೃತಿಕ ವಿನಿಮಯ ಕಾರ್ಯಕ್ರಮದನ್ವಯ ೧೯೭೭ರಲ್ಲಿ ಗ್ರೀಸ್ ದೇಶಕ್ಕೆ ತೆರಳಿ ಅಲ್ಲಿ ಸುಮಾರು ಒಂದೂವರೆ ವರ್ಷಗಳ ಕಾಲ ತಂಗಿ, ಅಲ್ಲಿನ ಇತಿಹಾಸ, ಪ್ರಾಚೀನ ಮತ್ತು ಅರ್ವಾಚೀನ ಸಂಸ್ಕೃತಿಯ ವಿವಿಧ ಮುಖಗಳನ್ನು ಅರಿತು ದಾಖಲಿಸಿದ ಪ್ರವಾಸಕಥನವೇ

'ಯುರೋಪ್ ನೆನಪು' ಇದು ಪುಂಡಿಕಾಯಿ ಗಣಪಯ್ಯ ಭಟ್ ಅವರ ಚೊಚ್ಚಲ ಕೃತಿ. ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ ಪಡೆದ ಈ ಕೃತಿ ಕಲ್ಲಿಕೋಟೆ ವಿ.ವಿ.ಯ ಪದವಿ ತರಗತಿಗಳಿಗೆ ಪಠ್ಯವೂ ಆಗಿತ್ತು.

**ಚೈತನ್ಯ – ೧೨** : ಶಿಲ್ಪ ವಿನ್ಯಾಸ (೧೯೮೬) ಪ್ರೊ ಸಿ. ಎನ್. ರಾಮಚಂದ್ರನ್ ಅವರ 'ಶಿಲ್ಪವಿನ್ಯಾಸ' ಆರು ವಿಮರ್ಶಾ ಲೇಖನಗಳ ಸಂಕಲನ. ಕನ್ನಡದ ಮೊದಲ ಕಾದಂಬರಿಗಳ ಸ್ವರೂಪ, ಚಿಕ್ಕವೀರ ರಾಜೇಂದ್ರ – ಒಂದು ಅಧ್ಯಯನ, ನಿರಂಜನರ ಐತಿಹಾಸಿಕ ಕಾದಂಬರಿಗಳು – ಒಂದು ವಿಮರ್ಶೆ, ಇತ್ತೀಚಿನ ಕೆಲವು ಕನ್ನಡ ಕಾದಂಬರಿಗಳಲ್ಲಿ ಲೈಂಗಿಕತೆಯ ಆಯಾಮ, ವೈಶಾಖದ ಕೆಲವು ಒಳಧ್ವನಿಗಳು, ಬಂಧನ – ಬಿಡುಗಡೆ ಹಾಗೂ ಸಾವು ಪುನರ್ಜನ್ಮ ಸ್ವಾಭಿಮುಖ ಸಾಹಿತ್ಯ, ಮುದ್ದಣನ 'ರಾಮಾಶ್ವಮೇಧ' ಮತ್ತು ಶಾಂತಿನಾಥ ದೇಸಾಯಿ ಅವರ ಸೃಷ್ಟಿ – ಒಂದು ವ್ಯಾಖ್ಯಾನ ಇಲ್ಲಿರುವ ಲೇಖನಗಳು.

**ಚೈತನ್ಯ – ೧೩** : ಹೊಣೆ ಮತ್ತು ಇತರ ಕಥೆಗಳು (೧೯೮೮) ಸಂತ ಫಿಲೋಮಿನಾ ಕಾಲೇಜಿನ ಹಳೆ ವಿದ್ಯಾರ್ಥಿನಿ ಲೀಲಾ ಮಣ್ಣಾಲ ಅವರ ಮೊದಲ ಕಥಾ ಸಂಕಲನ 'ಹೊಣೆ ಮತ್ತು ಇತರ ಕಥೆಗಳು' ಈ ಸಂಕಲನದಲ್ಲಿ ಸೇರಿರುವ ಆರು ಕತೆಗಳಲ್ಲಿ ಜೀವನದ ಜಟಿಲತೆಯ ಕೆಲವೊಂದು ಆಪ್ತ ಚಿತ್ರಣಗಳು ಸಿಗುತ್ತವೆ. ಹೆಣ್ತನದ ಸಹಜ ಸಮಸ್ಯೆಗಳ ಬಗ್ಗೆ ವಿವರಗಳಿವೆ.

**ಚೈತನ್ಯ – ೧೪** : ಅಮೂಲ್ಯ ಚೇತನ (೧೯೮೯) ಅಮೂಲ್ಯ ಚೇನತ –ಬಡೆಕ್ಕಿಲ ಕೃಷ್ಣ ಭಟ್ ಅವರ ಕಿರುಹೊತ್ತಗೆ, ದಾರ್ಶನಿಕ ಎಂ.ಎನ್. ರಾಯ್ ಅವರ ಬದುಕಿನ ಪ್ರಮುಖ ಮೈಲುಗಲ್ಲುಗಳನ್ನು ತೋರಿಸುವುದು ಈ ಕೃತಿಯ ಉದ್ದೇಶ.

**ಚೈತನ್ಯ ೧೫** : ಕುನಾಲ, 'ಕುನಾಲ' ಚಾರಿತ್ರಿಕ ವಸ್ತುವನ್ನಾಧರಿಸಿದ ನಾಟಕ, ಮಗಧ ಸಾಮ್ರಾಜ್ಯದ ಅರಸ ಅಶೋಕನ ಹಿರಿಯರಸಿಯ ಮಗ ಕುನಾಲ ಇಲ್ಲಿಯ ನಾಯಕ, ನ್ಯಾಯ–ಅನ್ಯಾಯಗಳ ಸಂಘರ್ಷ, ವಿಶ್ವಶಾಂತಿಯ ಮಹತ್ವವನ್ನು ಸಾರುವ ಈ ಕೃತಿ ವಾಚಕರ ಗಮನ ಸೆಳೆಯುತ್ತದೆ. ವಿಠಲ ಕಬಕ ಕೃತಿಕಾರರು.

**ಚೈತನ್ಯ ೧೬** : ತೋಚಿದ್ದು, ಬಾಚಿದ್ದು (೧೯೯೦) 'ತೋಚಿದ್ದು ಬಾಚಿದ್ದು) ಎಸ್. ಆರ್. ಚಂದ್ರ ಅವರ ವಿನೋದ ಪ್ರಬಂಧಗಳ ಸಂಕಲನ. ಇಲ್ಲಿರುವುದು ಬರೀ ಹಾಸ್ಯ ವಿನೋದವಷ್ಟೇ ಅಲ್ಲ. ಕೆಲವೊಂದು ನಿಬಂಧಗಳಲ್ಲಿ ವಿಡಂಬನಾತ್ಮಕ ವೈಚಾರಿಕತೆ ಮಿಡಿಯುತ್ತದೆ. ಹರಟೆಯ ಜಾಡಿನಲ್ಲಿ ಬರೆದ ತಾರ್ಕಿಕ ಚಿಂತನೆಗಳೂ ಇಲ್ಲಿವೆ.

**ಚೈತನ್ಯ – ೧೭** : ಚಿಲುಮೆ (೧೯೯೨) 'ಚಿಲುಮೆ' ಎನ್.ಜಿ. ಪಟವರ್ಧನ್ ಅವರ ಹನಿಕವಿತೆಗಳ ಸಂಕಲನ, ಕೃತಿಯ ಕುರಿತು ಮುನ್ನುಡಿ ಹೀಗೆ ಹೇಳುತ್ತದೆ, 'ನಿಜದ ಕನಸುಗಳನ್ನು

ಮತ್ತು ಕನಸಿನ ನಿಜಗಳನ್ನು ಮಿಂಚಿ ಮರೆಯಾಗಿ ಮತ್ತೆ ಮಿಂಚುವ ಮಿಂಚುಹುಳಗಳಂತೆ ಪಟವರ್ಧನ್ ಅವರ ಕವಿತೆಗಳು ನಮ್ಮ ಮನಸ್ಸಿನ ಮೇಲೆ ಸಂತೋಷದ ಗೆರೆಗಳ ರೂಪದಲ್ಲಿ ಮೂಡಿಸುತ್ತವೆ. ನಲ್ಮೆ ಮತ್ತು ಸಂತೋಷ ಕಣ್ಮರೆಯಾಗುತ್ತಿರುವ ಆಧುನಿಕ ಕತ್ತಲ ಲೋಕದಲ್ಲಿ ಇಂತಹ ಕವನಗಳು ಬೆಳಕಿನ ಬೀಜಗಳು, ಪ್ರೀತಿಯ ತುಣುಕುಗಳು'.

**ಚೈತನ್ಯ – ೧೮** : ಸಮುಚ್ಚಯ (೧೯೯೩) 'ಸಮುಚ್ಚಯ' ಪ್ರೊ. ವಿ.ಬಿ. ಮೊಳೆಯಾರ ಅವರ ಚಿಂತನೆಗಳ ಸಂಕಲನ. ಅವರು ಬೇರೆ ಬೇರೆ ಪತ್ರಿಕೆಗಳಿಗೆ ಬರೆದ ಚಿಂತನೆಗಳು ಇಲ್ಲಿ ಒಂದಾಗಿವೆ. ಉತ್ತಮ ಬದುಕಿಗೆ ಮಾರ್ಗದರ್ಶನವಾಗಬಲ್ಲ ಸ್ವಚ್ಛ ಬದುಕನ್ನು ಕಲಿಸಬಲ್ಲ ಅನೇಕ ವಿಚಾರಗಳು ಇಲ್ಲಿವೆ. ದಾರ್ಶನಿಕರ ಚಿಂತನ ಮಂಥನಗಳೂ ಇವೆ. ಶಿಸ್ತು, ಸಂಯಮ, ತಾಳ್ಮೆ, ಪ್ರಾಮಾಣಿಕತೆ, ಗೌರವಾದರಗಳ ಕುರಿತು ಸ್ಪಷ್ಟ, ನಿಖರ ಭೋದನೆಗಳು ಇದಾಗಿವೆ.

**ಚೈತನ್ಯ – ೧೯** : ಅಭಿರುಚಿ (೧೯೯೪) ಅಭಿರುಚಿ – ವಿದ್ಯಾರ್ಥಿ ಚಿಂತಕರ ಚಿಂತನೆಗೆ ಸರಿಯಾದ ಕನ್ನಡಿ, ಕಾಲೇಜು ವಿದ್ಯಾರ್ಥಿಗಳ ಹನಿಗವನ, ಕಿರುಗತೆ, ಹಾಸ್ಯ, ಚಿಂತನ, ಲೇಖನಗಳು ತುಂಬಿವೆ. ವಿದ್ಯಾರ್ಥಿಗಳು ಭವಿಷ್ಯದಲ್ಲಿ ಸಾಹಿತ್ಯದಲ್ಲಿ ಸಕ್ರಿಯವಾಗಲು ಇದೊಂದು ಮಾದರಿ ರಚನೆ.

**ಚೈತನ್ಯ – ೨೦** : 'ನಿರೀಕ್ಷೆ' ಆಯುರ್ವೇದ ವೈದ್ಯ ಡಾ। ಶ್ರೀಕೃಷ್ಣ ಪೈಸಾರಿ ಅವರ ಕವನ ಸಂಕಲನ, ಚೊಚ್ಚಲ ಸಂಕಲನವಾದರೂ ಇಲ್ಲಿಯ ಬಹುಪಾಲು ಕವಿತೆಗಳು ಕವಿಯ ಕಾವ್ಯಸೃಷ್ಟಿಯಲ್ಲಿನ ಪರಿಪಕ್ವತೆಯನ್ನು ಪ್ರಕಟಿಸುತ್ತದೆ.

**ಚೈತನ್ಯ – ೨೧** : ಆರೋಗ್ಯ ಪಾಲನೆ (೧೯೯೩) 'ಆರೋಗ್ಯ ಪಾಲನೆ' ಪುತ್ತೂರಿನ ಜನಪ್ರಿಯ ವೈದ್ಯ ಡಾ। ಎ.ಕೆ. ರೈಯವರ ಕೃತಿ. ಲೇಖಕರ ಸ್ವಾನುಭವ, ವೃತ್ತಿ ಆಸಕ್ತಿ ಮುಪ್ಪರಿಗೊಂಡು ಮೈತಾಳಿದ ಈ ಕೃತಿ ರೋಗ ಪೀಡಿತರಿಗಷ್ಟೇ ಅಲ್ಲದೆ ಎಲ್ಲರಿಗೂ ಪ್ರಯೋಜನಕಾರಿ ಕೈಪಿಡಿ.

**ಚೈತನ್ಯ – ೨೨** : ಅ(ನ)ರ್ಥದ ಮುಗ್ಗುಲಿಂದ (೧೯೯೯) ಸಂತ ಫಿಲೋಮಿನಾ ಕಾಲೇಜಿನ ಹಳೆವಿದ್ಯಾರ್ಥಿ, ಪ್ರಸ್ತುತ ಕಲ್ಯಾಣಪುರ ಕಾಲೇಜಿನಲ್ಲಿ ಅರ್ಥಶಾಸ್ತ್ರ ಪ್ರಾಧ್ಯಾಪಕರಾಗಿರುವ ಪ್ರೊ. ಕೆ. ಕೃಷ್ಣ ಮೂರ್ತಿಯವರು ನಾಡಿನ ಬೇರೆ ಬೇರೆ ಪತ್ರಿಕೆಗಳಿಗೆ ಬರೆದ ಲೇಖನಗಳು ಅ(ನ)ರ್ಥದ ಮಗ್ಗುಲಿಂದ ಕೃತಿಯಲ್ಲಿ ಸಂಚಯಗೊಂಡಿದೆ. ಬಹುಪಾಲು ಲೇಖನಗಳು ಅರ್ಥವ್ಯವಸ್ಥೆಗೆ ಸಂಬಂಧಿಸಿದವು.

**ವಿಶೇಷ ಪ್ರಕಟಣೆಗಳು** : ವಾರ್ಷಿಕ ಚೈತನ್ಯ ಮಾಲೆಯ ಪ್ರಕಟಣೆಯೊಂದಿಗೆ ಕನ್ನಡ ಸಂಘವು ನಿಯತವಾಗಿ ಹೊಸ ಲೇಖಕ, ಲೇಖಕಿಯರನ್ನು ಪರಿಚಯಿಸಿಕೊಡುವ ಯೋಜನೆಯಂತೆ ಈ ತನಕ ೧೪ ಕೃತಿಗಳನ್ನು ವಿಶೇಷ ಪ್ರಕಟನೆ ಎಂದು ಪ್ರಕಟಿಸಿದೆ ಅವುಗಳ ಸಂಕ್ಷಿಪ್ತ ಪರಿಚಯ ಹೀಗಿದೆ.

೧. **ಬೇಟೆಯ ನೆನಪುಗಳು** : ಕೆದಂಬಾಡಿ ಜತ್ತಪ್ಪ ರೈಯವರಿಗೆ ಅಪೂರ್ವ ಪ್ರಸಿದ್ಧಿಯೊಂದಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯನ್ನು ತಂದುಕೊಟ್ಟ ಕೃತಿ[೧೦]. ಕನ್ನಡದ ಹಿರಿಯ ಬರಹಗಾರರಾದ ಕುವೆಂಪು, ಕಾರಂತ ಮೊದಲಾದವರ ಪ್ರಶಂಸೆಗೂ ಈ ಕೃತಿ ಒಳಗಾಯಿತು. ವಿಶ್ವ ಕನ್ನಡ ಸಾಹಿತ್ಯ ಸಮ್ಮೇಳನದ ವಿಶೇಷ ಪ್ರಕಟಣೆಗಳಲ್ಲಿ ಈ ಕೃತಿಯೂ ಮತ್ತೊಮ್ಮೆ ಪ್ರಕಟವಾಯಿತು. ಅನೇಕ ಬಾರಿ ಮರು ಮುದ್ರಣ ಕಂಡ ಈ ಕೃತಿ ಇತ್ತೀಚೆಗೆ ಇಂಗ್ಲಿಷ್‌ಗೂ ಅನುವಾದಗೊಂಡಿದೆ.

೨. **ಯಕ್ಷಗಾನ ಮತ್ತು ನಾನು** : ಶೇಣಿ ಗೋಪಾಲಕೃಷ್ಣ ಭಟ್ಟರ ಅನುಭವ ಕಥನ. ಅರ್ಥಾತ್ ಜೀವನ ಕಥನ, ಯಕ್ಷಗಾನ ಪ್ರಿಯರಿಂದ, ಕಲಾವಿದರಿಂದ ಸಾಕಷ್ಟು ವಿಚಾರ ವಿಮರ್ಶೆ, ವಾದ–ಪ್ರತಿವಾದಗಳಿಗೆ ಗುರಿಯಾದ ಗ್ರಂಥ.

೩. **'ಜಾನಪದ ಜೀವನ'** : ಶ್ರೀಕೃಷ್ಣ ಭಟ್ ಅರ್ತಿಕಜೆಯವರ, ಜಾನಪದ ಹಾಡುಗಳ ವಿವೇಚನಾತ್ಮಕ ಪ್ರಬಂಧಗಳ ಸಂಗ್ರಹ, ಇಲ್ಲಿ ಲೇಖಕರು ಹವ್ಯಕರ ಸುಮಾರು ೨೦೦ಕ್ಕೂ ಹೆಚ್ಚು ತ್ರಿಪದಿಗಳನ್ನು ಸಂಗ್ರಹಿಸಿ ಅವುಗಳ ಸರಳ ನಿರೂಪಣೆಯನ್ನು ನೀಡಿದ್ದಾರೆ.

೪. **ಪುಲಪೇಡಿ ಮತ್ತು ಇತರ ಕಥೆಗಳು** : ಗಂಗಾ ಪಾದೇಕಲ್ ಅವರ ಪುಲಪೇಡಿ ಮತ್ತು ಇತರ ಕಥೆಗಳು' ಲೇಖಕಿಯ ಮೊದಲ ಕೃತಿ. ಇಲ್ಲಿಯ ಬಹುಪಾಲು ಕತೆಗಳು ಸಹಜ ಆಯಾಮಗಳಿಂದ ಮೈದುಂಬಿಕೊಳ್ಳುತ್ತವೆ. ಓದುಗರಿಗೆ ಆತ್ಮೀಯವಾಗುತ್ತವೆ.

೫. **ನಕ್ಕು ಬಿಡಿ ಸಾಕು** : ಸಂತ ಫಿಲೋಮಿನಾ ಕಾಲೇಜಿನ ಬೆಳ್ಳಿ ಹಬ್ಬದ ಸಂದರ್ಭದಲ್ಲಿ ಪ್ರಕಟವಾದ ಕೃತಿ. ಕಾಲೇಜಿನ ಸಂಸ್ಥಾಪಕ ಹಾಸ್ಯಪ್ರಿಯ ವೆರೆ|ಮೊ.ಎ. ಪತ್ರಾವೊ ಅವರ ದಿವ್ಯ ಸ್ಮೃತಿಗೆ ಈ ಕೃತಿ ಅರ್ಪಿತವಾಗಿದೆ. ಈ ಸಂಕಲನದಲ್ಲಿರುವ ಹಾಸ್ಯ ತುಣುಕುಗಳನ್ನು ಸಂಗ್ರಹಿಸಿದವರು ವಿ. ಬಿ. ಮೊಳೆಯಾರರು.

೬. **ಅಂತರಂಗ** : ಉಪ್ಪಂಗಳ ರಾಮ ಭಟ್ಟರ 'ಅಂತರಂಗ' ದಶಮಾನೋತ್ಸವದ ವಿಶೇಷ ಪ್ರಕಟಣೆ. ಕನ್ನಡದ ಕವಿಗಳು ಕಂಡ ಶರತ್ಕಾಲದ ಚಿತ್ರಣ. ಕನಕದಾಸರ ಕೀರ್ತನೆಗಳಲ್ಲಿ ಪ್ರತಿಪಾದಿತವಾದ ಸಾಮಾಜಿಕ ಸಾಹಿತ್ಯಿಕ ಮೌಲ್ಯಗಳು. ಶ್ರೀಯವರ ರುದ್ರನಾಟಕಗಳ ಪರಿಶೀಲನೆ. ಮಂಜೇಶ್ವರ ಗೋವಿಂದ ಪೈ ಅವರು ಚಿತ್ರಿಸಿದ 'ಮರಣ ವೃಕ್ಷದ ಅಮೃತಫಲ'ವನ್ನು ಅವರಿಗೇ ಅನ್ವಯಿಸಿರುವುದು, ಪೈ, ಕೈಲಾಸಂ, ಕುವೆಂಪು–ಈ ಮೂವರು ಗಣ್ಯರು ನೀಡಿದ ಏಕಲವ್ಯ ಪಾತ್ರ ಚಿತ್ರಣದ ವೈಶಿಷ್ಟ್ಯ, ನಾಗವರ್ಮ ಮಹಾಶ್ವೇತೆಯ ಕುರಿತಾದ ಒಂದು ಅನ್ನಿಸಿಕೆ. ಇನಾಂದಾರರ 'ಮಂಜು ಮುಸುಕಿದ ದಾರಿ' ಮತ್ತು 'ಈ ಪರಿಯ ಸೊಬಗು' ಕಾದಂಬರಿಯ ಒಂದು ಪರಿಶೀಲನೆ – ಈ ಬರಹಗಳಿಂದ 'ಅಂತರಂಗ' ಸಾಹಿತ್ಯ ಪ್ರಿಯರಿಗೆ ಉಪಯುಕ್ತವಾಗಿದೆ.

೭. **ದೇವ** : ಎ. ಪಿ. ಮಾಲತಿ ಅವರ ಹೊಸಬಗೆಯ ವಸ್ತುವನ್ನೊಳಗೊಂಡ ಸಾಮಾಜಿಕ ಕಾದಂಬರಿ. ಇದು ಕನ್ನಡ ಸಂಘದಿಂದ ಪ್ರಕಟವಾದ ಮೊದಲ ಕಾದಂಬರಿಯೂ ಹೌದು. ಭಾರತದಲ್ಲಿ ಸಾಮಾನ್ಯವಾಗಿ ಕಾಡುವ ಜಾತಿ ಪೀಡೆ ಮೇಲು-ಕೀಳು ಎಂಬ ವಿಕೃತಿಯನ್ನೂ ಕೆಡವಿ ಮಾನವೀಯತೆಯನ್ನು ಎತ್ತಿ ಸಾರುವ ಪ್ರಯತ್ನ ಇಲ್ಲಿಯದು. 'ದೇವ' ಕಾದಂಬರಿ ಮಂಗಳೂರು ವಿಶ್ವವಿದ್ಯಾನಿಲಯದ ಬಿ.ಎ. ವಿದ್ಯಾರ್ಥಿಗಳಿಗೆ ಅವಿಸ್ತರ ಪಠ್ಯವಾಗಿತ್ತು.

೮. **ದಶಕದ ಸಾಧನೆ** : ಕನ್ನಡ ಸಂಘದ ದಶಕದ ಸಾಧನೆಯನ್ನು ತೆರೆದು ತೋರಿಸುವ 'ದಶಕದ ಸಾಧನೆ' ಎಂಬ ವಿಶೇಷ ಪ್ರಕಟಣೆ ದಶಮಾನೋತ್ಸವ ಸಂದರ್ಭದಲ್ಲಿ ಪ್ರಕಟವಾದ ಕಿರುಹೊತ್ತಗೆ.

೯. **ನಾವೂ ಮನುಷ್ಯರು** : ಒಂಬತ್ತನೆಯ ವಿಶೇಷ ಪ್ರಕಟಣೆ ನಿರಂಜನರ ನಾಟಕ 'ನಾವೂ ಮನುಷ್ಯರು' ಬಡತನ, ಅಜ್ಞಾನ, ರೋಗರುಜಿನಗಳಿಂದ ನೊಂದು, ಬೇಯುತ್ತಿರುವ ಕಾರ್ಮಿಕರ, ನೇಕಾರರ, ಬದುಕನ್ನು ಸಂಘಟನೆಯನ್ನು ಒಡೆಯಲು ಯತ್ನಿಸುತ್ತಿರುವ ಸ್ಥಾಪಿತ ಹಿತಾಸಕ್ತರ ದರ್ಪ, ಕುಹಕತನಗಳು ಈ ನಾಟಕದಲ್ಲಿ ಸ್ಫುಟವಾಗಿವೆ.

೧೦. **ಶೇಫಾಲಿಕಾ** : ಬಾಸ ಮಹಾಕವಿಯ ಸಂಸ್ಕೃತ ನಾಟಕ ಸ್ವಪ್ನವಾಸವದತ್ತ ಪ್ರೇರಿತ 'ಶೇಫಾಲಿಕಾ' ಜಯಪ್ರಕಾಶ ಮಾವಿನಕುಳಿಯವರ ನಾಟಕ ಕೃತಿ.

೧೧. **ಅರಳು** : 'ಅರಳು' ಕಾಲೇಜಿನ ಉದಯೋನ್ಮುಖ ವಿದ್ಯಾರ್ಥಿ ಕವಿಗಳ ಕವಿತೆಗಳ ಸಂಕಲನ.

೧೨. **ಬೇಟೆಯ ಸುತ್ತಮುತ್ತು** : ಬೇಟೆಯ ಸುತ್ತುಮುತ್ತು' ಕೈಂತಜೆ ವಿಷ್ಣುಭಟ್ಟರ ಚೊಚ್ಚಲಕೃತಿ. ಕೃತಿಯ ಆರಂಭದಲ್ಲೇ ಲೇಖಕರು. 'ಸ್ವಾನುಭವದ ವಿವರಗಳನ್ನು ಇತರರಿಂದ ಕೇಳಿ ತಿಳಿದ ಸ್ವಾರಸ್ಯಕರವಾದ ವಿಚಾರಗಳನ್ನು ಪರಿಸರ ಹಾಗೂ ಜೀವಜಗತ್ತಿನ ಚಿತ್ರಣದೊಂದಿಗೆ ನೀಡಿರುತ್ತದೆ.

೧೩. **ಆಸ್ವಾದ** : ಆಸ್ವಾದ ಎಸ್.ಆರ್. ಪಾಡಿ ಅವರ ಐದು ಪ್ರಬಂಧಗಳ ಸಂಕಲನ. ಪಂಪನ ಕಾವ್ಯಗಳ ಪರಿಚಯ, ಹರಿಹರನ ಭಕ್ತಿ, ಮಹಾಕವಿಗಳು ಕಂಡ ಮಂಥರೆ, ಕನ್ನಡ ಕಾವ್ಯಗಳಲ್ಲಿ ವ್ಯಕ್ತವಾದ ಮಕ್ಕಳ ಚಿತ್ರಣ, ತುಳಸೀದಾಸ ರಾಮಾಯಣದ ಅತ್ತೆ-ಸೊಸೆಯರ ಹಾರ್ದಿಕ ಸಂಬಂಧ - ಪ್ರಬಂಧಗಳು ಲೇಖಕರ ತೌಲನಿಕ ಅಧ್ಯಯನ ಶೀಲತೆಗೆ ಸಾಕ್ಷಿಯಾಗಿದೆ.

೧೪. **ಸಮರಸ** : 'ಸಮರಸ' ವಿ.ಬಿ. ಮೊಳೆಯಾರರ ಅಭಿನಂದನಾ ಗ್ರಂಥ ಕಾಲೇಜಿನ ಕನ್ನಡ ವಿಭಾಗದ ಮುಖ್ಯಸ್ಥರಾಗಿ ಕನ್ನಡ ಸಂಘದ ಸ್ಥಾಪಕ ಅಧ್ಯಕ್ಷರಾಗಿ ದೀರ್ಘಾವಧಿ ಸೇವೆ ಸಲ್ಲಿಸಿದ ಮೊಳೆಯಾರರು ನಿವೃತ್ತರಾದಾಗ ಅಭಿಮಾನಿ ಬಳಗ ಅರ್ಪಿಸಿದ ಕೃತಿ. ಈ ರೀತಿ ಸಂತ ಫಿಲೋಮಿನಾ ಕಾಲೇಜಿನ ಕನ್ನಡ ಸಂಘ ಕನ್ನಡ ಸಾಂಸ್ಕೃತಿಕ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆ ನೀಡಿದೆ.

ಸಂತ ಫಿಲೋಮಿನಾ ಕಾಲೇಜು ಕನ್ನಡ ಸಂಘವು ೧೯೭೩ರಲ್ಲಿ ಪ್ರಾರಂಭವಾದರೂ ಅಲ್ಪಾವಧಿಯಲ್ಲಿಯೇ ಅನೇಕ ಸಾಹಿತ್ಯಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಮೂಲಕ

ವಿದ್ಯಾರ್ಥಿಗಳಲ್ಲಿ ಸಾಹಿತ್ಯದ ಅಭಿರುಚಿ ಮೂಡಿಸಿ ಎಳವೆಯಲ್ಲಿಯೇ ಅವರು ಸಾಹಿತ್ಯ ರಚನೆ ಮಾಡಲು ಅವಕಾಶ ಕಲ್ಪಿಸಿದೆ.

**೬.೧.೪. ವಿವೇಕಾನಂದ ಕಾಲೇಜಿನ ಕನ್ನಡ ಸಂಘ :**

ದಿನಾಂಕ ೨೩-೦೮-೧೯೭೫ ರಂದು ಆರಂಭವಾದ ಕನ್ನಡ ಸಂಘ ವಿವೇಕಾನಂದ ಕಾಲೇಜಿನಲ್ಲಿ ಕನ್ನಡ ವಿಭಾಗದ ಇತಿಹಾಸದಲ್ಲಿ ಒಂದು ಮೈಲಿಗಲ್ಲು[೧೧]. ವಿದ್ಯಾರ್ಥಿಗಳಲ್ಲಿ ಸಾಹಿತ್ಯಾಭಿರುಚಿಯನ್ನು ಬೆಳೆಸುವುದು, ಸಾಹಿತ್ಯ ಮತ್ತು ಸಂಸ್ಕೃತಿಗೆ ಸಂಬಂಧಿಸಿದ ವಿಚಾರ ಗೋಷ್ಠಿಗಳನ್ನು ಏರ್ಪಡಿಸು ವುದು. ಕವಿಗೋಷ್ಠಿ, ಕವಿಸ್ಮರಣೆ, ಸಾಹಿತಿಗಳಿಗೆ ಸನ್ಮಾನ, ಸಾಹಿತ್ಯ ಕೃತಿಗಳ ಪ್ರಕಟಣೆ ಮತ್ತು ಪ್ರಚಾರ, ಸಾಹಿತ್ಯಿಕ ಸ್ಪರ್ಧೆಗಳನ್ನು ಏರ್ಪಡಿಸುವುದು ಮತ್ತು ಪ್ರತಿಭಾ ಪುರಸ್ಕಾರ, ಕನ್ನಡ ಐಚ್ಛಿಕ ವಿದ್ಯಾರ್ಥಿಗಳಿಗೆ ಬಹುಮಾನ, ವಿದ್ಯಾರ್ಥಿವೇತನ ಇತ್ಯಾದಿಗಳ ಮೂಲಕ ಪ್ರೋತ್ಸಾಹ ನೀಡುವ ಉದ್ದೇಶದಿಂದ ಸ್ಥಾಪನೆಯಾದ ಕನ್ನಡ ಸಂಘ ತನ್ನ ಇತಿಮಿತಿಯಲ್ಲಿ ಪುಸ್ತಕ ಪ್ರಕಾಶನದ ಕೆಲಸವನ್ನು ಮಾಡುವುದರೊಂದಿಗೆ ವಿಚಾರಗೋಷ್ಠಿ, ಸಾಹಿತಿಗಳು ಕಲಾವಿದರ ಸೇವೆಯನ್ನು ಗುರುತಿಸಿ ಸಂಮಾನ, ತಜ್ಞ ವಿದ್ವಾಂಸರಿಂದ ವಿವಿಧ ವಿಷಯಗಳ ಬಗೆಗೆ ಉಪನ್ಯಾಸ, ವಿದ್ಯಾರ್ಥಿಗಳ ಕವಿಗೋಷ್ಠಿ ಸಾಹಿತ್ಯ ಸೌರಭ ಇತ್ಯಾದಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಮೂಲಕ ಇಲ್ಲಿನ ಪರಿಸರದಲ್ಲಿ ಕನ್ನಡದ ಕಂಪನ್ನು ಸಾಂಸ್ಕೃತಿಕ ಇಂಪನ್ನೂ ಉಳಿಸಿಕೊಂಡು ಬಂದಿದೆ. ಕನ್ನಡತನವನ್ನು ವಿದ್ಯಾರ್ಥಿಗಳಲ್ಲಿ ಪ್ರೇರೇಪಿಸುತ್ತಾ ಬಂದಿದೆ.

ವಿವೇಕಾನಂದ ಕಾಲೇಜು ಕನ್ನಡ ಸಂಘವು ಈ ಕೆಳಗಿನ ಉದ್ದೇಶಗಳನ್ನಿಟ್ಟುಕೊಂಡು ಆರಂಭವಾಯಿತು.

೧. ವಿದ್ಯಾರ್ಥಿಗಳಲ್ಲಿ ಸಾಹಿತ್ಯಾಭಿರುಚಿಯನ್ನು ಬೆಳೆಸುವುದು.
೨. ಸಾಹಿತ್ಯಿಕ ಸಭೆ, ವಿಚಾರಗೋಷ್ಠಿಗಳನ್ನು ಏರ್ಪಡಿಸುವುದು.
೩. ಕವಿಗೋಷ್ಠಿ, ಕವಿಸ್ಮರಣೆ, ಸಾಹಿತಿಗಳಿಗೆ ಸನ್ಮಾನ, ವಿಶಿಷ್ಟ ಸಾಹಿತ್ಯ ಸಂಕಿರಣಗಳನ್ನು ಏರ್ಪಡಿಸುವುದು.
೪. ಸೃಜನಾತ್ಮಕ ಸಾಹಿತ್ಯ ಕೃತಿಗಳ ಪ್ರಕಟಣೆ ಮತ್ತು ಪ್ರಚಾರ.
೫. ಸಕಾಲಿಕ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಉತ್ಸವಾಚರಣೆ
೬. ಸಾಹಿತ್ಯಿಕ ಸ್ಪರ್ಧೆಗಳನ್ನು ಏರ್ಪಡಿಸುವುದು.
೭. ಇನ್ನಿತರ ರೀತಿಗಳಲ್ಲಿ ಕನ್ನಡ ಸಾಹಿತ್ಯ, ಸಂಸ್ಕೃತಿಗಳ ವಿದ್ಯಾರ್ಥಿವೇತನ ಇತ್ಯಾದಿಗಳ ಮೂಲಕ ಪ್ರೋತ್ಸಾಹ ನೀಡುವುದು.

೮. ಕನ್ನಡ ಐಚ್ಛಿಕ ವಿದ್ಯಾರ್ಥಿಗಳಿಗೆ ಬಹುಮಾನ, ವಿದ್ಯಾರ್ಥಿವೇತನ ಇತ್ಯಾದಿಗಳ ಮೂಲಕ ಪ್ರೋತ್ಸಾಹ ನೀಡುವುದು.

ವಿವೇಕಾನಂದ ಕಾಲೇಜು ಕನ್ನಡ ಸಂಘವು ತನ್ನ ಧ್ಯೇಯ, ಉದ್ದೇಶಗಳಿಗೆ ಅನುಗುಣವಾಗಿ ಆರಂಭವಾದಂದಿಂನಿಂದಲೂ ಇಂದಿನವರೆಗೆ ಹಲವು ಕೃತಿಗಳ ಪ್ರಕಟಣೆ, ವಿಚಾರಗೋಷ್ಠಿ ಮತ್ತು ವೈವಿಧ್ಯಮಯ ವಿಷಯಗಳ ಬಗೆಗೆ ತಜ್ಞ ವಿದ್ವಾಂಸರಿಂದ ಉಪನ್ಯಾಸ ಕಾರ್ಯಕ್ರಮ ಮುಂತಾದವರನ್ನು ನಡೆಸುತ್ತಾ ಬಂದಿದೆ.

**ಕನ್ನಡ ಸಂಘದ ಅಧ್ಯಕ್ಷರುಗಳು :**

ತಾಳ್ತಜೆ ವಸಂತಕುಮಾರ್ ಇವರು ಕನ್ನಡ ಸಂಘ ಆರಂಭದ ಅಧ್ಯಕ್ಷರಾಗಿ ಇದಕ್ಕೊಂದು ಭದ್ರ ಬುನಾದಿಯನ್ನು ಹಾಕಿದರು. ಇವರು ೧೯೭೫ ರಿಂದ ೧೯೮೦ ರವರೆಗೆ ಅನಂತರ ೧೯೮೧ರಿಂದ ೧೯೮೪ರವರೆಗೆ ಅಧ್ಯಕ್ಷರಾಗಿದ್ದರು. ಅಮೃತ ಸೋಮೇಶ್ವರ ಇವರು ೧೯೮೦–೧೯೮೧, ೧೯೮೭ರಿಂದ ೧೯೯೦ರ ವರೆಗೆ ಕನ್ನಡ ಸಂಘದ ಜವಾಬ್ದಾರಿಯನ್ನು ಯಶಸ್ವಿಯಾಗಿ ನಿರ್ವಹಿಸಿದರು.

ಕನ್ನಡ ಸಂಘವು ಆರಂಭವಾದ ವರ್ಷದಲ್ಲಿ ಈ ಸಂಸ್ಥೆಯಲ್ಲಿ ವಿದ್ಯಾರ್ಥಿಯಾಗಿದ್ದ ಪಾದೇಕಲ್ಲು ವಿಷ್ಣುಭಟ್ಟರು ಇಲ್ಲಿಯೇ ಅಧ್ಯಾಪಕರಾಗಿ ಸೇರಿ ೧೯೮೪ರಿಂದ ೧೯೮೬ರ ವರೆಗೆ ಕನ್ನಡ ಸಂಘದ ಅಧ್ಯಕ್ಷರಾಗಿದ್ದರು. ೧೯೮೬–೮೭ರಲ್ಲಿ ಭೌತಶಾಸ್ತ್ರ ವಿಭಾಗದ ಮುಖ್ಯಸ್ಥರಾಗಿದ್ದ ಡಿ. ಶಿವರಾಮ ಭಟ್ ಕನ್ನಡ ಸಂಘವನ್ನು ಮುನ್ನಡೆಸಿದರು.

೧೯೯೦ ರಿಂದ ೧೯೯೩ರ ವರೆಗೆ ಎ.ಕೆ. ಧರ್ಣಪ್ಪ ಇವರು ಕನ್ನಡ ಸಂಘವನ್ನು ಕ್ರಿಯಾತ್ಮಕವಾಗಿರುವಂತೆ ನೋಡಿಕೊಂಡರು. ಶ್ರೀಧರ ಎಚ್.ಜಿ. ಇವರು ೧೯೯೩–೯೫ರಲ್ಲಿ, ವಿ.ಬಿ. ಅರ್ತಿಕಜೆಯವರು ೧೯೯೪ರಿಂದ ೯೭ರ ವರೆಗೆ ಕನ್ನಡ ಸಂಘದ ನೇತೃತ್ವವನ್ನು ವಹಿಸಿದ್ದರು. ಇದೀಗ ಶ್ರೀಧರ ಎಚ್.ಜಿ. ಇವರು ೧೯೯೭ರಿಂದ ಕನ್ನಡ ಸಂಘದ ಅಧ್ಯಕ್ಷರಾಗಿ ಕಾರ್ಯಕಲಾಪ ಗಳನ್ನು ನಿರ್ವಹಿಸಿಕೊಂಡು ಹೋಗುತ್ತಿದ್ದಾರೆ.

**ಕನ್ನಡ ಸಂಘದ ಚಟುವಟಿಕೆಗಳು :**

ಅತ್ಯಂತ ಕ್ರಿಯಾಶೀಲವಾಗಿರುವ ವಿವೇಕಾನಂದ ಕಾಲೇಜಿನ ಕನ್ನಡ ಸಂಘ ವಿದ್ಯಾರ್ಥಿಗಳು ಮತ್ತು ಸಾರ್ವಜನಿಕರಿಗೆ ಉಪಯುಕ್ತವಾದ ಹಲವು ರೀತಿಯ ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಸುತ್ತಾ ಬಂದಿದೆ. ಇದರಲ್ಲಿ ಪ್ರಮುಖವಾದದ್ದು,

೧. **ಉಪನ್ಯಾಸಗಳು – ಮಾತಿನ ಮಂಟಪ** : ಕನ್ನಡ ಸಂಘದ ಆಶ್ರಯದಲ್ಲಿ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಗೆ ಸಂಬಂಧಿಸಿದಂತೆ ಹಲವು ವಿಷಯಗಳ ಬಗೆಗೆ ಕರ್ನಾಟಕದ ಹಲವೆಡೆಗಳಿಂದ ಬಂದ ತಜ್ಞ ವಿದ್ವಾಂಸರು ಕಲೆ, ಸಾಹಿತ್ಯ, ಸಂಸ್ಕೃತಿ, ಜಾನಪದ, ವ್ಯಾಕರಣ, ಭಾಷಾ ವಿಜ್ಞಾನ, ಮೀಮಾಂಸೆ ಇತ್ಯಾದಿ ವಿಷಯಗಳ ಬಗೆಗೆ ನೂರಕ್ಕಿಂತಲೂ ಹೆಚ್ಚು ಉಪನ್ಯಾಸಗಳನ್ನು ನೀಡಿದ್ದಾರೆ.

ಶ್ರೀಯುತರಾದ ಬಿ.ಎ. ವಿವೇಕ ರೈ, ಕುಂಬಳೆ ಸುಂದರರಾವ್ ಎಂ. ರಾಜಗೋಪಾಲಾ ಚಾರ್ಯ, ಎಚ್. ಎಸ್. ಲಕ್ಮೀ ನಾರಾಯಣ ಭಟ್ಟ, ಈ ಗೋಪಾಲಕೃಷ್ಣ ಭಟ್, ಎಂ. ಮರಿಯಪ್ಪ ಭಟ್ಟ, ಅ.ರಾ.ಮಿತ್ರ, ಕಯ್ಯಾರ ಕಿಞಣ್ಣ ರೈ, ಸುಮತೀಂದ್ರ ನಾಡಿಗ ಮೊದಲಾದ ಗಣ್ಯರು ಇಲ್ಲಿ ತಮ್ಮ ಉಪನ್ಯಾಸವನ್ನು ನೀಡಿದ್ದಾರೆ.

ದಿನಾಂಕ ೨೩–೬–೧೯೯೭ ರಂದು ದೇವುಡು ನೆನಪು, ಅನಂತರ ಸೇಡಿಯಾಪು ನೆನಪು ೧೩–೦೭–೧೯೯೮ರಂದು ಟಿ.ವಿ. ವೆಂಕಟಾಚಲ ಶಾಸ್ತ್ರಿಯವರು 'ವ್ಯಾಕರಣವನ್ನು ಆಸ್ವಾದಿಸುವುದು ಹೇಗೆ, ೨೦–೦೭–೧೯೯೮ರಂದು ವರದರಾಜ ಚಂದ್ರಗಿರಿಯವರಿಂದ 'ಶಿವರಾಮ ಕಾರಂತರು ಮತ್ತು ಪುತ್ತೂರು ೦೫–೦೮–೧೯೯೮ರಂದು ಕೆ.ಎಸ್. ಉಡುಪರಿಂದ ಕೆಂಪುನಾರಾಯಣನ 'ಮುದ್ರಾ ಮಂಜೂಷ ಸಾಹಿತ್ಯಿಕ ಮಹತ್ವ' ಎಂಬ ವಿಷಯದ ಬಗೆಗೆ ಉಪನ್ಯಾಸ ಕಾರ್ಯಕ್ರಮ ನಡೆಯಿತು.

೧೦–೦೮–೨೦೦೦ ಕೆ.ಪಿ. ಮಹಾದೇವಯ್ಯ, 'ಹರಿಹರನ ರಗಳೆಗಳು ೧೯– ೦೭– ೨೦೦೦ ಬಿ. ಪುರಂದರ ಭಟ್ 'ಶಿವರಾಮ ಕಾರಂತರ ನಾಟಕಗಳು ೧೨–೦೭–೨೦೦೦ ಶ್ರೀಕೃಷ್ಣ ಭಟ್ 'ಕನ್ನಡ ಧ್ವನಿಮಾ ಎಂಬ ವಿಷಯದ ಬಗೆಗೆ ಉಪನ್ಯಾಸ ನೀಡಿದರು.

೨೦೦೩ ಮತ್ತು ೦೪ರ ಪತ್ರಿಕೋದ್ಯಮ ಶಿಬಿರದಲ್ಲಿ ೨೮–೦೮–೨೦೦೩ರಂದು ಉದಯವಾಣಿ ವರದಿಗಾರ ಬಿ. ವಿಠಲರಾವ್ ಇವರಿಂದ ಗ್ರಾಮೀಣ ಪತ್ರಿಕೋದ್ಯಮ, ನರೇಂದ್ರ ರೈ ದೇರ್ಲರಿಂದ ಕೃಷಿ ಪತ್ರಿಕೋದ್ಯಮದ ಬಗೆಗೆ ವಿಶೇಷ ಉಪನ್ಯಾಸ ಕಾರ್ಯಕ್ರಮಗಳು ನಡೆದವು.

**ಕವಿಗೋಷ್ಠಿ – ಕಾವ್ಯಧಾರೆ :**

ವಿವೇಕಾನಂದ ಕಾಲೇಜು ಕನ್ನಡ ಸಂಘದ ಆಶ್ರಯದಲ್ಲಿ ಹಲವು ಕವಿಗೋಷ್ಠಿಗಳು ನಡೆದಿವೆ. ಹಿರಿಯ–ಕಿರಿಯ ಕವಿಗಳು ಇದರಲ್ಲಿ ಭಾಗವಹಿಸಿ ತಮ್ಮ ಕಾವ್ಯಧಾರೆಯನ್ನು ಇಲ್ಲಿ ಹರಿಸಿದ್ದಾರೆ. ಡಾ. ಎನ್. ಮೊಗಸಾಲೆ, ಅಮೃತ ಸೋಮೇಶ್ವರ, ಬಿ. ಪುರಂದರ ಭಟ್, ಹರಿನಾರಾಯಣ ಮಾಡಾವು, ಕು. ವೈಜಯಂತಿ ಮಾಲಾ, ಪುರುಷೋತ್ತಮ ಬಿಳಿಮಲೆ, ವಾಮನ ನಂದಾವರ ಮೊದಲಾದವರು ಇಲ್ಲಿನ ಸಹೃದಯರ ಮನಸ್ಸನ್ನು ತಮ್ಮ ಕವಿತೆಗಳ ಮೂಲಕ ಮುದಗೊಳಿಸಿದ್ದಾರೆ.

ದಿನಾಂಕ ೨೬-೧೧-೧೯೮ರಂದು ಪುತ್ತೂರು ತಾಲೂಕು ಮಟ್ಟದ ಪದವಿ ಕಾಲೇಜು ವಿದ್ಯಾರ್ಥಿಗಳ ಕವಿಗೋಷ್ಠಿ ನಡೆಯಿತು. ಇದರ ಅಧ್ಯಕ್ಷತೆಯನ್ನು ಸಂತ ಫಿಲೋಮಿನಾ ಕಾಲೇಜಿನ ಅಂತಿಮ ಪದವಿ ವಿದ್ಯಾರ್ಥಿ ಶ್ರೀ ಬಾಲಕೃಷ್ಣ ಬೇರಿಕೆ ವಹಿಸಿದ್ದರು.

ದಿನಾಂಕ ೦೯-೧೨-೨೦೦೩ರಂದು ಕಾಲೇಜಿನಲ್ಲಿ ಬಹುಭಾಷಾ ಕವಿಗೋಷ್ಠಿ ನಡೆಯಿತು. ಇದಕ್ಕೆ ಮುಖ್ಯ ಅತಿಥಿಯಾಗಿ ಕವಿ ಹಾಗೂ ನಾಟಕಕಾರ ನಾರಾಯಣ ಭಟ್ ಕಂಗಿಲ ಆಗಮಿಸಿದ್ದರು. ಗೋಷ್ಠಿಯ ಅಧ್ಯಕ್ಷತೆಯನ್ನು ಮಾಧವ ಭಟ್ ವಹಿಸಿದ್ದರು.

**ವಿಚಾರಗೋಷ್ಠಿಗಳು ಮತ್ತು ಕಾರ್ಯಾಗಾರ ಅನನ್ಯ ಅನುಭವಗಳ ಸಿಂಚನ :**

ಇದುವರೆಗೆ ಕನ್ನಡ ಸಂಘದ ಆಶ್ರಯದಲ್ಲಿ ಹಲವು ವಿಚಾರ ಸಂಕಿರಣಗಳು ನಡೆದಿವೆ. ಕನ್ನಡ ಸಂಘವು ಆರಂಭವಾದ ವರ್ಷವೇ ದಿನಾಂಕ ೦೮-೧೦-೧೯೩ರಂದು ವಿವೇಕ ರೈಯವರ ಅಧ್ಯಕ್ಷತೆ ಯಲ್ಲಿ 'ಪಿಯುಸಿ ಮತ್ತು ಪದವಿ ತರಗತಿಗಳ ಕನ್ನಡ ಪಠ್ಯ ಪುಸ್ತಕ'ಗಳ ಬಗೆಗೆ ವಿಚಾರ ಸಂಕಿರಣ ನಡೆಯಿತು. ಈ ಗೋಷ್ಠಿಯಲ್ಲಿ ವಿ.ಬಿ. ಮೊಳೆಯಾರ ಮತ್ತು ಶ್ರೀಮತಿ ಲೀಲಾವತಿ ಎಸ್.ರಾವ್ ಭಾಗವಹಿಸಿದ್ದರು.

ಪ್ರಸಾರಾಂಗ ಮೈಸೂರು ವಿಶ್ವವಿದ್ಯಾನಿಲಯ ಮತ್ತು ಕನ್ನಡ ಸಂಘದ ಆಶ್ರಯದಲ್ಲಿ ೨೪-೦೯-೧೯೮೨ರಿಂದ ೨೫-೦೯-೮೨ರವರೆಗೆ ವಿಶೇಷ ಉಪನ್ಯಾಸ ಹಾಗೂ ಮಂಗಳೂರು ವಿಶ್ವವಿದ್ಯಾನಿಲಯದ ಕಕ್ಷೆಯೊಳಗಣ 'ಕಾಲೇಜು ವಿದ್ಯಾರ್ಥಿಗಳ ಕವಿಗೋಷ್ಠಿ' ನಡೆಯಿತು.

'ತುಳು ಸಾಹಿತ್ಯಕ್ಕೆ ಅಮೃತರ ಕೊಡುಗೆ' ವಿಚಾರಗೋಷ್ಠಿ ೧೦-೧೨-೧೯೪ರಂದು ನಡೆಯಿತು. ೧೨-೦೪-೧೯೫ ರಂದು 'ಸೃಜನೇತರ ಸಾಹಿತ್ಯಕ್ಕೆ ಮಹಿಳೆಯರ ಕೊಡುಗೆ' ಎಂಬ ವಿಷಯದ ಮೇಲಿನ ವಿಚಾರಗೋಷ್ಠಿ ಕರ್ನಾಟಕ ಸಂಘ ಮತ್ತು ಫಿಲೋಮಿನಾ ಕಾಲೇಜು ಕನ್ನಡ ಸಂಘದ ಸಹಯೋಗದಲ್ಲಿ ನಡೆಯಿತು. ಈ ಗೋಷ್ಠಿಯನ್ನು ಹೇಮಲತಾ ಮಹಿಷಿ ಉದ್ಘಾಟಿಸಿದರು. ಸಂಪನ್ಮೂಲ ವ್ಯಕ್ತಿಗಳಾಗಿ ಡಾ। ಎಚ್.ಎಸ್. ಸುಜಾತ, ಎನ್. ಗಾಯತ್ರಿ, ಬಿ.ಎನ್. ಸುಮಿತ್ರಾ ಬಾಯಿ, ನೇಮಿಚಂದ್ರ, ಶಾಲಿನಿ ರಘುನಾಥ ಸಂಪನ್ಮೂಲ ವ್ಯಕ್ತಿಗಳಾಗಿದ್ದರು.

**ಕನ್ನಡ ಸಂಘದ ಬೆಳ್ಳಿಹಬ್ಬದ ಗೋಷ್ಠಿ :**

ದಿನಾಂಕ ೨೩-೦೮-೨೦೦೦ದಂದು ಕನ್ನಡ ಸಂಘದ ಬೆಳ್ಳಿ ಹಬ್ಬದ ಸಲುವಾಗಿ ವಿಶೇಷವಾಗಿ ಗೋಷ್ಠಿಯನ್ನು ಹಮ್ಮಿಕೊಳ್ಳಲಾಯಿತು[೧೨]. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಎ. ವಿ.

ನಾರಾಯಣ ವಹಿಸಿದ್ದು, ಈ ಸಂದರ್ಭದಲ್ಲಿ ಕನ್ನಡ ಸಂಘವನ್ನು ಕಟ್ಟಿ ಬೆಳೆಸಿದ ಹಿರಿಯರನ್ನು ವಿಶೇಷವಾಗಿ ಗೌರವಿಸಲಾಯಿತು. ಎಂ. ಸೂರ್ಯನಾರಾಯಣಪ್ಪ, ಅಮೃತ ಸೋಮೇಶ್ವರ, ತಾಳ್ತಜೆ ವಸಂತ ಕುಮಾರ್ ಇವರನ್ನು ಆತ್ಮೀಯವಾಗಿ ಸನ್ಮಾನಿಸಲಾಯಿತು.

೧೩, ೧೪, ೧೫ ಮೇ ೧೯೯೬ರಂದು ಶಿವರಾಮ ಕಾರಂತರ ಕಾದಂಬರಿ ಅಧ್ಯಯನ ಶಿಬಿರ ಪುತ್ತೂರು ಕರ್ನಾಟಕ ಸಂಘದ ಸಹಯೋಗದಲ್ಲಿ ಕಾಲೇಜಿನಲ್ಲಿ ನಡೆಯಿತು. ಹೆರಂಜೆ ಕೃಷ್ಣ ಭಟ್, ಬಿದರಹಳ್ಳಿ ನರಸಿಂಹಮೂರ್ತಿ, ನೋ. ಸಂ. ತಿಮ್ಮೇಗೌಡ ಶಿವಮೊಗ್ಗ, ಎಚ್.ಎಸ್. ರಾಘವೇಂದ್ರ ರಾವ್, ಜಿ. ಶ್ರೀನಿವಾಸ ರಾಜು, ಮುರಳೀಧರ ಉಪಾಧ್ಯ ಹಿರಿಯಡಕ ಸಿ. ಎನ್. ರಾಮಚಂದ್ರನ್, ಟಿ.ಪಿ. ಅಶೋಕ ಮೊದಲಾದವರು ಈ ಶಿಬಿರದಲ್ಲಿ ಮಾಹಿತಿ ನೀಡಿದರು.

೨೧ ಮತ್ತು ೨೨ ಅಕ್ಟೋಬರ್ ೨೦೦೧ ಸೇಡಿಯಾಪು ಜನ್ಮ ಶತಮಾನೋತ್ಸವ ಪ್ರಯುಕ್ತ ಎರಡು ದಿನಗಳ ಕಾರ್ಯಾಗಾರ ನಡೆಯಿತು. ಇದರ ಉದ್ಘಾಟನೆಯನ್ನು ಏರ್ಯ ಲಕ್ಷ್ಮೀನಾರಾಯಣ ಆಳ್ವ ಮಾಡಿದರು. ಅನಂತರ ಸೇಡಿಯಾಪು ಸಂಸ್ಮರಣೆ ಮತ್ತು ವಾಙ್ಮಯ ಗೋಷ್ಠಿ ಎಂಬ ವಿಷಯವಾಗಿ ನಾಡಿನ ಹಲವೆಡೆಗಳಿಂದ ಬಂದ ವಿದ್ವಾಂಸರು ಪ್ರಬಂಧಗಳನ್ನು ಮಂಡಿಸಿದರು.

ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಸಾಹಿತಿ ಕೆ. ಶಿವರಾಮ ಕಾರಂತರ ಜನ್ಮ ಶತಮಾನೋತ್ಸವದ ಪ್ರಯುಕ್ತ ಮೇ ೩೦ ಮತ್ತು ೩೧, ೨೦೦೩ರಂದು ಶಿವರಾಮ ಕಾರಂತ ಸಾಹಿತ್ಯ – ಕಾದಂಬರಿಯೇತರ – ಅಧ್ಯಯನ ಶಿಬಿರ ಶಿವರಾಮ ಕಾರಂತ ಅಧ್ಯಯನ ಕೇಂದ್ರ ಮತ್ತು ಕರ್ನಾಟಕ ಸಂಘದ ಸಹಯೋಗದಲ್ಲಿ ನಡೆಯಿತು. ಈ ಶಿಬಿರವನ್ನು ಮಂಗಳೂರು ವಿಶ್ವವಿದ್ಯಾಲಯದ ರಿಜಿಸ್ಟ್ರಾರ್ ಸುಂದರನಾಯಕ್ ಉದ್ಘಾಟಿಸಿದರು. ಮುಖ್ಯ ಅತಿಥಿಯಾಗಿ ತಾಳ್ತಜೆ ವಸಂತಕುಮಾರ್ ಆಗಮಿಸಿದ್ದರು.

**ಮಂಗಳೂರು ವಿ.ವಿ. ಮಟ್ಟದ ಡಾ॥ ಎಸ್.ಎಲ್. ಭೈರಪ್ಪ ಸಾಹಿತ್ಯ ವಿಚಾರಗೋಷ್ಠಿ :**

೧೦–೦೭–೨೦೦೪ರಂದು ಭೈರಪ್ಪ ಸಾಹಿತ್ಯ ವಿಚಾರಗೋಷ್ಠಿ ಕಾಲೇಜಿನಲ್ಲಿ ಕರ್ನಾಟಕ ಸಂಘದ ಸಹಯೋಗದಲ್ಲಿ ನಡೆಯಿತು. ಇದರ ಉದ್ಘಾಟನೆಯನ್ನು ತಾಳ್ತಜೆ ವಸಂತಕುಮಾರ್ ಮಾಡಿದರು. ಈ ಸಂದರ್ಭದಲ್ಲಿ ಸಿ.ಎಚ್. ಕೃಷ್ಣ ಶಾಸ್ತ್ರಿ ಬಾಳಿಲ ಇವರ ಶಿಕ್ಷಣ ರಂಗ ಕೃತಿಯಲ್ಲಿ ಬಿಡುಗಡೆ ಮಾಡಲಾಯಿತು. ಗೋಷ್ಠಿಯಲ್ಲಿ ಭೈರಪ್ಪನವರ ಕಾದಂಬರಿಗಳ ವಸ್ತು ವಿನ್ಯಾಸ ಎಂಬ ವಿಷಯದ ಮೇಲೆ ವರದರಾಜ ಚಂದ್ರಗಿರಿ, ಸರ್ಕಾರಿ ಕಾಲೇಜು ವಿಟ್ಲ, ಭೈರಪ್ಪನವರ ಕಾದಂಬರಿಗಳು ಸಾಂಸ್ಕೃತಿಕ ಮುಖಾಮುಖಿ ಎಂಬ ವಿಷಯದ ಬಗೆಗೆ ಕಮಲಾಕ್ಷ, ಕಾಸರಗೋಡು ಇವರು ತಮ್ಮ ಪ್ರಬಂಧಗಳನ್ನು ಮಂಡಿಸಿದರು. ಅನಂತರ ಎಸ್.ಎಲ್. ಭೈರಪ್ಪನವರೊಂದಿಗೆ ಸಂವಾದ ಕಾರ್ಯಕ್ರಮ ನಡೆಯಿತು.

**ಸಾಹಿತ್ಯ ಸೌರಭ :** ಪುತ್ತೂರು ಕರ್ನಾಟಕ ಸಂಘದ ಸಹಯೋಗದಲ್ಲಿ ನಡೆಸುತ್ತಿರುವ ಸಾಹಿತ್ಯ ಸೌರಭ ಕಾರ್ಯಕ್ರಮ ಒಂದು ವಿಶಿಷ್ಟ ಸಾಹಿತ್ಯಿಕ ಪ್ರಯೋಗ, ಗ್ರಾಮೀಣ ಮತ್ತು ಪಟ್ಟಣದ ಶಾಲೆಯ ವಿದ್ಯಾರ್ಥಿಗಳಲ್ಲಿ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯ ಬಗೆಗೆ ಅರಿವು ಮೂಡಿಸುವ ಉದ್ದೇಶದಿಂದ ಸಾಹಿತ್ಯ ಸೌರಭ ಕಾರ್ಯಕ್ರಮಗಳನ್ನು ಪ್ರತಿವರ್ಷವೂ ನಡೆಸಲಾಗುತ್ತಿದೆ. ಸಾಹಿತ್ಯದ ಪ್ರಚಾರಕ್ಕೆ ಹಮ್ಮಿಕೊಂಡ ವಿಶಿಷ್ಟ ಯೋಜನೆಯಿದು. ಕನ್ನಡ ಸಾಹಿತ್ಯದ ಪರಿಮಳವನ್ನು ಸುತ್ತಮುತ್ತಲಿನ ಹಳ್ಳಿಗಳಲ್ಲಿ, ಮುಖ್ಯವಾಗಿ ವಿದ್ಯಾಸಂಸ್ಥೆಗಳ ಮೂಲಕ ಪಸರಿಸುವುದು ಕಾರ್ಯಕ್ರಮದ ಗುರಿ, ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢಶಾಲೆಗಳಲ್ಲಿ ಕಾರ್ಯಕ್ರಮಗಳನ್ನು ಏರ್ಪಡಿಸುವುದರ ಕಡೆಗೆ ವಿಶೇಷ ಗಮನ ಹರಿಸಲಾಗಿದೆ.

**ಸಾಹಿತ್ಯ ಸೌರಭದ ಉದ್ದೇಶಗಳು ಹೀಗಿವೆ :**

೧. ಗ್ರಾಮೀಣ ಪರಿಸರದ ಜನರಲ್ಲಿ ಕನ್ನಡ ಸಾಹಿತ್ಯದ ಬಗೆಗೆ ಜಾಗೃತಿ ಮೂಡಿಸುವುದು.

೨. ಕಾರ್ಯಕ್ರಮಗಳಲ್ಲಿ ಹಳ್ಳಿ ಶಾಲೆಗಳ ವಿದ್ಯಾರ್ಥಿಗಳು ಪಾಲ್ಗೊಳ್ಳುವಂತೆ ಮಾಡಿ. ಅವರ ಭಾಷಾಭಿಮಾನವನ್ನು ಹುರಿದುಂಬಿಸುವುದು.

೩. ಬೇರೆ ಬೇರೆ ಊರುಗಳಲ್ಲಿ ಕಾವ್ಯ ವಾಚನ, ಪ್ರವಚನ, ನಾಟಕ, ಭಾಷಣ, ಕವಿತಾರಚನೆ ಇತ್ಯಾದಿಗಳ ಮೂಲಕ ಕನ್ನಡದ ಪರಿಚಾರಿಕೆ ಮಾಡುತ್ತಿರುವ ಹಿರಿಯರನ್ನು ಗೌರವಿಸಿ ಅವರಿಂದ ಕಿರಿಯರು ಸ್ಫೂರ್ತಿ – ಮಾರ್ಗದರ್ಶನ ಪಡೆಯುವಂತೆ ಮಾಡುವುದು.

೪. ಹಳ್ಳಿಗಳ ಎಳೆಯ ಮತ್ತು ಯುವ ಪ್ರತಿಭಾವಂತರನ್ನು ಗುರುತಿಸಿ ಅವರನ್ನು ಬೆಳಕಿಗೆ ತರುವುದು.

೫. ಕನ್ನಡಿಗರಲ್ಲಿ ಸಾಹಿತ್ಯಾಸಕ್ತಿ ಹೆಚ್ಚಾಗಬೇಕಾದರೆ ಒಳ್ಳೆಯ ಕೃತಿಗಳನ್ನು ಅವರು ಓದುವಂತೆ ಪ್ರೇರೇಪಿಸುವುದು ಅಗತ್ಯವಾದುದರಿಂದ ಪುಸ್ತಕ ಪ್ರದರ್ಶನ ಮತ್ತು ಮಾರಾಟವನ್ನು ವ್ಯವಸ್ಥೆಗೊಳಿಸಿ ಕಡಿಮೆ ಬೆಲೆಯ ಉತ್ತಮ ಹೊತ್ತಿಗೆಗಳನ್ನು ಅವರು ಕೊಳ್ಳುವಂತೆ ಮಾಡುವುದು.

೬. ಸಾಹಿತ್ಯ–ಸಂಸ್ಕೃತಿ ಮೊದಲಾದವು ದೊಡ್ಡ ಪೇಟೆ ಪಟ್ಟಣಗಳ ಜನರಿಗೆ ಸೀಮಿತವಾದುವೆಂಬ ಭ್ರಮೆಯನ್ನು ಹೋಗಲಾಡಿಸಿ ಬಡವ–ಬಲ್ಲಿದ, ಹಿರಿಯ–ಕಿರಿಯ, ಸ್ತ್ರೀ–ಪುರುಷರೆಂಬ ವ್ಯತ್ಯಾಸವಿಲ್ಲದೆ ಎಲ್ಲರೂ ಕನ್ನಡ ನುಡಿಯ, ನಾಡಿನ ಸೇವೆಗೆ ತಕ್ಕವರೆಂಬ ಎಚ್ಚರವನ್ನು ಮೂಡಿಸುವುದು.

೭. ವಿದ್ವಾಂಸರಿಂದ ಉಪನ್ಯಾಸಗಳನ್ನು ಏರ್ಪಡಿಸಿ ಕನ್ನಡದ ಕವಿ–ಲೇಖಕ ಪಂಡಿತರ ಪರಿಚಯವನ್ನು ಜನಸಾಮಾನ್ಯರಿಗೆ ಮಾಡಿಕೊಡುವುದು. ಇಲ್ಲಿಂದ ಮುಂದೆ ಪುತ್ತೂರು ಹಾಗೂ ಇಲ್ಲಿನ ಪರಿಸರದ ಹಲವು ಶಾಲೆಗಳಲ್ಲಿ ಸಾಹಿತ್ಯ ಸೌರಭ ಯಶಸ್ವಿಯಾಗಿ ನಡೆದಿದೆ.

**ಪುಸ್ತಕ ಪ್ರಕಾಶನ – ಬೆಳಕು ಕಂಡ ಬರವಣಿಗೆ :** ಕನ್ನಡ ಸಂಘವು ಇದುವರೆಗೆ ೨೦ ವೈವಿಧ್ಯಮಯ ಕೃತಿಗಳನ್ನು ಪ್ರಕಟಿಸಿದೆ. ವಿವಿಧ ವಿದ್ಯಾರ್ಥಿ ಲೇಖಕರ 'ಮಿಡಿತ' (೧೯೭೬) ಕಥಾಸಂಕಲನ ಕನ್ನಡ ಸಂಘದ ಮೊದಲ ಪ್ರಕಟಣೆ. ನವ್ಯ ಧಮನಿ ಪ್ರಕಟಿತ ಮೊದಲ ಕವನ ಸಂಕಲನ, ವಿವಿಧ ಕವಿಗಳು ಬರೆದ ಕವನಗಳು ಇದರಲ್ಲಿವೆ. ಅಮೃತ ಸೋಮೇಶ್ವರ ಅವರ 'ಅವಿಲು' (೧೯೭೮), ಕೃಷ್ಣ ಚೆನ್ನಂಗೋಡು ಅವರ ಅ(ನ)ಪೇಕ್ಷಿತ' (೧೯೭೯), ತಾಳ್ತಜೆ ವಸಂತಕುಮಾರರ 'ಸಿಂಗಾರ' (೧೯೮೧), ಶ್ರೀಕೃಷ್ಣ ಚೆನ್ನಂಗೋಡು ಅವರ 'ಇಲ್ಲದೆ ಇದ್ದಾಗ' (೧೯೮೬), ರಾಮಕೃಷ್ಣ ಟಿ. ಶೆಟ್ಟಿಯವರ 'ವರ್ಣನಾತ್ಮಕ ತುಳುವ್ಯಾಕರಣ' ಬೊಳುವಾರು ಪಿ. ಮಾಧವ ನಾಯಕರ 'ವ್ಯಕ್ತಿ ವಿಚಾರ' (೧೯೯೦) ಎಂ.ಎಸ್. ರಾಮಸ್ವಾಮಿಯವರ ಮಿಡಿತ (೨೦೦೪) ಕವನ ಸಂಕಲನ ಕನ್ನಡ ಸಂಘದಿಂದ ಹೊರಬಂದ ಕೆಲವು ಪ್ರಮುಖ ಕೃತಿಗಳು.

ವಿವೇಕಾನಂದ ಕಾಲೇಜಿನ ಬೆಳ್ಳಿಹಬ್ಬದ ಸಂದರ್ಭದಲ್ಲಿ ಅದೇ ಕಾಲೇಜಿನ ಆರು ಮಂದಿ ಉಪನ್ಯಾಸಕರ ಡಾಕ್ಟರೇಟ್ ಪ್ರಬಂಧಗಳ ಸಂಕ್ಷಿಪ್ತ ರೂಪವನ್ನು ಪ್ರಕಟಿಸಲಾಗಿದೆ. ಪೀಟರ್ ವಿಲ್ಸನ್ ಪ್ರಭಾಕರ್ ಅವರ ದ.ಕ.ದಲ್ಲಿ ಬಾಸೆಲ್ ಮಿಶನ್ (೧೯೯೦), ವಿಘ್ನೇಶ್ವರ ಅವರ ದ.ಕ. ಜಿಲ್ಲೆಯಲ್ಲಿ ವಾರದ ಸಂತೆಗಳು (೧೯೯೦), ಕೆ.ಪಿ.ಎಲ್. ಮೂಡಿತ್ತಾಯರ ದ್ರವಹರಳು (೧೯೯೦), ಕೆ. ವಿಷ್ಣು ಅವರ ಸೂರದಾಸ ರುದ್ರಭಟ್ಟ (೧೯೯೦), ಬಿ. ಶ್ರೀಧರ ಭಟ್ ಬರೆದ ಅಯಾನು ವಿನಿಮಯ ಕಾರಕಗಳು (೧೯೯೦), ಈ ಸಮಯದಲ್ಲಿ ಪ್ರಕಟಿತವಾದ ಕೃತಿಗಳು.

**ಸಾಧನೆಗೆ ಸಂದ ಗೌರವ–ಸಂಮ್ಮಾನ :** ಕನ್ನಡ ಸಂಘವು ಇದುವರೆಗೆ ನಾಡಿನ ಸುಪ್ರಸಿದ್ಧ ಸಾಹಿತಿಗಳು ಹಾಗೂ ಕಲಾವಿದರನ್ನು ಗುರುತಿಸಿ ಸನ್ಮಾನ ಮಾಡಿ ಮಾನ ಪತ್ರವನ್ನು ಅರ್ಪಣೆ ಮಾಡಿದೆ. ಸಾಹಿತ್ಯದಲ್ಲಿ ವಿಶಿಷ್ಟ ಸಾಧನೆ ಮಾಡಿರುವ ವಿದ್ವಾನ್ ಸೇಡಿಯಾಪು ಕೃಷ್ಣಭಟ್ಟ ಎಸ್.ವಿ. ಪರಮೇಶ್ವರ ಭಟ್ಟರನ್ನು ಸನ್ಮಾನಿಸಲಾಗಿದೆ. ಅಮೃತ ಸೋಮೇಶ್ವರ ಅವರಿಗೆ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ ಬಂದ ಸಂದರ್ಭದಲ್ಲಿ ಅವರನ್ನು ಪುತ್ತೂರು ಕರ್ನಾಟಕ ಸಂಘ ಮತ್ತು ಸಂತ ಫಿಲೋಮಿನಾ ಕಾಲೇಜು ಕನ್ನಡ ಸಂಘದ ಸಹಯೋಗಲದಲ್ಲಿ ಗೌರವಿಸಿದೆ.

೨೩-೦೮-೨೦೦೦ದಂದು ಕನ್ನಡ ಸಂಘದ ಬೆಳ್ಳಿಹಬ್ಬವನ್ನು ಆಚರಿಸುವ ಸಂದರ್ಭದಲ್ಲಿ ಈ ಸಂಘವನ್ನು ಆರಂಭಿಸಿ, ಬೆಳೆಯಲು ಕಾರಣರಾದ ಅಂದಿನ ಪ್ರಿನ್ಸಿಪಾಲರಾಗಿದ್ದ ಎಂ.ಎಸ್. ಅಪ್ಪ, ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದ ಅಮೃತ ಸೋಮೇಶ್ವರ, ಕನ್ನಡ ಸಂಘದ ಮೊದಲ ಅಧ್ಯಕ್ಷರಾಗಿದ್ದ ತಾಳ್ತಜೆ ವಸಂತ ಕುಮಾರ ಇವರಿಗೆ ನುಡಿನಮನವನ್ನು ಸಲ್ಲಿಸುವುದರೊಂದಿಗೆ ಗೌರವಿಸಲಾಯಿತು.

**ವಾರಾಂತ್ಯ ಪತ್ರಿಕೋದ್ಯಮ ಶಿಬಿರ :** ವಿ. ಬಿ. ಅರ್ತಿಕಜೆಯವರು ಹಲವು ವರ್ಷಗಳಿಂದ ಸೀಮಿತ ವ್ಯಾಪ್ತಿಯಲ್ಲಿ ನಡೆಸಿಕೊಂಡು ಬರುತ್ತಿದ್ದ ಪತ್ರಿಕೋದ್ಯಮ ಶಿಬಿರವನ್ನು ವಾರಾಂತ್ಯ ಪತ್ರಿಕೋದ್ಯಮ ಶಿಬಿರವಾಗಿ ಮಾರ್ಪಾಡುಗೊಳಿಸಲಾಗಿದೆ. ವಿದ್ಯಾರ್ಥಿಗಳಿಗೆ ಪತ್ರಿಕೋದ್ಯಮದ ಬಗೆಗೆ ಪ್ರಾಥಮಿಕ ತರಬೇತಿಯನ್ನು ನೀಡಲು ಕನ್ನಡ ವಿಭಾಗವು ವಾರಾಂತ್ಯ ಪತ್ರಿಕೋದ್ಯಮ ತರಗತಿಗಳನ್ನು ವ್ಯವಸ್ಥಿತವಾಗಿ ನಡೆಸುತ್ತಾ ಬಂದಿದೆ. ಇದು ವಿದ್ಯಾರ್ಥಿಗಳಿಗೆ ಬರವಣಿಗೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲು ವೇದಿಕೆ ಯಾಗಿ ಪರಿಣಮಿಸಿದೆ. ಮಾತ್ರವಲ್ಲ, ಪತ್ರಿಕಾ ಬರಹಗಳನ್ನು ನೋಡುವ ದೃಷ್ಟಿಯನ್ನು ಬದಲಿಸಿದೆ.

**ಸಾಂಸ್ಕೃತಿಕ ಕಾರ್ಯಕ್ರಮಗಳು :** ಕನ್ನಡ ಸಂಘದ ಸಹಾಯಾರ್ಥ ೦೫-೦೩-೧೯೭೬ ರಂದು ಪುತ್ತೂರಿನಲ್ಲಿ ಇರಾ ಸೋಮನಾಥೇಶ್ವರ ಯಕ್ಷಗಾನ ಮಂಡಳಿ, ಕುಂಡಾವು ಮೇಳ ಇವರಿಂದ 'ರಾಜಮುದ್ರಿಕೆ' ಪ್ರಸಂಗದ ಯಕ್ಷಗಾನ ಬಯಲಾಟವನ್ನು ಹಮ್ಮಿಕೊಳ್ಳಲಾಗಿತ್ತು. ೧೯-೦೨-೧೯೭೬ರಲ್ಲಿ ಯಕ್ಷಗಾನ ಗೊಂಬೆಯಾಟ ನರಕಾಸುರ ವಧೆ ಪ್ರಸಂಗವನ್ನು ಕೊಗ್ಗಣ್ಣ ಕಾಮತ್ ನೇತೃತ್ವದಲ್ಲಿ ಆಡಿಸಲಾಗಿತ್ತು. ಅಲ್ಲದೆ ಇನ್ನೊಂದು ಸಂದರ್ಭದಲ್ಲಿ ಶೇಣಿ ಗೋಪಾಲಕೃಷ್ಣ ಭಟ್ ಇವರಿಂದ ಹರಿಕಥೆಯನ್ನು ಮಾಡಿಸಲಾಗಿತ್ತು[೧೩].

೨೨-೦೯-೨೦೦೦ದಂದು ಬೆಳ್ತಂಗಡಿ ಗಮಕ ಕಲಾಪರಿಷತ್ತಿನ ಅಧ್ಯಕ್ಷರಾದ ಸುಬ್ರಹ್ಮಣ್ಯ ಭಟ್ ಗಮಕವಾಚಕ ಕಾರ್ಯಕ್ರಮವನ್ನು ನಡೆಸಿಕೊಟ್ಟರು. ವ್ಯಾಖ್ಯಾನಕಾರರಾಗಿ ಬರೆ ಕೇಶವ ಭಟ್ ಸಹಕರಿಸಿದ್ದರು. ೨೩-೦೮-೨೦೦೩ರಂದು ಸಂಸಾರ ತಂಡದವರಿಂದ ಪುಸ್ತಕದ ಅರ್ಜಿ ಮತ್ತು ಮರರಕ್ಕಸ ನಾಟಕ, ೨೮-೦೮-೨೦೦೩ರಂದು ಕನಕ ಹಾ.ಮಾ. ಇವರಿಂದ ಕವಿಸಮಯ ಏಕವ್ಯಕ್ತಿ ರಂಗಪ್ರಸ್ತುತಿ, ೨೬-೦೯-೨೦೦೩ರಂದು ಗುರುರಾಜ ಮಾರ್ಪಳ್ಳಿಯವರಿಂದ ಯಕ್ಷಸಂಗೀತ ಮತ್ತು ಸೌಂದರ್ಯ ಲಹರಿ ಸಂಗೀತ ಕಾರ್ಯಕ್ರಮ. ೦೬-೧೨-೨೦೦೩ರಂದು ಅಧ್ಯಾಪಕರು ಮತ್ತು ವಿದ್ಯಾರ್ಥಿಗಳಿಂದ ಯಕ್ಷಗಾನ ತಾಳಮದ್ದಳೆ ಶೂರ್ಪಣಖಾ ಮಾನಭಂಗ ಕಾರ್ಯಕ್ರಮಗಳು ನಡೆದವು. ಇದರೊಂದಿಗೆ ಭಾವಗೀತೆ, ಶಾಸ್ತ್ರೀಯ ಸಂಗೀತದಂತಹ ಕಾರ್ಯಕ್ರಮಗಳು ಕನ್ನಡ ಸಂಘದ ಆಶ್ರಯದಲ್ಲಿ ನಡೆದಿವೆ.

ವಿವೇಕಾನಂದ ಕಾಲೇಜು ಕನ್ನಡ ಸಂಘವು ಪ್ರಾರಂಭದಿಂದಲೂ ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಮೂಲಕ ವಿದ್ಯಾರ್ಥಿಗಳಿಗೆ ಸಾಹಿತ್ಯದ ಬಗ್ಗೆ ಅಭಿರುಚಿ ಮೂಡಿಸುವಲ್ಲಿ ಯಶಸ್ವಿಯಾಗಿದೆ. ಇದರಿಂದ ಕನ್ನಡ ಸಾಹಿತ್ಯವು ಈ ಪರಿಸರದಲ್ಲಿ ಬೆಳೆಯಲು ಅನುಕೂಲವಾಗಿದೆ.

**೬.೨.೦. ಸಾಹಿತ್ಯ ಪರಿಷತ್ತಿನ ಚಟುವಟಿಕೆ :**

ಪುತ್ತೂರು ತಾಲೂಕು ಸಾಹಿತ್ಯ ಪರಿಷತ್ ಪ್ರಾರಂಭವಾದುದು ೨೪-೧೧-೧೯೮೦ ರಂದು[೧೪]. ಪುತ್ತೂರಿನ ಅನುರಾಗ ವಠಾರದಲ್ಲಿ ಜಿ. ಎಲ್. ಆಚಾರ್ಯ ಇವರ ಅಧ್ಯಕ್ಷತೆಯಲ್ಲಿ ಸಭೆ ನಡೆಯಿತು. ಅಂದಿನ ಸಭೆಯಲ್ಲಿ ಗೌರವ ಅಧ್ಯಕ್ಷರಾಗಿ ವಿ. ಬಿ. ಮೊಳೆಯಾರ ಆಯ್ಕೆಯಾದರು. ಕಾರ್ಯದರ್ಶಿಯಾಗಿ ಬಿ. ಐತ್ತಪ್ಪ ನಾಯ್ಕ, ಸಹಕಾರ್ಯದರ್ಶಿಯಾಗಿ ದುರ್ಗಾಪ್ರಸಾದ್ ರೈ, ಉಪಾಧ್ಯಕ್ಷರಾಗಿ ಬಿ. ಪುರಂದರ ಭಟ್, ಸಹ ಕಾರ್ಯದರ್ಶಿಯಾಗಿ ಗಣರಾಜ್ ಕುಂಬ್ಳೆ ಆಯ್ಕೆಯಾಗಿ ಸದಸ್ಯರಾಗಿ ಪೀಟರ್ ವಿಲ್ಸನ್, ವಿ.ಬಿ. ಅರ್ತಿಕಜೆ, ಕೆ.ಪಿ. ಶೆಟ್ಟಿ, ಶ್ರೀಮತಿ ಜಯಶ್ರೀ, ಜಿ.ಟಿ. ಭಟ್, ಅಬ್ರಹಾಂ ವರ್ಗೀಸ್ ನೆಲ್ಯಾಡಿ, ರಘುನಾಥ ಎಸ್, ಪಾಲ್ತಾಡಿ ರಾಮಕೃಷ್ಣ ಆಚಾರ್, ಶ್ರೀಮತಿ ಹೇಮಲತಾ ಖಂಡೇರಿ, ಹರಿನಾರಾಯಣ ಮಾಡಾವು, ವೇದವ್ಯಾಸ್, ಹೆಚ್. ಜಿ. ಶ್ರೀಧರ್ ಆಯ್ಕೆಯಾದರು.

ಪ್ರಾರಂಭದಲ್ಲಿ ಅತ್ಯಂತ ಉತ್ಸಾಹದಿಂದ ಕಾರ್ಯನಿರ್ವಹಿಸಿದ ಈ ಸಾಹಿತ್ಯ ಪರಿಷತ್ ಘಟಕ ಅನೇಕ ಕಾರ್ಯಕ್ರಮಗಳನ್ನು ನಡೆಸಿಕೊಟ್ಟಿದೆ. ಡಿಸೆಂಬರ್ ೨೯, ೨೦೦೧ರಂದು ಕನ್ನಡ ಎಚ್ಚರ ಕಾರ್ಯಕ್ರಮ ನಡೆದು ಲಕ್ಷ್ಮೀಶ ತೋಳ್ಪಾಡಿ ಮತ್ತು ವಿ.ಗಾ. ನಾಯಕ್ ಬಂಟ್ವಾಳ ಇವರು ಸಂಪನ್ಮೂಲ ವ್ಯಕ್ತಿಯಾಗಿ ಭಾಗವಹಿಸಿ ಕನ್ನಡ ಭಾಷೆಯ ಬಗ್ಗೆ ಅರಿವು ಮೂಡಿಸಿ ಕನ್ನಡ ಭಾಷೆಯ ಬಗ್ಗೆ ಒಲವು ಮೂಡಿಸುವಲ್ಲಿ ಪ್ರಯತ್ನ ಮಾಡಿದರು. ಈ ಕಾರ್ಯಕ್ರಮದಲ್ಲಿ ಸುಬ್ರಾಯ ಚೊಕ್ಕಾಡಿ ಅಧ್ಯಕ್ಷರಾಗಿದ್ದರು.

ಪ್ರತಿವರ್ಷ ಶಾಲಾ-ಕಾಲೇಜುಗಳ ಮಕ್ಕಳಿಗಾಗಿ ಪ್ರಬಂಧ ಭಾಷಣ ಸ್ಪರ್ಧೆಯನ್ನು ಏರ್ಪಡಿಸಿ ಬಹುಮಾನಗಳನ್ನು ನೀಡುತ್ತಿದ್ದರು[೧೫]. ಪುತ್ತೂರು ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ಇದುವರೆಗೆ ಹನ್ನೆರಡು ಸಮ್ಮೇಳನಗಳು ನಡೆದಿವೆ.

| ಪುತ್ತೂರು ತಾಲೂಕು ಕನ್ನಡ ಸಾಹಿತ್ಯ ಸಮ್ಮೇಳನಗಳು | | | |
|---|---|---|---|
| | ದಿನಾಂಕ | ಸ್ಥಳ | ಸಮ್ಮೇಳನಾಧ್ಯಕ್ಷರು |
| ಪ್ರಥಮ ಸಮ್ಮೇಳನ | ೧೯-೩-೧೯೯೪ | ಪುತ್ತೂರು ಪುರಭವನ | ಶ್ರೀ ಕೆದಂಬಾಡಿ ಜತ್ತಪ್ಪ ರೈ |
| ಎರಡನೆಯ ಸಮ್ಮೇಳನ | ೨೯-೧-೧೯೯೫ | ಉಪ್ಪಿನಂಗಡಿ ಸ. ಪ. ಪೂ., ಕಾಲೇಜು | ಶ್ರೀ ತಾಳ್ತಜೆ ಕೃಷ್ಣ ಭಟ್ |
| ಮೂರನೆಯ ಸಮ್ಮೇಳನ | ೪-೨-೧೯೯೬ | ಸುಬೋಧ ಪ್ರೌಢಶಾಲೆ, ಪಾಣಾಜೆ | ಶ್ರೀ ಬೋಳಂತಕೋಡಿ ಈಶ್ವರ ಭಟ್ |
| ನಾಲ್ಕನೆಯ ಸಮ್ಮೇಳನ | ೫-೧-೧೯೯೭ | ದ.ಕ.ಜಿ.ಪ.ಹಿ.ಪ್ರಾ. ಶಾಲೆ, ಸವಣೂರು | ಪ್ರೊ. ಲೀಲಾಭಟ್ |
| ಐದನೆಯ ಸಮ್ಮೇಳನ | ೨೩-೧೧-೧೯೯೭ | ಸಂತ ಜೋಕಿಮರ ಹಿರಿಯ ಪ್ರಾಥಮಿಕ ಶಾಲೆ, ಕಡಬ | ಪ್ರೊ. ವಿ. ಬಿ. ಮೊಳೆಯಾರ |
| ಆರನೆಯ ಸಮ್ಮೇಳನ | ೨-೧-೨೦೦೦ | ಶ್ರೀ ಪಂಚಲಿಂಗೇಶ್ವರ ದೇವಳದ ವಠಾರ, ಕಾವು | ಡಾ। ಶಂಕರ ಖಂಡೇರಿ |
| ಏಳನೆಯ ಸಮ್ಮೇಳನ | ೨೨-೪-೨೦೦೧ | ಪುರಭವನ ಪುತ್ತೂರು | ಶ್ರೀ ಶಂಪಾ ದೈತೋಟ |
| ಎಂಟನೆಯ ಸಮ್ಮೇಳನ | ೨೦-೧-೨೦೦೨ | ಸಂತ ಜಾರ್ಜ್ ಪದವಿ ಪೂರ್ವ ಕಾಲೇಜು, ನೆಲ್ಯಾಡಿ | ಶ್ರೀ ಬಿ. ಪುರಂದರ ಭಟ್ |
| ಒಂಬತ್ತನೆಯ ಸಮ್ಮೇಳನ | ೮-೧೨-೨೦೦೨ | ಶ್ರೀ ರಾಮಕುಂಜೇಶ್ವರ ಸಂಸ್ಕೃತ ಹಿ. ಪ್ರಾ. ಶಾಲೆ, ರಾಮಕುಂಜ | ಶ್ರೀ ಕುದ್ಕಾಡಿ ವಿಶ್ವನಾಥ ರೈ |
| ಹತ್ತನೆಯ ಸಮ್ಮೇಳನ | ೧೧-೧-೨೦೦೪ | ಪ್ರಗತಿ ವಿದ್ಯಾ ಸಂಸ್ಥೆಯ ವಠಾರ, ಕಾಣಿಯೂರು | ಡಾ। ಪಾಲ್ತಾಡಿ ರಾಮಕೃಷ್ಣ ಆಚಾರ್ |
| ಹನ್ನೊಂದನೆಯ ಸಮ್ಮೇಳನ | ೧೩-೨-೨೦೦೫ | ಸಂನ್ಯಾಸಿಗುಡ್ಡೆ | ಶ್ರೀಮತಿ ಎ. ಪಿ. ಮಾಲತಿ |
| ಹನ್ನೆರಡನೆ ಸಮ್ಮೇಳನ | ೧೩-೧-೨೦೦೮ | ಸಂತ ಫಿಲೋಮಿನಾ ಕಾಲೇಜು, ಪುತ್ತೂರು | ಪ್ರೊ. ವಿ. ಬಿ. ಅರ್ತಿಕಜೆ |

ಪ್ರತಿಯೊಂದು ಸಮ್ಮೇಳನದಲ್ಲೂ ಒಂದೊಂದು ವಿಷಯವನ್ನು ಎತ್ತಿಕೊಂಡು ಅವುಗಳ ಬಗ್ಗೆ ವಿಶೇಷವಾದ ಗೋಷ್ಠಿಗಳನ್ನು ನಡೆಸುವುದರೊಂದಿಗೆ, ಅನೇಕ ವಿಚಾರಗಳ ಬಗ್ಗೆ ಚರ್ಚೆ ನಡೆಸಿ, ಪುತ್ತೂರು ತಾಲೂಕಿನಲ್ಲಿ ಕನ್ನಡ ಸಾಹಿತ್ಯವನ್ನು ಯಾವ ರೀತಿ ಬೆಳೆಸಬಹುದು ಎಂಬ ಬಗ್ಗೆ ಚರ್ಚೆ ನಡೆಸಿ, ಇಲ್ಲಿನ ಯುವ ಜನಾಂಗಕ್ಕೆ ಎಳವೆಯಿಂದಲೇ ಕನ್ನಡ ಸಾಹಿತ್ಯದ ಮೇಲೆ ಆಸಕ್ತಿ ಉಂಟಾಗುವಂತೆ ಮಾಡಿ, ಈ ಪ್ರದೇಶದಲ್ಲಿ ಕನ್ನಡ ಸಾಹಿತ್ಯ ಸದಾಕಾಲ ಉಳಿಯುವುದರೊಂದಿಗೆ ಅದನ್ನು ಮುಂದುವರಿಸಿಕೊಂಡು ಹೋಗಲು ಪ್ರಯತ್ನಿಸಲಾಗುತ್ತದೆ.

ಪುತ್ತೂರು ತಾಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಪ್ರಾರಂಭದಲ್ಲಿ ಎಂ. ವಿಠಲ ನಂತರ ಪಾಲ್ತಾಡಿ ರಾಮಕೃಷ್ಣ ಆಚಾರ್, ತಾಳ್ತಜೆ ವಸಂತ ಕುಮಾರ್ ೨೦೦೬ರಿಂದ ೨೦೦೮ರ ವರೆಗೆ ವಿ.ಬಿ. ಅರ್ತಿಕಜೆ, ೨೦೦೮ ರಿಂದ ೨೦೧೦ರ ವರೆಗೆ ಜಿ.ಎಲ್. ಆಚಾರ್ಯ, ೨೦೧೦ ರಿಂದ ಈಗ ದುರ್ಗಾ ಪ್ರಸಾದ್ ರೈ ಕುಂಬ್ರ ಕಾರ್ಯನಿರ್ವಹಿಸುತ್ತಿದ್ದಾರೆ.

ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ಮತ್ತು ಸದಸ್ಯರು ಇತ್ತೀಚಿನ ವರ್ಷಗಳಲ್ಲಿ ಹಳ್ಳಿಯಲ್ಲಿರುವ ಶಾಲಾ–ಕಾಲೇಜುಗಳಿಗೆ ಹೋಗಿ ಅಲ್ಲಿ ಪುಸ್ತಕ ಪ್ರದರ್ಶನ ಮತ್ತು ರಿಯಾಯಿತಿ ದರದಲ್ಲಿ ಪುಸ್ತಕಗಳ ಮಾರಾಟ, ಮಕ್ಕಳಿಗೆ ಅನೇಕ ಸಾಹಿತ್ಯಿಕ ಸ್ಪರ್ಧೆಗಳನ್ನು ನಡೆಸಿ ಅವುಗಳಲ್ಲಿ ಗೆದ್ದವರಿಗೆ ಪುಸ್ತಕ ರೂಪದಲ್ಲಿ ಬಹುಮಾನ ಗಳನ್ನು ನೀಡಲಾಗುತ್ತಿದೆ. ತಾಲೂಕು ಸಾಹಿತ್ಯ ಸಮ್ಮೇಳನಗಳಲ್ಲಿ ನಡೆದ ಸ್ಥಳಗಳಲ್ಲಿ ಕನ್ನಡ ಸಂಘಗಳನ್ನು ಸ್ಥಾಪಿಸಿ, ಸಾಹಿತ್ಯ ಸಮ್ಮೇಳನದಲ್ಲಿ ಉಳಿಕೆ ಹಣವನ್ನು ಆ ಸಂಘಕ್ಕೆ ನೀಡಿ ಪ್ರತಿವರ್ಷ ಅಲ್ಲಿ ಸಾಹಿತ್ಯಿಕ ಕಾರ್ಯಕ್ರಮಗಳನ್ನು ಸಕ್ರಿಯವಾಗಿ ನಡೆಯುವಂತೆ ನೋಡಿಕೊಳ್ಳುತ್ತಿದ್ದಾರೆ.

**೬.೩.೦. ಕಲಾಸಂಸ್ಥೆಗಳು, ಮೇಳಗಳು, ಕಲಾವಿದರು :**

ಪುತ್ತೂರಿನಲ್ಲಿ ಕಲೆಯನ್ನು ಪ್ರೋತ್ಸಾಹಿಸಿ ಬೆಳೆಸುವ ನಿಟ್ಟಿನಲ್ಲಿ ಅನೇಕ ಕಲಾ ಸಂಸ್ಥೆಗಳು ಪ್ರಾರಂಭಗೊಂಡಿವೆ. ಅವುಗಳು ಹೀಗಿವೆ.

೧. **ವಿಶ್ವಕಲಾನಿಕೇತನ :** ೧೯೫೭ರಲ್ಲಿ ಪ್ರಾರಂಭಿಸಲ್ಪಟ್ಟ ವಿಶ್ವಕಲಾನಿಕೇತನ ಲಲಿತಕಲಾ ಕೇಂದ್ರವು ಕಲೆಯು ಕೇವಲ ಶ್ರೀಮಂತರ ಸೊತ್ತಾಗಿ ಉಳಿಯದೆ ಸಾಮಾನ್ಯರಿಗೂ ಕೈಗೆಟಕುವಂತೆ ಇರಬೇಕು ಎಂಬ ಧೋರಣೆಯನ್ನು ಹೊಂದಿದೆ. ನೃತ್ಯದ ವ್ಯಾಯಾಮದಿಂದ ಕಾಯಿಲೆಗಳನ್ನು ಮತ್ತು ಕೆಲವೊಂದು ದೈಹಿಕ ನ್ಯೂನತೆಗಳನ್ನು ನಿವಾರಿಸಲು ಸಾಧ್ಯವೆಂದು ಅದು ತೋರಿಸಿಕೊಟ್ಟಿದೆ[೧].

ವಿಶ್ವಕಲಾನಿಕೇತನದ ಸ್ಥಾಪಕರೂ, ನಿರ್ದೇಶಕರೂ ಆಗಿರುವ ಕುದ್ಕಾಡಿ ವಿಶ್ವನಾಥ ರೈಯವರು ಹಲವಾರು ಪ್ರತಿಭೆಗಳನ್ನು ಗುರುತಿಸಿ ಪ್ರಾಥಮಿಕ ಮಾರ್ಗದರ್ಶನ ಮಾಡುತ್ತಾ ಬಂದಿದ್ದಾರೆ. ಅವರ ಪತ್ನಿ ನಯನ ವಿ. ರೈಯವರು ಸ್ವತಃ ನಾಟ್ಯ ವಿದುಷಿಯಾಗಿದ್ದು ಸಂಸ್ಥೆಯ ಮುನ್ನಡೆಯಲ್ಲಿ ಪತಿಗೆ ನೆರವಾಗುತ್ತಿದ್ದಾರೆ.

ಭಾರತೀಯ ನೃತ್ಯ ಪ್ರಕಾರಗಳ ಜತೆಗೆ ಸಿಂಹಳದ ನಾಟ್ಯ ಪದ್ಧತಿಯನ್ನು ಚೆನ್ನಾಗಿ ಬಲ್ಲ ರೈಯವರು ಹಲವಾರು ನೃತ್ಯರೂಪಕ, ನೃತ್ಯ ನಾಟಕಗಳನ್ನು ತಯಾರಿಸಿ ನಿರ್ದೇಶಿಸಿದ್ದಲ್ಲದೆ ದೇಶದ ಹಲವೆಡೆಗಳಲ್ಲಿ ನೃತ್ಯ ಪ್ರಾತ್ಯಕ್ಷಿಕೆ ನೀಡಿ ಮಾರ್ಗೀಯ ಮತ್ತು ಜಾನಪದ ದೇಶೀಯ ಪದ್ಧತಿಗಳೊಳಗಿನ ಸಮನ್ವಯದ ಪರಿಚಯ ಮಾಡಿಕೊಟ್ಟಿದ್ದಾರೆ.

**೨. ಜೇಸಿಯವರ ನೃತ್ಯ ಮತ್ತು ಸಂಗೀತ ಶಾಲೆ :**

ಮಡಿಕೇರಿಯ ಭಾರತೀಯ ಸಂಗೀತ ನೃತ್ಯ ಕಲಾಶಾಲೆಯ ಪುತ್ತೂರು ಶಾಖೆಯು 'ಜೇಸಿಸ್ ಸ್ಕೂಲ್ ಆಫ್ ಡ್ಯಾನ್ಸ್ ಆ್ಯಂಡ್ ಮ್ಯೂಸಿಕ್' ಎಂಬ ಹೆಸರಿನೊಂದಿಗೆ ೧೯೮೯ನೇ ಇಸವಿ ನವೆಂಬರ್ ೯ ರಂದು ಅಸ್ತಿತ್ವಕ್ಕೆ ಬಂತು. ಕೇವಲ ಆರು ಮಂದಿ ವಿದ್ಯಾರ್ಥಿಗಳಿಂದ ಪ್ರಾರಂಭಗೊಂಡ ಈ ಶಾಲೆಯು ಸ್ಥಳೀಯ ಕಲಾ ಪೋಷಕರ ಸಹಕಾರದಿಂದ ಮುನ್ನಡೆದು ಈಗ ೬೦ಕ್ಕೂ ಹೆಚ್ಚು ವಿದ್ಯಾರ್ಥಿ ವಿದ್ಯಾರ್ಥಿನಿಯರು ಇಲ್ಲಿ ನೃತ್ಯಾಭ್ಯಾಸ ಮಾಡುತ್ತಿದ್ದಾರೆ. ಶಿಕ್ಷಕಿ ಕೆ. ಎಸ್. ರಾಜೇಶ್ವರಿ ಯವರು ಸಂಸ್ಥೆಯ ನಿರ್ದೇಶಕಿಯಾಗಿದ್ದು ೧೯೯೦ರ ಸಪ್ಟಂಬರ್‌ನಿಂದ ನೃತ್ಯದ ಜತೆಗೆ ಕರ್ನಾಟಕ ಸಂಗೀತವನ್ನು ಕಲಿಸುತ್ತಿದ್ದಾರೆ.

ಈ ಶಾಲೆಯ ವಿದ್ಯಾರ್ಥಿ ದೀಪಕ್ ಕುಮಾರ್ ನಾಟ್ಯರಂಗದಲ್ಲಿ ಉತ್ತಮ ಭರವಸೆ ಮೂಡಿಸಿದ್ದು ರಾಷ್ಟ್ರೀಯ ಶಿಷ್ಯವೇತನ ಪಡೆದುಕೊಂಡಿದ್ದಾನೆ. ಸಂಸ್ಥೆಯ ವಿದ್ಯಾರ್ಥಿ-ವಿದ್ಯಾರ್ಥಿನಿ ಯರು ಹಲವೆಡೆಗಳಲ್ಲಿ ಕಾರ್ಯಕ್ರಮ ನೀಡಿದ್ದು ಇವರ ಧೂರ್ಪಾತಿ ನೃತ್ಯವು ತುಂಬ ಜನಪ್ರಿಯ ವಾಗಿದೆ.

**೩. ಶ್ರೀ ಲಕ್ಷ್ಮೀನಾರಾಯಣ ಸಂಗೀತ ಶಾಲೆ, ಕಾಂಚನ :**

ಸಂಗೀತ ರತ್ನ ಬಿರುದಾಂಕಿತರಾದ ಕಾಂಚನ ವೆಂಕಟ ಸುಬ್ರಹ್ಮಣ್ಯ ಅವರು ೧೯೩೪ರಲ್ಲಿ ಶ್ರೀಲಕ್ಷ್ಮೀನಾರಾಯಣ ಸಂಗೀತ ಶಾಲೆಯನ್ನು ಸ್ಥಾಪಿಸಿದರು[೨]. ಸುತ್ತಲಿನ ಗ್ರಾಮೀಣ ಪರಿಸರದಲ್ಲಿ ಸಂಗೀತಾಸಕ್ತಿಯನ್ನು ಉಂಟುಮಾಡಿ ಭಾರತೀಯ ಸಂಸ್ಕೃತಿಯ ಬಗೆಗೆ ಗೌರವ, ಎಚ್ಚರ ಮೂಡಿಸುವುದು ಸಂಸ್ಥೆಯ ಉದ್ದೇಶವಾಗಿತ್ತು. ೧೯೩೬ರಲ್ಲಿ ಇದನ್ನು ನೋಂದಾಯಿಸಲಾಯಿತು.

ತ್ಯಾಗರಾಜ ಆರಾಧನಾ ಸಪ್ತಾಹ, ಪುರಂದರದಾಸರ ದಿನ, ಮುತ್ತುಸ್ವಾಮಿ ದೀಕ್ಷಿತರ ದಿನ, ಶ್ಯಾಮಶಾಸ್ತ್ರಿಗಳ ದಿನ, ಗಣೇಶ ಚೌತಿ, ವಿದ್ಯಾದಶಮಿ, ರಾಮ ನವಮಿ ಮುಂತಾದ ಉತ್ಸವಗಳನ್ನು ಶಾಲೆಯು ನಡೆಸಿಕೊಂಡು ಬರುತ್ತಿದ್ದು ಖ್ಯಾತ ಕಲಾವಿದರ ಕಛೇರಿಗಳನ್ನು ಏರ್ಪಡಿಸುವುದರ ಜೊತೆಗೆ ಉದಯೋನ್ಮುಖರ ಪ್ರತಿಭಾ ಪ್ರದರ್ಶನಕ್ಕೆ ಅವಕಾಶ ಕಲ್ಪಿಸಿಕೊಟ್ಟಿದೆ.

ಇಲ್ಲಿ ಗುರುಕುಲ ಪದ್ಧತಿಯ ಶಿಕ್ಷಣ ರೂಢಿಯಲ್ಲಿದ್ದು ಕಾಂಚನ ಸುಬ್ಬರತ್ನಂ, ವಸಂತ ಪ್ರಭಾ, ವಿಜಯಲಕ್ಷ್ಮೀ, ಉಡುಪಿ ಗೋಪಾಲಕೃಷ್ಣ, ಎಚ್.ಪಿ. ಪಾಠಕ್, ಶ್ರೀನಾಥ ಮರಾಠೆ, ಯಕ್ಷಗಾನ ಭಾಗವತ ಎನ್. ಡಿ. ಮಂಡೆಚ್ಚ ಮುಂತಾದವರು ಈ ಸಂಸ್ಥೆಯಲ್ಲಿ ಪಳಗಿದವರು. ಸಂಗೀತ ಶಾಲೆಯನ್ನು ಸ್ಥಾಪಕರ ನೆನಪಿಗಾಗಿ ಮಹಾವಿದ್ಯಾಲಯವಾಗಿ ಪರಿವರ್ತಿಸುವ ಬಗ್ಗೆ ಯೋಚನೆಯಿದೆ.

**೩. ಶ್ರೀ ಉಮಾಮಹೇಶ್ವರ ಸಂಗೀತ ಶಾಲೆ, ಪುತ್ತೂರು :**

ಪ್ರಸಿದ್ಧ ವೈದ್ಯರಾದ ಬಡೆಕ್ಕಿಲ ಶಿವರಾಮ ಭಟ್ ಮತ್ತು ಸಂತ ಫಿಲೋಮಿನಾ ಪ್ರೌಢ ಶಾಲೆಯ ಮುಖ್ಯೋಪಾಧ್ಯಾಯ ಡೆನ್ನಿಸ್ ಡಿ'ಸೋಜಾ ಅವರು ಪುತ್ತೂರಿನಲ್ಲಿ ಶಾಸ್ತ್ರೀಯ ಸಂಗೀತ ಶಿಕ್ಷಣದ ಸೌಲಭ್ಯ ಅಗತ್ಯವೆಂದು ತಿಳಿದು ೧೯೭೭ರ ವೇಳೆಗೆ ಸ್ಥಾಪಿಸಿದ ಸಂಸ್ಥೆ ಶ್ರೀಉಮಾಮಹೇಶ್ವರ ಸಂಗೀತ ಶಾಲೆ. ಕಾಂಚನದ ವೆಂಕಟ ಸುಬ್ರಹ್ಮಣ್ಯ ಅಯ್ಯರ್ ಅವರ ಆಶೀರ್ವಾದ ಪಡೆದು, ಅವರ ಶಿಷ್ಯರಲ್ಲಿ ಒಬ್ಬರಾದ ಕಾಂಚನ ನಾರಾಯಣ ಭಟ್ಟರು ಶಾಲಾ ಮುಖ್ಯಸ್ಥರಾಗಿ ಸಂಸ್ಥೆಯನ್ನು ಚೆನ್ನಾಗಿ ನಡೆಸಿಕೊಂಡು ಬರುತ್ತಿದ್ದಾರೆ. ಸುಮಾರು ಹದಿನೈದು ವರ್ಷಗಳಿಂದೀಚೆಗೆ ಇದೇ ಶಾಲೆಯಲ್ಲಿ ಕುಕ್ಕಿಲ ಶಂಕರ ಭಟ್ಟರು ಮೃದಂಗವಾದನ ತರಗತಿಯನ್ನು ನಡೆಸುತ್ತಿದ್ದಾರೆ.

ಕಾಂಚನ ನಾರಾಯಣ ಭಟ್ಟರಿಂದ ಶಿಕ್ಷಣ ಪಡೆದ ಅನೇಕ ಪ್ರತಿಭಾವಂತ ಶಿಷ್ಯ-ಶಿಷ್ಯೆಯರು ಊರ-ಪರವೂರ ಸಮಾರಂಭಗಳಲ್ಲಿ ವಿದ್ವತ್ಪೂರ್ಣ ಕಛೇರಿಗಳನ್ನು ನಡೆಸುವಷ್ಟು ಪ್ರೌಢಿಮೆ ಗಳಿಸಿರುವುದಲ್ಲದೆ ಕೆಲವರು ತಮ್ಮದೇ ಆದ ಸಂಗೀತ ಶಾಲೆಗಳನ್ನು ತೆರೆದಿದ್ದಾರೆ. ಪ್ರತಿ ವರ್ಷ ಉಮಾಮಹೇಶ್ವರ ಶಾಲೆಯ ವತಿಯಿಂದ ವಿದ್ಯಾದಶಮಿಯಂದು ವಿದ್ಯಾರ್ಥಿ - ವಿದ್ಯಾರ್ಥಿನಿಯರ ಸಂಗೀತ ಗೋಷ್ಠಿ ನಡೆಯುತ್ತದೆ.

**೫. ಕಲಾರಂಗ, ಪುತ್ತೂರು :**

ಸಂಗೀತ, ನಾಟಕ ಇತ್ಯಾದಿ ಕಲೆಗಳಿಗೆ ಪ್ರೋತ್ಸಾಹವಿತ್ತು ಉತ್ತಮ ಅಭಿರುಚಿಯ ಪ್ರದರ್ಶನಗಳನ್ನು ಏರ್ಪಡಿಸುವ ಸಲುವಾಗಿ ರಂಗವು ೧೯೬೮ರಲ್ಲಿ ಪ್ರಾರಂಭಗೊಂಡಿತು.

ಎಂ. ಸದಾಶಿವರಾಯರು, ಅಧ್ಯಕ್ಷರಾಗಿಯೂ, ಡೆನ್ನಿಸ್ ಡಿ'ಸೋಜರು ಕಾರ್ಯದರ್ಶಿಯಾಗಿಯೂ ಆಯ್ಕೆಗೊಂಡರು. ಸದಸ್ಯರಿಗೆ ಉಚಿತವಾಗಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನೀಡಲಾಗುತ್ತಿತ್ತು.

ಎಂ.ಎಲ್. ವಸಂತಕುಮಾರಿ, ದೊರೆ ಸ್ವಾಮಿ ಅಯ್ಯಂಗಾರ್, ಬಿ. ಎನ್. ಸುರೇಶ್, ಭೀಮಸೇನ ಜೋಶಿ, ಬಸವರಾಜ ರಾಜಗುರು, ಆರ್.ಕೆ. ಶ್ರೀಕಂಠನ್, ನಾಗವಲ್ಲಿ ನಾಗರಾಜ್, ಸುಕನ್ಯಾ ಪ್ರಭಾಕರ್ ಮೊದಲಾದವರ ಸಂಗೀತ ಕೇಳುವ, ಸ್ತ್ರೀ ನಾಟಕ ಮಂಡಳಿ, ಗುಬ್ಬಿ ಕಂಪನಿ, ಹಿರಣ್ಣಯ್ಯ ಮಿತ್ರ ಮಂಡಳಿಗಳ ನಾಟಕ, ಚಂದ್ರಕಲಾ, ಶೈಲಶ್ರೀ, ಲಲಿತ, ಸುರೇಖಾ ಅವರ ನೃತ್ಯ ನೋಡುವ ಅವಕಾಶವನ್ನು ಕಲಾರಂಗ ಒದಗಿಸಿತು. ಡೊಳ್ಳು ಕುಣಿತ, ಕರಗ ನೃತ್ಯ, ಯಕ್ಷಗಾನ, ಪಿ.ಎಸ್. ಪುಣಿಚಿತ್ತಾಯ

ವರ್ಣ ಚಿತ್ರಗಾರಿಕೆ ಇತ್ಯಾದಿಗಳನ್ನು ಪ್ರದರ್ಶಿಸಿದ ಕಲಾರಂಗವು ಹಲವು ಮಂದಿ ಕಲಾವಿದರನ್ನು ಸಂಮಾನಿಸಿದೆ. ಸ್ವತಃ ಕಲಾವಿದರಾಗಿದ್ದ ನೇಮಿರಾಜರು ಕಲಾರಂಗದ ಯಶಸ್ಸಿಗೆ ಬಹುಮಟ್ಟಿಗೆ ಕಾರಣರಾದರು.

**೬. ದೃಶ್ಯ – ಪುತ್ತೂರು :**

೧೯೮೦ರ ದಶಕದಲ್ಲಿ ದ.ಕ. ಜಿಲ್ಲೆಯ ವಿವಿಧೆಡೆ ತೀವ್ರಗೊಂಡ ರಂಗ ಚಟುವಟಿಕೆಗಳಿಂದ ಪ್ರೇರಿತವಾದ ಪುತ್ತೂರಿನ ರಂಗಾಸಕ್ತರು ಆಧುನಿಕ ರಂಗಚಟುವಟಿಕೆಯಲ್ಲಿ ತಮ್ಮನ್ನು ತಾವು ಕ್ರಿಯಾಶೀಲರಾಗಿ ಗುರುತಿಸಿಕೊಳ್ಳಲು ೨೯–೦೧–೧೯೮೬ರಂದು ದೃಶ್ಯ ತಂಡವನ್ನು ಆರಂಭಿಸಿದರು. ಕವಿ ಹಾಗೂ ಶ್ರೀ ಸಾಮಾನ್ಯನ ನಡುವೆ ಸಾಕ್ಷರತೆ ಅಡ್ಡಬಂದು ಕವಿಯ ಆಶಯ ಶ್ರೀ ಸಾಮಾನ್ಯರಿಗೆ ತಲುಪದೆ ಹೋಗಬಹುದು. ರಂಗಭೂಮಿ ಈ ಅಡ್ಡಗೋಡೆಯನ್ನು ಕೆಡವಿ ಅಕ್ಷರಸ್ಥ – ಅನಕ್ಷರಸ್ಥ ಇಬ್ಬರನ್ನು ನೇರವಾಗಿ ತಲುಪುತ್ತದೆ. ಸಮೂಹ ಶಿಕ್ಷಣ ಮತ್ತು ಸಮೂಹ ಮನರಂಜನೆಗಳನ್ನು ಏಕಕಾಲದಲ್ಲಿ ನೀಡುತ್ತದೆ. ಸಾಹಿತ್ಯದ ಪ್ರಚಾರಕ್ಕೆ ಪೂರಕವಾದ ಸಶಕ್ತವಾದ ಮಾಧ್ಯಮವಾಗುತ್ತದೆ, ಎಂಬ ನಂಬಿಕೆಯನ್ನು ಇರಿಸಿಕೊಂಡು ದೃಶ್ಯ ತಂಡವು ಪುತ್ತೂರಿನಲ್ಲಿ ರಂಗ ಚಟುವಟಿಕೆಗಳನ್ನು ನಡೆಸಿತು.

ದ.ರಾ.ಬೇಂದ್ರೆಯವರ 'ಜಾತ್ರೆ' ನಾಟಕವನ್ನು ಎಸ್. ಎಸ್. ಭಟ್ಟರ ನಿರ್ದೇಶನದಲ್ಲಿ ದೃಶ್ಯ ತಂಡದ ಸದಸ್ಯರು ೨೫–೦೯–೧೯೮೬ರಂದು ಅಭಿನಯಿಸಿದರು. ಎಸ್.ಎಸ್. ಭಟ್ಟರ ನಿರ್ದೇಶನದಲ್ಲಿ ೧೯೮೮ರಲ್ಲಿ ಬೆಸಗರ ಹಳ್ಳಿ ರಾಮಣ್ಣರ 'ಕ್ಷಯ' ಕತೆಯನ್ನು ಆಧರಿಸಿ ರಚಿಸಿದ 'ನೈಟ್ ಡ್ಯೂಟಿ' ನಾಟಕವನ್ನು ದೃಶ್ಯ ತಂಡವು ಪ್ರದರ್ಶಿಸಿತು. ದೃಶ್ಯ ತಂಡವು ಎಂ.ಎನ್. ಕಾಮತರ ಪುನರ್ಜನ್ಮ, ಶಿವರಾಮ ಕಾರಂತರ ಗರ್ಭಗುಡಿ ಡಿ.ವಿ.ಜಿ.ಯವರ 'ಪರಶುರಾಮ' ನಾಟಕಗಳನ್ನು ಮತ್ತೆ ರಂಗಕ್ಕೆ

ತಂದಿತು. ಸ್ಥಳೀಯ ಲೇಖಕರಾದ ಕುದ್ಕಾಡಿ ವಿಶ್ವನಾಥ ರೈಗಳ 'ಯುಗಧರ್ಮ', ನಾರಾಯಣ ಕಂಗಿಲರ 'ಅವರೋಹಣ', ಬಿ. ಪುರಂದರ ಭಟ್‌ರ 'ಮಹರ್ಷಿ', 'ಚಾರ್ವಾಕ' ಅಮೃತ ಸೋಮೇಶ್ವರರ ತುಳುನಾಟಕ 'ಗೋಂದೋಳು' ವಿನ ಕನ್ನಡ ರೂಪಾಂತರಗಳನ್ನು ದೃಶ್ಯ ತಂಡದವರು ಪ್ರದರ್ಶಿಸಿದರು. ಕರ್ನಾಟಕ ನಾಟಕ ಅಕಾಡೆಮಿಯ ಆಶ್ರಯದಲ್ಲಿ ೧೯೮೮ರಲ್ಲಿ ಒಂದು ತಿಂಗಳ ರಂಗಕಮ್ಮಟ ನಡೆಸಿತು. ಧ್ರುವರಾಜ ದೇಶಪಾಂಡೆಯವರ ಮಾರ್ಗದರ್ಶನದಲ್ಲಿ ನಡೆದ ಈ ಶಿಬಿರದ ಕೊನೆಯಲ್ಲಿ ಬ್ರೇಕ್ಟ್ ರಚಿಸಿದ 'ಮಾನವತೆಯ ಅಪವಾದ' ನಾಟಕವನ್ನು ಪ್ರದರ್ಶಿಸಲಾಯಿತು.

೧೯೯೨ರಲ್ಲಿ ವೇಳೆಯಲ್ಲಿ ಮಕ್ಕಳ ನಾಟಕಗಳ ಬಗ್ಗೆ ಆಸಕ್ತಿ ಮೂಡಿಸಿಕೊಂಡ ದೃಶ್ಯ ತಂಡವು ಮಕ್ಕಳಿಗೆ ತರಬೇತಿ ಶಿಬಿರವನನ್ನು ನಡೆಸಿತು. ಐ.ಕೆ. ಬೊಳುವಾರು ಅವರು ಬೌ ಬೌ, ಟ್ರೇ ಟ್ರೇ ಹಾಗೂ ಎಂ. ಎನ್. ಕಾಮತ್‌ರ ಶಿಕ್ಷಣ ನಾಟಕಗಳನ್ನು ನಿರ್ದೇಶಿಸಿ ರಂಗಕ್ಕೆ ತಂದರು. ೧೯೯೨ರ ತನಕ ದೃಶ್ಯ ತಂಡವು ತನ್ನ ರಂಗ ಪ್ರಯೋಗ ರಂಗ ಕಮ್ಮಟ, ವಿಚಾರ ಗೋಷ್ಠಿಗಳಿಂದ ಪುತ್ತೂರು ಪರಿಸರದಲ್ಲಿ ಸಕ್ರಿಯವಾಗಿ ಕಾರ್ಯ ನಿರ್ವಹಿಸಿತು. ತನ್ಮೂಲಕ ಪುತ್ತೂರಿನಲ್ಲಿ ರಂಗ ಚಳುವಳಿಯ ಅಭಿವೃದ್ಧಿಗೆ ಕಾರಣವಾಯಿತು.

**೭. ನಿರತ ನಿರಂತ – ಗ್ರಾಮೀಣ ಕಲಾವಿದರ ಸಮುಚ್ಚಯ :**

೧೯೬೫ರಿಂದ ಮೊದಲ್ಗೊಂಡು ದಕ್ಷಿಣ ಕನ್ನಡ ಜಿಲ್ಲೆಯ ವಿವಿಧ ಮೂಲೆಗಳಲ್ಲಿ ಮಕ್ಕಳ ಸರ್ವಾಂಗೀಣ ಬೆಳವಣಿಗೆಯಾಗಾಗಿ ಮತ್ತು ಸಾಮಾಜಿಕ ಜಾಗೃತಿಗಾಗಿ ವಿವಿಧ ಕಲಾಪ್ರಕಾರಗಳಲ್ಲಿ ನಿರಂತರತೆಯನ್ನು ತೋರ್ಪಡಿಸುತ್ತಿದ್ದ ಕಲಾವಿದ ಸ್ನೇಹಿತರು ೧೯೯೦ರಲ್ಲಿ ಒಟ್ಟಾಗಿ ಸಮನ್ವಯಗೊಂಡು ನೀಡಿದಹೆಸರು ನಿರತ–ನಿರಂತ. ಸಂಪಾಜೆಯಲ್ಲಿ ನಿಸರ್ಗ ರಂಗಮಂಟಪ, ಮಕ್ಕಳ ರಂಗಶಿಬಿರ, ಮನೆಮನೆ ನಾಟಕಗಳು, ಪುತ್ತೂರು ಪರಿಸರದ ಶಾಲಾ ಮಕ್ಕಳಿಗಾಗಿ ರಂಗ ಕಾರ್ಯಾಗಾರ ಮತ್ತು ನಾಟಕ ಪ್ರದರ್ಶನ, ಅಂತರಾಷ್ಟ್ರೀಯ ಸಾಕ್ಷರತಾ ವರ್ಷದಲ್ಲಿ ಜನಮನ ಸಿದ್ಧತೆಗಾಗಿ ಸುಳ್ಯ, ಪುತ್ತೂರು ತಾಲೂಕುಗಳಲ್ಲಿ ವಿವಿಧ ಪ್ರದರ್ಶನಗಳು, ಜಿಲ್ಲೆಯಾದ್ಯಂತ ಚಿತ್ರಪಾಠ – ಬಣ್ಣದ ಪಯಣ, ಕಾಟುಕುಕ್ಕೆಯಲ್ಲಿ ಎಳೆಯರಿಗಾಗಿ ರಂಗ ಕಾರ್ಯಾಗಾರ, ಮಂಗಳೂರಿನಲ್ಲಿ ಸಹಪಾಠ್ಯ ಕಾರ್ಯಾಗಾರ, ರೇಖೆ ಹಾಗೂ ವರ್ಣಗಳಲ್ಲಿ ಚಿತ್ರಕಾರಂತ ಮುಂತಾದವು ನಿರತ ನಿರಂತದ ಕೆಲವು ಮುಖ್ಯ ಕಾರ್ಯಕ್ರಮಗಳು, ರೂಪಕ ತಯಾರಿ, ಮುಖವಾಡ ರಚನೆ, ಮುಖಪುಟ ವಿನ್ಯಾಸ, ರಂಗ ಸಂಕಿರಣ, ಮಕ್ಕಳ ನಾಟಕ ಪ್ರದರ್ಶನವೇ ಮುಂತಾದ ಹಲವು ಕಲಾಪಗಳನ್ನು ಸಂಸ್ಥೆಯು ಜಿಲ್ಲೆಯ ನಾನಾ ಕಡೆಗಳಲ್ಲಿ ನಡೆಸುತ್ತಿದೆ.

**೮. ರಂಗಾಸಕ್ತರು – ವಿಟ್ಲ :**

ರಂಗಭೂಮಿಯ ಬಗ್ಗೆ ಗಂಭೀರ ಕಳವಳಿಯುಳ್ಳ ವಿಟ್ಲದ ಗೆಳೆಯರನ್ನು ಒಂದುಗೂಡಿಸುವ ಪ್ರಯತ್ನದ ಫಲವಾಗಿ ಹುಟ್ಟಿಕೊಂಡ ತಂಡ 'ರಂಗಾಸಕ್ತರು'[೧೮]. ಸಮಕಾಲೀನ ವಸ್ತುಗಳನ್ನು ಆರಿಸಿಕೊಂಡು ತನ್ಮೂಲಕ ನಾಟಕ ಮತ್ತು ಒಟ್ಟಾರೆಯಾಗಿ ಇಡಿಯ ಬದುಕನ್ನು ಅರ್ಥೈಸಿಕೊಳ್ಳುವುದು ತಂಡದ ಹಂಬಲ.

ಚೋಮನ ದುಡಿ, ಆ ಮನಿ ಪುಣ್ಯ ಕೋಟಿ, ನಕ್ಷತ್ರಗಳಾಚೆ, ಚೋರ–ಚರಣದಾಸ, ಆನೆ ಬಂತೊಂದಾನೆ, ನೀಲ ನಾಡಿನೊಳಗೆ, ಪುಟ್ಟ ಕಾಡಿಗೆ ಹೋದದ್ದು ಮುಂತಾದ ನಾಟಕಗಳನ್ನು ಪ್ರದರ್ಶಿಸಿದ್ದಲ್ಲದೆ ತಂಡವು ಸಾಹಿತ್ಯ, ಶಿಕ್ಷಣ ವಿಚಾರಗೋಷ್ಠಿಗಳನ್ನು ರಂಗ ತರಬೇತಿ ಶಿಬಿರಗಳನ್ನು, ಉಪನ್ಯಾಸಗಳನ್ನು ಏರ್ಪಡಿಸಿದೆ. ನೀನಾಸಂ ತಿರುಗಾಟದ ನಾಟಕಗಳನ್ನು ಪ್ರದರ್ಶಿಸಿದೆ. ಮುಖವಾಡ ತಯಾರಿ ಶಿಬಿರ ನಡೆಸಿದೆ.

**೯. ಕಲಾಭಿಮಾನಿ ಬಳಗ, ಅಡ್ಯನಡ್ಕ :**

೧೯೮೫ರಲ್ಲಿ ಸ್ಥಾಪನೆಗೊಂಡ ಮರಕ್ಕಿಣಿ ಕೃಷ್ಣಭಟ್, ಬರೆ ಕೇಶವ ಭಟ್ ನೇತೃತ್ವದ 'ಕಲಾಭಿಮಾನಿ ಬಳಗ'ವು ಅಗರಿ ಶ್ರೀನಿವಾಸ ಭಾಗವತ, ನಡ್ಕೆ ನರಸಿಂಹ ಭಟ್, ಶೇಣಿ ಗೋಪಾಲಕೃಷ್ಣ ಭಟ್, ಕುಕ್ಕಿಲ ಕೃಷ್ಣ ಭಟ್, ಅಳಿಕೆ ರಾಮಯ್ಯ ರೈ, ಕಡತೋಕ ಮಂಜುನಾಥ ಭಾಗವತ ಮತ್ತು ಪೆರ್ಲ ಕೃಷ್ಣ ಭಟ್ಟರನ್ನು ಸಂಮಾನಿಸಿದೆ. ಅಂತೆಯೇ ತಾಳಮದ್ದಳೆ ಕಾರ್ಯಕ್ರಮವನ್ನು ನಡೆಸಿಕೊಡುತ್ತಿದೆ.

**೧೦. ವಿಠಲ ಆರ್ಟ್ಸ್ ಮತ್ತು ಸ್ಪೋರ್ಟ್ಸ್ ಕ್ಲಬ್ :**

೧೯೭೫ರಲ್ಲಿ ಕಲೆ ಮತ್ತು ಕ್ರೀಡಾ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡಲು ಸ್ಥಾಪಿತವಾದ ಈ ಸಂಸ್ಥೆಯು ಪಂದ್ಯಾಟಗಳ ಜತೆಗೆ ಜಿಲ್ಲಾ ಮಟ್ಟದ ಭಾಷಣ, ಶಾಸ್ತ್ರೀಯ ಸಂಗೀತ, ಜನಪದ ಗೀತೆ, ಭಾವಗೀತೆ, ಯಕ್ಷಗಾನದ ಹಾಡು, ವಾದ್ಯ, ಸಂಗೀತ, ವೃಂದಗಾನ, ಲಘು ಸಂಗೀತ ಸ್ಪರ್ಧೆಗಳನ್ನು ನಡೆಸುತ್ತಿದೆ. ಸಂಗೀತ ಮೃದಂಗ ತರಬೇತಿ ನೀಡುತ್ತಿದೆ.

ಇದರೊಂದಿಗೆ ಪ್ರೊಫೆಸರ್ ಶಂಕರ್‌ರವರ ಇಂದ್ರಜಾಲ, ಶಿವಮೊಗ್ಗ ಸುಬ್ಬಣ್ಣ, ಚಕ್ರಕೋಡಿ ನಾರಾಯಣ ಶಾಸ್ತ್ರಿ, ಹೋ. ನ. ರಾಘವೇಂದ್ರ ಮತ್ತು ಬೆಂಡರವಾಡಿಯವರ ಹಾಡುಗಾರಿಕೆ, ಶೇಣಿ ಮತ್ತು ಬಳಗದವರ ತಾಳಮದ್ದಳೆ, ಮೋಹನ ಸೋನಾ, ಪ್ರಕಾಶ್ ಅವರ ಚಿತ್ರ ಪ್ರಾತ್ಯಕ್ಷಿಕೆ, ಚಿತ್ರೋತ್ಸವ

ಇತ್ಯಾದಿ ಕಾರ್ಯಕ್ರಮಗಳನ್ನು ನಡೆಸಿದೆ. ಖ್ಯಾತ ಕಲಾವಿದರನ್ನು ಸಂಮಾನಿಸಿದೆ. ಅಷ್ಟಾವಧಾನ, ವಿಚಾರಗೋಷ್ಠಿ, ಮತ್ತು ಪ್ರದರ್ಶನಗಳನ್ನು ಏರ್ಪಡಿಸಿದೆ.

**೧೧. ಸಂಗಮ ಕಲಾ ಸಂಘ ಕಲ್ಮಡ್ಕ :**

ಗ್ರಾಮೀಣ ಜನಜೀವನಕ್ಕೆ ಸಂಬಂಧಿಸಿದ ಜ್ಞಾನಪ್ರಸಾರ, ವಿವಿಧ ಕಲಾಪ್ರಕಾರಗಳ ಬಗೆಗೆ ತರಬೇತಿ ಮತ್ತು ಧಾರ್ಮಿಕ ಸಾಂಸ್ಕೃತಿಕ ಕಾರ್ಯಕ್ರಮಗಳ ಆಚರಣೆಗಾಗಿ ೧೯೫೩ರಲ್ಲಿ ಸ್ಥಾಪಿತವಾದ ಸಂಗಮ ಕಲಾಸಂಘವು ಎಂಟು ವೈವಿಧ್ಯಮಯ ಪುಸ್ತಕಗಳನ್ನು ಪ್ರಕಟಿಸಿದೆ. 'ಸಂಗಮ ರಂಗಭೂಮಿ' ಎಂಬ ಅಂಗಸಂಸ್ಥೆಯ ಮೂಲಕ ಹಳ್ಳಿ ಪರಿಸರದಲ್ಲಿ ರಂಗಚಳುವಳಿ ನಡೆಸಿದೆ. ಜಿಲ್ಲೆಯ ಹಾಗೂ ಹೊರ ಜಿಲ್ಲೆಗಳ ನೂರಾರು ಸಂಘ–ಸಂಸ್ಥೆಗಳಿಗೆ ಪರದೆ, ವೇಷಭೂಷಣ, ರಂಗ ಸಲಕರಣೆಗಳನ್ನು ಒದಗಿಸಿದೆ. ಅಜ್ಜನಗದ್ದೆ ಭಾಗವತರು, ವಿಠಲ ಶಾಸ್ತ್ರಿ, ಶೇಣಿ, ಮಂಡೆಚ್ಚ, ಮಲ್ಪೆ ಸಾಮಗ, ದಿವಾಣ ಮುಂತಾದ ಕಲಾವಿದರನ್ನು ಸಂಮಾನಿಸಿದೆ. ನಾಟಕ, ಯಕ್ಷಗಾನಗಳಿಗೆ ವೇಷಭೂಷಣ ಒದಗಿಸುವ, ಪ್ರತಿಭಾವಂತರನ್ನು ಪ್ರೋತ್ಸಾಹಿಸುವ ಹಾಗೂ ಸಮಾನ ಆಸಕ್ತಿ ಉದ್ದೇಶಗಳುಳ್ಳ ಇತರ ಸಂಸ್ಥೆಗಳೊಂದಿಗೆ ಸಹಕರಿಸುವ ಮೂಲಕ ಕಲಾಸೇವೆ ಮಾಡುತ್ತಿದೆ.

**೧೨. ವಾಣೀ ಗಣೇಶ ಪ್ರಸಾದಿತ ಕಲಾವೃಂದ ಬೆಳ್ಳಾರೆ :**

ಯಕ್ಷಗಾನ ಕಲಾ ಸೇವೆಯ ಮೂಲಕ ಧಾರ್ಮಿಕ ಸೇವೆ ಹಾಗೂ ನವ ಕಲಾವಿದರಿಗೆ ಪ್ರೋತ್ಸಾಹ ಕೊಡುವ ಉದ್ದೇಶದಿಂದ ೧೯೭೭ರಲ್ಲಿ ಸ್ಥಾಪನೆಗೊಂಡ ಶ್ರೀವಾಣೀಗಣೇಶ ಪ್ರಸಾದಿತ ಕಲಾವೃಂದವು ಪ್ರತಿ ತಿಂಗಳ ಮೊದಲ ಶನಿವಾರ ನಿರಂತರವಾಗಿ ತಾಳಮದ್ದಳೆ ಕೂಡ ನಡೆಸಿ ಯುವ ಅರ್ಥದಾರಿಗಳ ವಿಕಸನಕ್ಕೆ ಪ್ರಯತ್ನಿಸಿದೆ. ಅನೇಕ ದೇವಾಲಯಗಳಲ್ಲಿ ತಾಳಮದ್ದಳೆ ನಡೆಸಿವೆ. 'ಅಕ್ಷರ ಮಾಲಾ' ಹರಿಸ್ತೋತ್ರಂ' ಹಾಗೂ 'ಸಾಧನೆ' ವಿಶೇಷಾಂಕ ಹೊರತಂದಿದೆ.

**೧೩. ವಿನ್ಯಾಸ, ಬಾಳಿಲ :**

ಸುತ್ತಮುತ್ತಲಿನ ಮಕ್ಕಳ ಹಾಗೂ ಇತರರ ಸರ್ವಾಂಗೀಣ ಪ್ರಗತಿಯನ್ನು ಗಮನಿಸಿ ೧೯೮೦ರಲ್ಲಿ ಪ್ರಾರಂಭಗೊಂಡ 'ವಿನ್ಯಾಸ'ವು ಬಾಳಿಲದಲ್ಲಿ ಇಪ್ಪತ್ತಕ್ಕೂ ಹೆಚ್ಚು ನಾಟಕಗಳನ್ನು ಪ್ರದರ್ಶಿಸಿ ದ್ದಲ್ಲದೆ ದೂರದ ಊರುಗಳಲ್ಲಿ ಅನೇಕ ನಾಟಕಗಳನ್ನು ಅಭಿನಯಿಸಿದೆ. ಮಕ್ಕಳ ರಂಗ ತರಬೇತಿ,

ರಂಗಕಲಾ ತರಬೇತಿ, ಹಿರಿಯರ ರಂಗ ಶಿಬಿರ, ಕವನ ಕಾರ್ಯಾಗಾರ, ಕಥಾ ಕಾರ್ಯಾಗಾರಗಳನ್ನು ಏರ್ಪಡಿಸಿದೆ. ಸಾಹಿತ್ಯಗೋಷ್ಠಿ, ಸಂಗೀತ, ಇತರ ಸಂಘಗಳ ನಾಟಕ ಮುಂತಾದವುಗಳನ್ನು ವ್ಯವಸ್ಥೆಗೊಳಿಸಿದೆ.

**೧೪. ನಾದ–ನೃತ್ಯ, ಸುಳ್ಯ :**

ಭಾರತೀಯ, ಪಾಶ್ಚಾತ್ಯ ವಿವಿಧ ಕಲಾಪ್ರಕಾರಗಳಲ್ಲಿ ತರಬೇತಿ ನೀಡುವುದು, ಕಲಾಪ್ರದರ್ಶನ– ಶಿಬಿರಗಳನ್ನು ನಡೆಸುವುದು ಮತ್ತು ಸಾಂಸ್ಕೃತಿಕ ಬೆಳವಣಿಗೆ ಸಾಧಿಸುವುದಕ್ಕಾಗಿ ೧೯೮೮ರಲ್ಲಿ ಸ್ಥಾಪಿತವಾದ ನಾದ–ನೃತ್ಯ ಸಂಸ್ಥೆಯ ವತಿಯಿಂದ ಕುಚುಪುಡಿ, ಭರತನಾಟ್ಯ, ಸಂಗೀತ ಇತ್ಯಾದಿ ಕಾರ್ಯಕ್ರಮಗಳು ನಡೆದಿದ್ದು ಸೀತಾಶಶಿಧರ್ ಅವರ ನೃತ್ಯ ತರಬೇತಿ, ಡಿ.ಜಿ. ಸತ್ಯಭಾಮೆಯರ ಸಂಗೀತ ಶಿಕ್ಷಣ ತರಗತಿಗಳನ್ನು ವ್ಯವಸ್ಥೆಗೊಳಿಸಲಾಗಿದೆ. ಜತೆಗೆ ಗಿಟಾರ್, ಹಾರ್ಮೋನಿಯಂ, ತಬ್ಲಾ, ಬ್ರೇಕ್‌ಡ್ಯಾನ್ಸ್ ತರಬೇತಿಗೂ ಅವಕಾಶವಿದೆ. ವಿದ್ಯಾರ್ಥಿ–ವಿದ್ಯಾರ್ಥಿನಿಯರು ಹಲವೆಡೆ ಭರತನಾಟ್ಯ, ನೃತ್ಯರೂಪಕ ಪ್ರದರ್ಶಿಸಿದ್ದಾರೆ.

**೧೫. ಶ್ರುತಿ ವೇದಿಕೆ, ಬಾಳಿಲ :**

ಸುತ್ತಲಿನ ಪರಿಸರದಲ್ಲಿ ಸಾಹಿತ್ಯಿಕ, ಸಾಂಸ್ಕೃತಿಕ, ಶೈಕ್ಷಣಿಕ ಮತ್ತು ವೈಚಾರಿಕ ಒಲವನ್ನು ಬೆಳೆಸುವುದಕ್ಕಾಗಿ ೧೯೮೯ರಲ್ಲಿ ರೂಪುಗೊಂಡ ಶ್ರುತಿ ವೇದಿಕೆಯ ಎಸ್. ಲಲಿತಾಂಬ, ಸುಕನ್ಯ ಪ್ರಭಾಕರ್, ಆರ್. ಎನ್. ಶ್ರೀಲತಾ, ಕೆ. ವಿಷ್ಣು ಭಟ್ ಮುಂತಾದವರ ಸಂಗೀತ ಕಛೇರಿ ಏರ್ಪಡಿಸಿದೆ. ಸುತ್ತಮುತ್ತಲಿನ ಶಾಲಾ ಕಾಲೇಜು ವಿದ್ಯಾರ್ಥಿಗಳಿಗಾಗಿ ಸಾಂಸ್ಕೃತಿಕ ಸ್ಪರ್ಧೆಗಳನ್ನು ನಡೆಸಿದೆ. ಸೀತಾ ಶಶಿಧರ್ ಅವರ ಭರತನಾಟ್ಯ ಪ್ರದರ್ಶನ, ಪಿ. ಎಸ್. ಪುಣಿಂಚತ್ತಾಯರ ವರ್ಣಚಿತ್ರ ಪ್ರದರ್ಶನ, ಎನ್. ಸುಕುಮಾರ್ ಗೌಡರಿಂದ ಶಿಕ್ಷಣ ವಿಚಾರ ಸಂಕಿರಣ, ವಿಚಾರವಾದಿ ಸಂಘದವರಿಂದ ಪವಾಡಗಳ ರಹಸ್ಯ ವಿವರಣೆ, ಆರ್. ಗಣೇಶರ ಅಷ್ಟಾವಧಾನ ಮುಂತಾದವು ವೇದಿಕೆಯ ಇತರ ಕಾರ್ಯಕ್ರಮಗಳು.

**೧೬. ಪ್ರಕೃತಿ ರಂಗ ತಂಡ, ಬೆಳ್ಳಾರೆ :**

ನಾಟಕ ಚಟುವಟಿಕೆಗಳನ್ನು ನಡೆಸುವುದಕ್ಕಾಗಿ ೧೯೯೧ರಲ್ಲಿ ಸ್ಥಾಪನೆಯಾದ ಪ್ರಕೃತಿ ರಂಗ ತಂಡವು ಶಾಲಾ ಕಾಲೇಜು ವಿದ್ಯಾರ್ಥಿಗಳಿಗಾಗಿ ರಂಗ ಪೂರ್ವ ಮಾಹಿತಿ ಶಿಬಿರ ಏರ್ಪಡಿಸಿದೆ.

ಮಕ್ಕಳಿಂದ, ಕಾಲೇಜು ವಿದ್ಯಾರ್ಥಿಗಳಿಂದ ಮತ್ತು ಸಂಸ್ಥೆಯ ಸದಸ್ಯರಿಂದ ಪ್ರತ್ಯೇಕ ನಾಟಕಗಳನ್ನು ಸಿದ್ಧಗೊಳಿಸಿ ಪ್ರದರ್ಶಿಸಿದೆ.

೧೯೮೪ರಲ್ಲಿ ಜನ್ಮ ತಾಳಿದ ಬೆಳ್ಳಾರೆಯ 'ಸ್ನೇಹಿತರ ಕಲಾಸಂಘ'ವು ಯಕ್ಷಗಾನ ನಾಟ್ಯ ತರಬೇತಿ ನೀಡುತ್ತಿದ್ದು ವರ್ಷಕ್ಕೊಮ್ಮೆ ಸಾಂಸ್ಕೃತಿಕ ಉತ್ಸವ ನಡೆಸುತ್ತಾ ಬಂದಿದೆ. ೧೯೮೭ರಲ್ಲಿ ಸ್ಥಾಪನೆಗೊಂಡ ಅಚಲಾಪುರದ 'ಮಿತ್ರ ಕಲಾವೃಂದ'ವು ನಾಟಕ, ನೃತ್ಯಗಳಲ್ಲಿ ಆಸಕ್ತಿ ತೋರಿಸಿದೆ.

**೧೭. ಮಾನಸ ಹವ್ಯಾಸಿ ತಂಡ, ಜಾಲ್ಸೂರು :**

ಗ್ರಾಮೀಣ ಪ್ರದೇಶದಲ್ಲಿ ರಂಗ ಕಲೆಗಳ ಪ್ರದರ್ಶನ, ಸಾಹಿತ್ಯಕ ಚಿಂತನ ಮತ್ತು ಸಾಂಸ್ಕೃತಿಕ ಪುನರುಜ್ಜೀವನದ ಗುರಿಯಿಟ್ಟುಕೊಂಡು ೧೯೯೦ರಲ್ಲಿ ಹುಟ್ಟಿಕೊಂಡ ಹವ್ಯಾಸಿ ಸಂಸ್ಥೆ 'ಮಾನಸ', ನಾಟಕ, ಮೇಕಪ್ ಶಿಬಿರಗಳನ್ನು ನಡೆಸಿವೆ. 'ಯುವಜನ ಮೇಳ' ಸಂಸ್ಕೃತಿ ಸಂಭ್ರಮಗಳಲ್ಲಿ ಪಾಲ್ಗೊಂಡಿವೆ. ವಿವಿಧೆಡೆಗಳಲ್ಲಿ ನಾಟಕ ಪ್ರದರ್ಶಿಸಿದೆ. ಭರತನಾಟ್ಯ ಹಾಗೂ  ಅನ್ಯ ತಂಡಗಳ ನಾಟಕಾಭಿನಯಕ್ಕೆ ಅವಕಾಶ ಒದಗಿಸಿದೆ.

**೧೮. ಗೋವಿಂದ ಗಾನಸಭಾ, ಸುಬ್ರಹ್ಮಣ್ಯ :**

ಸುಬ್ರಹ್ಮಣ್ಯದಲ್ಲಿ ಬಹಳ ಹಿಂದಿನಿಂದ ಸಂಗೀತ–ನಾಟಕಗಳಿಗಾಗಿ ದುಡಿದ ಕೆ. ಗೋವಿಂದ ಆಚಾರ್ಯರ ನೆನಪಿಗಾಗಿ ಅವರ ಬಂಧು ಮಿತ್ರರಿಂದ ಶ್ರೀವಿದ್ಯಾಭೂಷಣ ತೀರ್ಥ ಸ್ವಾಮೀಜಿಯವರ ನಿರ್ದೇಶನದಲ್ಲಿ ನಡೆಯುವ ಸಂಸ್ಥೆ, ವಿಶೇಷವಾಗಿ ಕರ್ನಾಟಕ ಶಾಸ್ತ್ರೀಯ ಸಂಗೀತ ಪ್ರಸಾರಕ್ಕಾಗಿ ಇರುವ ಈ ಸಂಸ್ಥೆಯು ಎಲ್ಲ ಕಲಾಪ್ರಕಾರಗಳ ಪ್ರಚಾರಕ್ಕೂ ದುಡಿಯುತ್ತಿದೆ. ಕರ್ನಾಟಕ ಸಂಗೀತ, ಮೃದಂಗ, ಶಿಕ್ಷಣಗಳಿಗಾಗಿ ತರಗತಿಗಳನ್ನು ನಡೆಸುತ್ತಿದೆ.

ಪುತ್ತೂರಿನಲ್ಲಿ ಹದಿನೆಂಟಕ್ಕೂ ಮಿಕ್ಕಿ ಕಲಾ ಸಂಘಗಳು ಇವೆ. ಅವುಗಳಲ್ಲಿ ಹೆಚ್ಚಿನವು ಈಗಲೂ ಕ್ರಿಯಾಶೀಲವಾಗಿವೆ. ಕೆಲವು ಕಲಾಸಂಘಗಳು ಕ್ಕಾರಣಾಂತರದಿಂದ ಕಾರ್ಯಸ್ಥಗಿತವಾಗಿದ್ದರೂ ಅವು ಸಲ್ಲಿಸಿದ ಸೇವೆ ಸ್ಮರಣೀಯವಾಗಿದ್ದು ಮುಂದೆ ಮತ್ತೆ ಕಾರ್ಯೋನ್ಮುಕವಾಗಬಹುದು.

**೬.೪.೦. ಕಲಾವಿದರು:**

**೬.೪.೧.ವಿಟ್ಲ ಬಾಬುರಾಯರು (೧೮೯೭–೧೯೭೩)**

ವಿಟ್ಲ ಬಾಬುರಾಯರು ೧೮೯೭ರಲ್ಲಿ ವಿಟ್ಲ ಎಂಬ ಊರಿನಲ್ಲಿ ಜನಿಸಿದರು. ಪಾಚಪ್ಪ ಶೆಟ್ರ ಚಿತ್ರಕಲೆಯಿಂದ ಸ್ಫೂರ್ತಿಗೊಂಡರು. ಅವರ ಒಲವುಗಳೇ ತನ್ನ ಅಭಿವೃದ್ಧಿಗೆ ಕಾರಣ ಎಂದು

ಹೇಳುತ್ತಿದ್ದರು೯. ಪುತ್ತೂರು, ವಿಟ್ಲ ಬೋರ್ಡ್ ಹೈಯರ್ ಪ್ರೈಮರಿ ಶಾಲೆಗಳಲ್ಲಿ ಅಧ್ಯಾಪಕರಾಗಿದ್ದರು. ಶಾಲೆಯ ಪಾಠಗಳಿಗಾಗಿ ತಲೆಬುರುಡೆ, ಹೃದಯ ಮೊದಲಾದ ದೇಹದ ಭಾಗಗಳನ್ನು ಆವೆಮಣ್ಣಿನಿಂದ ರಚಿಸಿ ಬಣ್ಣ ಹಾಕುತ್ತಿದ್ದರು. ತಮ್ಮ ಕಲಾ ಕೌಶಲ್ಯದ ದೆಸೆಯಿಂದ ಮೊಳಹಳ್ಳಿ ಶಿವರಾವ್, ಧರ್ಮಸ್ಥಳ ಮಂಜಯ್ಯ ಹೆಗ್ಗಡೆಯವರು, ಕಾರಂತರು ಎಲ್ಲರಿಗೂ ಪ್ರೀತಿಯವರಾಗಿ ಅವರೆಲ್ಲರ ಒಡನಾಟದಲ್ಲಿದ್ದರು. ನಾಟಕ ಬರೆಯುವುದು, ಪರದೆ ಚಿತ್ರಿಸುವುದು, ನಾಟಕ ಆಡಿಸುವುದು ಮುಂತಾದ ಚಟುವಟಿಕೆಗಳಲ್ಲಿ ಭಾರೀ ಉತ್ಸಾಹ, ನಾಟಕಗಳಲ್ಲಿ ಟ್ರಾನ್ಸ್‌ಫರ್ ಸೀನರಿಗಳ ಚಮತ್ಕಾರಕ್ಕೆ ಎತ್ತಿದ ಕೈ. ಬೆಳ್ತಂಗಡಿ ತಾಲೂಕಿನ ನಡ ಎಂಬ ಊರಿನಲ್ಲಿ ಪರ್ಮಾಣ್ ಬಸ್ತಿಯಲ್ಲಿ ೧೯೫೧ರ ಹಾಗೆ ಜೈನಮತ ಸಂಬಂಧದ ವರ್ಣಚಿತ್ರಗಳನ್ನು ರಚಿಸಿದ್ದರು. ಪುತ್ತೂರು ಮಹಾಲಿಂಗೇಶ್ವರ ದೇವಾಲಯದಲ್ಲಿ ಇವರು ರಚಿಸಿದ ಪೌರಾಣಿಕ ಚಿತ್ರಗಳಿವೆ. ಹೆರ್ಗ ದೇವಸ್ಥಾನದಲ್ಲಿ ಇವರ ಎರಡು ಚಿತ್ರಗಳಿವೆ. ಬಣ್ಣದ ಹುಡಿಗಳನ್ನು ವಜ್ರಸರಿ ಅಂಟಿನಲ್ಲಿ ಅರೆದು ತುಂಬ ಚುರುಕಾಗಿ ಚಿತ್ರಿಸುತ್ತಿದ್ದರು. ಆವೆಮಣ್ಣಿನಿಂದ ವಿಗ್ರಹರಚನೆಯಲ್ಲದೆ ವಾಚು ರಿಪೇರಿ, ಸೈಕಲ್ ದುರಸ್ತಿ ಮುಂತಾದ ಯಂತ್ರ ಕೆಲಸಗಳಲ್ಲೂ ಕುಶಲಿಗಳಾಗಿದ್ದರು. ಮಜಿಕ್ ಲ್ಯಾಂಟರ್ನ್ ಎಂಬ ಒಂದು ಯಂತ್ರದಲ್ಲಿ ಸುಲಭತೆಯನ್ನು ಕಂಡುಹಿಡಿದರು. ಶ್ರೀ ಮೊಳಹಳ್ಳಿ ಶಿವರಾಯರು ಅದನ್ನು ಕಂಡು ಮೆಚ್ಚಿ ಮದ್ರಾಸಿನ ಒಂದು ಉದ್ಯಮದವರಿಗೆ ಅದರ ಹಕ್ಕನ್ನು ಕೊಡಿಸಿ ಅವರಿಂದ ಇವರಿಗೆ ಧನಸಹಾಯ ಸಿಗುವಂತೆ ಮಾಡಿದರು. ಕೆಲವು ಕಾಲ ಉಜಿರೆ ಸಿದ್ಧವನ ಗುರುಕುಲ ದಲ್ಲಿದ್ದರು. ಪುತ್ತೂರಿನ ಮಹಾಲಿಂಗೇಶ್ವರ ದೇವಳದ ಹೊರವಲಯದ ಒಂದು ಕೊಠಡಿಯಲ್ಲಿ ಹದಿನೆಂಟು ವರುಷ ಕಾಲ ಚಿತ್ರಕಲೆ, ಕೈಗಾರಿಕೆ ವೃತ್ತಿನಿತರಾಗಿದ್ದರು. ಕಲೆಗಾಗಿಯೇ ಜೀವನ ತೇದು ೧೯೭೨ರಲ್ಲಿ ಅಸ್ತಂಗತರಾದರು.

### ೬.೪.೨.ಮಾಂಬಾಡಿ ನಾರಾಯಣ ಭಾಗವತ (೧೯೦೦-೧೯೯೦)

ಮಾಂಬಾಡಿ ನಾರಾಯಣ ಭಾಗವತ ಹಳೆಯ ಪುತ್ತೂರು ತಾಲೂಕಿಗೆ ಸೇರಿದ ಕರೋಪಾಡಿ ಗ್ರಾಮದ ಮಾಂಬಾಡಿ ಎಂಬ ಹಳ್ಳಿಯವರು. ಪದ್ಯಾಣ ಕುಟುಂಬದವರಾದ ನಾರಾಯಣ ಭಟ್ಟ ಮತ್ತು ಗೌರಮ್ಮ ಎಂಬ ದಂಪತಿಗಳ ಸುಪುತ್ರರಾಗಿ ೧೯-೧೨-೧೯೦೦ರಂದು ಜನಿಸಿದರು.

ಬಾಲ್ಯದಲ್ಲಿ ಮನೆಯ ಸಮೀಪದ ಮಿತ್ತನಡ್ಕ ಶಾಲೆಗೆ ಸೇರಿ ಎರಡು ವರ್ಷಗಳ ಪ್ರಾಥಮಿಕ ವಿದ್ಯಾಭ್ಯಾಸವನ್ನು ಪಡೆದರು. ಮುಂದೆ ಅಣ್ಣ ಈಶ್ವರ ಭಟ್ಟರಿಂದ ಸ್ವಲ್ಪ ಸಂಸ್ಕೃತವನ್ನು ಜ್ಯೋತಿಷ್ಯವನ್ನೂ ಅಭ್ಯಾಸ ಮಾಡಿದರು. ಅಣ್ಣ ಈಶ್ವರ ಭಟ್ಟರು ಮತ್ತು ತಂದೆ ನಾರಾಯಣ ಯಕ್ಷಗಾನ ಭಾಗವತಿಕೆಯನ್ನು ಬಲ್ಲವರಾಗಿದ್ದರು. ಇವರಿಬ್ಬರಿಂದಲೇ ಮಾಂಬಾಡಿಯವರ ಯಕ್ಷಗಾನ

ಕಲಾ ಪ್ರವೇಶಕ್ಕೆ ಎಡೆಯಾಯಿತು. ಕ್ರಮೇಣ ಅಂದಿನ ಇಚ್ಲಂಪಾಡಿ ಮೇಳದಲ್ಲಿ ಭಾಗವತರಾಗಿದ್ದ ಈಶ್ವರಪ್ಪಯ್ಯನವರ ಸಂಪರ್ಕವೊದಗಿ ಅವರೊಡನೆ ಇಚ್ಲಂಪಾಡಿ ಮೇಳದಲ್ಲಿ ಕಲಾಸೇವೆ ಮಾಡಿದರು. ಮಳೆಗಾಲದಲ್ಲಿ ಮೇಳದ ಸಂಚಾರವಿಲ್ಲದಿದ್ದಾಗ ಅಲ್ಲಲ್ಲಿ ಆಸಕ್ತರಿಗೆ ಕಲೆಯನ್ನು ಭೋದಿಸುತ್ತಿದ್ದರು[೨೦].

ಭಾಗವತಿಕೆಗೆ ಅವಕಾಶ ಸಿಕ್ಕಿದರೂ ಮಾಂಬಾಡಿಯವರಿಗೆ ತಮ್ಮ ಕಲಾ ಪರಿಣತಿಯ ಬಗ್ಗೆ ತೃಪ್ತಿ ಇರಲಿಲ್ಲ. ಭಾಗವತಿಕೆಗೆ ಶಾಸ್ತ್ರೀಯ ಸಂಗೀತದ ಜ್ಞಾನವೂ ಅವಶ್ಯವೆಂಬುದನ್ನು ಇವರು ಕಂಡುಕೊಂಡಿದ್ದುದರಿಂದ ಪುತ್ತೂರಿನ ಪಿಟೀಲು ಪುಟ್ಟಣ್ಣನವರಲ್ಲಿ ಸ್ವಲ್ಪ ಸಮಯ ಸಂಗೀತಾಭ್ಯಾಸವನ್ನು ಮಾಡಿದರು. ಮುಂದೆ ಯಾವ ಮೇಳಕ್ಕೂ ಸೇರಲೊಪ್ಪದ ಮಾಂಬಾಡಿಯವರು ವಿಶೇಷಾಹ್ವಾನದ ಮೇಲೆ ಮಾತ್ರ ಹೋಗುತ್ತಿದ್ದರು. ಈ ಸಂದರ್ಭದಲ್ಲಿ ಕಾಸರಗೋಡು ಸಮೀಪದ ಕೊರಾಕ್ಕೋಡು ಎಂಬಲ್ಲಿ ಇವರಾಡಿಸಿದ ಒಂದು 'ದೇವಿ ಮಹಾತ್ಮೆ' ಚರಿತ್ರಾರ್ಹವಾಗಿತ್ತು. ಏಳು ದಿನ ನಡೆದ ಈ ಬಯಲಾಟದಲ್ಲಿ ಮಾಂಬಾಡಿಯವರು ಪುಸ್ತಕದ ಸಹಾಯವಿಲ್ಲದೆ ಆಶು ಭಾಗವತರಾಗಿ ಹಾಡಿ ಜನರ ಮೆಚ್ಚುಗೆಗೆ ಪಾತ್ರರಾದರು. ಇದರಿಂದ ಆಕರ್ಷಿತರಾದ ಕಟೀಲು ದೇವಸ್ಥಾನದ ಮೊಕ್ತೇಸರರು ಮಾಂಬಾಡಿಯವರನ್ನು ಕರೆಯಿಸಿ ಕಿನ್ನಿಗೋಳಿಯಲ್ಲಿ ಇಂತಹುದೇ ಒಂದು ಆಟವನ್ನು ಆಡಿಸಿದರು. ಇದು ಐದು ದಿನಗಳ ಕಾಲ ನಡೆಯಿತು. ಹೀಗೆ ಮುಂದುವರಿದ ಇವರ ಕಲಾ ಸೇವೆ ೧೯೬೫ರ ತನಕ ನಡೆಯಿತು.

ಹೀಗೆ ನಿವೃತ್ತರಾದ ಮಾಂಬಾಡಿಯವರನ್ನು ಅನೇಕ ಸಂಘ-ಸಂಸ್ಥೆಗಳು ಗೌರವಿಸಿದವು. ೧೯೬೯ರಲ್ಲಿ ಕರ್ನಾಟಕ ಸರಕಾರದ ಸಂಗೀತ ನಾಟಕ ಅಕಾಡಮಿ ಇವರಿಗೆ ಮಾಸಿಕ ಸಂಭಾವನೆಯನ್ನು ಮಂಜೂರು ಮಾಡಿತು. ೧೯೭೦ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವದ ಸಂದರ್ಭ ದಲ್ಲಿ ಇವರನ್ನು ಗೌರವಿಸಲಾಯಿತು. ೧೯೮೧ರಲ್ಲಿ ಇವರ ಹುಟ್ಟೂರಾದ ಮಿತ್ತಡ್ಕದಲ್ಲಿ 'ರಂಗ ವೈಖರಿ' ಎಂಬ ಅಭಿನಂದ ಗ್ರಂಥದೊಂದಿಗೆ ಇವರಿಗೆ ಗೌರವಾರ್ಪಣೆಯನ್ನು ಮಾಡಲಾಯಿತು. ಹೀಗೆ ಬಾಳು ಬದುಕಿದ ಕಲಾ ತಪಸ್ವಿ ೨೦-೦೨-೧೯೯೦ ರಲ್ಲಿ ನಿಧನರಾದರು.

ಮಾಂಬಾಡಿಯವರ ಎಲ್ಲಾ ಗಳಿಕೆಗಿಂತಲೂ ಹೆಚ್ಚಿನದು ಅವರ ಅಪಾರ ಶಿಷ್ಯ ಸಂಪತ್ತು. ಯಕ್ಷಗಾನದ ಹೆಚ್ಚಿನ ಹಿಮ್ಮೇಳ ಕಲಾವಿದರು ಇವರ ಶಿಷ್ಯರು. ಅವರಲ್ಲಿ ಮುಖ್ಯರಾದವರು ಕಡತೋಕ ಮಂಜುನಾಥ ಭಾಗವತರು. ಇರಾ ಗೋಪಾಲಕೃಷ್ಣ ಭಾಗವತರು (ರಂಗ ವೈಖರಿ ೧೯೮೧) ಇವರ ಮಗ ಶ್ರೀ ಮಾಂಬಾಡಿ ಸುಬ್ರಹ್ಮಣ್ಯ ಭಟ್ಟರು ತಮ್ಮ ತಂದೆಯವರಿಂದಲೇ ಯಕ್ಷಗಾನದ ಸ್ಫೂರ್ತಿ ಪಡೆದವರು.

### ೬.೪.೩.ಪುರುಷೋತ್ತಮ ತೋಳ್ಪಾಡಿಯವರು (೧೯೦೧-೧೯೪೭)

ಇವರ ಜನನ ೧೯೦೧ರಲ್ಲಿ. ಕೇರಳದ ಕಲಾವಿದ ರಾಮವರ್ಮ ಅವರಲ್ಲಿ ಚಿತ್ರಕಲೆಯಲ್ಲಿ ತರಬೇತಿ ಪಡೆದರು. ಪುತ್ತೂರಿನಲ್ಲಿ ಕಲಾವಿದರಾಗಿ ಕೆಲಸ ಮಾಡಿದರು. ಅವರ ಚಿತ್ರಶೈಲಿ ವರ್ಣವಿನ್ಯಾಸ ಗಳು ರಾಜಾ ರವಿವರ್ಮನ ಕೃತಿಗಳನ್ನು ಜ್ಞಾಪಿಸುತ್ತವೆ. ಅವರ ಕೆಲವು ಚಿತ್ರಗಳು ಸುಬ್ರಹ್ಮಣ್ಯ, ಧರ್ಮಸ್ಥಳ ಮತ್ತು ಉಡುಪಿ ಮಠಗಳಲ್ಲಿ ಇವೆ. ಈ ಚಿತ್ರ ಕಲೆಯ ಸಂಬಂಧ ಧರ್ಮಸ್ಥಳದ ಧರ್ಮದರ್ಶಿಗಳಾಗಿದ್ದ ಕಲಾನುರಾಗಿ ಮಂಜಯ್ಯಹೆಗ್ಗಡೆಯವರ ನಿಕಟವರ್ತಿಗಳಾಗಿದ್ದರು. ಡಾ। ಶಿವರಾಮ ಕಾರಂತರ ಬಾಲಪ್ರಪಂಚ ದಲ್ಲೂ ಈ ಕಲಾವಿದರು ರಚಿಸಿದ್ದ ಚಿತ್ರಗಳನ್ನು ಕಾಣಬಹುದು. ನೌಖಾಲಿ ಮತ್ತು ಬಿಹಾರದ ಕನಸು ಎಂಬ ಅವರ ಕೃತಿಯು ಪುತ್ತೂರಿನ ಆಶಾ ಚಿತ್ರಾಲಯದಲ್ಲೂ ಇದೆ. ೧೯೪೭ನೇ ಇಸವಿ ಸಪ್ಟಂಬರ್ ೩೦ ರಂದು ಕಾಲವಾದರು.

### ೬.೪.೪.ಮೊಳಂಗ್ಯಾ ಕೃಷ್ಣ ಭಟ್ಟ (೧೯೦೮ – ೧೯೭೯)

ಕೃಷ್ಣ ಭಟ್ಟರು ಹುಟ್ಟಿದ್ದು ೧೯೦೪ರಲ್ಲಿ, ಅಜ್ಜ ಮೊಳಂಗ್ಯಾ ವೆಂಕಪ್ಪ ಭಟ್ಟರು ಆಟದಲ್ಲಿ ಅಗ್ರಗಣ್ಯ. ಅಜ್ಜನೇ ಮೊಮ್ಮಗನಿಗೆ ಗುರು. ತಂದೆ ಭೀಮಗುಳಿ ವೆಂಕಟ್ರಮಣಯ್ಯ ಮಗನ ಯಕ್ಷಗಾನದ ಆಸಕ್ತಿಗೆ ಸ್ಫೂರ್ತಿ. ಎರಡನೇ ತರಗತಿ ಓದಿ ಶಾಲೆಗೆ ಶರಣು ಹೊಡೆದ ಮೊಳಂಗ್ಯಾ ಕೃಷ್ಣ ಭಟ್ಟ ಹದಿನಾಲ್ಕರ ಹೊಸ್ತಿಲಿಗೆ ಬಂದಾಗ ಆಟವನ್ನು ಅರಗಿಸಿಕೊಂಡರು. ಧರ್ಮಸ್ಥಳದಲ್ಲಿ ಮೊದಲ ಬಾರಿಗೆ ಗೆಜ್ಜೆ ಕಟ್ಟಿ ಯಕ್ಷಗಾನಕ್ಕೆ ಪಾದಾರ್ಪಣೆಗೈದರು.

ಕೃಷ್ಣಭಟ್ಟರು ಮುಂದೆ ಐವತ್ತೈದು ವರ್ಷಗಳ ಕಾಲ ರಂಗದಿಂದ ದೂರ ಸರಿಯಲಿಲ್ಲ. ೧೯೭೯ರಲ್ಲಿ ಅವರು ಜಗತ್ತಿಗೆ ವಿದಾಯ ಹೇಳಿದಾಗ ಅವರೇ ಬಿಟ್ಟು ಹೋದ ಕರ್ಣ, ಕಂಸ, ಭರತ, ಇಂದ್ರಜಿತು, ರಾವಣ, ಜಲಂಧರ, ಕಾರ್ತವೀರ್ಯ ವಿಶ್ವಾಮಿತ್ರ ಮುಂತಾದ ಅವರು ಅಭಿನಯಿಸಿದ ಪಾತ್ರಗಳ ನೆನಪು ಮಾತ್ರ ಉಳಿದಿದೆ.

ಅರ್ಧ ಶತಮಾನ ಕಾಲ ಆಟದೊಂದಿಗೆ ತೇಯ್ದುಕೊಂಡ ಕೃಷ್ಣ ಭಟ್ಟರು ಧರ್ಮಸ್ಥಳ, ಕಟೀಲು, ಕೂಡ್ಲು, ಕುಂಟಾವು, ಸುರತ್ಕಲ್, ಮುಲ್ಕಿ, ಕದ್ರಿ ಮೂಡಬಿದ್ರೆ, ಕಾಪು, ತಲಪಾಡಿ ಹಾಗೂ ತಾವೇ ಕಟ್ಟಿ ಬೆಳೆಸಿದ ಕಾಂಚನ ಮೇಳಗಳಲ್ಲಿ ಸೇವೆ ಸಲ್ಲಿಸಿದರು. ಪರಂಪರೆಯ ಬಗ್ಗೆ ಗಂಭೀರ ಕಾಳಜಿಗಳಿದ್ದು ಇದ್ದಷ್ಟೂ ಕಾಲ ಪ್ರೇಕ್ಷಕರನ್ನು ರಂಜಿಸಿದರು.

ಮೊಳಂಗ್ಯಾ ಕೃಷ್ಣ ಭಟ್ಟರು ಬಹಳಷ್ಟು ಬರೆದಿದ್ದಾರೆ. ಘಂಟಾಸುರ ಕಾಳಗ, ದಿಲೀಪ ಚರಿತ್ರೆ ಇತ್ಯಾದಿ ಯಕ್ಷಗಾನದ ವಿವಿಧ ವೇಷ ಭೂಷಣಗಳನ್ನು ಸ್ವತಃ ಚಿತ್ರ ರಚಿಸಿ ವಿವರಿಸಿದ ಪ್ರಬಂಧ ಪುಸ್ತಕವನ್ನು ರಚಿಸಿದ್ದಾರೆ. ಇವು ಪ್ರಕಟವಾಗಿಲ್ಲ. ಇವರು ತಮ್ಮ ಐವತ್ತೆರಡನೇ ವಯಸ್ಸಿನಲ್ಲಿ ಕಾಂಚನ

ಮೇಳವನ್ನು ಕಟ್ಟಿದರು. ಕಾಂಚನದ ಸುಬ್ರಹ್ಮಣ್ಯ ಅಯ್ಯರ್ ಅವರ ಪ್ರೋತ್ಸಾಹದ ಫಲವಾಗಿ ಜನ್ಮತಳೆದ ಕಾಂಚನ ಶ್ರೀ ಲಕ್ಷ್ಮೀನಾರಾಯಣ ಯಕ್ಷಗಾನ ಮಂಡಳಿ ಯಕ್ಷಗಾನದ ನವೀನ ಆವಿಷ್ಕಾರಗಳ ಯತ್ನ ನಡೆಸಿತು. ಸಂಗೀತ, ನಾಟ್ಯ, ಭಾವ–ವಿಭಾವಗಳು ಪ್ರಧಾನವಾಗಿದ್ದು ಕೇವಲ ನಾಲ್ಕೈದು ಗಂಟೆಗಳ ಪ್ರದರ್ಶನ ಈ ಮೇಳದ ಇನ್ನೊಂದು ವೈಶಿಷ್ಟ್ಯ.

ಭಟ್ಟರು ನಿರ್ವಹಿಸಿದ ಪಾತ್ರಗಳಲ್ಲಿ ಕರುಣ, ಶೃಂಗಾರಗಳಿಗೆ ಹೇಳಿ ಮಾಡಿಸಿದಂತಿದ್ದ ಅವರು ರೌದ್ರ ರಸದಲ್ಲಿ ಮಿನುಗುತ್ತಿದ್ದರು. ಜರೂರಿಯಲ್ಲಿ ಕಾಳಿ, ಮಂಥರೆಯಂಥ ಸ್ತ್ರೀ ಪಾತ್ರದಲ್ಲಿ ಸೈ ಎನಿಸಿ ಕೊಂಡಿದ್ದರು. ಅವರು ಭಾಗವತರೂ ಆಗಿದ್ದು, ಅಭಿನಯ, ನೃತ್ಯ, ಬಣ್ಣಗಾರಿಕೆ, ಮಾತುಗಾರಿಕೆ ಯಲ್ಲಿ ಪ್ರಚಂಡ ಪ್ರಾವೀಣ್ಯತೆ ಹೊಂದಿದ್ದರು.

ಉಪ್ಪಿನಂಗಡಿಯ ಸಮೀಪದ ಕಾಂಚನದಲ್ಲಿ ಹೊಲ, ಮನೆ ಜೊತೆ ಸಂತೃಪ್ತ ಜೀವನ ನಡೆಸಿ ಯಕ್ಷಗಾನ ಕಲೆಗೆ ಅಮೋಘವಾದ ಕೊಡುಗೆಯನ್ನು ನೀಡಿದ್ದಾರೆ.

**೬.೪.೫. ಅಜ್ಜನಗದ್ದೆ ಗಣಪಯ್ಯ ಭಾಗವತ (೧೯೧೬ – ೧೯೮೨)**

ಯಕ್ಷಗಾನದ ಪರಂಪರೆಯುಳ್ಳ ಈ ಮನೆತನದಲ್ಲಿ ೭–೧೦–೧೯೧೬ರಲ್ಲಿ ಅಜ್ಜನಗದ್ದೆ ಸುಬ್ರಾಯ ಸುಬ್ಬಮ್ಮ ದಂಪತಿಗಳಿಗೆ ಹಿರಿಯ ಮಗನಾಗಿ ಜನಿಸಿದ ಗಣಪಯ್ಯನವರಿಗೆ ಅಜ್ಜನ ಹೆಸರನ್ನೇ ಸಂಪ್ರದಾಯದಂತೆ ನಾಮಕರಣ ಮಾಡಿದ್ದರು[೨೧].

ಗಣಪಯ್ಯ ಭಾಗವತರ ಶಾಲೆಯ ಓದು ಎಂಟನೆಯ ತರಗತಿಗೆ ಸೀಮಿತವಾಗಿದ್ದರೂ ಅವರು ತಮ್ಮ ಹಿರಿಯರಿಂದ ಪಡೆದ ಅಪಾರವಾದ ಅನುಭವದ ಮೂಲಕ ಹಾಡುಗಾರಿಕೆಯನ್ನು ಸಿದ್ದಿಸಿ ಕೊಂಡಿದ್ದರು. ಇದಕ್ಕೆ ತಕ್ಕಂತೆ ಸಂಗೀತ ಜ್ಞಾನವನ್ನೂ ಅವರು ಪಡೆದಿದ್ದರು. ಹಿರಿಯ ಕನ್ನಡ ಕವಿ, ಅರ್ಥಧಾರಿ ವಿದ್ವಾನ್ ಕೊಳಂಬೆ ಪುಟ್ಟಣ್ಣ ಗೌಡರು ಗಣಪಯ್ಯನವರ ಗುರುಗಳಾಗಿದ್ದರು. ಹಿರಿಯ ಶ್ರೇಷ್ಠ ಅರ್ಥದಾರಿ ದೇರಾಜೆ ಸೀತಾರಾಮಯ್ಯ ಅವರ ಚಿಕ್ಕ ತಂದೆ, ಈ ಇಬ್ಬರು ಹಿರಿಯರಿಂದ ಸದಾ ಬೆನ್ನುತಟ್ಟಿಸಿಕೊಳ್ಳುತ್ತ, ಅವರ ಗಾಢ ಪ್ರಭಾವದಿಂದಲೇ ತಾನು ಭಾಗವತನಾಗಿ ಹೆಸರು ಗಳಿಸುವಂತಾಯಿತು ಎಂಬ ಧನ್ಯತೆಯ ಭಾವ ಗಣಪಯ್ಯನವರ ಮಾತಿನಲ್ಲಿ ಆಗಾಗ ವ್ಯಕ್ತವಾಗುತ್ತಿದ್ದ ಅಂಶ.

ಗಣಪಯ್ಯ ಭಾಗವತರು ಕೂಡ್ಲು ಮೇಳದಲ್ಲಿ ಭಾಗವತರಾಗಿ ಒಂದು ವರ್ಷ ಶ್ರೇಣಿಯವ ರೊಂದಿಗೆ ತಿರುಗಾಡಿದ್ದನ್ನು ಬಿಟ್ಟರೆ, ಹಿಂದೆ ನಡೆಯುತ್ತಿದ್ದ ಯಕ್ಷಗಾನ ನಾಟಕಗಳಲ್ಲಿ ಭಾಗವತರಾಗಿ ಹಾಡಿದ್ದೇ ಹೆಚ್ಚು. ೧೯೪೨ರಲ್ಲಿ ದೇರಾಜೆ ಸೀತಾರಾಮಯ್ಯನವರು ಸುಳ್ಯ ತಾಲೂಕಿನ ಚೊಕ್ಕಾಡಿಯಲ್ಲಿ ಸ್ಥಾಪಿಸಿದ 'ಶಾರದಾ ಪ್ರಸಾದಿತ ಯಕ್ಷಗಾನ ನಾಟಕ ಸಭಾ' ದೊಡ್ಡ ತೋಟದ, 'ಕಲೋಪಾಸಕ ಸಂಘ'

ಕಲ್ಮಡ್ಕದ 'ಸಂಗಮ ಕಲಾಸಂಘ' ಇವೇ ಮೊದಲಾದ ಯಕ್ಷಗಾನ ಸಂಘಗಳಲ್ಲಿ ಭಾಗವತರಾಗಿದ್ದ ಗಣಪಯ್ಯನವರು ಹಾಡುವಿಕೆಯಲ್ಲಿ ಆಗಲೇ ಖ್ಯಾತ ಭಾಗವತರೆಂದು ಹೆಸರುಗಳಿಸಿದ್ದರು. ಮುಂದಿನ ದಿನಗಳಲ್ಲಿ ಅವರ ಭಾಗವತಿಕೆ ಮುಖ್ಯವಾಗಿ ತಾಳಮದ್ದಳೆಗೇ ಮುಡಿಪಾಯಿತು.

ಕುಬಣೂರು, ಬಾಲಕೃಷ್ಣ ರಾವ್, ದೇರಾಜೆ ಸೀತಾರಾಮಯ್ಯ, ಶ್ರೇಣಿ ಗೋಪಾಲಕೃಷ್ಣ ಭಟ್, ಪೆರ್ಲ ಕೃಷ್ಣ ಭಟ್ ಇವರೇ ಮೊದಲಾದ ಖ್ಯಾತ ಯಕ್ಷಗಾನ ಕಲಾವಿದರ ಅರ್ಥಗಾರಿಕೆಯಿರುತ್ತಿದ್ದ ತಾಳಮದ್ದಳೆ ಕೂಟಗಳಿಗೆ ಭಾಗವತರಾಗಿ ಗಣಪಯ್ಯನವರು ದಕ್ಷಿಣಕನ್ನಡ ಜಿಲ್ಲೆಯ ಉದ್ದಗಲ ಬಹುಕಾಲ ಸುತ್ತಿದವರು.

೧೯೪೨ರಲ್ಲಿ ಶ್ರೀ ಕ್ಷೇತ್ರ ಧರ್ಮಸ್ಥಳದ ಆಗಿನ ಧರ್ಮಾಧಿಕಾರಿಗಳಾಗಿದ್ದ ಮಂಜಯ್ಯ ಹೆಗ್ಗಡೆಯವರಿಂದ ಹಾಡುಗಾರಿಕಗಾಗಿ ವಿಶೇಷ ಮೆಚ್ಚುಗೆಗೆ ಪಾತ್ರರಾದ ಗಣಪಯ್ಯ ಭಾಗವತರು, ಅವರಿಂದ ಸನ್ಮಾನಿಸಲ್ಪಟ್ಟಿದ್ದರು.

ಗಣಪಯ್ಯ ಭಾಗವತರು ಸ್ವತಃ ಕವಿಯೂ ಆಗಿದ್ದರು ಎಂಬುದಕ್ಕೆ ಅವರು ರಚಿಸಿದ 'ಖಾಂಡವವನ ದಹನ', 'ಮನ್ಮಥ ವಿಜಯ', 'ಮೋಹಿನೀ ಚರಿತ್ರೆ', 'ಶಾಕುಂತಳಾ ಪರಿಣಯ', 'ವೀರ ಅಭಿಮನ್ಯು', 'ನರಕ ಚತುರ್ದಶೀ ಚರಿತ್ರೆ' ಮುಂತಾದ ಯಕ್ಷಗಾನ ಪ್ರಸಂಗಗಳೇ ಸಾಕ್ಷಿ. 'ಖಾಂಡವವನ ದಹನ' ಪ್ರಸಂಗವನ್ನು 'ಸಂಗಮ ಸಾಹಿತ್ಯಮಾಲೆ' ಕಲ್ಮಡ್ಕ ಪ್ರಕಟಿಸಿದ್ದು, ಹಿರಿಯ ಕಲಾವಿದ ಶಂಕರ ನಾರಾಯಣ ಸಾಮಗರ ನೇತೃತ್ವದಲ್ಲಿ ಪ್ರದರ್ಶಿಸಲ್ಪಟ್ಟಿತ್ತು. ಮನ್ಮಥ ವಿಜಯ ಪ್ರಸಂಗವೂ ಅನೇಕ ಬಾರಿ ಪ್ರದರ್ಶನಗೊಂಡು ಕಲಾಭಿಮಾನಿಗಳ ಹಾಗೂ ವಿದ್ವಾಂಸರ ಮನ್ನಣೆಯನ್ನೂ ಗಳಿಸಿತ್ತು.

ಯಕ್ಷಗಾನದ ಯಾವ ಸನ್ನಿವೇಶವೇ ಇರಲಿ ಅದಕ್ಕೆ ತಕ್ಕಂತೆ ಪದವಿಂಗಡಿಸಿ ಸ್ಪಷ್ಟ ಉಚ್ಚಾರ ಗಳಿಂದ ಭಾವಪೂರ್ಣವಾದ ರಸ, ರಾಗಗಳನ್ನು ಹೊರಹೊಮ್ಮಿಸುವಲ್ಲಿ ಅದ್ವಿತೀಯ ಅನುಪಮ ಸೇವೆಗೈದ ಗಣಪಯ್ಯನವರು ೭-೪-೧೯೮೨ರಂದು ಅಸ್ತಂಗತರಾದರು.

**೬.೪.೬. ಕಾಂಚನ ವೆಂಕಟ ಸುಬ್ರಹ್ಮಣ್ಯ ಅಯ್ಯರ್ (೧೯೨೧ - ೧೯೮೨)**

ವೆಂಕಟ ಸುಬ್ರಹ್ಮಣ್ಯ ಅಯ್ಯರ್ ಜನನ ೧೯೨೧ ಜುಲೈ ೨೧ರಂದು. ಅಯ್ಯರ್‌ರವರ ಎಲಿಮೆಂಟರಿ ಶಾಲಾ ವಿದ್ಯಾಭ್ಯಾಸ ಉಪ್ಪಿನಂಗಡಿಯಲ್ಲಿ ಅನಂತರ ಹೈಸ್ಕೂಲ್ ವಿದ್ಯಾಭ್ಯಾಸ ಮಂಗಳೂರು ಗಣಪತಿ ಹೈಸ್ಕೂಲಿನಲ್ಲಿ ಮಂಗಳೂರಿನಲ್ಲಿದ್ದ ಅವರ ಮನೆ 'ಕಾಂಚನ ಮನೆ' ಎಂದೇ ಪ್ರಸಿದ್ಧಿ. ವೆಂಕಟ ಸುಬ್ರಹ್ಮಣ್ಯ ಅಯ್ಯರ್‌ರ ತಾಯಿ ಪಾಲ್ಘಾಟಿನ ವೀಣಾ ವಿದುಷಿ ಆನಂದ ಲಕ್ಷ್ಮೀ, ತಾಯಿಯೇ ಅಯ್ಯರ್ ಅವರ ಸಂಗೀತದ ಮೊದಲ ಗುರು. ಅವರ ಮನೆಗೆ ಅತಿಥಿಗಳಾಗಿ ಬಂದು

ಸಂಗೀತ ಕಛೇರಿ ಮಾಡುತ್ತಿದ್ದ ಸಿ. ಎನ್. ಶಾಸ್ತ್ರಿ, ಬೆಳ್ಳಿ ಅನಂತರಾಮ್ ಉಪಾಧ್ಯಾಯ, ಎನ್.ವಿ. ಮೂರ್ತಿ, ಶೇಫಾ ಮಣಿ ಗೋಪಿನಾಥ, ಚೆಂಬೈ, ಜಿ.ಎನ್. ಬಾಲಸುಬ್ರಹ್ಮಣ್ಯ, ಟಿ. ಚೌಡಯ್ಯ, ಪಾಲ್ಘಾಟ್‌ಮಣಿ ಅಯ್ಯರ್, ಪಾಪ ವೆಂಕಟ್ರಮಣಯ್ಯ, ಪಳನಿ ಸುಬ್ರಹ್ಮಣ್ಯ ಪಿಳ್ಳೆ ಆಲಂಗುಡಿ ರಾಮಚಂದ್ರನ್, ಸಿ.ಆರ್. ಮಣಿ ಮುಂತಾದವರ ಸಂಗೀತ ಅಯ್ಯರರ ಎಳೆಯ ಮನಸ್ಸಿನ ಮೇಲೆ ಬಹಳಷ್ಟು ಪ್ರಭಾವ ಬೀರಿತು. ಮುಂದಿನ ಸಂಗೀತಾಭ್ಯಾಸ ಚೆಂಬೈ ವೈದ್ಯನಾಥ ಭಾಗವತರ್ ಮತ್ತು ಜಿ. ಎನ್. ಬಾಲಸುಬ್ರಹ್ಮಣ್ಯಂರವರ ಗರಡಿಯಲ್ಲಿ ನಡೆಯಿತು[೨೨].

ಅಯ್ಯರ್‌ರ ಪ್ರಥಮ ಸಂಗೀತ ಕಛೇರಿ ಶ್ರೀ ಕೊಲ್ಲೂರು ಮೂಕಾಂಬಿಕೆಯ ಸನ್ನಿಧಿಯಲ್ಲಿ ಚೆಂಬೈಯವರ ಸಮಕ್ಷಮದಲ್ಲಿ, ಅನಂತರ ದೇಶದ ನಾನಾ ಭಾಗಗಳಲ್ಲಿ ಸಹಸ್ರ ಸಂಖ್ಯೆಯಲ್ಲಿ ಸಂಗೀತ ಕಛೇರಿ ನೀಡಿದ್ದಾರೆ. ಅಪಾರ ಅಭಿಮಾನಿಗಳನ್ನು ಹೊಂದಿದ್ದಾರೆ.

ವಿದ್ಯಾದಾನಕ್ಕಾಗಿ ಹಾತೊರೆದ ಅಯ್ಯರ್ ೧೯೫೩ರಲ್ಲಿ ಕಾಂಚನಕ್ಕೆ ಮರಳಿ ಗುರುಕುಲ ಪದ್ಧತಿಯಲ್ಲಿ ಸಂಗೀತ ಶಿಕ್ಷಣವನ್ನು ಪ್ರಾರಂಭಿಸಿದರು. ಕಲಿಯಬೇಕೆಂದು ಬಂದ ವಿದ್ಯಾರ್ಥಿಗಳಿಗೆ ಉಚಿತ ಊಟ, ವಸತಿ, ಬಟ್ಟೆಬರೆ ನೀಡುತ್ತಿದ್ದರು. ಶಿಷ್ಯರಲ್ಲಿ ಅಪಾರ ಪ್ರೇಮ. ಅವರ ಊಟ–ಉಪಾಹಾರದ ನಂತರವೇ ಆಹಾರ ಸೇವಿಸುವುದು ಅಯ್ಯರರ ಪದ್ಧತಿ, ಹಾಡುಗಾರಿಕೆ, ವಯೋಲಿನ್, ಕ್ಲೇರೋನೆಟ್, ನಾಗಸ್ವರ, ಕೊಳಲು ವೀಣೆ ಈ ಎಲ್ಲವನ್ನೂ ಒಂದೆಡೆ ಕಲಿಸುವ ಅಪೂರ್ವ ವ್ಯವಸ್ಥೆ, ಶಿಷ್ಯರಿಗೆ ಪಾಠ ಹೇಳಿಕೊಡುವಲ್ಲಿಯೂ ಅವರದೇ ಆದ ಪ್ರತ್ಯೇಕತೆ. ಅಯ್ಯರರ ಸೋದರ ಮಾವನವರಾದ ವಿದ್ವಾನ್ ಕೃಷ್ಣ ಅಯ್ಯರ್‌ರವರು ಮೃದಂಗ, ಘಟಂ, ಖಂಜೀರ ಮುಂತಾದ ತಾಳ ವಾದ್ಯಗಳ ಶಿಕ್ಷಣ ನೀಡುತ್ತಿದ್ದರು. ಹೀಗಾಗಿ ಕಾಂಚನದ ಶಿಷ್ಯ ಪರಂಪರೆ ಅಪಾರ.

ಸಂಗೀತವೊಂದೇ ವಿದ್ಯಾರ್ಥಿಗಳ ಬಾಳನ್ನು ಬೆಳಗಲಾರದೆಂದು ಮನಗಂಡ ಅವರು ೧೯೫೩ರಲ್ಲಿಯೇ ಕಾಂಚನದಲ್ಲಿ ಶ್ರೀ ಲಕ್ಷ್ಮೀನಾರಾಯಣ ಪ್ರಾಥಮಿಕ ಶಾಲೆಯನ್ನು ಸ್ಥಾಪಿಸಿದರು. ದೇವರಲ್ಲಿ ಅನನ್ಯ ಭಕ್ತಿರಾಗಿದ್ದರು. ಅಯ್ಯರರು ಬಹುಮುಖ ಆಸಕ್ತಿಯುಳ್ಳ ವ್ಯಕ್ತಿ, ಯಕ್ಷಗಾನ ಕಲೆಗೂ ಅವರು ಬಹಳಷ್ಟು ಪ್ರೋತ್ಸಾಹ ಕೊಟ್ಟಿದ್ದಾಳೆ. ೧೯೫೩ರಲ್ಲಿ ಕಾಂಚನದಲ್ಲಿ ಒಂದು ಯಕ್ಷಗಾನ ಕೇಂದ್ರವನ್ನು ಸ್ಥಾಪಿಸಿದ್ದರು. ಇಲ್ಲಿಯೂ ಶಿಷ್ಯರಿಗೆ ಊಟ, ವಸತಿ, ಶಿಕ್ಷಣ ಎಲ್ಲವೂ ಉಚಿತ. ವೇಷಧಾರಿಯಾಗಿ ಶ್ರೀ ಪಾತಾಳ ವೆಂಕಟ್ರಮಣ ಭಟ್, ಶಿವರಾಮ ಜೋಗಿ ಸಂಜೀವ ರೈ, ದಿವಾಕರ ಭಟ್, ಭಾಗವತಿಕೆಯಲ್ಲಿ ದಾಮೋದರ ಮಂಡೆಚ್ಚ, ಮಾಧವ ಭಟ್ ಮುಂತಾದವರು ತರಬೇತಿ ಪಡೆದವರಲ್ಲಿ ಪ್ರಮುಖರು. ಕಾಂಚನ ಬಯಲಾಟದ ಮೇಳವೊಂದು ಎರಡು ವರ್ಷ ತಿರುಗಾಟ ನಡೆಸಿದೆ.

ಪ್ರತಿ ವರ್ಷ ನಡೆಸುವ ಶ್ರೀ ತ್ಯಾಗರಾಜರ ಆರಾಧನಾ ಸಪ್ತಾಹ, ಶ್ರೀ ಪುರಂದರದಾಸ, ಶ್ರೀ ಮುತ್ತುಸ್ವಾಮಿ ದೀಕ್ಷಿತರ, ಶ್ರೀ ಶ್ಯಾಮಾ ಶಾಸ್ತ್ರಿರವರ ದಿನಾಚರಣೆಗಳು, ರಾಮನವಮಿ,

ವಿಜಯದಶಮಿ ಉತ್ಸವಗಳಲ್ಲಿ ನಾಡಿನ ಹಿರಿಯ ಕಲಾವಿದರನ್ನು ಆಹ್ವಾನಿಸಿ ಅವರ ಸಂಗೀತರ ರಸದೌತಣವನ್ನು ಬಡಿಸುತ್ತಿದ್ದರು. ೧೯೮೨ರ ಜನವರಿ ೨೧ರಂದು ಶ್ರೀ ತ್ಯಾಗರಾಜ ಆರಾಧನೆಯ ಎಲ್ಲ ಕಾರ್ಯಕ್ರಮ ಸಮರ್ಪಕವಾಗಿ ನೆರವೇರಿಸಿದ್ದರು. ಮರುದಿನವೇ ಹೃದಯಾಘಾತದಿಂದ ಅವರು ಅಸು ನೀಗಿದರು.

**೬.೪.೭. ತಬಲಾ ತರಂಗ್ ಎನ್. ವಿ. ಮೂರ್ತಿ (೧೯೨೨)**

ಸಂಗೀತ, ಯಕ್ಷಗಾನ, ನಾಟಕ ಮುಂತಾದ ಕಲಾವಿದರನ್ನು ಪೋಷಿಸಿ ಎಲ್ಲಾ ರೀತಿಯಿಂದಲೂ ಸಹಾಯ ನೀಡುತ್ತಿದ್ದ ಕಲಾಪೋಷಕರ ಮನೆತನದಲ್ಲಿ ೧೯೨೨ ಮಾರ್ಚ್ ೩೦ ರಂದು ಕಲಾಪೋಷಕ ನೇರೆಂಕಿ ಕೃಷ್ಣಯ್ಯ ಹಾಗೂ ಶ್ರೀಮತಿ ಪಾರ್ವತಮ್ಮ ದಂಪತಿಯ ಮಗನಾಗಿ ಎನ್. ವಿ. ಮೂರ್ತಿ ಯವರು ಜನಿಸಿದರು.

ಎನ್. ಆರ್. ಬಂಟ್ವಾಳಕರ್‌ರಿಂದ ತಬ್ಲಾ, ನಂತರ ಮೈಸೂರಿನ ಆಸ್ಥಾನ ವಿದ್ವಾನ್ ಟಿ. ಶೇಷಪ್ಪ ಹಾಗೂ ಹೈದರಾಬಾದಿನ ಉಸ್ತಾದ್ ಶೇಖ್ ದಾವೂದ್ ಅವರಿಂದ ಕಲಾಶಿಕ್ಷಣ ಪಡೆದರು. ಮೂಗೂರಿನ ಟಿ. ಎಂ. ಪುಟ್ಟಸ್ವಾಮಯ್ಯ, ಪಾಲ್ಘಾಟ್ ಮಣಿ ಅಯ್ಯರ್‌ನವರಲ್ಲಿ ಮೃದಂಗ ಅಭ್ಯಾಸ ನಡೆಸಿ ಉಸ್ತಾದ್ ಅಹಮದ್ ಹುಸೇನ್‌ಖಾನ್‌ರಿಂದ ಸಿತಾರ್ ಕಲಿತರು.

ಕಾಂಚನದ ಆನಂದ ಲಕ್ಷ್ಮೀ ಅಮ್ಮಾಳ್, ಕಾಂಚನ ವೆಂಕಟ ಸುಬ್ರಹ್ಮಣ್ಯಂ, ವುಡ್ ಲ್ಯಾಂಡ್ಸ್, ಕೃಷ್ಣರಾವ್, ದಾಸ ಪ್ರಕಾಶ್, ಸೀತಾರಾಮ ರಾವ್, ಪಾಲ್ಘಾಟ್ ಮಣಿ ಅಯ್ಯರ್, ಚೆಂಬೈ ವೈದ್ಯನಾಥ ಭಾಗವತರ್ ಇವರಿಂದ ಪ್ರೋತ್ಸಾಹಿತರಾದ ಇವರು ತಬಲಾ ತರಂಗ್‌ನಲ್ಲಿ ತಮ್ಮನ್ನು ತಾವು ತೊಡಗಿಸಿ ಕೊಂಡರು.

**ಮೃದಂಗದಲ್ಲಿ :** ಕರ್ನಾಟಕ ಸಂಗೀತದ ಹಿಂದಿನ ದಿಗ್ಗಜರಾದ ಚೆಂಬೈ ವೈದ್ಯನಾಥ ಭಾಗವತರ್, ಅರಿಯ ಕುಡಿ ರಾಮಾನುಜ ಅಯ್ಯಂಗಾರ್, ಎಂ.ಎಸ್. ಸುಬ್ಬಲಕ್ಷ್ಮೀ, ಮಧುರೈ ಮಣಿ ಅಯ್ಯರ್, ಕಾಂಚನ ವೆಂಕಟಸುಬ್ರಹ್ಮಣ್ಯಂ ಮುಂತಾದ ಕಲಾವಿದರಿಗೆ ಮತ್ತು ಈಗಿನ ಬಹುತೇಕ ಹಿರಿಯ ವಿದ್ವಾಂಸರುಗಳಿಗೆ ಮೃದಂಗದಲ್ಲಿ ಸಹಕಾರ ನೀಡಿದ ಹೆಗ್ಗಳಿಕೆ ಇವರದು.

**ತಬ್ಲಾದಲ್ಲಿ :** ಹಿಂದೂಸ್ಥಾನಿ ಸಂಗೀತ ಸಂಪನ್ನರುಗಳಾದ ಎಂ.ಎಸ್. ಗೋಪಾಲ ಕೃಷ್ಣನ್, ಪಂಡಿತ್ ರವಿಶಂಕರ್, ಬಹದ್ದೂರ್ ಖಾನ್, ಬಸವರಾಜ ರಾಜಗುರು, ಮಾಲವಿಕಾ ಕಾವನ್, ಅರವಿಂದ ತಾರೀಖ್ ಮಾಲಿನೀ ರಾಜೂರ್ಕರ್, ಶ್ರೀಧರ್ ಕೃಷ್ಣಮೂರ್ತಿ ಮುಂತಾದವರಿಗೆ ಪಕ್ಕವಾದ್ಯದಲ್ಲಿ ಸಹಕಾರ ನೀಡಿ ಖ್ಯಾತರಾದರು.

ಭರತನಾಟ್ಯ ಪ್ರವೀಣೆಯರಾದ ಬಾಲಸರಸ್ವತಿ, ಕಮಲಾಲಕ್ಷ್ಮಣ್ (ಕುಮಾರಿ ಕಮಲಾ), ವೈಜಯಂತಿ ಮಲ ಹಾಗೂ ಅನೇಕ ವಿದೇಶೀ ಮಹಿಳಾ ನೃತ್ಯ ವಿದುಷಿಯರಿಗೆ ನೃತ್ಯಕ್ಕೆ ಪಕ್ಕವಾದ್ಯ ಸಹಕಾರ ನೀಡಿದ ಹಿರಿಮೆ ಶ್ರೀ ಎನ್.ವಿ. ಮೂರ್ತಿಯವರದು.

**ಸಂಗೀತ ನಿರ್ದೇಶನಕ್ಕೆ ಸಹಾಯಕರಾಗಿ** : ಎಂ.ಎಸ್. ವಿಶ್ವನಾಥನ್, ಕೆ.ವಿ. ಮಹದೇವನ್, ಇಳಯರಾಜ ಹಾಗೂ ಇನ್ನಿತರರೊಂದಿಗೆ ಚಿತ್ರರಂಗದಲ್ಲಿ ತನ್ನ ಪ್ರತಿಭೆ ಮೆರೆದ ಕಲಾವಿದರಾಗಿದ್ದರು.

**ಇವರು ಪಕ್ಕ ವಾದ್ಯ ನುಡಿಸಿದ ಪ್ರಮುಖ ಚಲನಚಿತ್ರಗಳು** : ಕಲೈಕೋವಿಲ್, ಸಲಂಗೈ ಬಲಿ, ಸಾಗರ ಸಂಗಂ, ತ್ಯಾಗಯ್ಯ ಬಬ್ರುವಾಹನ, ಪುರಂದರದಾಸ, ಶಂಕರಾಭರಣಂ, ಸನಾದಿ ಅಪ್ಪಣ್ಣ, ತಣ್ಣೀರ್ ಚಿತ್ರಗಳು ಮಾತ್ರವಲ್ಲದೆ, ತಮಿಳು, ಕನ್ನಡ, ತೆಲುಗು, ಮಲೆಯಾಳಂ, ಹಿಂದಿ ಭಾಷೆಗಳ ನೂರಾರು ಸಿನಿಮಾಗಳಿಗೆ ತಾಳವಾದ್ಯ ಹಾಗೂ ಇನ್ನಿತರ ವಾದ್ಯಗಳ ಪಕ್ಕವಾದ್ಯ ನೀಡಿದ ಸಾಧಕರು.

ತಬ್ಲಾ, ತಬ್ಲಾ ತರಂಗ್, ಮೃದಂಗ ಹಾಗೂ ಇನ್ನಿತರ ವಾದ್ಯಗಳಲ್ಲಿ ಏಕರೀತಿಯಾದ ಅಪೂರ್ವ ನೈಪುಣ್ಯ ಹೊಂದಿದ ಶ್ರೀಯುತರ ಸಾಧನೆಗಳು ಹತ್ತು ಹಲವು. ಹಲವು ಬಾರಿ ದೂರದರ್ಶನ ಹಾಗೂ ರೇಡಿಯೋದಲ್ಲಿ ಪ್ರಖ್ಯಾತ ಕಲಾವಿದರೊಂದಿಗೆ ಪಕ್ಕವಾದ್ಯ ಮಾತ್ರವಲ್ಲದೆ, ತಬ್ಲಾ ತರಂಗ್ ಸೋಲೋ ಕಾರ್ಯಕ್ರಮ ನೀಡಿರುವ ಇವರು ಬೆಲ್ಜಿಯಂ ಗಾಜಿನಿಂದ ಸೀಸ ತರಂಗ, ಮರದ ಕಡ್ಡಿಗಳಿಂದ ಕಾಷ್ಟ ತರಂಗ, ಲೋಹದ ತರಂಗಗಳಿಂದ ನಳ ತರಂಗ ಮಾಡಿ, ವಿವಿಧ ತರಂಗ ಶ್ರೇಣಿಗಳನ್ನು ಪ್ರಯೋಗಿಸ ತೊಡಗಿ ಈ ತಾಳವಾದ್ಯಗಳನ್ನು ನುಡಿಸುವುದು ಮಾತ್ರವಲ್ಲದೆ ಸ್ವತಃ ತಾವೇ ತಯಾರು ಮಾಡುವುದರಲ್ಲೂ ಸಿದ್ಧಹಸ್ತರಾಗಿ ಪ್ರಾವೀಣ್ಯವನ್ನು ಪಡೆದಿದ್ದರು.

ಅನೇಕ ವಿದ್ವಾಂಸ ಶಿಷ್ಯರನ್ನು ತಯಾರು ಮಾಡಿ, ವಿದೇಶಗಳಲ್ಲೂ ನಮ್ಮ ದೇಶದ ಸಂಗೀತದ ಪ್ರಚಾರವನ್ನು ಮಾಡಿರುವ ಮಹಾನ್ ಕಲಾವಿದ ಶ್ರೀ ಮೂರ್ತಿಯವರು.

**ವಿದೇಶ ಪ್ರಯಾಣ** : ವಿದೇಶಗಳಲ್ಲಿ ಕೂಡ ನೂರಾರು ಕಾರ್ಯಕ್ರಮಗಳಲ್ಲಿ ಭಾಗವಹಿಸಿರುತ್ತಾರೆ[೨೩]. ಅವುಗಳಲ್ಲಿ ಪ್ರಮುಖವಾದವು.

೧೯೫೩ರಲ್ಲಿ ಭಾರತ ಸರಕಾರದ ಸಾಂಸ್ಕೃತಿಕ ನಿಯೋಗದ ಕಲಾವಿದರಾಗಿ ಚೀನಾ ದೇಶಕ್ಕೆ, ೧೯೬೧ರಲ್ಲಿ ಕಮಲಾ ಲಕ್ಷ್ಮಣ್‌ರವರೊಂದಿಗೆ ಇಟಲಿ, ಸ್ವಿಟ್ಜರ್‌ಲ್ಯಾಂಡ್, ಯುಗೋಸ್ಲಾವಿಯಾ, ಹಂಗೇರಿ, ರಷ್ಯಾದೇಶಗಳ ಪ್ರವಾಸ ಕೈಗೊಂಡಿದ್ದಾರೆ. ಮಾತ್ರವಲ್ಲದೆ ಥೈಲ್ಯಾಂಡ್, ಜಪಾನ್, ಯು.ಎಸ್.ಎ., ವೆಸ್ಟ್‌ಇಂಡೀಸ್, ಫ್ರಾನ್ಸ್, ಬೆಲ್ಜಿಯಂ, ಪೋಲೆಂಡ್, ಜರ್ಮನಿ ದೇಶಗಳಲ್ಲೂ ತಮ್ಮ ಕಲಾಪ್ರತಿಭೆ ಮೆರೆದಿದ್ದಾರೆ. ೧೯೮೨ರಲ್ಲಿ ಪ್ರಸಿದ್ಧ ಸರೋದ್ ವಾದಕ ಶ್ರೀಧರ್ ಕೃಷ್ಣ

ಮೂರ್ತಿಯವರೊಂದಿಗೆ ಸ್ವಿಟ್ಜರ್‌ಲ್ಯಾಂಡ್, ಫ್ರಾನ್ಸ್‌ಗಳಲ್ಲಿ ಸಂಚರಿಸಿ ದೂರದರ್ಶನ ಹಾಗೂ ರೇಡಿಯೋಗಳಲ್ಲಿ ಕಾರ್ಯಕ್ರಮ ನೀಡಿದ ಹೆಗ್ಗಳಿಕೆ ಇವರದು.

### ೬.೪.೮. ಪುತ್ತೂರು ದೇವದಾಸ ಜೋಶಿ (೧೯೨೫-೧೯೮೯)

ಪುತ್ತೂರಿನಲ್ಲಿ ಕರ್ನಾಟಕ ಸಂಗೀತದ ವಾಯೋಲಿನ್ ವಿದ್ವಾಂಸರಾದ ದಿವಂಗತ ಗಣೇಶ ಜೋಶಿಯವರು ಅವರ ಕಾಲದ ಸಂಗೀತ ವಿದ್ವಾಂಸರೆನಿಸಿಕೊಂಡು ಪುತ್ತೂರು ಹಾಗೂ ಇದರ ಆಸುಪಾಸಿನಲ್ಲಿ ಸಂಗೀತ ಶಿಕ್ಷಣ ಕೊಡುವುದರ ಮೂಲಕ ಪ್ರಸಿದ್ಧರೆನಿಸಿಕೊಂಡಿದ್ದರು. ಇವರ ಸುಪುತ್ರನಾಗಿ ೧೯೨೫ರಲ್ಲಿ ಪುತ್ತೂರಿನಲ್ಲಿ ಜನಿಸಿದ ದೇವದಾಸ ಜೋಷಿಯವರು ಈಗಿನ ಜ್ಯೂನಿಯರ್ ಕಾಲೇಜ್, ಆಗಿನ ಹೈಸ್ಕೂಲಿನಲ್ಲಿ ವಿದ್ಯಾಭ್ಯಾಸ ನಡೆಸುವುದರ ಜೊತೆಗೆ, ಸಂಗೀತದಲ್ಲಿ ಪ್ರಾರಂಭಿಕ ಶಿಕ್ಷಣವನ್ನು ಅವರ ತೀರ್ಥರೂಪರಿಂದಲೇ ಪಡೆಯುತ್ತಿದ್ದಂತೇ, ಪುತ್ತೂರಿನಲ್ಲಿ ಆಗ ಹರಿದಾಸರಾಗಿ ಪ್ರಸಿದ್ಧರಾಗಿದ್ದ ದಿವಂಗತ ರಾಮಕೃಷ್ಣ ಪ್ರಭುಗಳಲ್ಲಿ ತಬಲಾವಾದನ ಕಲಿತರು. ಹೀಗೆ ಹಿಂದೂಸ್ಥಾನಿ ಸಂಗೀತದಲ್ಲಿ ಆಸಕ್ತಿ ಹೊಂದಿದ ದೇವದಾಸ ಜೋಶಿಯವರು ತನ್ನ ಜೀವನ ನಡೆಸುವ ಉದ್ದೇಶದೊಂದಿಗೆ ಹಿಂದೂಸ್ಥಾನೀ ಸಂಗೀತದ ಒಲವು ಬಲವಾಗಿದ್ದರಿಂದ ಈ ಸಂಗೀತ ಕಲಿಯುವಿಕೆಯನ್ನು ಮುಂದುವರಿಸಲು ಮುಂಬೈ ಶಹರಿಗೆ ಪ್ರಯಾಣ ಬೆಳೆಸಿದರು.

ಮೊದಲಿಗೆ, ಮುಂಬೈಯಲ್ಲಿ ವಿಶ್ವವಿಖ್ಯಾತ ವಾಯೋಲಿನ್ ವಾದಕರೆನಿಸಿದ್ದ ಪ್ರೊ. ಯಲ್. ಆರ್. ಕಾಮತ್‌ರವರಲ್ಲಿ ಕೆಲಸಮಯ ಶಿಷ್ಯವೃತ್ತಿ ನಡೆಸಿ ಅನಂತರ ಪಂಡಿತ ಗಜಾನನ ರಾವ್ ಜೋಶಿಯವರಲ್ಲಿ ಸುಮಾರು ೧೨ ವರ್ಷಗಳ ಕಾಲ ಶಿಷ್ಯವೃತ್ತಿ ಕೈಗೊಂಡು ಕಠಿಣ ಪರಿಶ್ರಮ, ಸಾಧನೆಯಿಂದ ಹಿಂದೂಸ್ಥಾನಿ ಪದ್ಧತಿಯ ವಾಯೋಲಿನ್ ವಾದನದಲ್ಲಿ ಪರಿಣತರಾದರು[೨೪].

ದೇವದಾಸ ಜೋಶಿಯವರು ಹಿಂದೂಸ್ಥಾನಿ ಸಂಗೀತ ಪ್ರಪಂಚದಲ್ಲಿ ಆಗ ಖ್ಯಾತರಾದ ಉಸ್ತಾದ್ ಮೊಹಿದ್ದೀನ್ ಡಾಗರ್, ಪಂಡಿತ ಯಶವಂತ ಜೋಶಿ, ಪಂಡಿತ ತಾರಾನಾಥ ಮೊದಲಾದವ ರಿಂದಲೂ, ಸಂಗೀತ ಕಲಿಯುವಿಕೆ ನಡೆಸಿ ತನ್ನ ಸಂಗೀತ ಜ್ಞಾನವನ್ನು ವೃದ್ಧಿಸಿಕೊಂಡರು. ಇವರು ದೇಶದ ವಿವಿಧ ಕಡೆಗಳಲ್ಲಿ ತಮ್ಮ ವಾಯೋಲಿನ್ ಸಂಗೀತ ಕಚೇರಿಗಳನ್ನು ಕೊಟ್ಟು ಖ್ಯಾತ ವಾಯೋಲಿನ್ ವಿದ್ವಾಂಸರೆಂದು ಹೆಸರು ಗಳಿಸಿದರು. ದೇವದಾಸ ಜೋಶಿಯವರು ಮೈಸೂರು ಟಿ. ಚೌಡಯ್ಯನವರಲ್ಲಿಯೂ ಕೆಲ ಸಮಯ ವಾಯೋಲಿನ್ ವಿದ್ಯಾಭ್ಯಾಸ ನಡೆಸಿರುವುದಾಗಿ ಅವರು ಹೇಳುತ್ತಿದ್ದರು.

ದೇವದಾಸ್ ಜೋಶಿಯವರು ೧೯೮೪ರಲ್ಲಿ ಲಂಡನ್, ಅಮೇರಿಕಾ, ಕೆನಡಾ ಹಾಗೂ ಜರ್ಮನಿಗಳಲ್ಲಿ ಸಂಚರಿಸಿ ತಮ್ಮ ವಾಯೋಲಿನ್ ವಾದನದಿಂದ ಸಂಗೀತ ಕಚೇರಿಗಳನ್ನು ಕೊಟ್ಟು ಅಲ್ಲಿನ ಶ್ರೋತೃಗಳ ಮನಸೂರೆಗೊಂಡು ಅವರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ[೨೫]. ದೇವದಾಸ

ಜೋಶಿಯವರು ವಿದೇಶಗಳಲ್ಲಿ ತಮ್ಮ ಸಂಗೀತ ಕಾರ್ಯಕ್ರಮ ಕೊಡುವ ಮೊದಲು, ಪುತ್ತೂರಿನಲ್ಲಿ ಶ್ರೀ ಮಹಾಲಿಂಗೇಶ್ವರ ದೇವರ ಸಾನ್ನಿಧ್ಯದಲ್ಲಿ ದಸರಾ ನಾಡಹಬ್ಬದ ಸಮಯ ಅವರ ವಾಯೋಲಿನ್ ಸವಿಯನ್ನುಂಡು ಅವರನ್ನು ಸನ್ಮಾನಿಸಲಾಯಿತು.

ದೇವದಾಸ ಜೋಶಿಯವರಿಗೆ ಕಲ್ಕತ್ತದ 'ಸಂಗೀತಿಕ್' ಎಂಬ ಖ್ಯಾತ ಸಂಸ್ಥೆ ೧೯೮೨ರಲ್ಲಿ ಪ್ರಶಸ್ತಿ ನೀಡಿ ಗೌರವಿಸಿತ್ತು. ಮೈಸೂರಿನಲ್ಲಿ ಸಂಗೀತ ಸಭಾ ಮತ್ತು ಕರ್ನಾಟಕ ನಾಗರಿಕ ಹಿತ ರಕ್ಷಣಾ ಸಮಿತಿ ಇವರಿಗೆ 'ಸ್ವರ–ಲಯ–ಚತುರ' ಎಂಬ ಪ್ರಶಸ್ತಿಯನ್ನಿತ್ತು ಗೌರವಿಸಿದ್ದುವು. ಮದ್ರಾಸಿನ ಪ್ರತಿಷ್ಠಿತ ಮ್ಯೂಸಿಕ್ ಅಕಾಡೆಮಿ ಇವರ ವಾಯೋಲಿನ್ ವಾದನ ಸಂಗೀತ ಕಚೇರಿಯನ್ನು ಏರ್ಪಡಿಸಿ ಗೌರವಿಸಿದೆ.

ದೇವದಾಸ ಜೋಶಿಯವರ ೬೧ನೇ ಹುಟ್ಟುಹಬ್ಬದಂದು ಮುಂಬೈ ಶಹರಿನಲ್ಲಿ ಖ್ಯಾತ ಸಂಗೀತ ವಿದ್ವಾಂಸರ ಹಾಗೂ ನಾಗರಿಕರ ಸಮಿತಿ ಮೂಲಕ ಸಾರ್ವಜನಿಕ ಸನ್ಮಾನ ಸಮಾರಂಭವನ್ನು ೨೭–೯–೧೯೮೬ರಲ್ಲಿ ಏರ್ಪಡಿಸಿತ್ತು.

ದೇವದಾಸ ಜೋಶಿಯವರು ತೀರಾ ಬಡತನದಲ್ಲಿ ಬೆಳೆದು, ತನ್ನ ಸ್ವಂತ ಕಾಯಕಷ್ಟದಿಂದ ಸಂಗೀತವನ್ನು ಅಭ್ಯಸಿಸಿ, ವಿಶ್ವವಿಖ್ಯಾತ ಕಲಾವಿದರೆಂದು ಹೆಸರು ಗಳಿಸಿದರು. ಆಕಾಶವಾಣಿಯ ಉತ್ತಮ ಮಟ್ಟದ ಕಲಾವಿದರಾಗಿ, ಹೆಚ್ಚಿನ ಎಲ್ಲಾ ಮುಖ್ಯ ಆಕಾಶವಾಣಿ ಕೇಂದ್ರಗಳಿಂದ ಇವರ ಸಂಗೀತ ಕಾರ್ಯಕ್ರಮ ಆಗಿಂದಾಗ ಪ್ರಸಾರವಾಗುತ್ತಿತ್ತು. ದೂರದರ್ಶನದಲ್ಲಿ ಕೂಡ ಅವರ ಕಾರ್ಯಕ್ರಮಗಳು ದೆಹಲಿ, ಕಲ್ಕತ್ತ, ಮುಂಬೈಯಿಂದ ಪ್ರಸಾರವಾಗಿವೆ. ಇವರ ವಯೋಲಿನ್ ಸಂಗೀತದ ಧ್ವನಿಮುದ್ರಿಕೆಗಳು ಸಹಾ ಹೊರಬಂದಿವೆ. ಪುತ್ತೂರು ದೇವದಾಸ ಜೋಶಿಯವರು ಪುತ್ತೂರಿನ ಹೆಮ್ಮೆಯ ಸಂಗೀತ ಕಲಾವಿದರೆಂಬುದರಲ್ಲಿ ಸಂದೇಹವಿಲ್ಲ.

### ೬.೪.೯. ಕನ್ನೆಪಾಡಿ ರಾಮಕೃಷ್ಣ (೧೯೨೫)

ಪುತ್ತೂರಿನಲ್ಲಿ ೨೯–೦೪–೧೯೨೫ರಂದು ಕನ್ನೆಪಾಡಿ ರಾಮಕೃಷ್ಣ ಅವರ ಜನನ. ವ್ಯಂಗ್ಯ ಚಿತ್ರಕಲೆ ಕ್ಷೇತ್ರದಲ್ಲಿ ಕನ್ನೆಪ್ಪಾಡಿ ರಾಮಕೃಷ್ಣ ಹೆಸರು ಸುಪ್ರಸಿದ್ಧವಾದುದು[೨೬] ಅಂಕುಡೊಂಕು ಗೆರೆಗಳಿಂದ ಲೋಕದ ಡೊಂಕನ್ನು ಎತ್ತಿ ಚಿತ್ರಿಸುವಂತಹ (ತೋರಿಸುವಂತಹ) ವ್ಯಂಗ್ಯ ಚಿತ್ರಕಲೆಯಲ್ಲಿ ಅವರು ನಿಷ್ಣಾತರು. ಕನ್ನಡನಾಡಿನ ವ್ಯಂಗ್ಯ ಚಿತ್ರಕಲೆಯ ದಿಗ್ಗಜರುಗಳಾದ ಆರ್. ಕೆ. ಲಕ್ಷ್ಮಣಾ, ಬಿ. ವಿ. ಆರ್. ಮೂರ್ತಿಯವರಷ್ಟೆ ಪ್ರಸಿದ್ಧರು. ರಾಮಕೃಷ್ಣರ ವ್ಯಂಗ್ಯ ಚಿತ್ರಗಳೆಲ್ಲಾ 'ಶಿಂಗಣ್ಣಾ' ಎಂಬ ಹೆಸರಿನಿಂದ

ಪ್ರಕಟವಾಗುತ್ತಿದ್ದು, ಶ್ರೀ ಸಾಮಾನ್ಯನ ನೋವು ನಲಿವುಗಳನ್ನು ಅಭಿವ್ಯಕ್ತಪಡಿಸುವ ಪ್ರತಿನಿಧಿಯಾಗಿ ಶಿಂಗಣ್ಣ ರೂಪುಗೊಂಡಿದ್ದ.

ಶಿಂಗಣ್ಣಾ ಬಹುಭಾಷೆಗಳಲ್ಲಿ ಜನರ ನೋವು–ನಲಿವುಗಳಿಗೆ ಸ್ಪಂದಿಸುತ್ತಿದ್ದು ಕಲ್ಕಿ (ತಮಿಳು), ನವಭಾರತ, ಪ್ರಜಾವಾಣಿ, ಉದಯವಾಣಿ (ಕನ್ನಡ) ಹಾಗೂ ಮನೋರಮಾ (ಮಲೆಯಾಳಿ) ಮುಂತಾದ ಪ್ರಸಿದ್ಧ ಪತ್ರಿಕೆಗಳಲ್ಲಿ ಇವರ ವ್ಯಂಗ್ಯ ಚಿತ್ರಗಳು ಪ್ರಕಟಗೊಳ್ಳುತ್ತಿದ್ದವು.

ಕನ್ನೆಪ್ಪಾಡಿ ರಾಮಕೃಷ್ಣರ ತಂದೆ ಪರಮೇಶ್ವರ ಶಾಸ್ತ್ರಿ ಸಂಸ್ಕೃತ ಪಂಡಿತರು. ರಾಮಕೃಷ್ಣರ ಸಹೋದರ ಸಹೋದರಿಯರೆಲ್ಲ ಸಂಗೀತ, ಚಿತ್ರಕಲೆ, ನಾಟ್ಯ, ಸಾಹಿತ್ಯ, ಯೋಗ ಹೀಗೆ ಒಬ್ಬೊಬ್ಬರು ಒಂದೊಂದರಲ್ಲಿ ಪರಿಣತರು. ಇಂತಹ ಸಮೃದ್ಧ ಕಲಾತ್ಮಕ ಪರಿಸರದಲ್ಲಿ ಬೆಳೆದ ರಾಮಕೃಷ್ಣರು ಚಿತ್ರಕಲೆ ಯಲ್ಲಿ ವಿಶಿಷ್ಟ ಪ್ರತಿಭೆಯನ್ನು ಹೊಂದಿದವರು.

ಬಾಲ್ಯದಿಂದಲೇ ರಾಮಕೃಷ್ಣರ ನರ–ನಾಡಿಗಳಲ್ಲಿ ವ್ಯಂಗ್ಯಕಲೆ ಹರಿಯುತ್ತಿದ್ದು ಅವರೇ ಅವರಿಗೆ ಗುರುಗಳು. ಸಣ್ಣ ವಯಸ್ಸಿನಲ್ಲಿ ಅವರು ಸ್ಲೇಟಿನಲ್ಲಿ ಬಿಡಿಸುತ್ತಿದ್ದ ಚಿತ್ರಗಳು, ರೇಖೆಗಳು ನಿರ್ದಿಷ್ಟ ರೂಪ, ಕಲ್ಪನೆ ನೀಡುತ್ತಿದ್ದು, ಹಿರಿಯರ ಮೆಚ್ಚುಗೆಗೆ ಪಾತ್ರವಾಗುತ್ತಿದ್ದವು.

ರಾಮಕೃಷ್ಣರು ಬನಾರಸ್‌ನಲ್ಲಿ ಅಭ್ಯಸಿಸಿ, ಕೈಗಾರಿಕಾ ರಸಾಯನ ಶಾಸ್ತ್ರದಲ್ಲಿ ಪದವಿ ಹಾಗೂ ಸೋಪ್ ತಂತ್ರಜ್ಞತೆಯಲ್ಲಿ ಸ್ನಾತಕೋತ್ತರ ಡಿಪ್ಲೋಮಾಗಳನ್ನು ಪಡೆದರು. ಆದರೆ ಆ ಎಲ್ಲ ಪದವಿಗಳನ್ನು ಬದಿಗಿಟ್ಟು ಅವರು ವ್ಯಂಗ್ಯ ಚಿತ್ರಕಲೆಗೇ ತಮ್ಮನ್ನು ಸಮರ್ಪಿಸಿಕೊಂಡರು. ಕಾಲೇಜು ಶಿಕ್ಷಣ ಪಡೆಯುತ್ತಿರು ವಾಗಲೇ ಅವರ ಮೊದಲ ವ್ಯಂಗ್ಯಚಿತ್ರ ಕಲ್ಕತ್ತಾದ 'ಒರಿಯಂಟ್ ಇಲ್ಲಸ್ಟ್ರೇಟೆಡ್ ವೀಕ್ಲಿ'ಯಲ್ಲಿ ಪ್ರಕಟ ವಾಯಿತು. (೧೯೪೩) ಜೊತೆಗೆ ಬನಾರಸ್‌ನಿಂದಲೇ ಪ್ರಕಟವಾಗುತ್ತಿದ್ದ 'ಆಜ್' ದಿನಪತ್ರಿಕೆಗೆ ೩ ವರ್ಷಗಳ ಕಾಲ ವ್ಯಂಗ್ಯ ಚಿತ್ರ ಬರೆದ ಅವರು ಅಲಹಾಬಾದಿನಿಂದ ಪ್ರಕಟವಾಗುತ್ತಿದ್ದ 'ಅಮೃತ ಬಝಾರ್' ಪತ್ರಿಕೆಗೆ ವ್ಯಂಗ್ಯಚಿತ್ರಗಳನ್ನು ಕಳುಹಿಸುತ್ತಿದ್ದರು. 'ಶಾಸ್ತ್ರಿ' ಎಂಬುದು ಅವರ ಆಗಿನ ಚಿತ್ರನಾಮ.

ರಾಮಕೃಷ್ಣರು ಆಗ ಬನಾರಸ್ ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿದ್ದ ಎಸ್. ರಾಧಾಕೃಷ್ಣನ್ (ರಾಷ್ಟ್ರಪತಿಗಳಾದವರು)ರ ಗಮನ ಸೆಳೆಯುವಲ್ಲಿಯೂ ಯಶಸ್ವಿಯಾಗಿದ್ದರು. ಅವರ ವ್ಯಂಗ್ಯಚಿತ್ರಗಳಲ್ಲಿ ಹುದುಗಿದ್ದ ಮೊನಚನ್ನು ಗಮನಿಸಿದ ರಾಧಾಕೃಷ್ಣರು ಸ್ವತಃ ಹಣ ನೀಡಿ ಇವರನ್ನು ಕಲ್ಕತ್ತಾ, ದೆಹಲಿ, ಮುಂಬಯಿ ಮುಂತಾದ ಕಡೆಗಳಲ್ಲಿ ನಡೆಯುತ್ತಿದ್ದ ವ್ಯಂಗ್ಯಚಿತ್ರ ಸ್ಪರ್ಧೆಗಳಿಗೆ ಕಳುಹಿಸು ತ್ತಿದ್ದರು. ಅಲ್ಲದೆ, ವ್ಯಂಗ್ಯಚಿತ್ರಕಲೆಯಲ್ಲಿನ ಇವರ ಅಸಾಧಾರಣ ಪ್ರತಿಭೆಯನ್ನು ಗಮನಿಸಿದ ರಾಧಾಕೃಷ್ಣನ್ ರಾಮಕೃಷ್ಣರಿಗೆ ಮದರಾಸಿನ (ಕಲ್ಕಿ) ತಮಿಳು ವಾರಪತ್ರಿಕೆಯನ್ನು ಸೇರುವಂತೆ ಪ್ರೇರೇಪಿಸಿದರು. (೧೯೪೫). 'ಕಲ್ಕಿ' ಪತ್ರಿಕೆ ಸಂಗೀತ ಸಾಮ್ರಾಜ್ಞೆ ಎಂ. ಎಸ್. ಸುಬ್ಬಲಕ್ಷ್ಮೀ ಹಾಗೂ ಅವರ ಪತಿ ಎಂ. ಸದಾಶಿವಂ ಅವರ ಒಡೆತನದ್ದಾಗಿತ್ತು.

ಮುಂದೆ ಕಲ್ಕಿಯ ಸಂಪಾದಕರಾಗಿದ್ದ ಆರ್. ಕೃಷ್ಣಮೂರ್ತಿಯವರು ಎಂಟಾಣೆ ಕೊಟ್ಟು ಪತ್ರಿಕೆ ಕೊಂಡು ಓದುವ ಜನ ಸಾಮಾನ್ಯರ ಆಶೋತ್ತರಗಳ ಕಡೆಗೆ ನಿಮ್ಮ ಲಕ್ಷ್ಯವಿರಬೇಕು. ಎಂಬುದಾಗಿ ಹೇಳಿದ ಮಾತು ರಾಮಕೃಷ್ಣರ ವ್ಯಂಗ್ಯ ಚಿತ್ರಗಳಲ್ಲಿ ಪ್ರಮುಖ ಬದಲಾವಣೆ ತಂದಿತು. ಅವರ ರಾಜಕೀಯ ಕಾರ್ಟೂನುಗಳು ಎಷ್ಟು ಮೊನಚಾಗಿರುತ್ತಿದ್ದವೆಂದರೆ (ತೀಕ್ಷ್ಣವಾಗಿರುತ್ತಿತ್ತು) ಈ ಸಂಬಂಧವಾಗಿ ಕಲ್ಕಿ ಪತ್ರಿಕೆಯು ಒಮ್ಮೆ ಶ್ರೀಲಂಕಾದಲ್ಲಿ ಇನ್ನೊಮ್ಮೆ ಹೈದರಾಬಾದಿನಲ್ಲಿ ರಜಾಕರ್ ಚಳುವಳಿ ಸಂದರ್ಭದಲ್ಲಿ ನಿರ್ಬಂಧಿಸಲಾಗಿತ್ತು.

ಸುಮಾರು ೧೦ ವರ್ಷಗಳ ಕಾಲ (೧೯೪೫–೫೫) 'ಕಲ್ಕಿ' ಪತ್ರಿಕೆಗೆ ಕೆಲಸ ಮಾಡಿದ್ದು, ಅವರಿಗೆ ತಮಿಳು ಬರುತ್ತಿಲ್ಲವಾದ ಕಾರಣ ಬೇರೆಯವರು ಚಿತ್ರದ ಹೆಸರು ಮತ್ತು ಸಂಭಾಷಣೆ ಬರೆಯಬೇಕಿತ್ತು. ಅದುವರೆಗೆ ೩೫ ಸಾವಿರ ಪ್ರಸಾರ ಸಂಖ್ಯೆ ಹೊಂದಿದ್ದ ಕಲ್ಕಿ ಇವರ ವ್ಯಂಗ್ಯ ಚಿತ್ರದ ಪ್ರಭಾವದಿಂದಾಗಿ ಎರಡೂವರೆ ಲಕ್ಷಕ್ಕೆ ಏರಿತು. ರಾಜಾಜಿ ಅವರು ತಾವು ಬರೆಯುತ್ತಿದ್ದ ಲೇಖನ ಗಳಿಗೆಲ್ಲ ರಾಮಕೃಷ್ಣರಿಂದ ವ್ಯಂಗ್ಯ ಚಿತ್ರ ಬರೆಸುತ್ತಿದ್ದರು. ಅಲ್ಲದೆ ಇವರ ವ್ಯಂಗ್ಯ ಚಿತ್ರಗಳ ಮುಖಪುಟವಿರುತ್ತಿದ್ದ 'ಕಲ್ಕಿ' ಪತ್ರಿಕೆಯನ್ನು ಕೊಳ್ಳಲು ಜನ ಸಾಲುಗಟ್ಟಿ ನಿಲ್ಲುತ್ತಿದ್ದರಂತೆ. ಈ ಮಧ್ಯೆ ರಾಮಕೃಷ್ಣರು ನ್ಯಾಯಶಾಸ್ತ್ರದಲ್ಲಿ ಪದವಿಯನ್ನು ಪಡೆದರು.

ಕಲ್ಕಿಯ ಸಂಪಾದಕರಾಗಿದ್ದ ಕೃಷ್ಣಮೂರ್ತಿಯವರು ನಿಧನರಾದ ಬಳಿಕ ರಾಮಕೃಷ್ಣರು 'ಕಲ್ಕಿ' ಪತ್ರಿಕೆಗೆ ವಿದಾಯ ಹೇಳಿ ತಮ್ಮ ಸ್ವಂತ ಊರು ಪುತ್ತೂರಿಗೆ ಮರಳಿದರು. ಒಂದು ವರ್ಷ ವಕೀಲಿ ವೃತ್ತಿ ಕೈಗೊಂಡು ಅವರು, ಮಂಗಳೂರಿನ ಹೆಸರಾಂತ 'ನವಭಾರತ' ಪತ್ರಿಕೆಗೆ ವ್ಯಂಗ್ಯಚಿತ್ರ ಬರೆಯಲಾರಂಭಿಸಿದರು. ಆ ಸಮಯದಲ್ಲೇ ಅವರ 'ಶಿಂಗಣ್ಣ' ಜನಿಸಿದ್ದು (೧೯೫೬). ಆತ ರಾಮಕೃಷ್ಣರ ಮಾನಸ ಪುತ್ರ ಬಿಡಿಸಿ (ರಚಿಸಿ) ಮರುದಿನ ಬೆಳಗ್ಗೆ ಬಸ್ಸಿನಲ್ಲಿ ೩೫ ಮೈಲಿ ದೂರದ ಮಂಗಳೂರಿಗೆ ಕಳುಹಿಸುತ್ತಿದ್ದರಂತೆ. ಏನಾದರೂ ಬದಲಾವಣೆ ಮಾಡಬೇಕಾದಲ್ಲಿ ದೂರವಾಣಿ ಮೂಲಕವೇ ತಿಳಿಸುತ್ತಿದ್ದರಂತೆ.

'ಶಿಂಗಣ್ಣ' ಹೆಸರು ಕೊಟ್ಟವರು ಸಾಹಿತಿ ಹಾಗೂ ಪ್ರಭಾತ ಪತ್ರಿಕೆ ಪ್ರಕಟಿಸುತ್ತಿದ್ದ ಕುಡ್ಪಿ ವಾಸುದೇವ ಶೆಣೈ ಕೊಂಕಣಿ ಉಚ್ಚಾರ ಪದ್ಧತಿಯೊಂದಿಗೆ ಹುಟ್ಟಿದ ಆ ಹೆಸರು, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಲ್ಪಕಾಲದಲ್ಲಿಯೇ ಜನರನ್ನು ಆಕರ್ಷಿಸಿತು. ಶಿಂಗಣ್ಣನಿಗಾಗಿಯೇ ಎಷ್ಟೋ ಅಭಿಮಾನಿಗಳು 'ನವಭಾರತ' ಪತ್ರಿಕೆಯನ್ನು ಕೊಳ್ಳುತ್ತಿದ್ದರಂತೆ.

ಈ ಮಧ್ಯೆ ರಾಮಕೃಷ್ಣರು 'ಇಂದ್ರ ಧನಸ್ಸು' ಎಂಬ ವ್ಯಂಗ್ಯ ಚಿತ್ರಕ್ಕೆ ಮೀಸಲಾದ ಮಾಸ ಪತ್ರಿಕೆಯನ್ನು ಪುತ್ತೂರಿನಿಂದ ಒಂದು ವರ್ಷಕಾಲ ಪ್ರಕಟಿಸಿದ್ದು (೧೯೬೨–೬೩) ದಿ. ಶಿವರಾಮ ಕಾರಂತರ ಲೇಖನಗಳು ಪ್ರತಿ ಸಂಚಿಕೆಯಲ್ಲಿ ಪ್ರಕಟವಾಗುತ್ತಿದ್ದವು. ಸತತವಾಗಿ ೧೪ ವರ್ಷ ಕಾಲ

‘ನವಭಾರತ’ ಪತ್ರಿಕೆಗಾಗಿ ಶಿಂಗಣ್ಣನನ್ನು ಚಿತ್ರಿಸಿದ ರಾಮಕೃಷ್ಣರು ಬದಲಾವಣೆ ಬಯಸಿ ಹೊಸದಾಗಿ ಪ್ರಾರಂಭವಾದ ‘ಉದಯವಾಣಿ’ ಪತ್ರಿಕೆಗೆ ಮುಂದೆ ೩ ವರ್ಷ ಕಾಲ ಬರೆದರು.

ನಂತರ ‘ಪ್ರಜಾವಾಣಿ’ ಪತ್ರಿಕೆಯ ಆಗಿನ ಸಂಪಾದಕ ಟಿ.ಎಸ್. ರಾಮಚಂದ್ರರಾಯರ ಆಹ್ವಾನದ ಮೇರೆಗೆ ‘ಚಿನಕುರುಳಿ’ಯೊಳಗೆ ಕಾಣಿಸಿಕೊಂಡರು, ಸುಧಾ, ಮೈಯೂರಗಳಿಗೂ ವ್ಯಂಗ್ಯ ಚಿತ್ರ ಬರೆದರು. ಜೊತೆಗೆ ಕೇರಳದ ಸುಪ್ರಸಿದ್ಧ ಪತ್ರಿಕೆಗಳಾದ ‘ಮಾತೃಭೂಮಿ’ ಹಾಗೂ ಮಲೆಯಾಳ ‘ಮನೋರಮಾ’ಗಳಿಗೆ ಒಂದು ವರ್ಷ ವ್ಯಂಗ್ಯಚಿತ್ರ ರಚಿಸಿದರು.

ರಾಮಕೃಷ್ಣರು ಹಿಂದಿ, ಇಂಗ್ಲಿಷ್, ಕನ್ನಡ, ತಮಿಳು, ಮಲೆಯಾಳಂ ಭಾಷೆಗಳಲ್ಲಿ ೫,೦೦೦ ಕ್ಕೂ ಹೆಚ್ಚು ವ್ಯಂಗ್ಯ ಚಿತ್ರ ರಚಿಸಿದ್ದು, ಒಂದು ದಾಖಲೆಯೇ ಆಗಿದೆ ಹಾಗೂ ಅವರನ್ನು ಪಂಚಭಾಷಾ ವ್ಯಂಗ್ಯ ಚಿತ್ರಕಾರರೆಂದು ಗುರುತಿಸಲಾಗಿದೆ. ಸದ್ಯ ‘ನವಭಾರತದಲ್ಲಿ ಶಿಂಗಣ್ಣಾ’ ಎಂಬ ಹೆಸರಿನಲ್ಲಿ ಅವರ ೨೫೨ ವ್ಯಂಗ್ಯ ಸಂಪುಟ ಪ್ರಕಟವಾಗಿದೆ. ಪ್ರಸ್ತುತ ಬೆಂಗಳೂರಿನಲ್ಲಿ ನೆಲೆಸಿರುವ ಅವರಿಗೆ ಅವರ ಅಭಿಮಾನಿಗಳು ಪುತ್ತೂರಿನಲ್ಲಿ ಸನ್ಮಾನ ನೀಡಿ ಅರ್ಪಿಸಿದ ಗ್ರಂಥ ‘ವ್ಯಂಗ್ಯ ಬದುಕು’.

**೬.೪.೧೦.ಕೆ. ಎಂ. ರಾಧಾಕೃಷ್ಣ (೧೯೩೧ – ೧೯೮೪)**

ಕೆ.ಎಂ. ರಾಧಾಕೃಷ್ಣರವರು ನೃತ್ಯ ಕಲಾವಿದರಾಗಿ ಓರ್ವ ಗಮನಾರ್ಹ ವ್ಯಕ್ತಿಯಾಗಿದ್ದಾರೆ. ಪುತ್ತೂರು ಬೋರ್ಡ್ ಹೈಸ್ಕೂಲಿನ ವಿದ್ಯಾರ್ಥಿಯಾಗಿದ್ದಾಗ (೧೯೪೭–೪೮) ಶಿವರಾಮ ಕಾರಂತರ ಕಿನ್ನರ ನೃತ್ಯದಲ್ಲಿ ರಾಧಾಕೃಷ್ಣ ಪಾಲುಗೊಂಡರು. ಇದರ ನಂತರ ನರ್ತನದ ಗೀಳು ಅವರಿಗೆ ಹಚ್ಚಿಕೊಂಡಿತು. ಪೊಲಿಟೆಕ್ನಿಕ್ ಡಿಪ್ಲೋಮಾ ಗಳಿಸಿಯೂ ನಾಟ್ಯಾಚಾರರಾಗಿ ಪರಿವರ್ತನರಾದರು. ಮಂಗಳೂರಿನ ರಾಜನ್ ಅಯ್ಯರ್, ಮದರಾಸಿನ ಎಲ್ಲಪ್ಪ ಪಿಳ್ಳೆ ಮತ್ತು ಸೇಲಂ ರಾಜರತ್ನಂ ಪಿಳ್ಳೆಯವರಲ್ಲಿ ಭರತನಾಟ್ಯ, ಗೋಪಿನಾಥ ತಂಗ ಮಣಿಯವರಲ್ಲಿ ಕಥಕ್ಕಳಿ, ಮುಂಬಯಿಯ ಲಕ್ಷ್ಮೀನಾರಾಯಣ ಮತ್ತು ಗೋಪಿ ಕೃಷ್ಣರಲ್ಲಿ ಕಥಕ್ ಅಭ್ಯಸಿಸಿದ ನೃತ್ಯವೃತ್ತಿ ಕೆ. ಎಂ. ರಾಧಾಕೃಷ್ಣರದಾಯಿತು.

ರಾಧಾಕೃಷ್ಣರು ಪುತ್ತೂರಿನಲ್ಲಿ ‘ಕಲಾನಿಕೇತನ’ವನ್ನು ಸ್ಥಾಪಿಸಿದ್ದು ೧೯೫೨ರಲ್ಲಿ ಒಂದು ಕಡೆಯಿಂದ ತನ್ನೊಳಗಿನ ‘ಕಲಾವಿದ’ನನ್ನು ಪೋಷಿಸುತ್ತಿರುವಂತೆ, ಇನ್ನೊಂದೆಡೆಯಿಂದ ಶಿಷ್ಯರನ್ನು ಪಡೆದು ರೂಪಿಸಲು ಶ್ರಮಿಸಿದರು. ಪ್ರಾರಂಭದ ದಿನಗಳಲ್ಲಿ ಶಿಷ್ಯರಿಗಾಗಿ ಅವರು ಪರದಾಡಬೇಕಾಯಿತು. ೧೯೫೬ರಲ್ಲಿ ಉಡುಪಿಯಲ್ಲಿ ತರಗತಿಗಳನ್ನು ನಡೆಸತೊಡಗಿದರು. ೧೯೬೯ರಲ್ಲಿ ಮತ್ತೆ ಪುತ್ತೂರಿಗೆ ಬಂದು ‘ನಾಟ್ಯಾಲಯ’ ಅಸ್ತಿತ್ವಕ್ಕೆ ಬಂತು. ಅಭ್ಯಾಸ, ಪ್ರದರ್ಶನಗಳಿಗೆ ಅಗತ್ಯವಿರುವ ಪರಿಕರಗಳನ್ನೆಲ್ಲ ಈ ನೃತ್ಯಶಾಲೆ ಹೊಂದಿತ್ತು. ೧೯೭೨ರಲ್ಲಿ ‘ನಾಟ್ಯಾಲಯ’ದ ದಶಮಾನೋತ್ಸವ ಐದು ದಿನಗಳ ಕಾಲ

ವಿಜೃಂಭಣೆಯಿಂದ ಜರುಗಿತು. ಅದೇ ವರ್ಷ 'ಕೆ. ಎಂ. ನಾಟ್ಯಸಭಾ' ಎಂಬ ಅಂಗಸಂಸ್ಥೆಯನ್ನು ಪ್ರಾರಂಭಿಸಿದರು. ಅದರ ಮೂಲಕ ಅನಂತರದ ದಿನಗಳಲ್ಲಿ ದೂರದೂರುಗಳ ಶ್ರೇಷ್ಠ ಕಲಾವಿದರು ಪುತ್ತೂರಿಗೆ ಬರುವಂತಾಯಿತು.

ರಾಧಾಕೃಷ್ಣ ೧೯೭೮-೭೯ ಮತ್ತು ೭೯-೮೦ರಲ್ಲಿ ಕರ್ನಾಟಕ ಸರಕಾರದ ಸೆಕೆಂಡರಿ ಎಜುಕೇಶನ್ ಬೋರ್ಡ್ ನಿರ್ವಹಿಸುತ್ತಿದ್ದ ನೃತ್ಯ ಪರೀಕ್ಷೆಗಳಲ್ಲಿ ಮುಖ್ಯ ಪರೀಕ್ಷಕರಾಗಿ ಸೇವೆ ಸಲ್ಲಿಸಿದ್ದರು. ೧೯೮೦ರ ಇಸವಿಗೆ ಚಲನ ಚಿತ್ರಗಳ ಕ್ಷೇತ್ರಕ್ಕೂ ಕೆ. ಎಂ. ರವರು ಕಾಲಿಟ್ಟರು. ಅವರು ಮದರಾಸಿನಲ್ಲಿ ಕಾರ್ಯಪ್ರವೃತ್ತವಾಗಿದ್ದ ಚಲನ ಚಿತ್ರ ನೃತ್ಯಗಾರರು ಮತ್ತು ನಿರ್ದೇಶಕರ ಸಂಘದ ಸದಸ್ಯತನ ಪಡೆದಿದ್ದರು. ೨೦-೧೦-೮೨ ಉಡುಪಿಯ ಪರ್ಯಾಯ ಕಾಣಿಯೂರು ಮಠಾಧೀಶರಿಂದ 'ನಾಟ್ಯ ಕಲಾ ನಿಪುಣ' ಬಿರುದಾಂಕಿತರಾಗಿ ಗೌರವಿಸಲ್ಪಟ್ಟರು.

೧೬-೦೪-೧೯೩೧ರಲ್ಲಿ ಪುತ್ತೂರು ತಾಲೂಕಿನ ಕೆಮ್ಮಿಂಜೆ ಗ್ರಾಮದ ಶ್ರೀನಿವಾಸ ಮೂಡಂಬಡಿತ್ತಾಯ ಮತ್ತು ಶ್ರೀಮತಿ ಕಮಲಮ್ಮನವರ ಹಿರಿಯ ಮಗನಾಗಿ ಜನಿಸಿ, ಕಲೆಯ ಆರಾಧಕರಾಗಿ, ಸೊಗಸಾದ ಅಂಗ ಸೌಷ್ಠವ, ನೃತ್ಯ ಕಲಾವಿದನಿಗೆ ಹೇಳಿ ಮಾಡಿಸಿದಂಥ ಶರೀರ. ಅಂಗ ವಿನ್ಯಾಸದಲ್ಲಿ ಹಾವಭಾವಗಳ ರಸೋತ್ಕರ್ಷದಲ್ಲಿ ತಾಳ-ಲಯಗಳ ಗತಿಯ ಗತ್ತಿನಲ್ಲಿ ಲೀಲಾಜಾಲವಾದ ಪ್ರಾವೀಣ್ಯ ಹೊಂದಿದ ಕೆ. ಎಂ. ರಾಧಾಕೃಷ್ಣ ತಮ್ಮ ೫೪ನೆಯ ವಯಸ್ಸಿನಲ್ಲಿ ೭-೭-೧೯೮೪ರಲ್ಲಿ ಹೃದಯಾಘಾತದಿಂದ ಅಸ್ತಂಗತರಾದರು.

### ೬.೪.೧೧.ಬೊಳುವಾರು ಮಾಧವ ನಾಯಕ್ (೧೯೩೨)

ಫೆಬ್ರವರಿ ೯, ೧೯೩೨ರಲ್ಲಿ ಮಾಧವ ನಾಯಕರ ಜನನ. ತಂದೆ ಪಣಕಜೆ ನರಸಿಂಹ ನಾಯಕರು, ತಾಯಿ ರಮಾದೇವಿ. ಬೊಳುವಾರು ಪಂಚಾಯತ್ ಶಾಲೆ, ಮಂಗಳೂರಿನ ಸ್ಟೈಂಟ್ ಎಲೋಶಿಯಸ್ ಕಾಲೇಜಿನಲ್ಲಿ ಓದು. ವೈದ್ಯನಾಗಬೇಕೆಂಬ ಬಾಲ್ಯದ ಕನಸು ನನಸಾಗಲಿಲ್ಲ. ಹಿರಿಯರ ಪ್ರೇರಣೆಯಿಂದ ವ್ಯಾಪಾರಿ ವೃತ್ತಿಗೆ ತೊಡಗಬೇಕಾಯ್ತು[೨೬].

ವೃತ್ತಿಯಲ್ಲಿ ಕೈ ತುಂಬಿದರೂ, ನಾಯಕರಿಗೆ ಮನ ತುಂಬಲು ಸುಪ್ತವಾಗಿದ್ದ ಸಂಗೀತ, ಸಾಹಿತ್ಯಗಳು ಸಹಕಾರಿಯಾದವು. ಅನಕೃ, ಬೀಚಿಯವರಿಂದ ಪ್ರಭಾವಿತರು. ಇವರ ಅನೇಕ ಲೇಖನ, ಚಿಂತನೆಗಳು ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಸಾಹಿತ್ಯ ಕ್ಷೇತ್ರದ ಹಲವು ಪ್ರಸಿದ್ಧರ ನಿಕಟ ಸಂಪರ್ಕವಿದೆ. 'ವ್ಯಕ್ತಿ-ವಿಚಾರ' ಇವರ ಪ್ರಕಟಿತ ಕೃತಿ.

ಪಂಡಿತ ಭೀಮಸೇನ್ ಜೋಶಿ, ವೆಂಕಟಸುಬ್ರಹ್ಮಣ್ಯ ಅಯ್ಯರ್, ಬಸವರಾಜ ರಾಜಗುರು, ನಾಯಕರಿಗೆ ಗುರುಸಂಬಂಧ, ಆಪ್ತ ಒಡನಾಟ, ದಿವಂಗತರಾದ ವೆಂಕಟ ಭಟ್, ಮಂಗೇಶ ರಾವ್,

ಗೋವೇಕರ್, ಗುರು ಬಸವಾಚಾರ್ಯ ಹಿರೇಮಠ ಮತ್ತು ಮೋಹನ್ ಕರ್ವೆ, ಶ್ರೀನಿವಾಸ ಶೆಣೈ ಮೊದಲಾದವರು ನಾಯಕರಿಗೆ ಸಂಗೀತ ಗುರುಗಳು.

ಮಾಧವ ನಾಯಕರು ಸ್ವತಃ ಉತ್ತರಾದಿ ಸಂಗೀತವನ್ನು ಸೊಗಸಾಗಿ ಹಾಡುತ್ತಾರೆ. ದಸರಾ, ತ್ಯಾಗರಾಜ ಸಂಗೀತೋತ್ಸವದಲ್ಲಿ ಸಂಗೀತ ಕಛೇರಿ ನಡೆಸಿದ್ದಾರೆ. ಯಕ್ಷಗಾನವು ನಾಯಕರಿಗೆ ಪ್ರಿಯವಾದ ಮತ್ತೊಂದು ಪ್ರಕಾರ, ಕಲಾವಿದರೊಂದಿಗೆ ಬೆರೆತು ರಂಗದ ಬಗ್ಗೆ, ಪ್ರದರ್ಶನದ ಬಗ್ಗೆ ತನ್ನ ಜಿಜ್ಞಾಸೆಗಳನ್ನು ಮುಕ್ತವಾಗಿ ಚರ್ಚಿಸುತ್ತಾರೆ. ಯಕ್ಷಗಾನ ಪ್ರದರ್ಶನದಲ್ಲಿ ತಾನು ಮೆಚ್ಚಿದ ಹೃದಯಂಗಮ, ವೈಚಾರಿಕ ಸನ್ನಿವೇಶಗಳನ್ನು ನೆನಪಿನಲ್ಲಿಟ್ಟುಕೊಳ್ಳುವುದು ನಾಯಕರ ವಿಶೇಷತೆ.

ತನ್ನ ಸ್ವಗೃಹದಲ್ಲಿ ಹಲವು ಸಂಗೀತ–ಸಾಹಿತ್ಯ ಕಾರ್ಯಕ್ರಮಗಳನ್ನು ಏರ್ಪಡಿಸಿ ಹಿರಿಯರನ್ನು ಗೌರವಿಸಿ, ಪ್ರತಿಭಾವಂತರನ್ನು ಸತ್ಕರಿಸುವ ಪರಿಪಾಠವನ್ನು ಮುಂದುವರಿಸುತ್ತಿದ್ದಾರೆ. ಮಾಧವ ನಾಯಕರು ಸ್ಥಾಪಿಸಿದ 'ಉಗ್ರಾಣ ಪ್ರಶಸ್ತಿ'ಯು ಅವರ ಸಾಹಿತ್ಯ ಪ್ರೀತಿಯ ಕುರುಹು.

ಶ್ರೀ ಗುರುದೇವ ಲಲಿತ ಕಲಾ ಅಕಾಡಮಿ, ಕಾಂತಾವರ ಕನ್ನಡ ಸಂಘ, ಶ್ರೀ ಎಡನೀರು ಮಠಗಳಿಂದ ಸಂಮಾನಿತರು.

### ೬.೪.೧೨. ರಂಗ ಕಲಾವಿದ ರಾಮಣ್ಣ ರೈ, ಪುತ್ತೂರು (೧೯೩೯)

ಕನ್ನಡ ನಾಟಕಗಳ ಮೂಲಕ ರಂಗಪ್ರವೇಶ ಮಾಡಿ, ಬಳಿಕ ತುಳು ನಾಟಕಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಅಭಿನಯಿಸಿ, ಹಾಸ್ಯ ನಟನಾಗಿ ಪ್ರಸಿದ್ಧರಾದವರು ಬಿ. ಎಸ್. ರಾಮಣ್ಣ ರೈ ಜೂನ್ ೩೦, ೧೯೩೯ರಂದು ಇವರ ಜನನ. ತಂದೆ ಸರ್ವತ್ತೋಡಿ ಬಾಲಕೃಷ್ಣ ರೈ, ತಾಯಿ ಬೆಳ್ಳಿಪ್ಪಾಡಿ ರತಿ ರೈ, ಪುತ್ತೂರಿನಲ್ಲಿ ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸ ಮಾಡಿದರು.

ದೇವಪ್ಪಯ್ಯ ಮಾಸ್ಟ್ರು ರೈಗಳ ನಾಟಕ ರಂಗ ಪ್ರವೇಶಕ್ಕೆ ಅನುವು ಮಾಡಿಕೊಟ್ಟವರು. ಸಾರ್ವಜನಿಕ ರಂಗಭೂಮಿಯನ್ನು ಪರಿಚಯಿಸಿದವರು. ರಾಮಣ್ಣ ರೈಗಳ ಬಣ್ಣದ ಬದುಕಿನ ಹಾದಿ ಕಲ್ಲುಮುಳ್ಳುಗಳಿಂದ ಕೂಡಿದ್ದಾಗಿದೆ. ಬದುಕಿನ ಹಾದಿಗಾಗಿ ನಾಟಕರಂಗನವನ್ನು ಬಿಡುವ ಕ್ಷಣಿಕ ವೈರಾಗ್ಯ ಬಂದಾಗ ಉಗ್ರಾಣ ಮಂಗೇಶರಾಯರ ಹಿತೋಪದೇಶ ರೈಗಳು ಅದೇ ಕ್ಷೇತ್ರದಲ್ಲಿ ಉಳಿಯುವಂತೆ ಮಾಡಿತು.

ರಾಮಣ್ಣ ರೈಗಳು 'ಉಡಲ್ದ ತುಡಾರ್' ಎಂಬ ತುಳು ಚಿತ್ರದ ಮೂಲಕ ಚಿತ್ರರಂಗಕ್ಕೆ ಪ್ರವೇಶ ಮಾಡಿದರು. 'ಯಾನ್ ಸನ್ಯಾಸಿ ಆಪೆ'. ಏರ್ ಮಲ್ತಿನ ತಪ್ಪು', 'ಬಯ್ಯಮಲ್ಲಿಗೆ',

ಬೊಳ್ಳಿದೋಟ, ಕರಿಯಮಣಿ ಕಟ್ಟಂದಿ ಕಂಡನಿ, ನ್ಯಾಯಗಾದ್ ಎನ್ನ ಬದ್ಕ್, ಬದ್ಕೆರೆ ಬುಡ್ಲೆ, ಬಂಗಾರ್ ಪಟ್ಲೇರ್, ಎಂಬ ತುಳು ಚಿತ್ರಗಳು, ನಂಜುಂಡ ನಕ್ಕಾಗ, ಎಂಬ ಕನ್ನಡ ಚಿತ್ರದಲ್ಲಿ ಅಭಿನಯಿಸಿದ್ದಾರೆ.

ತುಳುವಿನ ಪ್ರಪ್ರಥಮ ವರ್ಣಚಿತ್ರ 'ಕರಿಮಣಿ ಕಟ್ಟಂದಿ ಕಂಡನಿ' ಬದ್ಕೆರೆ ಬುಡ್ಲೆ, ಮತ್ತು ಬಂಗಾರ್ ಪಟ್ಲೇರ್, ಚಿತ್ರಗಳಿಗೆ ಸಂಭಾಷನೆ ಬರೆದಿದ್ದಾರೆ. ಕೆಲವು ಚಿಕ್ಕಪುಟ್ಟ ತುಳುನಾಟಕಗಳನ್ನು ರಚಿಸಿದ್ದಾರೆ.

೧೯೮೮ರಲ್ಲಿ 'ರಂಗಭೂಮಿ' ಉಡುಪಿ ಇವರು 'ವಿನೋದ ಭೂಷಣ' ಎಂಬ ಬಿರುದು ನೀಡಿದ್ದಾರೆ. ರೋಟರಿ ಕ್ಲಬ್ ತುಳುಕೂಟ ಪುತ್ತೂರು ಹಾಗೂ ಇತರ ಸಂಘ-ಸಂಸ್ಥೆಗಳಿಂದ ಸಂಮಾನಿತರಾಗಿದ್ದಾರೆ[೨೮].

**೬.೪.೧೩. ಬಿ. ಶ್ರೀಧರ ಭಂಡಾರಿ, ಪುತ್ತೂರು (೧೯೪೫)**

ತೆಂಕುತಿಟ್ಟಿನ ಯಕ್ಷಗಾನ ರಂಗಭೂಮಿಯನ್ನು ಜೀವಂತವನ್ನಾಗಿಡಲು ಗಂಭೀರ ಯತ್ನದಲ್ಲಿ ತೊಡಗಿಕೊಂಡಿರುವ ಪ್ರತಿಭಾವಂತ ಕಲಾವಿದ ಪುತ್ತೂರಿನ ಬಿ. ಶ್ರೀಧರ ಭಂಡಾರಿ. ಶ್ರೀಧರ ಭಂಡಾರಿ ಯವರು ಹುಟ್ಟಿದ್ದು ೧-೧೦-೧೯೪೫ರಂದು, ತಂದೆ ಶೀನಪ್ಪ ಭಂಡಾರಿ, ತಾಯಿ ಸುಂದರಿ. ಶೀನಪ್ಪ ಭಂಡಾರಿಯವರೂ ಯಕ್ಷಗಾನದಲ್ಲಿ ಪ್ರಶಸ್ತಿ ವಿಜೇತರು, ಮೇಳ ಕಟ್ಟಿದ ಸರದಾರ.

ತನ್ನ ೧೩ನೆಯ ವಯಸ್ಸಿನಲ್ಲಿ ಶ್ರೀ ಕುದ್ಕಾಡಿ ವಿಶ್ವನಾಥ ರೈಯವರಿಂದ ಭರತನಾಟ್ಯಾಭ್ಯಾಸದ ಗೆಜ್ಜೆ ಕಟ್ಟಿಸಿಕೊಂಡ ಶ್ರೀಧರರು ಅನಂತರ ಕಾಲ್ಗೆಜ್ಜೆಯ ಸದ್ದನ್ನು ಮೊಳಗಿಸಿದ್ದು ಯಕ್ಷರಂಗದಲ್ಲಿ ತಂದೆಯವರ ಪ್ರೇರಣೆ, ಕುರಿಯ ವಿಠಲ ಶಾಸ್ತ್ರಿಯವರ, ಕಡತೋಕ ಮಂಜುನಾಥ ಭಾಗವತರ, ಚಿಪ್ಪಾರು ಕೃಷ್ಣಯ್ಯ ಬಲ್ಲಾಳರ ಪ್ರೋತ್ಸಾಹಗಳ ಹಿನ್ನೆಲೆಯಿಂದ ರಂಗಸ್ಥಳದ ಮುನ್ನೆಲೆಗೆ ಧುಮುಕಿದ ಭಂಡಾರಿ ಯವರು ಇಂದು ತೆಂಕು ತಿಟ್ಟಿನ ಅಗ್ರಮಾನ್ಯ ವೇಷಧಾರಿಗಳಲ್ಲೊಬ್ಬರಾಗಿ ಬೆಳೆದು ನಿಂತಿದ್ದಾರೆ.

ಪ್ರಾರಂಭದಲ್ಲಿ ಎರಡು ವರ್ಷಗಳ ಕಾಲ ತನ್ನ ತಂದೆಯವರ ಜೊತೆಗೆ ತಿರುಗಾಟ ನಡೆಸಿದ ಶ್ರೀಧರರು ಬಳಿಕ ೧೯೬೬ರಲ್ಲಿ ಪ್ರತಿಷ್ಠಿತ ಶ್ರೀ ಧರ್ಮಸ್ಥಳ ಮೇಳದಲ್ಲಿ ಪ್ರವೇಶ ಪಡೆದು ಹದಿನೆಂಟು ವರ್ಷಗಳಷ್ಟು ದೀರ್ಘಾವಧಿಯಲ್ಲಿ ಆ ಮೇಳದಲ್ಲಿದ್ದು ತನ್ನನ್ನು ಸಮರ್ಥ ಕಲಾವಿದನನ್ನಾಗಿ ರೂಪಿಸಿ ಕೊಂಡಿದ್ದಾರೆ.

ವೃತ್ತಿಪರ ಮೇಳದ ಅನುಭವ ಪಡೆದು ತನ್ನದೇ ಮೇಳ ಒಂದನ್ನು ಯಾಕೆ ಕಟ್ಟಬಾರದೆಂಬ ಯೋಚನೆ ಮೂಡಿದ ಬಳಿಕ ಪುತ್ತೂರು ಶ್ರೀ ಮಹಾಲಿಂಗೇಶ್ವರ ಮೇಳವನ್ನು ಸಜ್ಜುಗೊಳಿಸಿ ಎಂಟು ವರ್ಷ ತಿರುಗಾಟ ನಡೆಸಿದ್ದಾರೆ. ಆ ಮೇಳವನ್ನು ಮುನ್ನಡೆಸುವುದು

ಅಸಾಧ್ಯವೆಂದು ಕಂಡುಕೊಂಡ ಬಳಿಕ ಮೂರು ವರ್ಷ ಕಾಂತಾವರ ಮೇಳದಲ್ಲಿ ದುಡಿದು ಮತ್ತೆ ಶ್ರೀ ಧರ್ಮಸ್ಥಳ ಮೇಳದಲ್ಲಿ ಪಾತ್ರ ನಿರ್ವಹಣಾ ನಿರತರಾಗಿದ್ದಾರೆ.

೧೯೯೮ರಲ್ಲಿ ದುಬ್ಯಾ, ಶಾರ್ಜಾ, ಅಬುದಾಬಿ ಮತ್ತು ೧೯೯೧ರಲ್ಲಿ ಬಹರೈನ್, ದುಬೈ ಹಾಗೂ ೧೯೯೫ರಲ್ಲಿ ಜಪಾನ್, ಲಂಡನ್‌ಗಳಲ್ಲಿ ತನ್ನ ಪ್ರೌಢ ಅಭಿನಯದಿಂದ ಕರಾವಳಿಯ ಅದ್ಭುತ ರಮ್ಯ ಕಲೆಯಾದ ಯಕ್ಷಗಾನದ ಸವಿಯನ್ನು ಅಲ್ಲಿಯ ಪ್ರೇಕ್ಷಕರಿಗೆ ಉಣಿಸಿರುವ ಶ್ರೀಧರರು ಮರಳಿ ೨೦೦೨ರಲ್ಲಿ ಬಹರೈನ್‌ಗೆ ಹೋಗಿ ಯಕ್ಷಗಾನ ಪ್ರದರ್ಶನಗಳನ್ನು ನೀಡಿದ್ದಾರೆ[೨೯].

ಶ್ರೀಧರ ಭಂಡಾರಿ ಪುಂಡುವೇಷಗಳಿಂದ ಮೊದಲ್ಗೊಂಡು ಸ್ತ್ರೀವೇಷ ಸಹಿತ ರಾಜವೇಷಗಳನ್ನು ಮಾಡುವಲ್ಲಿ ತನ್ನ ಸಾಧನೆಯ ಔನ್ನತ್ಯವನ್ನು ಮೆರೆಸುವ ನಿಷ್ಣಾತರು. ಅಭಿಮನ್ಯು, ಬಭ್ರುವಾಹನ, ಕೃಷ್ಣ ಮುಂತಾದ ಪಾತ್ರಗಳ ಮೂಲಕ ರಂಗಗಳಲ್ಲಿ ತನ್ನ ಚುರುಕುತನಗಳನ್ನು ಪ್ರೇಕ್ಷಕರಿಗೆ ಮುಟ್ಟಿಸಿರುವ ಶ್ರೀಧರ್ ಪ್ರಸ್ತುತ ಹಿರಣ್ಯಾಕ್ಷ, ಇಂದ್ರಜಿತು, ಶಿಶುಪಾಲ ಮುಂತಾದ ಪಾತ್ರಗಳಲ್ಲಿ ತಾನು ಯಕ್ಷರಂಗದ ಮಾಗಿದ ಕಲಾವಿದನಾಗಿ ಕಂಗೊಳಿಸುತ್ತಿದ್ದಾರೆ. ಇದರೊಂದಿಗೆ ಬಿಡುವಿನ ವೇಳೆಯಲ್ಲಿ ಎಳೆಯರಿಗೆ ಯಕ್ಷಗಾನದಲ್ಲಿ ತರಬೇತಿಯನ್ನು ನೀಡುತ್ತಿದ್ದಾರೆ.

### ೬.೪.೧೪. ಪುತ್ತೂರು ನರಸಿಂಹ ನಾಯಕ್ (೧೯೫೦)

ದಕ್ಷಿಣಕನ್ನಡ ಜಿಲ್ಲೆಯ ಪುತ್ತೂರಿನಲ್ಲಿ ಶ್ರೀಮತಿ ವರಲಕ್ಷ್ಮೀ ನಾಯಕ್ ಮತ್ತು ಶ್ರೀಯುತ ಹರಿಹರ ನಾಯಕ್ ಅವರ ಮಗನಾಗಿ ಜನಿಸಿದ ಶ್ರೀಯುತ ಪುತ್ತೂರು ನರಸಿಂಹ ನಾಯಕ್‌ರವರು ಬಿಸಿನೆಸ್ ಮ್ಯಾನೇಜ್‌ಮೆಂಟ್ ಅಧ್ಯಯನದ ಮೂಲಕ ಪದವಿ ಗಳಿಸಿದರು. ಶ್ರೀಯುತ ದೇವದಾಸ್ ನಾಯಕ್ ಅವರ ಮಾರ್ಗದರ್ಶನದಲ್ಲಿ ಸಂಗೀತಾಭ್ಯಾಸ ಆರಂಭಿಸಿದರು.

ಸುಗಮ ಸಂಗೀತ, ಭಕ್ತಿಗೀತೆ ಹಾಗೂ ಲಘು ಸಂಗೀತದಲ್ಲಿ ಆಸಕ್ತಿ ಹೊಂದಿದ ನರಸಿಂಹ ನಾಯಕ್ ೧೯೭೮ರಿಂದ 'ದಾಸವಾಣಿ' ಸಂಗೀತ ಕಛೇರಿಗಳನ್ನು ಜನಪ್ರಿಯಗೊಳಿಸಿದರು. ೧೯೯೬, ೧೯೯೮ ಮತ್ತು ೨೦೦೨ರಲ್ಲಿ ಅಮೇರಿಕಾದ ವಿವಿಧೆಡೆ, ೧೯೯೮ರಲ್ಲಿ ಕೆನಡಾ ೧೯೮೭, ೧೯೯೮, ೨೦೦೨ ಮತ್ತು ೨೦೦೪ರಲ್ಲಿ ಯು.ಎ.ಇ.ಯಲ್ಲಿ ಹಾಗೂ ೨೦೦೫ರಲ್ಲಿ ಬಹ್ರೈನ್‌ನಲ್ಲಿ ಪ್ರವಾಸ ಕೈಗೊಂಡು ಸಂಗೀತ ಕಛೇರಿಗಳನ್ನು ನಡೆಸಿಕೊಟ್ಟಿರುತ್ತಾರೆ.

೧೯೭೯ರಲ್ಲಿ ನರಸಿಂಹ ನಾಯಕ್, ಸಿನಿಮಾ ಜಗತ್ತಿನಲ್ಲಿ ಹಿನ್ನೆಲೆ ಗಾಯಕನಾಗಿ ಪ್ರವೇಶಗೈದರು. ೮ ತುಳು, ೨ ಕೊಂಕಣಿ ಹಾಗೂ ೫೦ಕ್ಕೂ ಹೆಚ್ಚು ಕನ್ನಡ ಸಿನಿಮಾಗಳಲ್ಲಿ ಹೆಸರಾಂತ ಸಂಗೀತ ನಿರ್ದೇಶಕರುಗಳಾದ ಜಿ. ಕೆ. ವೆಂಕಟೇಶ್, ಎಂ. ರಂಗರಾವ್, ಸತ್ಯಂ, ವಿಜಯ ಭಾಸ್ಕರ್, ರಾಜನ್ ನಾಗೇಂದ್ರ, ಟಿ. ಜಿ. ಲಿಂಗಪ್ಪ ಹಂಸಲೇಖ ಇವರ ನಿರ್ದೇಶನದಲ್ಲಿ ಹಿನ್ನೆಲೆ ಗಾಯಕನಾಗಿ ದುಡಿದಿದ್ದಾರೆ.

ಜಿ. ಎಸ್. ಶಿವರುದ್ರಪ್ಪನವರ ಗೀತೆಗಳಿಗೆ ಇರುವ ಹಾಡಿದ ಆಲ್ಬಂ ೧೯೮೧ರಲ್ಲಿ ಬಿಡುಗಡೆಗೊಂಡಿತು. ಆ ಬಳಿಕ ಕನ್ನಡ, ತುಳು ಕೊಂಕಣಿ, ತೆಲುಗು, ತಮಿಳು, ಮರಾಠಿ ಮತ್ತು ಹಿಂದಿ ಹಾಡುಗಳ ಧ್ವನಿಸುರುಳಿಗಳು ಬಿಡುಗಡೆಯಾದವು. ಕನ್ನಡ ಸಂಗೀತದ ವಿವಿಧ ಶೈಲಿಗಳಲ್ಲಿ ೧೦,೦೦೦ಕ್ಕೂ ಮಿಕ್ಕಿದ ಹಾಡುಗಳ ಧ್ವನಿ ಮುದ್ರಣವು ಶ್ರೀಯುತ ನರಸಿಂಹ ನಾಯಕರ ಸಿರಿಕಂಠದಿಂದ ಮೂಡಿ ಬಂದುದು ಒಂದು ದಾಖಲೆಯಾಗಿದೆ.

ರಾಷ್ಟ್ರೀಯ ಭಾವೈಕ್ಯವನ್ನು ಸಾರುವ 'ಈಶ್ವರ ಅಲ್ಲಾ ನೀನೇ ಎಲ್ಲಾ' ಎಂಬ ಟಿ.ವಿ. ಸೀರಿಯಲ್ಲಿಗೆ ಶಿಶುನಾಳ ಶರೀಫರ ೬೦ ಹಾಡುಗಳಿಗೆ ಶ್ರೀಯುತರು ಧ್ವನಿ ನೀಡಿರುತ್ತಾರೆ. ಓರ್ವ ಹಾಡುಗಾರ ಮಾತ್ರವಲ್ಲದೆ ಸಂಗೀತ ನಿರ್ದೇಶಕರಾಗಿಯೂ ದುಡಿದ ಹೆಗ್ಗಳಿಕೆ ಇವರಿಗಿದೆ. ಇವರ ಸಂಗೀತ ನಿರ್ದೇಶನದಲ್ಲಿ ನಾಡಿನ ಖ್ಯಾತ ಗಾಯಕರುಗಳಾದ ಅನುಪ್ ಜಲೋಟ, ಸಾಧನಾ ಸರ್ಗಂ, ರೂಪ್ ಕುಮಾರ್ ರಾಥೋಡ್, ಮಹೇಂದ್ರ ಕಪೂರ್, ಸಿ. ಅಶ್ವಥ್, ವಾಣಿ ಜಯರಾಂ, ಪಿ. ಸುಶೀಲಾ, ಮಂಜುಳಾ ಗುರುರಾಜ್, ಬಿ. ಆರ್. ಛಾಯಾ, ರತ್ನಮಾಲಾ ಪ್ರಕಾಶ್ ಮೊದಲಾದ ಹಾಡುಗಾರರ ೧೫೦ಕ್ಕೂ ಮಿಕ್ಕಿದ ಆಲ್ಬಂಗಳು ಬಿಡುಗಡೆಯಾಗಿದೆ. ಲಹರಿ ಧ್ವನಿ ಮುದ್ರಣ ಸಂಸ್ಥೆಯು ಹೊರ ತಂದಿರುವ ಸಂಪುಟಗಳಲ್ಲಿ ೧೦೦ನೇ ಸಂಪುಟ 'ದೇವರು ಕೊಟ್ಟನು' ಬಿಡುಗಡೆಯಾಗಿದ್ದು, ಇದು ಸೇರಿದಂತೆ ೯೪ ಆಲ್ಬಂಗಳಿಗೆ ಪುತ್ತೂರು ನರಸಿಂಹ ನಾಯಕ್ ಸಂಗೀತ ನಿರ್ದೇಶನ ನೀಡಿರುತ್ತಾರೆ. ಈಗಾಗಲೇ ಇವರು ಕರ್ನಾಟಕದ ಎಲ್ಲಾ ಸಂತರ ಹಾಡುಗಳ ಸಂಗ್ರಹದಲ್ಲಿ ಕಾರ್ಯನಿರತರಾಗಿದ್ದು, ಕನಕದಾಸ 'ಹರಿಭಕ್ತಿ ಸಾರ' ಗುರು ಜಗನ್ನಾಥ ದಾಸರ 'ಲಕ್ಷ್ಮೀ ಹೃದಯ', ಹರಿಕಥಾಮೃತ ಸಾರ' ಮತ್ತು 'ತತ್ವ ಸುವ್ವಲಿ' ಹಾಡುಗಳ ಧ್ವನಿ ಮುದ್ರಣ ಮುಗಿಸಿರುತ್ತಾರೆ.

ಧ್ವನಿ ಸುರುಳಿ ಮತ್ತು ಆಲ್ಬಂಗಳ ಮಾರಾಟದಲ್ಲಿ ನರಸಿಂಹ ನಾಯಕರ 'ಪವಮಾನ ಜಗದ ಪ್ರಾಣ', 'ದಾಸರೆಂದರೆ ಪುರಂದರ ದಾಸರಯ್ಯ', 'ದಾಸನಾಗು ವಿಶೇಷನಾಗು' ದಾಖಲೆ ನಿರ್ಮಿಸಿದೆ. ಭಾರತದ ಶ್ರೇಷ್ಠ ಕವಿಗಳ ಮತ್ತು ಸಂತರ ಹಾಡುಗಳ ಸುಗಮ ಸಂಗೀತದ ಕಾರ್ಯಾಗಾರವನ್ನು ಕರ್ನಾಟಕದಾದ್ಯಂತ ಇವರು ನಡೆಸಿಕೊಟ್ಟು ಜನಪ್ರಿಯರಾಗಿದ್ದಾರೆ[೩೦].

ಶ್ರೀಯುತ ನರಸಿಂಹ ನಾಯಕರು ಹಾಡುಗಾರರಾಗಿ, ಸಂಗೀತ ನಿರ್ದೇಶಕನಾಗಿ ಸಂಗೀತ ಕ್ಷೇತ್ರಕ್ಕೆ ಸಲ್ಲಿಸಿದ ಅನುಪಮ ಸೇವೆಗಾಗಿ ಹಲವು ಪ್ರಶಸ್ತಿಗಳಿಂದ ಪುರಸ್ಕೃತರಾಗಿದ್ದಾರೆ.

ಕನ್ನಡದ 'ಕೆಂಡದ ಮಳೆ' ಮತ್ತು 'ಗೌರಿ ಗಣೇಶ' ಸಿನಿಮಾಗಳಲ್ಲಿ ಹಿನ್ನೆಲೆ ಸಂಗೀತಗಾರ ನಾಗಿ ಮಾಡಿದ ಸಾಧನೆಗಾಗಿ ೧೯೮೮ ಮತ್ತು ೧೯೯೧ರಲ್ಲಿ ಅತ್ಯುತ್ತಮ ಹಿನ್ನೆಲೆ ಗಾಯಕ ಪ್ರಶಸ್ತಿ ಇವರಿಗೆ ಲಭಿಸಿದೆ. ೧೯೯೮ರಲ್ಲಿ ಅಮೇರಿಕಾದ ವಾಷಿಂಗ್ಟನ್ ಡಿಸಿಯಲ್ಲಿ 'ವಿಶ್ವ ಮಾಧ್ವ ಸಂಘ' ಪ್ರಶಸ್ತಿ ನೀಡಿ ಗೌರವಿಸಿದೆ.

‘ದಾಸನಾಗು ವಿಶೇಷನಾಗು’ ಈ ಹಾಡಿಗಾಗಿ ಆರ್ಯಭಟ ಪ್ರಶಸ್ತಿ ದೊರಕಿದೆ. ೨೦೦೦ದಲ್ಲಿ ಕೊಂಕಣಿ ಸಾಹಿತ್ಯ ಅಕಾಡಮಿ ಪ್ರಶಸ್ತಿ, ೨೦೦೫ರಲ್ಲಿ ಕರಾವಳಿ ರತ್ನ ಪ್ರಶಸ್ತಿ, ದಾಸ ಸಾಹಿತ್ಯಕ್ಕೆ ಸಲ್ಲಿಸಿದ ಸೇವೆಗಾಗಿ ೨೦೦೫ರಲ್ಲಿ ವಿಜಯ ದುಂಧುಬಿ ಪ್ರಶಸ್ತಿಗಳು ಲಭಿಸಿವೆ. ಅಮೇರಿಕಾದ ವಿವಿಧ ಕನ್ನಡ ಸಂಘಗಳು ಶ್ರೀಯುತರನ್ನು ಸನ್ಮಾನಿಸಿವೆ. ಇವರ ಸೇವೆಯನ್ನು ಗುರುತಿಸಿ, ಕರ್ನಾಟಕ ಸರಕಾರವು ೨೦೦೫ರಲ್ಲಿ ಪುತ್ತೂರು ನರಸಿಂಹ ನಾಯಕರನ್ನು ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿಯ ಸದಸ್ಯರನ್ನಾಗಿ ನೇಮಕಗೊಳಿಸಿದೆ.

### ೬.೪.೧೫. ತುಕ್ರ ನಲಿಕೆ (೧೯೫೦)

ಭೂತ ಕಟ್ಟುವವರು ಇತರರಿಂದ ಹೊಡೆಸಿಕೊಳ್ಳಬಾರದು ಎಂಬ ಹಿರಿಯರ ಪ್ರಬಲ ನಂಬುಗೆಯಿಂದಾಗಿ, ತುಕ್ರ ಶಾಲಾ ಮೆಟ್ಟಲು ಹತ್ತಿಲ್ಲ. ಇದಕ್ಕೆ ಅಸ್ಪೃಶ್ಯತೆಯೂ ಒಂದು ಕಾರಣ. ‘ನಲಿಕೆದಾಯೆ’ ಎಂಬುದು ಜಾತಿ ಸೂಚಕವಲ್ಲ, ವೃತ್ತಿ ಸೂಚಕ ಬಹುಶಃ ಕುಣಿದು, ನಲಿಯುವ ಭೂತ ವಿಧಾನ ಇವರದ್ದಾದ್ದರಿಂದ ‘ನಲಿಕೆದಾಯೆ’ ಎಂಬ ಹೆಸರು ಬಂದಿರಲೂಬಹುದು[೩೧]. ಎಲ್ಲಾ ವಿಧದ ಭೂತಗಳನ್ನು ಕಟ್ಟಿದ ಅನುಭವ ಇವರದ್ದು.

ಬಂಗಾಡಿ ಇವರ ಮೂಲ. ಕುಲದೈವ ‘ಅಣ್ಣಪ್ಪ’ ಭೂತ ಕಟ್ಟುವ ಕಾಯಕ ಆನುವಂಶಿಕ. ನೋಡಿ, ಕೇಳಿ, ತಿಳಿದು ಕಲಿತುಕೊಂಡವರು ತುಕ್ರ. ನಲಿಕೆ ತನ್ನ ಹದಿನಾಲ್ಕನೇ ವಯಸ್ಸಿನಲ್ಲಿ ‘ಕಲ್ಲುರ್ಟಿ’ ದೈವ ಕಟ್ಟುವಲ್ಲಿಂದ ಇದನ್ನು ವೃತ್ತಿಯನ್ನಾಗಿ ಸ್ವೀಕರಿಸಿದರು. ಆಗ ನಾಲ್ಕಾಣೆ, ಎಂಟಾಣೆ. ಸಂಬಳದ ಸಮಯ ಈಗ ನಾಲ್ಕಂಕೆಯವರೆಗೂ ಸಂಭಾವನೆ ಸಿಗುತ್ತಿದೆ. ಭೂತ ಕಟ್ಟುವ ಕಾಯಕದ ಬ್ಯುಸಿ ಸಮಯದ ಹೊರತಿನ ಬಿಡುವಿನ ಅವಧಿಯಲ್ಲಿ ಚಾಪೆ ಹೆಣೆಯುವುದು, ಬುಟ್ಟಿ ತಯಾರಿ, ಮುಟ್ಟಾಳೆ ತಯಾರಿ, ಮೊದಲಾದ ಉಪವೃತ್ತಿಯಿಂದ ಜೀವನ.

ಕಲ್ಲೇಗ, ಕಬಕ, ಕೊಡಿಪ್ಪಾಡಿ – ಈ ಮೂರು ಗ್ರಾಮಗಳಲ್ಲಿ ನಡೆಯುವ ನೇಮಗಳಲ್ಲಿ ತುಕ್ರ ಕುಟುಂಬ ಸಕ್ರಿಯ ಭಾಗಿ, ಕಲ್ಲುರ್ಟಿ, ಗುಳಿಗ, ಜುಮಾದಿ ಕಲ್ಕುಡ, ಮಲರಾಯ ಮೊದಲಾದ ಜವಾಬ್ದಾರಿ ನಿರ್ವಹಣೆಯ ಭೂತ ಕಟ್ಟುವಿಕೆಯಲ್ಲಿ ತುಕ್ರ ಎತ್ತಿದ ಕೈ ಇತರೆಡೆಯಿಂದ ವಿಶೇಷವಾಗಿ ಆಮಂತ್ರಣ ಬಂದಾಗ ಭಾಗವಹಿಸುತ್ತಾರೆ. ತನ್ನ ಮಾಗಿದ ಶಾರೀರಿಕ ಸ್ಥಿತಿಯಿಂದಾಗಿ ಮೊದಲಿನಂತೆ ಭೂತ ಕಟ್ಟಲು ಅಸಮರ್ಥರಾದರೂ, ತನ್ನ ಮಕ್ಕಳನ್ನು ಸಮರ್ಥವಾಗಿ ಬೆಳೆಸಿ, ತನ್ನಂತೆ ತೊಡಗಿಸಿದ್ದಾರೆ. ಕಣ್ಣ ದೃಷ್ಟಿ, ಸೋಂಕು, ಮೊದಲಾದ ಬಾಧೆಗಳಿಗೆ ತಾನು ನಂಬಿದ ವಿಧಿವಿಧಾನಗಳಿಂದ ಗುಣಪಡಿಸುತ್ತಾರೆ.

### ೬.೪.೧೬. ಮಾಡಾವು ಕೋಟಿ ಪರವ (೧೯೫೮)

ಇವರಿಗೆ ಈಗ ಅರುವತ್ತರ ಆಸುಪಾಸು. ತಂದೆ-ದೇವು ಪರವ ತಾಯಿ-ಕೊರಪೊಳು, ೪ನೆಯ ತರಗತಿಯವರೆಗೆ ವಿದ್ಯಾಭ್ಯಾಸ ಮಾಡಿರುತ್ತಾರೆ. ಇವರಿಗೆ ಭೂತ ಕಟ್ಟುವ ಕಲೆಗೆ ತಂದೆಯೇ ಗುರು, ಉಳ್ಳಾಕುಲು, ರಾಜನ್ ದೈವ, ಧರ್ಮದೈವ, ಪಿಲಿಭೂತ, ಚಾಮುಂಡಿ, ರಕ್ತೇಶ್ವರಿ ಮುಂತಾದ ಸ್ತ್ರೀ ಶಕ್ತಿ ಸಂಬಂಧದ ವೇಷಗಳು, ಪಂಜುರ್ಲಿ, ಮಲರಾಯ ಇತ್ಯಾದಿ ಭೂತ ವೇಷದಾರಣೆಯಲ್ಲಿ ಪರಿಣತಿ ಗಳಿಸಿರುತ್ತಾರೆ. ಭೂತ ಕಟ್ಟುವ ಕೆಲಸದಲ್ಲಿ ಮಾನಸಿಕ ಆನಂದ, ನೆಮ್ಮದಿ ಹೊಂದುವ ಇವರು ವೃತ್ತಿಯಲ್ಲಿ ಸಂತೃಪ್ತರು. ಈಗ ಮಗನಿಗೂ ಈ ಕಲೆಗಾರಿಕೆಯಲ್ಲಿ ತರಬೇತಿ ನೀಡುತ್ತಿದ್ದಾರೆ.

### ೬.೪.೧೭. ಬಿಕುರ ಪರವ (೧೯೬೩)

ಪುತ್ತೂರು ತಾಲೂಕು ಹಳೆನೇರೆಂಕಿ ಗ್ರಾಮದ ನರಸಿಂಗ ಪರವ ಮತ್ತು ತನಿಯಾರು ಇವರ ಮಗ ಬಿಕುರ ಪರವ. ಅಜ್ಜನ ಜೊತೆಯಲ್ಲೂ ಹಲವು ಗ್ರಾಮಗಳ ಭೂತ ನಲಿಕೆಗಳನ್ನು ನೋಡಿದ್ದು, ಜೊತೆಗೂಡಿದ್ದು ಮೊದಲ ಶಿಕ್ಷಣ ಅನಂತರ ತಂದೆಯೊಂದಿಗೆ ಅದರ ವಿಶೇಷ ಅನುಭವಗಳಿಕೆ. ಹಿರೇಬಂಡಾಡಿ ಯಲ್ಲಿ ಸತ್ಯದೇವತೆ ಭೂತಕಟ್ಟಿದ್ದು ಮೊದಲ ಅನುಭವ[೩೨]. ಪಂಜುರ್ಲಿ, ಕೋಟಿ-ಚೆನ್ನಯ, ಮರಳ ದೇವತೆ, ರಕ್ತೇಶ್ವರಿ, ಕೊಡಮಣಿತ್ತಾಯ, ರುದ್ರಚಾಮುಂಡಿ, ಮಲರಾಯ, ಬಂಟಧೂಮಾವತಿ, ದೈಯೊಂಕುಲು, ರಾವುದ್ರದೈವ, ಹುಲಿಭೂತ ಕಡಂಬಿಲತ್ತಾಯ, ಕರಿಮುಂಗಿಲಿತ್ತಾಯ, ಚಾಮುಂಡಿ, ಕೆದಿಲತ್ತಾಯ, ಉಳ್ಳಾಲ್ತಿ, ಕುಂಞಲದೇವತೆ, ದುಗಲಾಯ ಮುಂತಾದ ಭೂತಗಳನ್ನು ನೂರಾರು ಬಾರಿ ಕಟ್ಟಿದ ಪರಿಣತಿ.

ಅರುವತ್ತೈದರ ಹರೆಯದ ಬಿರುಕ ಪರವ ಕೊಕ್ಕಡದಿಂದ ಬಂಡಾಡಿಯ ತನಕ ಬಹುತೇಕ ಎಲ್ಲಾ ಗ್ರಾಮಗಳ ಭೂತಾರಾಧನೆಯ ಬೇಡಿಕೆಯ ಕಲಾವಿದ. ಇದರಿಂದಾಚೆ ಪುಣಚ, ಬುಳೇರಿಕಟ್ಟೆ, ಬರೆಪ್ಪಾಡಿ, ಚಿಪ್ಪಾರು, ಮಣಿಮಜಲು, ಮಡಿಕೇರಿಗಳಲ್ಲೂ ಈ ಕೈಂಕರ್ಯ ವಿಸ್ತರಿಸಿದೆ.

ಈ ಸುದೀರ್ಘ ಕಲಾರಾಧನೆಗೆ ಪುರಸ್ಕಾರಗಳೂ ದೊರೆತಿವೆ. ಕ್ಯೊಲ ಹಾಗೂ ಕಾಂಚನದಲ್ಲಿ ಬಂಗಾರದ ಕಡಗ, ಬೆಳ್ತಂಗಡಿ, ಬಂಗಾಡಿಗಳಲ್ಲಿ ಚಿನ್ನದ ಉಂಗುರಗಳನ್ನು ಪಡೆದಿದ್ದಾರೆ.

### ೬.೪.೧೮. ಕುಟ್ಟಿ ಪರವನ್ ಹಳೆನೇರೆಂಕಿ (೧೯೬೫)

ಹಳೆನೇರೆಂಕಿ ಗ್ರಾಮದ ನರಸಿಂಗ ಪರವನ್ ಕುಟ್ಟಿಯವರ ತಂದೆ, ಭೂತಾರಾಧನೆಯ ಮೊದಲ ಶಿಕ್ಷಣ ತಂದೆಯಿಂದಲೇ, ರಾಮಕುಂಜದ ದೇವಸ್ಥಾನದ ರಥೋತ್ಸವದಲ್ಲೇ ರುದ್ರ ಚಾಮುಂಡಿ ಭೂತ ಮೊದಲು ಗಗ್ಗರ ಕಟ್ಟುವಾಗ ತೊಟ್ಟಿದ್ದು[೩೩]. ನಾಡಿನ ಉದ್ದಗಲಕ್ಕೆ ಹಲವು

ಪ್ರದೇಶಗಳಲ್ಲಿ ನಡೆಯುವ ಭೂತಾರಾಧನೆಗಳಲ್ಲಿ ವೈವಿಧ್ಯಮಯ ಭೂತಗಳನ್ನು ಕಟ್ಟಿದ್ದಾರೆ. ಉಳ್ಳಾಲ್ತಿ, ರಕ್ತೇಶ್ವರಿ, ಕೊಡಮಂತಾಯ, ಚಾಮುಂಡಿ, ಚಾಮುಂಡೇಶ್ವರಿ, ಅಣ್ಣಪ್ಪ ಪಂಜುರ್ಲಿ, ಕಲ್ಲುರ್ಟಿ ಚೆನ್ನಯ, ಮಲೆರಾಯ ಇತ್ಯಾದಿ ಭೂತಗಳ ಆರಾಧನೆಯಲ್ಲಿ ಪಳಗಿದವರು.

ಒಡ್ಯಮೆಯಲ್ಲಿ ಚಿನ್ನದ ಉಂಗುರ, ಕೊಕ್ಕಡದಲ್ಲಿ ಚಿನ್ನದ ಕೈಬಳೆ, ಬಂಡಾಡಿಯ ಪಾಂಡ್ರಡ್ಕದಲ್ಲಿ ಚಿನ್ನದ ಕೈ ಸರಪಳಿ, ಕೊಳಂಬೆತಡ್ಕದಲ್ಲಿ ಚಿನ್ನದ ಉಂಗುರ, ಬೊಳುವೂರು, ಈಶ್ವರಮಂಗಲಗಳಗಳಲ್ಲಿ ಚಿನ್ನದ ಉಂಗುರ ಬಹುಮಾನವಾಗಿ ದೊರೆತು, ಇವರ ಕಲಾವಂತಿಕೆ ಪುರಸ್ಕೃತವಾಗಿದೆ.

### ೬.೪.೧೯. ಕೃಷ್ಣ ಅಜಿಲ ತಿಂಗಳಾಡಿ (ನಲಿಕೆಯವರು) (೧೯೮೦)

ಪುತ್ತೂರು ತಾಲೂಕಿನ ತಿಂಗಳಾಡಿ ಪ್ರದೇಶದವರಾದ ಕೃಷ್ಣ ಅಜಿಲ ಎಂಬವರು ಕಳೆದ ಹತ್ತು ವರ್ಷಗಳಿಂದ ಭೂತ ಕಟ್ಟುವ ಕಾರ್ಯನಿರ್ವಹಿಸುತ್ತಿದ್ದಾರೆ. ತಿಂಗಳಾಡಿ ಸನಿಹದ ಅರಿಯಡ್ಕ, ಕೆದಂಬಾಡಿ, ಪೊಲಂಬಾಡಿ ಗ್ರಾಮಗಳಲ್ಲಿ ಇವರ ಸೇವೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ೨೯ ವರ್ಷ ವಯಸ್ಸಿನವರಾದ ಇವರು ಬಾಲ್ಯದಿಂದಲೇ ತಂದೆಯೊಂದಿಗೆ ಭೂತದ ಕಾರ್ಯಕ್ರಮಗಳಿಗೆ ಹೋಗುತ್ತಿದ್ದು, ಮುಂದೆ ತಂದೆಯಿಂದಲೇ ಈ ಕಲೆಯನ್ನು ಕರಗತ ಮಾಡಿಕೊಂಡವರು. ತಂದೆಯ ಮರಣದ ನಂತರ ಅವರ ಏಕೈಕ ಮಗನಾದ ಇವರೇ ಈ ಕಾರ್ಯವನ್ನು ಕೈಗೊಳ್ಳಬೇಕಾಗಿ ಬಂತು. ಇವರ ಪ್ರಕಾರ ಭೂತ ನೀಡುವ ತೀರ್ಮಾನವನ್ನು ಇವತ್ತೂ ಜನರು ನಂಬುತ್ತಾರೆ. ದೀಪಾವಳಿ ಯಿಂದ ಪ್ರಾರಂಭವಾಗಿ ಪತ್ತನಾಜೆಯ ವರೆಗೆ ಅಂದರೆ ಮೇ ತಿಂಗಳ ಕೊನೆಯವರೆಗೆ ಭೂತ ಕಟ್ಟುವ ಕಾಯಕ ಇವರಿಗೆ ಲಭಿಸುತ್ತದೆ. ಕುಟುಂಬ ಸಮೇತ ಭೂತ ಕಟ್ಟುವಲ್ಲಿಗೆ ಹೋಗುವ ಮಂದಿ, ಅವರಿಗೆ ಬೇಕಾದ ತೆಂಗಿನ ಗರಿಯಿಂದ ತಯಾರಿಸುವ ಪರಿಕರಗಳನ್ನು ಅವರೇ ತಯಾರಿಸುತ್ತಾರೆ. ಉಳಿದ ವೇಷ ಭೂಷಣವನ್ನು ಒಮ್ಮೆ ಖರೀಸಿದ್ದನ್ನೇ ಪ್ರತಿಸಲ ಬಳಸುತ್ತಾರೆ.

ಧೂಮಾವತಿ, ಶಿರಾಡಿ, ಪಂಜುರ್ಲಿ, ಗುಳಿಗ, ಕಲ್ಲುರ್ಟಿ ಮುಂತಾದ ಭೂತಗಳನ್ನು ಇವರು ಕಟ್ಟುತ್ತಾರೆ[೩೪]. ಭೂತದ ಕಾರ್ಯಕ್ರಮ ನಡೆಯುವ ಎಂಟು ದಿನಗಳ ಮುಂಚೆ. ಭೂತದ ಕಾರ್ಯಕ್ರಮ ನಡೆಯುವ ಪ್ರದೇಶದ ಯಜಮಾನ (ಗುರ್ಕಾರ್) ಇವರ ಮನೆಗೆ ಬಂದು ವೀಳ್ಯವನ್ನು ಕೊಟ್ಟು ಆಹ್ವಾನಿಸುತ್ತಾರೆ. ಕಾರ್ಯಕ್ರಮದ ಒಂದು ದಿನ ಹಿಂದಿನಿಂದ ಮೀನು–ಮಾಂಸ ತಿನ್ನದೆ ವ್ರತಾಚರಣೆ ಮಾಡುವ ಪದ್ಧತಿ ಇದೆ.

ಯಾವುದೇ ವಿದ್ಯಾಭ್ಯಾಸ ಇಲ್ಲದ ಇವರು ಭೂತವನ್ನು ಸ್ಟೇಜ್‌ನಲ್ಲಿ ಹೋಗಿ ಪ್ರದರ್ಶನ ನೀಡುವ ಬಗ್ಗೆ ಬೇಸರ ವ್ಯಕ್ತಪಡಿಸುತ್ತಾರೆ. ಹೀಗೆ ಮಾಡುವುದರಿಂದ ಇದರ ಪಾವಿತ್ರ್ಯಕ್ಕೆ ಧಕ್ಕೆ ಬರುತ್ತದೆ ಎಂದು ಇವರ ನಂಬಿಕೆ .

ಕಳೆದ ಶತಮಾನಕ್ಕೂ ಹಿಂದಿನಿಂದಲೇ ಇಲ್ಲಿ ಕಲಾವಿದರು ಪ್ರಸಿದ್ಧಿಗೆ ಬಂದಿದ್ದಾರೆ. ಅವರಲ್ಲಿ ಹೆಚ್ಚಿನವರು ಯಕ್ಷಗಾನ ಕ್ಷೇತ್ರದ ಕಲಾವಿದರು. ಇತರ ಕ್ಷೇತ್ರದಲ್ಲೂ ಪ್ರಸಿದ್ಧಿ ಪಡೆದ ಕಲಾವಿದರು ಪುತ್ತೂರಿನಲ್ಲಿ ಇದ್ದಾರೆ. ಪ್ರಸ್ತುತವೂ ಅನೇಕ ಕಲಾವಿದರು ಕನ್ನಡ ಸಾಹಿತ್ಯ ಸಂಸ್ಕೃತಿಯ ಬೆಳವಣಿಗೆಗೆ ದುಡಿಯುತ್ತಿದ್ದಾರೆ. ಹೆಚ್ಚಿನ ಕಲಾವಿದರು ಸ್ಥಳೀಯವಾಗಿ ಮಾತ್ರ ಪ್ರಸಿದ್ಧಿ ಪಡೆದರೆ, ಪುತ್ತೂರು ನರಸಿಂಹ ನಾಯಕ್ ಮುಂತಾದವರು ದೇಶ ವಿದೇಶದಲ್ಲೂ ಪ್ರಸಿದ್ಧಿ ಪಡೆದಿದ್ದಾರೆ.

## ಅಡಿ ಟಿಪ್ಪಣಿ

೧. ಹೀಗೊಂದು ವೃತ್ತಾಂತ – ವಿ. ಬಿ. ಅರ್ತಿಕಜೆ. ಪುಟ–೬೦

೨. ಅಭಿಮಾನ – ಪುಟ ೨೯೬.

೩. ಕನ್ನಡ ಸಂಘ ದಶಕದ ಸಾಧನೆ. ಸಂಪಾದಕರು : ಬೋಳಂತಕೋಡಿ ಈಶ್ವರಭಟ್ಟ, ವಿ.ಬಿ. ಅರ್ತಿಕಜೆ, ರಾಮಕೃಷ್ಣ ಪೆರುವಾಜೆ – ಪುಟ ೮

೪. ಕನ್ನಡ ಸಂಘ ಬೆಳ್ಳಿ ಗುರುತು, ಸಂಪಾದಕರು ನರೇಂದ್ರ ರೈ ದೇರ್ಲ – ಪುಟ ೬

೫. ಕನ್ನಡ ಸಂಘ ನಡೆದು ಬಂದ ದಾರಿ – ಪುಟ ೭

೬. ಕನ್ನಡ ಸಂಘದ ದಶಕದ ಸಾಧನೆ – ಪುಟ ೧೧

೭. ಬೆಳ್ಳಿ ಗುರುತು – ಪುಟ ೮

೮. ಬೆಳ್ಳಿ ಗುರುತು – ಪುಟ ೯

೯. ಕನ್ನಡ ಸಂಘದ ದಶಕದ ಸಾಧನೆ – ಪುಟ ೧೨

೧೦. ಬೆಳ್ಳಿ ಗುರುತು – ಪುಟ ೩೩

೧೧. ೨೦೦೪ ನ್ಯಾಕ್ ಸಂಬಂಧಿ ವಿವೇಕಾನಂದ ಕಾಲೇಜು ಕನ್ನಡ ಸಂಘದ ಕಾರ್ಯ ಚಟುವಟಿಕೆಗಳ ವರದಿ.

೧೨. ವಿವೇಕಾನಂದ ಕಾಲೇಜು ಕನ್ನಡ ಸಂಘದ ಬೆಳ್ಳಿ ಹಬ್ಬದ ವರ್ಷದ ವರದಿ ೧೯೭೫ – ೨೦೦೦

೧೩. ೨೦೦೪ ನ್ಯಾಕ್ ಸಂಬಂಧಿ ವಿವೇಕಾನಂದ ಕಾಲೇಜು ಕನ್ನಡ ಸಂಘದ ಕಾರ್ಯ ಚಟುವಟಿಕೆಗಳ ವರದಿ.

೧೪. ವಿ.ಬಿ. ಅರ್ತಿಕಜೆಯವರ ಮಾಹಿತಿ.

೧೫. ಪುತ್ತೂರು ಸಾಹಿತ್ಯ ಪರಿಷತ್ತಿನ ವರದಿಗಳು.

೧೬. ಅಭಿಮಾನ – ಪುಟ ೩೧೩

೧೭. ಅಭಿಮಾನ – ಪುಟ ೩೧೫

೧೮. ಅಭಿಮಾನ – ಪುಟ ೩೧೭

೧೯. ಸುದರ್ಶನ (ದ. ಕ. ಜಿಲ್ಲೆಯಲ್ಲಿ ಚಿತ್ರಕಲೆ) ಬಿ.ಪಿ. ಬಾಯಿರಿ, ಉಡುಪಿ. ಪುಟ ೧೯೮, ೧೯೯

೨೦. ಮಾಂಬಾಡಿ ನಾರಾಯಣ ಭಾಗವತ ಲೇ. ಪಾದೆಕಲ್ಲು ನರಸಿಂಹ ಭಟ್ಟ ಪುಟ ೧೧೮

೨೧. ಅಭಿಮಾನ ಲೇ.: ಜಿ. ಎಸ್. ಉಬರಡ್ಕ – ಪುಟ ೨೭೫

೨೨. ಅಭಿಮಾನ ಲೇ.ಪಿ. ಮಾಧವ ನಾಯಕ್, ಪುಟ ೧೨೦

೨೩. ಸಾಹಿತ್ಯ ರಶ್ಮಿ, ದ.ಕ. ಜಿಲ್ಲಾ ೧೫ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ – ಪುಟ ೪೪

೨೪. ಅಭಿಮಾನ ಲೇ. ಎನ್. ಸುಬ್ರಹ್ಮಣ್ಯಂ ಪುಟ – ೧೩೦

೨೫. ಪುತ್ತೂರು ದೇವದಾಸ್ ಜೋಶಿ – ಲೇ. ಎನ್. ಸುಬ್ರಹ್ಮಣ್ಯಂ – ಪುಟ ೨೩೦

೨೬. ಅಭಿಮಾನ – ಪುಟ ೨೮೪

೨೭. ಸಪ್ತಪದಿ, ಪುತ್ತೂರು ತಾಲೂಕು ಏಳನೆಯ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ – ಪುಟ ೪೫

೨೮. ಸಪ್ತಪದಿ – ಪುಟ ೪೮

೨೯. ನವಮಿ, ಪುತ್ತೂರು ತಾಲೂಕು ೯ನೆಯ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ – ಪುಟ ೮೬

೩೦. ಸಾಹಿತ್ಯ ರಶ್ಮಿ – ಪುಟ ೧೦೭

೩೧. ಸಪ್ತಪದಿ – ಪುಟ ೫೬

೩೨. ನವಮಿ – ಪುಟ ೧೨

೩೩. ನವಮಿ – ಪುಟ ೧೩

೩೪. ದಿನಾಂಕ : ೧೧–೦೮–೨೦೧೨ರಂದು ಅವರ ಮನೆಯಲ್ಲಿ ಮಾಡಿದ ಸಂದರ್ಶನ.

# ಅಧ್ಯಾಯ – ೭

# ಸಮಾರೋಪ

೭. ೧. ಕನ್ನಡ ಸಂಸ್ಕೃತಿಗೆ ಪುತ್ತೂರು ಕೇಂದ್ರ ಕೊಡುಗೆ

೭. ೨. ಅಧ್ಯಯನದ ಫಲಿತಗಳು

# ಅಧ್ಯಾಯ – ೭

# ಸಮಾರೋಪ

## ೭.೧.೦. ಕನ್ನಡ ಸಂಸ್ಕೃತಿಗೆ ಪುತ್ತೂರು ಕೇಂದ್ರ ಕೊಡುಗೆ :

ಸಾಹಿತ್ಯವನ್ನು ಒಂದು ಸಾಂಸ್ಕೃತಿಕ ಬದುಕಿನ ಉತ್ಪನ್ನ ಎಂದು ಪರಿಗಣಿಸಿದರೆ, ಒಂದು ಪ್ರದೇಶದ, ಒಂದು ಕಾಲದ ಸಂಸ್ಕೃತಿಯನ್ನು ಸಾಮಾಜಿಕ ದಾಖಲೆಯಾಗಿ ನೋಡಲು ಸಾಧ್ಯವಿದೆ. ಪುತ್ತೂರು ತಾಲೂಕನ್ನು ಕೇಂದ್ರವಾಗಿಟ್ಟುಕೊಂಡು ಇಂಥದೊಂದು ಅಧ್ಯಯನವನ್ನು ನಾನು ಮಾಡಿರುತ್ತೇನೆ. ಪುತ್ತೂರಿದ್ದೇ ಆದ ಒಂದು ವಿಶಿಷ್ಟ ಸಾಮಾಜಿಕ ಸಂರಚನೆಯನ್ನಾಗಲೀ ಒಂದು ಸಂಸ್ಕೃತಿಯನ್ನಾಗಲೀ ಗುರುತಿಸುವುದು ಸಾಧ್ಯವಿಲ್ಲ. ಯಾಕೆಂದರೆ ಸಾಮಾಜಿಕ ಭೌಗೋಳಿಕ, ಭಾಷಿಕ ಪರಿಸರಗಳು ಇಲ್ಲಿ ಬಹು ಸಂಸ್ಕೃತಿಯ ಸಂರಚನೆಯನ್ನು ಹಿಂದಿನಿಂದಲೂ ಗಟ್ಟಿಗೊಳಿಸಿವೆ. ಹಲವು ಉಪಭಾಷೆಗಳನ್ನು ಮಾತನಾಡುವ ಜನ, ಹಲವು ಕಸುಬುಗಳನ್ನು ಅವಲಂಬಿಸಿರುವ ಜನ ಇಲ್ಲಿನ ಸಾಮಾಜಿಕ ಸಂರಚನೆಯ ಭಾಗವಾಗಿ ಹೋಗಿದ್ದಾರೆ.

ಪುತ್ತೂರಿನಲ್ಲಿ ಮೂರು ಕನ್ನಡ ಸಂಘಗಳಿದ್ದು ಸಾಹಿತ್ಯ ಚಟುವಟಿಕೆಗಳು ಚೆನ್ನಾಗಿಯೇ ನಡೆಯುತ್ತಿವೆ. ಸಾಂದರ್ಭಿಕವಾದ ಉಪನ್ಯಾಸ, ಗೋಷ್ಠಿ, ವಿಚಾರ ಸಂಕಿರಣ, ಸಂಮಾನ ಇತ್ಯಾದಿಗಳ ಜತೆಗೆ ಸಮೀಪದ ಗ್ರಾಮೀಣ ಪ್ರದೇಶಗಳಲ್ಲಿ ಕನ್ನಡದ ಕಂಪನ್ನು ಹಬ್ಬಿಸಲು 'ಸಾಹಿತ್ಯ ಸೌರಭ' ಕಾರ್ಯಕ್ರಮಗಳನ್ನು ಏರ್ಪಡಿಸಲಾಗುತ್ತದೆ. ಸಣ್ಣ ಸಣ್ಣ ಹೊತ್ತಗೆಗಳಿಂದ ತೊಡಗಿ ಬೃಹತ್ ಸಂಪುಟಗಳ ವರೆಗಿನ ಉತ್ತಮ ಗುಣಮಟ್ಟದ ಪುಸ್ತಕಗಳು ಇಲ್ಲಿಂದ ಪ್ರಕಾಶನಗೊಳ್ಳುತ್ತಿವೆ. ಜನತೆಯ ತುಂಬು ಮನಸ್ಸಿನ ಬೆಂಬಲದಿಂದ ೧೨ ತಾಲೂಕು ಸಾಹಿತ್ಯ ಸಮ್ಮೇಳನಗಳು ಹಾಗೂ ಎರಡು ಜಿಲ್ಲಾಮಟ್ಟದ ಸಾಹಿತ್ಯ ಸಮ್ಮೇಳನಗಳು ಸಹ ಯಶಸ್ವಿಯಾಗಿ ನಡೆಸಲ್ಪಟ್ಟಿವೆ.

ಅಭಿವೃದ್ಧಿ ಸಮಿತಿಯ ಮುತುಮರ್ಜಿಯಿಂದಾಗಿ ಬಾಲವನವು ಸಾಹಿತ್ಯ ಮತ್ತು ಸಾಂಸ್ಕೃತಿಕ ಕಲಾಪಗಳ ಮತ್ತೊಂದು ಕೇಂದ್ರವಾಗಿ ರೂಪುಗೊಳ್ಳುತ್ತಿದೆ. ಶಿವರಾಮ ಕಾರಂತರ ಜನ್ಮದಿನೋತ್ಸವವೂ ಸೇರಿದಂತೆ ಗೋಷ್ಠಿಗಳು, ಉಪನ್ಯಾಸಗಳು, ಶಿಬಿರಗಳು ಮತ್ತು ನೃತ್ಯ-ನಾಟಕಾದಿಗಳು ಇಲ್ಲಿ ನಡೆದಿವೆ. ಎಳೆಯರಲ್ಲಿ ಸಾಹಿತ್ಯದ ಬಗೆಗೆ ಒಲವು ಮೂಡಿಸುವತ್ತ ಪುತ್ತೂರಿನ ಅನೇಕ ವಿದ್ಯಾಸಂಸ್ಥೆಗಳು ಗಮನಹರಿಸಿವೆ. ಅದರಲ್ಲೂ ಫಿಲೋಮಿನಾ ಕಾಲೇಜು ಮತ್ತು ವಿವೇಕಾನಂದ ಕಾಲೇಜುಗಳು ವಿದ್ಯಾರ್ಥಿಗಳಿಗೆ ಯಕ್ಷಗಾನ, ನೃತ್ಯ, ನಾಟಕ, ಸಂಗೀತ, ಮತ್ತು ಭಾವಗೀತೆಗಳ ತರಬೇತಿಯನ್ನು

ಏರ್ಪಡಿಸಿವೆ. ಪಟ್ಟಣದಲ್ಲಿ ರಂಗಚಟುವಟಿಕೆಗಳನ್ನೇ ಗುರಿಯಾಗಿಟ್ಟುಕೊಂಡ 'ದೃಶ್ಯ' ಸಂಸ್ಥೆಯಿದ್ದು ಹಲವು ಉಪಯುಕ್ತ ಕಲಾಪಗಳನ್ನು ಅದು ನಡೆಸಿದೆ.

'ವಿಶ್ವಕಲಾನಿಕೇತನ', 'ಭಾರತೀಯ ಸಂಗೀತ – ನೃತ್ಯ ಕಲಾ ಶಾಲೆ' 'ನಾಟ್ಯಾಲಯ' ಮುಂತಾದ ಸಂಸ್ಥೆಗಳು ನೃತ್ಯ ಕಲಾಭ್ಯಾಸ, ಪ್ರದರ್ಶನಗಳಿಗೆ ಮೀಸಲಾಗಿದೆ. ಉಮಾಮಹೇಶ್ವರ ಸಂಗೀತ ಶಾಲೆ, ಮೂಕಾಂಬಿಕಾ ಸಂಗೀತ ಶಾಲೆ, ಗಾನ ಸರಸ್ವತಿ ಸಂಗೀತ ಶಾಲೆ, ರಾಗ–ಸುಧಾ ಮುಂತಾದ ಸಂಸ್ಥೆಗಳಲ್ಲಿ ವೈಯಕ್ತಿಕ ನೆಲೆಯಲ್ಲಿ ಸಂಗೀತವನ್ನು ಕಲಿಸುವ ಶಿಕ್ಷಕ ಶಿಕ್ಷಕಿಯರಿದ್ದಾರೆ.

ಕಲೆಗಳ ಕ್ಷೇತ್ರದಲ್ಲಿ ಪುತ್ತೂರು ತನ್ನದೇ ಆದ ನೆಲೆಯನ್ನು ಕಂಡುಕೊಂಡಿದೆ. ಸ್ಯಾಕ್ಸೋಫೋನ್ ವಾದನದಲ್ಲಿ ಡೋಗ್ರ ವೆಂಕಟಪ್ಪ ಅಗ್ರಗಣ್ಯರಾದರೆ ಮೃದಂಗ ಹಾಗೂ ತಬಲಾ ಸವ್ಯಸಾಚಿಯಾಗಿ ಎನ್.ವಿ. ಮೂರ್ತಿ ಅಂತರಾಷ್ಟ್ರೀಯ ಸಿದ್ಧಿ ಪ್ರಸಿದ್ಧಿಗಳನ್ನು ಗಳಿಸಿದ್ದಾರೆ. ಪಿಟೀಲಿನಲ್ಲಿ ಪುತ್ತೂರು ದೇವದಾಸ ಜೋಷಿ ಯವರ ಸಾಧನೆ ಅನನ್ಯವಾದುದು, ಕರ್ನಾಟಕ ಸಂಗೀತದ ತಿರುವಯ್ಯೂರು ಎಂದೇ ಹೆಸರಾದ ಕಾಂಚನದ ವೆಂಕಟಸುಬ್ರಹ್ಮಣ್ಯ ಅಯ್ಯರ್ ಅವರು ಹಾಕಿಕೊಟ್ಟ ಮೇಲ್ಪಂಕ್ತಿಯನ್ನು ಹಲವು ಶಿಕ್ಷಕ–ಶಿಕ್ಷಕಿಯರು ಮುಂದುವರಿಸುತ್ತಿದ್ದಾರೆ. ಪುತ್ತೂರು ನರಸಿಂಹ ನಾಯಕ್ ಹಿನ್ನೆಲೆ–ಮುನ್ನಲೆ ಗಾಯಕರಾಗಿ ದಾಖಲೆಯನ್ನೇ ಸ್ಥಾಪಿಸಿದ್ದಾರೆ. ಮೇಘನಾ ಮೂರ್ತಿ ಯವರಂತಹ ಎಳೆಯರು ಸಾಧನೆ ಗೈಯುತ್ತಿದ್ದಾರೆ.

ನಾಟಕ ರಂಗದಲ್ಲಿ ರಾಮಣ್ಣ ರೈ, ಪುರಂದರ ಭಟ್, ಐ. ಕೆ. ಬೊಳುವಾರು ಮತ್ತಿತರರು ಹೆಸರು ಮಾಡಿದ್ದು, ನಿರತ ನಿರಂತರ, ಬಹುವಚನಂ ಮುಂತಾದ ಸಂಸ್ಥೆಗಳು ರಂಗಚಟುವಟಿಕೆಗಳ ಉಳಿವಿಗಾಗಿ ಶ್ರಮಿಸುತ್ತಿವೆ.

ಚಿತ್ರಗಾರಿಕೆಯಲ್ಲಿ ಚಂದ್ರನಾಥ್, ಮನೋಹರ್, ಸುಧಾಕರ ಅಪೂರ್ವ ಸಾಧನೆ ಮಾಡಿದ್ದಾರೆ. ಪತ್ರಿಕಾರಂಗದಲ್ಲಿ –ಅಡಿಕೆ ಪತ್ರಿಕೆ, ಮಧು ಪ್ರಪಂಚ, ಸುದ್ದಿ ಬಿಡುಗಡೆ ವಿಶಿಷ್ಟ ಸೇವೆ ಸಲ್ಲಿಸಿವೆ. ಮಕ್ಕಳ ಸಾಹಿತ್ಯದಲ್ಲಿ–ಉಲ್ಲಾಸ ಕಾರಂತ, ಲಕ್ಷ್ಮೀ, ರಮೇಶ ಉಳಯ, ಮನೋವಿಶ್ಲೇಷಣೆ ಯಲ್ಲಿ – ಗಂಗಾಧರ ಬೆಳ್ಳಾರೆ ಗಮನ ಸೆಳೆದಿದ್ದಾರೆ.

ಪುತ್ತೂರು ಕನ್ನಡ ಸಂಸ್ಕೃತಿಗೆ ಕೊಟ್ಟ ಮತ್ತೊಂದು ಕಾಣಿಕೆಯೆಂದರೆ ಯಕ್ಷಗಾನ. ಈ ಕ್ಷೇತ್ರದಲ್ಲಿ ಮೂಣಂಗಾಯಿ ಕೃಷ್ಣ ಭಟ್, ನಾರಾಯಣ ಹೆಗ್ಡೆ, ನಯನ ಕುಮಾರ್, ಪೆರುಮಡಿ ನಾರಾಯಣ ಭಟ್, ಪಾತಾಳ ವೆಂಕಟರಮಣ ಭಟ್ ಶೀನಪ್ಪ ಭಂಡಾರಿ ಮುಂತಾದವರು ಈ ಕ್ಷೇತ್ರದಲ್ಲಿ ಪ್ರಖ್ಯಾತರಾಗಿದ್ದಾರೆ. ದಾಸಪ್ಪ ರೈ ಅಂಬಾಪ್ರಸಾದ್, ಶ್ರೀಧರ ಭಂಡಾರಿ ಮತ್ತಿತರರು ಇಂದಿಗೂ ಯಕ್ಷಗಾನ ಕ್ಷೇತ್ರದಲ್ಲಿ ನಿರತರಾಗಿ ದ್ದಾರೆ. ಬೊಳುವಾರಿನ ಆಂಜನೇಯ ಯಕ್ಷಗಾನ ಮಂಡಳಿ, ಉಪ್ಪಿನಂಗಡಿಯ ಕಾಳಿಕಾಂಬಾ ಯಕ್ಷಗಾನ ಮಂಡಳಿ ಹಾಗೂ ಆಂಜನೇಯ ಮಹಿಳಾ ಯಕ್ಷಗಾನ

ಮಂಡಳಿಗಳು ತಾಳಮದ್ದಳೆಯ ಸವಿಯನ್ನು ಉಣಬಡಿಸುತ್ತಿವೆ. ಪುತ್ತೂರಿನ ದಸರಾ ನಾಡಹಬ್ಬವು ಸಂಸ್ಕೃತಿ ಪ್ರಸಾರಕ್ಕೆ ಉತ್ತಮ ವೇದಿಕೆಯಾಗಿದೆ.

ಅಮೃತ ಸೋಮೇಶ್ವರ, ಕೆದಂಬಾಡಿ ಜತ್ತಪ್ಪ ರೈ, ಲೀಲಾ ಭಟ್, ವಸಂತ ಕುಮಾರ್ ತಾಳ್ತಜೆ, ಶ್ರೀಕೃಷ್ಣ ಭಟ್ ಅರ್ತಿಕಜೆ, ವಿ. ಬಿ. ಅರ್ತಿಕಜೆ, ಬೊಳುವಾರು ಮಹಮ್ಮದ್ ಕುಂಞಿ, ಲೀಲಾ ಮಣ್ಣಾಲ, ಕುದ್ಕಾಡಿ ವಿಶ್ವನಾಥ ರೈ, ಪಾಲ್ತಾಡಿ ರಾಮಕೃಷ್ಣ ಆಚಾರ್, ಲಕ್ಷ್ಮೀಶ ತೋಳ್ಪಾಡಿ, ಗಂಗಾ ಪಾದೆಕಲ್, ಎ. ಪಿ. ಮಾಲತಿ, ಶ್ರೀ ಪಡ್ರೆ ಮೊದಲಾದವರು ಈಗ ಇಲ್ಲಿ ಸಾಹಿತ್ಯ ಕೃಷಿಯಲ್ಲಿ ತೊಡಗಿದ್ದಾರೆ. ಹೀಗೆ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಗೆ ಪುತ್ತೂರು ತನ್ನದೇ ಆದ ಕೊಡುಗೆಯನ್ನು ನೀಡಿದೆ.

**೭.೨.೦. ಅಧ್ಯಯನದ ಫಲಿತಗಳು :**

ಪುತ್ತೂರು ತಾಲೂಕಿನಲ್ಲಿ ನಡೆದ ಸಾಹಿತ್ಯ ಚಟುವಟಿಕೆಗಳನ್ನು ಗಮನಿಸಿದಾಗ ಸ್ಪಷ್ಟವಾಗಿ ತಿಳಿಯುವುದೆಂದರೆ ಇಲ್ಲಿ ಸಾಹಿತ್ಯ ಬೆಳೆದು ಬಂದಿರುವುದು ಈ ಶತಮಾನದ ಮೂವತ್ತರ ದಶಕದ ನಂತರ ಅಂದರೆ, ಹಳೆಗನ್ನಡ ಅಥವಾ ನಡುಗನ್ನಡ ಸಾಹಿತ್ಯ ಇಲ್ಲಿ ರಚನೆಯಾಗಲಿಲ್ಲ. ಕಾರಣವೇನೆಂದರೆ ಪುತ್ತೂರಿನ ಇತಿಹಾಸ ಅಧ್ಯಯನ ಮಾಡಿದಾಗ ಕೆಲವು ಶತಮಾನಗಳ ಹಿಂದೆ ಪುತ್ತೂರಿನ ಹೆಚ್ಚಿನ ಪ್ರದೇಶಗಳು ಕಾಡಿನಿಂದ ಆವೃತ್ತವಾಗಿದ್ದು, ಜನಸಂಖ್ಯೆ ತೀರಾ ಕಡಿಮೆ ಇತ್ತು. ಇನ್ನೊಂದೆಡೆ ಇದ್ದ ಅಲ್ಪ ಸಲ್ಪ ಜನರು ಕೂಡ ಬಡವರಾಗಿದ್ದು ಅವರ ಜೀವನ ನಿರ್ವಹಣೆಯೇ ಕಷ್ಟವಾದಾಗ ಸಾಹಿತ್ಯ ರಚನೆಯ ಕಡೆಗೆ ಗಮನಹರಿಸಲು ಸಾಧ್ಯವಾಗಲಿಲ್ಲ.

ಪುತ್ತೂರು ತಾಲೂಕಿನ ಸಾಹಿತ್ಯ ರಚನೆ ಗಮನಿಸಿದಾಗ ಇಲ್ಲಿ ಸಾಹಿತ್ಯ ರಚನೆ ಮಾಡಿದವರು ಸಮಾಜದ ಮೇಲ್ಜಾತಿಯ ಜನರು ಅಂದರೆ ಹೆಚ್ಚಾಗಿ ಬ್ರಾಹ್ಮಣರು. ಆದ್ದರಿಂದ ಇವರ ಸಾಹಿತ್ಯದಲ್ಲಿ ದಲಿತ ಅಥವಾ ಬಂಡಾಯ ಸಾಹಿತ್ಯ ಗೋಚರಿಸುವುದಿಲ್ಲ. ಆದರೆ ಇತ್ತೀಚಿನ ವರ್ಷಗಳಲ್ಲಿ ಬ್ರಾಹ್ಮಣ ರೊಂದಿಗೆ ಮುಸ್ಲಿಂ ಸಾಹಿತಿಗಳು, ಬಂಟರೂ ಸೇರಿದಂತೆ ಇತರ ಜನರೂ ಸಾಹಿತ್ಯ ರಚನೆಯಲ್ಲಿ ತೊಡಗಿಕೊಂಡಿರುವುದು ತಿಳಿದುಬರುತ್ತದೆ.

ಪ್ರಸ್ತುತ ವರ್ಷಗಳಲ್ಲಿ ಪುತ್ತೂರು ತಾಲೂಕಿನಲ್ಲಿ ಸಾಹಿತ್ಯ ಸಂಸ್ಕೃತಿ ಬೆಳವಣಿಗೆಯಲ್ಲಿ ಇಲ್ಲಿನ ಸಂಘ-ಸಂಸ್ಥೆಗಳ ಪಾತ್ರವೂ ವಿಶೇಷವಾಗಿದೆ. ಇಲ್ಲಿನ ಯಕ್ಷಗಾನ ಕಲಾ ಸಂಸ್ಥೆಗಳು ಮೇಳಗಳು ಹಲವು ಜನರನ್ನು ಕಲಾವಿದರನ್ನಾಗಿ ರೂಪಿಸುವಲ್ಲಿ, ಕಲೆಯ ಬಗ್ಗೆ ಆಸಕ್ತಿ ಉಂಟಾಗುವಂತೆ ಮಾಡುವಲ್ಲಿ ಯಶಸ್ವಿಯಾಗಿದೆ. ಪುತ್ತೂರಿನ ಕಾಂಚನದಲ್ಲಿರುವ ಸಂಗೀತ ಕಲಾ ಶಾಲೆಯು ಅನೇಕ ಮಂದಿ ವ್ಯಕ್ತಿಗಳನ್ನು ಸಂಗೀತಕಾರನ್ನಾಗಿ ರೂಪಿಸಿದೆ.

ಪುತ್ತೂರಿನಲ್ಲಿರುವ ಪ್ರಮುಖ ಮೂರು ಕನ್ನಡ ಸಂಘಗಳು ವಿದ್ಯಾರ್ಥಿ ದೆಸೆಯಲ್ಲಿಯೇ ಮಕ್ಕಳಿಗೆ ಸಾಹಿತ್ಯ ರಚನೆ ಮತ್ತು ಅಭಿರುಚಿಯನ್ನು ಬೆಳೆಸುವಲ್ಲಿ ಸಹಕಾರಿಯಾಗಿದೆ. ಒಟ್ಟಿನಲ್ಲಿ ಪುತ್ತೂರು ತಾಲೂಕಿನ ಸಾಹಿತ್ಯ–ಸಾಂಸ್ಕೃತಿಕ ಚಟುವಟಿಕೆಗಳು ಪುತ್ತೂರಿನ ಜನರನ್ನು ಮಾತ್ರವಲ್ಲದೆ ಇತರ ಪ್ರದೇಶದ ಜನರನ್ನೂ ಆಕರ್ಷಿಸುವುದರಲ್ಲಿ ಯಶಸ್ವಿಯಾಗಿದೆ.

ಪುತ್ತೂರಿನ ಹೆಸರು ಪ್ರಸಿದ್ಧಿಗೆ ಬರಲು ಕಾರಣರಾದವರಲ್ಲಿ ಸಾಹಿತಿಗಳು, ಬರಹಗಾರರು, ಸಮಾಜ ಸೇವಾಕರ್ತರು ಹಾಗೂ ಕಲಾವಿದರು ಪ್ರಮುಖರು. ಆರಂಭ ಕಾಲದಲ್ಲಿ ಪುತ್ತೂರಿನಲ್ಲಿ ಕನ್ನಡ ಸಾಹಿತ್ಯ ಸೇವೆಯನ್ನು ಸಲ್ಲಿಸಿದವರು ಜಿ.ಎನ್. ಲಕ್ಷ್ಮಣ ಪೈ, ಕಡವ ಶಂಭು ಶರ್ಮ, ಉಗ್ರಾಣ ಮಂಗೇಶ ರಾವ್, ಮಚ್ಚಿಮಲೆ ಶಂಕರನಾರಾಯಣ ರಾವ್, ಬೆಳ್ಳೆ ರಾಮಚಂದ್ರ ರಾವ್, ಮೊದಲಾದವರು ಪ್ರಮುಖರು.

ಪುತ್ತೂರಿಗೆ ಸಾಹಿತ್ಯ ಪ್ರಪಂಚದಲ್ಲಿ ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಖ್ಯಾತಿಯನ್ನು ತಂದು ಕೊಟ್ಟವರು ಜ್ಞಾನಪೀಠ ಪ್ರಶಸ್ತಿ ವಿಜೇತರಾದ  ಶಿವರಾಮ ಕಾರಂತರು. ನಾಲ್ಕು ದಶಕಗಳಿಗೂ ಹೆಚ್ಚು ಕಾಲ ಪುತ್ತೂರಿನಲ್ಲಿ ನೆಲೆಸಿದ್ದ ಅವರ ಹತ್ತು ಹಲವು ಸಾಧನೆ, ಪ್ರಯೋಗ ಚಟುವಟಿಕೆಗಳ ಜೊತೆಗೆ ಪುಸ್ತಕ ರಚನೆ ಹಾಗೂ ಪುಸ್ತಕ ಪ್ರಕಾಶನಗಳನ್ನು ನಡೆಸಿದರು. ಪುತ್ತೂರು ಅವರ ಕರ್ಮಭೂಮಿ. ಶಿಕ್ಷಕರಾಗಿ, ಸಮಾಜ ಸುಧಾರಕರಾಗಿ, ಪತ್ರಿಕೋದ್ಯಮಿಯಾಗಿ, ಕಲಾವಿದರಾಗಿ, ಸಾಹಿತಿ ಯಾಗಿ, ಸಾಂಸ್ಕೃತಿಕ ಪ್ರವರ್ತರಾಗಿ ಅವರು ಮಾಡಿದ ಸೇವೆ, ಕೈಗೊಂಡ ಕಾರ್ಯ, ಪಡೆದ ಸಿದ್ಧಿ ಅನುಪಮವಾದುದು.  ಸಾಹಿತ್ಯದ ಎಲ್ಲಾ ಪ್ರಕಾರದಲ್ಲೂ ಅವರು ಕೃತಿ ರಚಿಸಿದ್ದಾರೆ. ಕಥೆ, ಕಾದಂಬರಿ, ವ್ಯಕ್ತಿ ಚಿತ್ರಣ, ನಾಟಕ, ಪ್ರಬಂಧ, ಕಲಾಸಾಹಿತ್ಯ, ಯಕ್ಷಗಾನ, ರಾಜಕೀಯ ಮೊದಲಾದ ಹಲವು ಕ್ಷೇತ್ರಗಳಲ್ಲಿ ಅವರು ಕೃತಿ ರಚನೆ ಮಾಡಿದ್ದಾರೆ. ಮಕ್ಕಳ ಶಿಕ್ಷಣದ ಸುಧಾರಣೆಗಾಗಿ ಪುತ್ತೂರಿನಲ್ಲಿ ಬಾಲವನವನ್ನು ಸ್ಥಾಪಿಸಿ ಮಕ್ಕಳ ಕೂಟ, ಶಾಂತಿ ಶಿಬಿರ, ಶಿಕ್ಷಕರ ಸಮ್ಮೇಳನ, ನಾಡಹಬ್ಬ ಮುಂತಾದವುಗಳನ್ನು ನಡೆಸಿದ್ದಾರೆ. ಅವರು ಪುತ್ತೂರಿನಲ್ಲಿದ್ದಾಗ ೩೨ ಕಾದಂಬರಿಗಳನ್ನು ರಚಿಸಿದ್ದು, ಅವುಗಳಲ್ಲಿ 'ಬೆಟ್ಟದ ಜೀವ' ಕಾದಂಬರಿಯಲ್ಲಿ ಪುತ್ತೂರು ಪರಿಸರದ ಪ್ರಭಾವ ಹೆಚ್ಚಾಗಿ ಕಾಣಬಹುದು. ಇಲ್ಲಿನ ಬೆಟ್ಟ–ಗುಡ್ಡಗಳು ಜನಜೀವನವನ್ನು ಚಿತ್ರಿಸಿದ್ದಾರೆ. ಅವರ 'ಚೋಮನ ದುಡಿ' ಕಾದಂಬರಿಯಲ್ಲಿ ಪುತ್ತೂರಿನ ದಲಿತ ವರ್ಗದ ಜೀವನ ಕ್ರಮವನ್ನು ಹೇಳುವ ಪ್ರಯತ್ನ ಮಾಡಿದ್ದಾರೆ.  ಶಿವರಾಮ ಕಾರಂತರು ೧೯೪೯ರಲ್ಲಿ ಪ್ರಕಟಿಸಿದ 'ಕರುಳಿನ ಕರೆ' ಎಂಬ ಕಾದಂಬರಿಯಲ್ಲಿ ಬೆಂದ್ರ್‌ತೀರ್ಥ ಎಂಬ ಪುತ್ತೂರಿನಲ್ಲಿರುವ ಬಿಸಿನೀರಿನ ಕೊಳದ ಬಗ್ಗೆ ತಿಳಿಸಿದ್ದಾರೆ. ಯಕ್ಷಗಾನ ಕ್ಷೇತ್ರದಲ್ಲಿ ಪುತ್ತೂರಿನಲ್ಲಿ ಇದ್ದುಕೊಂಡು ಹೊಸಹೊಸ ಪ್ರಯೋಗ ನಡೆಸಿ, ಅದನ್ನು ದೇಶ ವಿದೇಶಗಳಲ್ಲೂ ಪ್ರಸಿದ್ಧಿಗೆ ತಂದಿದ್ದಾರೆ.

ಬಡೆಕ್ಕಿಲ ವೆಂಕಟರಮಣ ಭಟ್ ಕನ್ನಡ ಸಾಹಿತ್ಯ ಹಾಗೂ ಯಕ್ಷಗಾನ ಕ್ಷೇತ್ರಕ್ಕೆ ನೀಡಿದ ಕೊಡುಗೆ ವಿಶಿಷ್ಟವಾದುದು. ಅವರು ಗೀತ ಸಾರ, ಕರ್ನಾಟಕ ಪರಿಸ್ಥಿತಿ, ಭಾರತ ರಾಜ್ಯಭಾರಂ, ಸಮಾಜ ಸಂಗೀತ ಮುಂತಾದ ಕೃತಿಗಳನ್ನು ರಚಿಸಿದ್ದಾರೆ.

ಪುತ್ತೂರಿನ ಶಿಕ್ಷಣ, ಸಹಕಾರ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಮೊಳಹಳ್ಳಿ ಶಿವರಾಯರ ಹೆಸರು ಚಿರಸ್ಮರಣೀಯ. ಹಳ್ಳಿ ಹಳ್ಳಿಗಳಲ್ಲಿ ಶಾಲೆಗಳನ್ನು ಸ್ಥಾಪಿಸಿ ತಾಲೂಕಿನ ಶೈಕ್ಷಣಿಕ ಅಭಿವೃದ್ಧಿಗೆ ಶ್ರಮಿಸಿದರು. ಪತ್ರಿಕೋದ್ಯಮಕ್ಕೂ ಪ್ರೋತ್ಸಾಹವಿತ್ತರು. ಸಂಗೀತ ನಾಟಕಗಳಲ್ಲಿ ಹೆಚ್ಚಿನ ಅಭಿರುಚಿಯನ್ನು ಹೊಂದಿದ ಪಡುಕೋಣೆ ಸೀತಾದೇವಿಯವರು ಸಾಹಿತ್ಯ ರಚನೆಯನ್ನು ಮಾಡಿದ್ದಾರೆ. ಹೀಗಾಗಬೇಕೆ? ಕಟುಕ ರೋಹಿಣಿ ಸಂವತ್ಸರದಲ್ಲಿ ಮತ್ತು ವೇಣು ಮಾವ ಇವರ ಮುಖ್ಯ ಕೃತಿಗಳು. ಗಾಂಧೀವಾದಿಯೂ ದೇಶಪ್ರೇಮಿಯೂ ಆದ ಎ. ಐ. ಸುಬ್ಬಯ್ಯನವರು ಲೆಖಕರಾಗಿ ಭಾಷಾಂತರ ಕಾರರಾಗಿ, ಸಂಘಟಕರಾಗಿ, ಪುತ್ತೂರು ಕರ್ನಾಟಕ ಸಂಘದ ಅಧ್ಯಕ್ಷರಾಗಿ ದೀರ್ಘಕಾಲ ಸೇವೆ ಸಲ್ಲಿಸಿದವರು. ಡೇವಿಡ್ ಕಾಪರ್ ಫೀಲ್ಡ್, ದುಃಖಾರ್ತರು, ರಾಜಾಜಿಯವರ ಭಾಷಣಗಳು ಮತ್ತು ಗುರುಗಳೊಡನೆ ಸಂವಾದ ಅವರ ಅನುವಾದ ಕೃತಿಗಳು. ಕಥೆ, ಕಾದಂಬರಿ ಹಾಗೂ ವಿಚಾರಪರ ಲೇಖನಗಳನ್ನು ಅವರು ರಚಿಸಿದ್ದಾರೆ. ಇವರ ಸಾಹಿತ್ಯದ ಮೇಲೆಯೂ ಪುತ್ತೂರು ಪರಿಸರದ ಪ್ರಭಾವ ಹೇರಳವಾಗಿದೆ.

ಮುಳಿಯ ಕೃಷ್ಣ ಭಟ್ಟರು ಪ್ರವಾಹದದಲ್ಲಿ ಪ್ರತಿಬಿಂಬ ಮತ್ತು ಏಳು ಉರುಳುಗಳು ಎಂಬ ಕಥಾಸಂಕಲನಗಳನ್ನು, ಹುಚ್ಚುಹೊಳೆ ಎಂಬ ಕಾದಂಬರಿಯನ್ನು ರಚಿಸಿ, ಸಾಹಿತ್ಯ ಸಂಸ್ಕೃತಿಯ ಅಭಿವೃದ್ಧಿಗೆ ನಿರಂತರ ಶ್ರಮಿಸಿದವರು. ಬೊಳುವಾರು ಮಹಮ್ಮದ್ ಕುಂಞ 'ಸ್ವಾತಂತ್ರ್ಯದ ಓಟ' ಎಂಬ ಕಾದಂಬರಿಯಲ್ಲಿ ಹಿಂದೂ–ಮುಸ್ಲಿಂ ಸಾಮರಸ್ಯದ ಕುರಿತು ಬರೆದಿದ್ದಾರೆ. ಇವರ ಕಾದಂಬರಿಯ ಮೇಲೆಯೂ ಇಲ್ಲಿನ ಪರಿಸರದ ಪ್ರಭಾವವಿದೆ.

ಪುತ್ತೂರಿನಲ್ಲಿ ಮೂರು ಕನ್ನಡ ಸಂಘಗಳಿದ್ದು ಶಿವರಾಮ ಕಾರಂತರಿಂದ ೧೯೭೦ರ ಹಿಂದೆಯೇ ಸ್ಥಾಪಿತವಾದ ಕರ್ನಾಟಕ ಸಂಘ, ಪುತ್ತೂರಿನಲ್ಲಿ ಕನ್ನಡದ ಸಾಹಿತ್ಯ ಅಭಿವೃದ್ಧಿಗೆ ಶ್ರಮಿಸುತ್ತಿದೆ. ಇದರೊಂದಿಗೆ ಸಂತ ಫಿಲೋಮಿನಾ ಕಾಲೇಜು ಕನ್ನಡಸಂಘ ಮತ್ತು ವಿವೇಕಾನಂದ ಕಾಲೇಜು ಕನ್ನಡ ಸಂಘಗಳು ವಿದ್ಯಾರ್ಥಿಗಳಿಗೆ ಎಳವೆಯಲ್ಲಿಯೇ ಸಾಹಿತ್ಯದ ಬಗ್ಗೆ ಅಭಿರುಚಿ ಮೂಡಿಸಿ ಪುತ್ತೂರಿನಲ್ಲಿ ಯುವ ಸಾಹಿತಿಗಳು ಉಂಟಾಗಲು ಕಾರಣವಾಗಿವೆ. ಮೂರೂ ಕನ್ನಡ ಸಂಘಗಳು ಸಂಯುಕ್ತವಾಗಿ ಏರ್ಪಡಿಸುವ "ಸಾಹಿತ್ಯ ಸೌರಭ" ಕಾರ್ಯಕ್ರಮ ಕನ್ನಡದ ಕಂಪನ್ನು ಹಬ್ಬಿಸುವಲ್ಲಿ ವಿಶಿಷ್ಟವಾದುದು.

ಮೊಳಹಳ್ಳಿ ಶಿವರಾಯರ ಮತ್ತು ಇತರ ಸ್ನೇಹಿತರ ಸಹಕಾರದಿಂದ ಶಿವರಾಮ ಕಾರಂತರು ಪುತ್ತೂರಿನಲ್ಲಿ ೧೯೩೧ರಲ್ಲಿ ಆರಂಭಿಸಿದ ದಸರಾ ಮಹೋತ್ಸವ ಅಥವಾ ನಾಡಹಬ್ಬವು ವಿಜೃಂಭಣೆಯಿಂದ ಇಂದೂ ನಡೆಯುತ್ತಿದೆ.

ಹೀಗೆ ಪುತ್ತೂರು ಪರಿಸರವೇ ವಿಶಿಷ್ಟವಾಗಿದ್ದು ಇಲ್ಲಿನ ಸಂಸ್ಕೃತಿ, ಜಾನಪದ, ಬೆಟ್ಟ ಗುಡ್ಡಗಳು ಈ ಪರಿಸರದಲ್ಲಿ ಕನ್ನಡ ಸಾಹಿತ್ಯ ಬೆಳೆಯಲು ಕಾರಣವಾಗಿದೆ ಎಂದು ಹೇಳಬಹುದು.

# ಅನುಬಂಧ

೧. ಪುತ್ತೂರಿನಲ್ಲಿ ದೊರೆತ ಶಾಸನಗಳ ಉಲ್ಲೇಖ.

೨. ಪುತ್ತೂರಿನ ಸಾಹಿತಿಗಳು / ಕಲಾವಿದರು.

೩. ಪುತ್ತೂರಿನ ಸಂಘ ಸಂಸ್ಥೆಗಳು.

೪. ಪುತ್ತೂರು ತಾಲೂಕಿನ ನಕ್ಷೆ.

೫. ಪರಾಮರ್ಶನ ಗ್ರಂಥಗಳು.

೬. ಮಾಹಿತಿ ನೀಡಿದವರು.

## ಶಾಸನಗಳ ವಿವರ

**ಪುತ್ತೂರಿನ ಶಿಲಾ ಶಾಸನ – ೧**

ಶಾಸನದ ಪೂರ್ಣ ಪಾಠವು ಈ ರೀತಿ ಇದೆ.

೧. ನಮಸ್ತುಂಗ ಶಿರಬೆ(ಶ್ಚು)ಂಬಿ ಚಂದ್ರಚಾಮರ ಚಾರವೇತ್ರಯೀ (ತ್ರೈ) ಲೋಕ್ಯ ನಗರಾರಂಭಾ(ಭ) ಮೂಲಸ್ತಂಭಾಯ ಶಂಭವೇ ॥ ಸ್ವಸ್ತಿ ಶ್ರೀ ಜಯಾ

೨. ಭ್ಯುದಯ ಶಕವರ(ರು)ಷ ೧೩೫೩ನೆಯ ವರ್ತ್ತ(ರ್ತ)ಮಾನದ ವಿರೋಧಿಕ್ರು(ಕೃ)ತು ಸಂವತ್ಸರದ ಮಾರ್ಗಶಿರ ಶು. ೫ ಆ ಶ್ರೀಮತು

೩. ವಿಜೆಯನಗರಿಯ ಪ್ರತಾಪದೇವರಾಯರು ಚತುಸಮುದ್ರವ ಪಾಲಿಸುವಅ(ಲ್ಲಿ) ಪ್ರಧಾನ ಹರಿಯಪ್ಪ ದಂಣಾಯಕ ಊ(ಒ)

೪. ಡೆಯರ ನಿರೂಪದಿಂದ ಮಂಗಲೂರ ರಾಜ್ಯವನು ದೇವರಾಜಗಳ ಮಗ ಅಂಣಪ್ಪಗಳು ಆಳುವಲ್ಲಿ ಪಾ(ಂ)ಡ್ಯಪ್ಪ ಅರ್ಸರಾದ ಬಂಗರ

೫. ಸ್ತಾ(ಸ್ಥಾ)ನದ ಪುತ್ತೂರ ಶ್ರೀ ಮಹಾದೇವರ ಸಂನಿಧಿಯಲು ಅಚಂದ್ರಾರ್ಕ್ಕ(ರ್ಕ) ಸ್ಥಾಯಿಯಾಗಿ ತಿ(ತು)ಳು ನಾಡಿಯ(ನ)ನಾಡು ಗ್ರಾಮ ಮುಂತಾಗಿ ಮಾಡಿದ ಒಡೆಯ

೬. ಗಳು ಸಿರ(ರ)ಸಿದ ಶಿಲಾಶಾಸನದ ಕ್ರಮಉ(ವೆ)ಂತೆಂದರೆ ಅಂಣಪ(ಪ್ಪ)ಗಳ ಕೆಳಗೆ ತಿ(ತು)ಳು ನಾಡಿಯ(ನ) ಅಧಿಕಾರವನೂ(ನು) ಮಾಡುವಲಿ(ಲ್ಲಿ) ಕ್ರಿಯಾ ಶ(ಕ್ತಿ)

೭. ದೇವರುಗಳು ಪುತ್ತೂ(ತ್ತೂ)ರಿಗೆ ಬಿಜಯ ಮಾಡಿದಲ್ಲಿ ಆ ಕ್ರಿಯಾಶಕ್ತಿ ದೇವರುಗಳು ಅಂಣಪ್ಪಗಳ ಬುದ್ಧಿವಂತ ಮನುಷ್ಯ ದೇ

೮. ವರ(ನ)ನುಮದಿತ ಊರ ಅಧಿಕಾರಿ ದೇವರಸನು ಯಿಂನೂರು ಪರಿವಾರ ನಾಲ್ವರು ನಾಯತವಾದಿಗಳು ಮಾಡಿ ದೇವರ ಸ

೯. ರ ಮೂರ್ತಿನ ವಾಸು ಭಂಡಾರಿ ಮೊದಲಾದ ನಾಲ್ವರು ಪಾದಮೂಲಿಗಳ ನಿಲಿಸಿ ಮಾಡಿದ ಧರ್ಮಗಳ ವಿವರ ಅಮ್ರು

೧೦. ತಪಡಿಗೆ ಘಂಟಾಪೂಜೆಗೆ ನಿತ್ಯಸ್ತಿ(ಸ್ಥಿ)ತಿ ನಡ(ಡೆ)ವ ನಯೀವೇದ್ಯಕ್ಕೆ ಅಕ್ಕಿ ಹಾನೆ ೨ ಕುಡತೆ ೨ಕ್ಕಂ ಭತ(ತ್ತ) ಮೂಡೆ ೧೨ ನಂದಾದೀವಿಗೆ ೨ ಕ(ಕ್ಕಂ) ಭತ್ತ ಮೂಡೆ ೩೨

೧೧. ಪಡುವಣ ಹೂತೋಟವ ರಕ್ಷಿಸಿ ಮಾಲೆಯ ಕಟ್ಟಿ ದೇವರ ನಯಿ ವೇದ್ಯಕ್ಕೆ ಯಿಪ್ಪಾನೆ ಅಕ್ಕಿಯ ನಡಸುವರೆ ಭತ್ತ ಮೂ ೧೨೦ ಪುರಾಣಿ.

೧೨. ಕಂಗೆ ಭತ್ತ ಮೂಡೆ ೩೫ ತುಂಬೆಯ ಮಾಲೆಗೆ ಭತ್ತ ಮೂ ೧ ಶ್ರೀ ರುದ್ರ ಸ್ವಾವಿಧ್ಯಾಯ ಜಪ ತಪರಿಗೆ ಭತ್ತ ಮೂ ೬೦ ನಿತ್ಯ ಕಳಸಾ

೧೩. ಭಿಷೇಕಕ್ಕೆ ಭತ್ತ ಮೂಡೆ ೧೮ ಅಸ್ರಂಣಗೆ ಭತ್ತ ಮೂ ೧೨ ಬ್ರಾಹ್ಮಣ ಭೋಜನಕ್ಕೆ ಪ್ರತಿಜನ
೧ಕ್ಕಂ ಭತ್ತ ಮೂ ೩೬ ಲೆಕ್ಕ(ದ)ಲು ೧೨

೧೪. ಜನ ಭತ್ತ ಮೂ ೨೦೬ (೪೩೨) ಅಂತ್ತು ಭತ್ತ ಮೂಡೆ ೬೪೯ ಕ್ಕಂ ಮೂಡೆ ೮೮೧ ॥
ಮೊದಲು ಕಾಗ ೧ಕ್ಕಂ ಭತ್ತ ಮೂಡೆ ೪ರಲ್ಕೆದಲು ಬಂಗವಾಡಿಗ

೧೫. ೧೭೨೦ ಗಂ(ಕ್ಕಂ) ಕುಳವ ಕಡಿದು ಧಾರೆಯನೆರೆದು ಕಲ್ಲನಿಡಿಸಿ ಕೊಟ್ಟ ಠಾವುಗಳ ವಿವರ
ಪುತ್ತೂರ ಮಯಿಂದ (ಬಯಲಿಂದ?) ಮೇಗಡೆ ಅರಸಿಗೆ ವೊಪ್ಪಿ

೧೬. ಸಿದ ಸಮುದಾಯ ಗ ಜಗತಂ ಪ್ರತಿ ಸಮುದಾಯ ಗ ೧ ಕಟ್ಟುದೇರುವೆ(ಂ)ತಲು ದೇರಕಾಟಿಗ
೭೩ಲ್ಕೆ ಸ್ಥಳಧರ್ಮ

೧೭. ದೇವತೆಯ ಪೆರುಚಂದೆ ಮಗೂರ ವೊಕ್ಕಲು ಬಯಲು ಮು ೧೩ ಯಿಲದಲು ಸಟ್ಟಿತಿಮರು
೧ಕ್ಕ ಬಯಲು ಮು೮

೧೮. ಆನೆಮಜಲಲು ಅಡ್ರೆ (ಗ್ರ?)ವೆಂಬ ರಾವಿನಲು ಬಯಲು ಮೂ ೧೨ ಅಬ(ಚ)ರಂ ಬೆಟ್ಟಿನಲು
ಬಯಲು ಮಜಲು ಬೆಟ್ಟು ಸ

೧೯. ಹ ಮೂ ೧೫ ಅಜೆ (ಜ?)ವೆಂಬ ಬೆಟ್ಟನಲು ಬಯಲು ಬೆಟ್ಟು ಸಹ ಮೂ ೧೨ ಮುದಳಜೆಯಲು
ಬಯಲು ಮಜಲು ಬೆ

೨೦. ಟ್ಟು ಸಹ ಮೂ ೧೩ ಅಂನ್ತೂ ಬಯಲು ಮಜಲು ಬೆಟ್ಟು ಸಹ ಅತಿತಟ್ಟು ಬೆಳುವಾದ ಕಾಪಿನ
ಬಗೆ ೫ಕ್ಕಂ ಕೊಟ್ಟಾಗ ೭೩।

೨೧. ಯಿಂದ ತಾಪ ಕಳೆಯಲು ಬಡವೊಪ್ಪಿಸಿದ ಠಾವಿಂದ ಬಯಲು ಬೆಟ್ಟು ಸಹ ಮೂ *ಕಂ
ಕಾಟಿಗ ೧೫ ನಿಜದ ಗ್ರಾ

೨೨. ಮದಲು ನೆಕ್ಕಿಲಾಡಿ ವೊಪ್ಪಿಸಿದ ಕಾಯಕ ದೇವರಿಂದ ಬಯಲು ಮೂ ೨೨ ಕಂ ಕಾಟಿಗ
೨೫ ಬೆಳುಪಾಡಿಯ

೨೩. ಗ್ರಾಮದಲು ಸುಬ್ರಹ್ಮಣ್ಯ ದೇವರ ದೇವಸ್ವದೊಲು ಆ ಗ್ರಾಮದವರು ವೊಪ್ಪಿಸಿದ ಠಾವಿನಲು
ಕಯತವೆಂಬ ಬೆಟ್ಟಿನಲು ದ

೨೪. ಯಿರ ಸೆಟ್ಟಿಯಿಂದ ಕಾಟಿದ ೧೨ ಬೆಳುಪಾಡಿಯ ಪಜಂಬ ಸೆಟ್ಟಿಯಿಂದ ಕಾಟಿಗ ೧೦
ಪುಂಜು ಕುಂದ[ದ] ಯನಿ

೨೫. ಂದ ಕಾಟಿಗ ೨॥ ಚವುಟ ಸಾಂತೆಯನಿಂದ ಕಾಟಿಗ ೨ ಸೆಟ್ಟಿ ಬೆಂಮಂಣನಿಂದ ಕಾಟಿ ಗ ೧
ಆಯನ ಸಂಕ್ರಾತಿ ಶಿ

೨೬. ವರಾತ್ರಿ ಪೂಜೆಗೆ ಹೊರಪ ಉಳಿಮೂಕ ಪಲಳಿಯ ದೀಪ್ತಿಗೆ ಅತ್ರಿಬೆಟ್ಟು ಕಾಪು ಪಡಿವಳನ
ಕಯೆಲೂ ಕಾ

೨೭. ಟಿಗ ೧೩ ಬೆಳುಪಾಡಿಯ ಕುಚುಂಬ ಸೆಟ್ಟಿಯ ಕಯ್ಯಲು ಕಾಟಿಗ ೩ ಅಂತೂ ಕಾಟಿಗ ೧೭೮ ನಿತ್ಯಸ್ತಿತಿ ನಡ(ಡೆ)ವ ನಂದಾದೀ

೨೮. ವಿಗೆಯ ತಾವುಗಳ ವಿವರ ಮುದಳಜೆಯ ತೊಳ್ಳೆಯಲೂ ತುಳುವರಸುಗಳು ಮಾಡಿದ ದೀವಿಗೆ ೨ಕ್ಕಂ ಯೆಂಣೆ ಹಾಗೆ ೭೨

೨೯. ವರಿಣಲೆಯ ಪಾನಂಬಿನಲು ದೀವಿಗೆ ೧ಕ್ಕಂ ಯೆಂಣೆ ಪಾನೆ ೭೬ ಮೇಗಣ ಹಲುವಿನಲೂ ದೀವಿಗೆ ೧ಕ್ಕಂ ಯೆಂಣೆ ಹಾ

೩೦. ನೆ ೩೬ ** ಣೆಂಬ ಹಾದಿಯಲು ಕೇ** ಪಡಿವಳ ಮಾಡಿದ ಧರ್ಮ ದೀವಿಗೆ ೧ಕ್ಕಂ ಯೆಂಣೆ ಹಾನೆ ೩೭ ನಂಜಿಲದೊಲೂ ದೀ

೩೧. ವಿಗೆ ೧ಕ್ಕಂ ಯೆಂಣೆ ಪಾನೆ ೩೬ ತಾಳೆಪಾಡಿಯಲು ಮಾಣೆನ ಪರ ಮಾಡಿದ ಧರ್ವದೀವಿಗೆ ೧ಕ್ಕಂ ಹಾನೆ ೩೬ ಪಾಂಗಳೆ

೩೨. ಯಲು ಕುಡಿಂಬಳಿಯಲು ದೀವಿಗೆ ೧ಕ್ಕಂ ಯೆಂಣೆ ಪಾನೆ ೩೬ ವಾಸುಭಂಡಾರಿ ಮಾಡಿದ ಧರ್ಮಸಲಂಕರದ ಪ್ರತಿ[ಮೆ]ಗೆ ಸಾ

೩೩. ಂತಿಮುಗೇರಿ ಕೆಂಗಳಯದಲೂ ದೀವಿಗೆ ೧ಕ್ಕಂ ಯೆಂಣೆ ಹಾನೆ ೩೬ ಪುದುಗೋಳಿಯಲು ರತಿಲವರುಗಳ ಬಗೆಯ

೩೪. ಲು ದೀವಿಗೆ ೧ಕ್ಕಂ ಯೆಂಣೆ ಹಾನೆ ೪೮ ಮುಟ್ಟಂ ತೋಟಿನ ನೆಲೆಯಲು ದೀವಿಗೆ ೧ಕ್ಕಂ ಯೆಂಣೆ ಹಾನೆ ೩೬ ಮುಗೇರ ದೇವ

೩೫. ರು ಸೆಟ್ಟಿ ಮಾಡಿದ ಧರ್ಮ ಹೊಸ ಮುಗೇರು ದೀವಿಗೆ ೧ಕ್ಕಂ ಯೆಂಣೆ ಹಾನೆ ೩೬ ದೇವರ ಬಗೆ ಬ್ರಾಹ್ಮಣ ಭೋಜನ ಜನ

೩೬. ೪ಕ್ಕಂ ಭತ್ತ ಮೂಡೆ ೧೪೪ ಭಂಡಾರಿಗಳ ಬಗ್ಗೆ ಬನ ೪ಕ್ಕಂ ಭತ್ತ ಮೂ೧೪೪ಕ್ಕಂ ಒಕ್ಕಲ ವಿವರ ಬೆಳಿಕೆ ಮಜಲಲು ವಾಸುನಂಬಿಯ

೩೭. ಬಗೆಯಲು ಭತ್ತ ಮೂ ೩೫ ಪೊಯ್ಯನೂರಲು ಬಡಿಪನ ತಾವಿನಲು ಭತ್ತ ಮೂ೨೦ ಕಣೆಂಜದ ವಾಸುನಂಬಿಯ ತಾವಿನಲು

೩೮. ಭತ್ತ ಮೂ ೧೪ ವಾಸುನಂಬಿಯ ಕಟಾವಿನಲು ಭತ್ತ ಮೂ ೧೮ ವೊಯ್ಯನೂರ ರೆಡಿಲು ಪಡಿವಳನ ಕಯ್ಯಲು ಹಿ

೩೯. ಡಿದ ಹಲರುವಾರದ ತಾವಿನಲು ಭತ್ತ ಮೂ ೩೫ ಮುದರಜೆಯಲು ದಳತಿಯ ಟಾವಿನಲು ** ಮೂ ೧೩ ತಾಳೆಪಾಡಿಯಲು

೪೦. ಮುರಡಿತಾ[ಯ]ನ ತಾವಿನಲು ಭತ್ತ ಮೂ ೩ ನಿಡುಪೊಳಿಯ ನಾರುಸೆಟ್ಟಿಯ ತಾವಿನಲು ಭತ್ತ ಮೂ೫ ಉಭಯಂ ಭತ್ತ ೧೪೪

೪೧. ಮಯಿಂದ ಹೆಗ್ಗಡೆ ಮಾಡಿದ ಧರ್ಮ ಜನ ೩ಕ್ಕಂ ಟಾವಿನ ವಿವರ ಆನೆಮಜಲು ಬಂನ್ನೂರು ಅಡತೆಯೆಂಬ ಗದ್ದೆ ೧ ಅಂತು

೪೨. ಮಂದಪನ ಠಾವಿನಲು ಭತ್ತ ಮೂ ೩೬ಕ್ಕಂ ಉರಲು ಪಡಿಯರ ಬೆಟ್ಟಿನಲು ಕುಂಞಣಿಯ ಠಾವಿನಲು ಭತ್ತ ಮೂ ೩೬ ವ

೪೩. ಳಗಣ ಪಂಡಲು ಬಯಲು ಗದ್ದೆ ಬಿದೆಕಾರು ಮೂ ೬ಕ್ಕಂ ಭತ್ತ ಮೂ ೨೧ ಅಂನ್ತೂ ಭತ್ತ ಮೂ ೧೩ ದೇವಂಣರಸು ಮಾಡಿದ ಧ

೪೪. ರ್ಮ ಜನ ೧ಕ್ಕೆ ಬೆಳುಪಾಡಿಯಲು ಮಧುವಣಿಲ ಠಾವಿನಲು ನಾಲ್ಕು ಕಣೆ ಬಯಲಗದ್ದೆ ಬಿದೆಕಾರು ಮೂ ೧ಕ್ಕಂ ಮೂ ೨೭ ಪು

೪೫. ಂಜ ಕುಂದಯನ ಟಾವಿನಲು ನೂಚೆಂಬಳಿ ಬಿದೆಕಾರು ಮೂ ೧೦ ಕ್ಕಂ ಭತತ ಮೂ ೧೦ ಉಭಯಂ ಭತ್ತ ಮೂ ೩೬ ಕರಣಿಕ ವಿಟ್ಟ

೪೬. ಪ್ಪಗಳು ಮಾಡಿದ ಧರ್ಮ ಜನ ೧ಕ್ಕೆ ಮಾದಮಕಾನದಲು ಹಿಡುಂಬಳಿ ೧ ಪೆರುಬಳಿ ೧ ದರ ಬಿಳಿ ೧ ಗದ್ದೆ ೧ಕ್ಕಂ ಬಿದೆ

೪೭. ಕಾರು ಮೂ ೮೦ ಭತ್ತ ಮೂ ೩೬ ಭತ್ತದ ಅಧಿಕ ಮಾಡಿದ ಧರ್ಮ ಜನ ೧ಕ್ಕಂ ಕೆಳಗಣ ಕಬಕದ ಮಜಲು ಬಯಲು ಸಹಿತ ಬಿತು(ತ್ತು)ವ

೪೮. ಬಿದೆಕಾರು ಮೂ ೧೧ಕ್ಕಂ ಭತ್ತ ಮೂ ೩೬ ನೆರುಮುಗೇರ ದೇವರು ಸೆಟ್ಟಿ ಮಾಡಿದ ಧರ್ಮ್ಮದ ವಿವರ ನಿತ್ಯಸ್ಥಿತಿ ನಡ(ಡೆ)ವ ನೈವೇದ್ಯಕ್ಕೆ ಆ

೪೯. ಅಕ್ಕಿ ಹಾನೆ ೩ ಭತ್ತ ಮೂ ೬೦ಕ್ಕಂ ಭತ್ತ ಮ

೫೦. ೩೦ ನೂ ಸೆಟ್ಟಿ ಮಜಲ **ಪ್ಪ ಸೆಟ್ಟಿ ಅಕ್ಕಿಯ ದೇವರಿಗೆ ನಡೆಸಿಕೊಂಡು ಬಹನು ಮತ್ತೆ ಮತ್ತೆ ಮೂರು ಸೆಟ್ಟಿ ಕಾಂತಣ ಟಾವಿನಲು

೫೧. ಭತ್ತ ಮೂ*** ದೇವರು ನಯನ ಠಾವಿನಲು ಭತ್ತ ಮೂ ೧೦ ಭಂಡಾರಿಯಲು ಬೆರವದಲು ಭತ್ತ ಮೂ ೧೦ ಅ

೫೨. ಂನ್ತೂ ಭತ್ತ ಮೂ ೩೦ ಬ್ರಾಂಹ್ಮಣ ಭೋಜನ ಜನ ೪ಕ್ಕಂ ಭತ್ತದ ಊ(ವೊ)ಕ್ಕಲ ವಿವರ ತಂನ ಮೂಲ ಮುಗೇರಲು ಭತ್ತ ಮೂ ೩೬ ಮುಗೇರ

೫೩. ಲು ಕೇಶವನ ಠಾವಿನಲು ಭತ್ತ ಮೂ ೩೬ ಹಡಿಲು ಬಿತ(ಟ್ಟ)ವನ ಗದ್ದೆಯ ಆರುವಾರ ಹಿಡಿದು ಹಿತವನ ಟಾವಿನಲು ಭತ್ತ ಮೂ ೧೮

೫೪. ಭಂಡಾರಿಯ ಟಾವಿನಲು ಅಬರಬೆಟ್ಟಿನಲು ಭತ್ತ ಮೂ ೮೨ ವಿಕ್ರಾಂತ ಸೆಟ್ಟಿಯ ಅಳಿಯ ಮುಳತೂರ ದೇವರು ಸೆಟಟಿಯ ಟಾ

೫೫. ವಿನಲು ಭತ್ತ ಮೂಡೆ ೩೬ ಅಂತ್ತೂ ಭತ್ತ ೧೪೪ ಮತ್ತೆ ಬ್ರಾಹ್ಮಣ ವೀಳೆಯ ಕೊಡುವುದಕ್ಕೆ ತಂಬೂರ ಮೂಡೆಂ ಪಾಡಿ

೫೬. ಯ ಟಾವಿನಲು ಬಯಲು ಗದ್ದೆ ಮಕೆಬಳೇರಿ ಮುಳಿಗದ್ದೆಯ ಮಟಂತಗದ್ದೆ ಕುಳಕೆಮಕಾಲಿ
ಅಂನ್ತೂ ೫ಕ್ಕಂ ಬಿತ್ತುವ ಬಿದೆಕಾರು ಮೂ

೫೭. ೧೦ಕ್ಕಂ ಭತ್ತ ಮೂ ೩೬ ಮನೆ ಬಾ(ಗಿ)ಲ ಸಹಿತ

ಶಿಲಾಫಲಕದ ಬಲಬದಿಯಲ್ಲಿರುವ ಶಾಸನದ ಭಾಗ :

೫೮. **** ಯ ನಾರಣ ದೇವಗಳ ಮ

೫೯. *** ೦ಣ ಮಾಡಿದ ಧರ್ಮ ಮೂಡ

೬೦. *** ಕೆಳತವನ ಕಯ್ಯಲು

೬೧. *** ರ ಬ್ರಂಹ್ಮಾದಾಯ ನೇರಲ್ಕ

೬೨. **** ಬೆದಕೆಯಲು ಬಿತ್ತುವ

೬೩. ** ಬಯಲು ಬಿಟ್ಟು ಮಜಲು

೬೪. * ಮುಡೆ ಕಾಡೆ ೪೦ ವದಲಿಂ

೬೫. ** ಕಳೆ ಭೂಮಿ ಬಿತ್ತುವ

೬೬. ಬಿದೆಕಾರು ಮೂ ೧೦ ಉಭಯ

೬೭. ೦ ಮೂಡೆತಾಡೆ ೫೦ ಯೀ ಮೂರು

೬೮. ಠಾವಿನಲು ಉಳ್ಳಂತಾ ಮೆಣ

೬೯. ನನ ಕಾನ(ಮಿ) ಚತುಸೀಮೆ ಉಳ(ಳ್ಳ)ಂಥಾ

೭೦. ತೋಟ ಕರೆ ಮರ ಫಲ ಸಹವಾ

೭೧. ಗಿ ಮಂಜುನಾಥ ದೇವರ ದೇವಸ್ವವ

೭೨. ಮಾಡಿದ *** ಭೋಗಕ್ಕೆ ಭತ್ತ ಮೂ

೭೩. ಡೆ ೧೨ ನೊ ಸೀಮೆಯನೂ ಯಿರಿಸಿ

೭೪. ಶಾಸನದ ಕಲ್ಲನು ನಡಿಸಿ ಕ್ರಯ

೭೫. ಕೈ ಕೊಂಡಂತಾ ಬ್ರಂಹ್ಮಾದಾಯ

೭೬. (ವ)ನು ಪುತ್ತೂರ ದೇವರ(ಲ್ಲಿ) ದಿನಂಪ್ರತಿ

೭೭. ಲೆ ಮೂವರು ಬ್ರಾಹ್ಮ[ಣ]ರ ವ್ರತವ

೭೮. ನಡಸೂದೆಂದು ನಾಗಂಣನು ಧಾರೆ

೭೯. ಯನೇರೆದು ಕೊಟ್ಟನಾಗಿ ಆ ದೇವರ

೮೦. ನು ನಾಗಂಣ **** ಪುತ್ತೂ

೮೧. ರ ದೇವರ *** ಮುಡೆ ಆದ

೮೨. ನಾಲ್ವರು ಪಾದಮೂಲಿಗಳು ಬಂ

೮೩. ಗರ ಮನು(ಷ್ಯ) ಸಹವಾಗಿ ವೂ

೮೪. ದವಚೆ ಗ್ರಾಮ *****

೮೫. ಕಯ್ಯಲು ಕೊಟ್ಟೆವಾಗಿ ಆ ಭೂಮಿಯ

೮೬. ೦[ದಧಿಕ] ದವರು ಮಂಜುನಾಥ ದೇವರಿ

೮೭. ಗೆ ಭತ್ತ ಮೂ ೧೨ ಪುತ್ತೂರ ದೇವರ

೮೮. ಲ್ಲಿ ನಡ(ಡೆ)ವ ಪ(ವು)ತ್ಸವಕ್ಕೆ ಪುರುಷ ** ೧೦

೮೯. ದತ್ತಂ ಬೆಳೆ * ಕಂ ಮಚ್ಚಿ ಹಾನೆ

೯೦. (೧)೦ ಲ್ಕೆದಲು ನಡೆಸುವ ಭತ್ತ ಮೂ

೯೧. ಡೆ ೧೦೮

## ಸಾಹಿತಿಗಳು

೧. ಶ್ರೀ ಅಬ್ದುಲ್ ರಹಿಮಾನ್ ಅರಸಳಿಕೆ ೧೯೩೪ – ೧೯೬೯

೨. ಡಾ. ಅಜಕ್ಕಳ ಗಿರೀಶ್ ಭಟ್ ೧೯೭೦

೩. ಡಾ. ಅಮೃತ ಸೋಮೇಶ್ವರ ೧೯೩೫

೪. ಶ್ರೀ ಅಶೋಕವರ್ಧನ ಜಿ. ಎನ್. (೧೯೫೨)

೫. ಶ್ರೀ ಉಗ್ರಾಣ ಮಂಗೇಶರಾವ್ ೧೮೬೩ – ೧೯೭೪

೫. ಶ್ರೀಮತಿ ಉದಯ ಗೌರಿ ೧೯೬೯

೬. ಶ್ರೀ ಎ. ಪಿ. ಸುಬ್ಬಯ್ಯ ೧೯೦೧ – ೧೯೭೭

೭. ಡಾ.ಎಂ. ಮರಿಯಪ್ಪ ಭಟ್ ೧೯೦೬ – ೧೯೮೦

೮. ಶ್ರೀಮತಿ ಎ. ಪಿ. ಮಾಲತಿ ೧೯೪೪

೯. ಶ್ರೀ ಕಡವ ಶಂಭುಶರ್ಮ ೧೮೯೫ – ೧೯೬೬

೧೦. ಶ್ರೀ ಕೆ. ಶ್ರೀಕಂಠ ಪುತ್ತೂರು (೧೯೨೭)

೧೧. ಶ್ರೀ ಕೆದಂಬಾಡಿ ಜತ್ತಪ್ಪ ರೈ ೧೯೧೬

೧೨. ಶ್ರೀ ಕುಕ್ಕಿಲ ಕೃಷ್ಣಭಟ್ ೧೯೧೧–೧೯೮೮

೧೩. ಶ್ರೀ ಕುದ್ಕಾಡಿ ವಿಶ್ವನಾಥ ರೈ ೧೯೩೨

೧೪. ಶ್ರೀ ಕೊಳಂಬೆ ಪುಟ್ಟಣ್ಣ ಗೌಡರು ೧೯೦೩–೧೯೮೧

೧೫. ಶ್ರೀ ಗಣಪತಿ ಮೊಳೆಯಾರ ೧೯೩೬–೧೯೮೧

೧೬. ಶ್ರೀ ಗಂಗಾಧರ ಬೆಳ್ಳಾರೆ ೧೯೬೫

೧೭. ಶ್ರೀಮತಿ ಗಂಗಾ ಪಾದೇಕಲ್ ೧೯೫೨

೧೮. ಡಾ.ಚಂದ್ರ ಪೂಜಾರಿ (೧೯೫೬)

೧೯. ಶ್ರೀ ಚಂದ್ರಶೇಖರ ಎ. ಪಿ. (೧೯೫೮)

೨೦. ಶ್ರೀಮತಿ ಜಯಮ್ಮ ಜಿ. ಕೆ. (೧೯೪೮)

೨೧. ಶ್ರೀ ಜಿ. ಎನ್. ಲಕ್ಷ್ಮಣ ಪೈ ೧೯೦೪ – ೧೯೭೫

೨೨. ಡಾ.ಡಿ. ಸದಾಶಿವ ಭಟ್ಟ ಮೇ ೧೫, ೧೯೩೩

೨೩. ಡಾ.ತಾಳ್ತಜೆ ವಸಂತ ಕುಮಾರ್ ೧೯೪೫

೨೪. ಶ್ರೀ ದಾಮೋದರ ಬಾಳಿಗಾ ೧೯೦೮-೧೯೮೫

೨೫. ಡಾ. ನರೇಂದ್ರ ರೈ ೧೯೬೪

೨೬. ಶ್ರೀ ಪ್ರಭಾಕರ ರೈ (೧೯೪೦)

೨೭. ಶ್ರೀ ಪಾಟಾಳಿ ಕೆ. ಸಿ. ೧೯೪೮

೨೮. ಡಾ.ಪಾಲ್ತಾಡಿ ರಾಮಕೃಷ್ಣ ಆಚಾರ್ ೧೯೪೫

೨೯. ಶ್ರೀ ಪುತ್ತೂರು ಕೃಷ್ಣ ಭಟ್ ೧೯೦೮ - ೧೯೭೬

೩೦. ಶ್ರೀ ಪುರಂದರ ಭಟ್ ೧೯೩೬

೩೧. ಶ್ರೀ ಬಡೆಕ್ಕಿಲ ವೆಂಕಟರಮಣ ಭಟ್ಟ ೧೮೮೨ – ೧೯೮೩

೩೨. ಶ್ರೀ ಬಾಲಕೃಷ್ಣ ನಿಡ್ವಣ್ಣಾಯ ೧೯೩೭

೩೩. ಶ್ರೀ ಬಾಗಲೋಡಿ ದೇವರಾಯರು ೧೯೨೭

೩೪. ಶ್ರೀ ಬೊಳುವಾರು ಮಾಧವ ನಾಯಕ್ ೧೯೩೨

೩೫. ಶ್ರೀ ಮಚ್ಚಿಮಲೆ ಶಂಕರನಾರಾಯಣ ರಾವ್ ೧೯೦೧ – ೧೯೭೭

೩೬. ಶ್ರೀ ಮಂಜೇಶ್ವರ ಅನಂತರಾಯರು ೧೮೮೯

೩೭. ಶ್ರೀ ಮುಳಿಯ ಕೃಷ್ಣಭಟ್ ೧೯೩೩-೧೯೮೨

೩೮. ಶ್ರೀ ಮುಳಿಯ ತಿಮ್ಮಪ್ಪಯ್ಯ ೧೮೮೮ – ೧೯೫೦

೩೯. ಶ್ರೀ ಮುಳಿಯ ಶಂಕರ ಭಟ್ಟ ೧೮೯೧ – ೧೯೩೪

೪೦. ಶ್ರೀ ಮೊಳಹಳ್ಳಿ ಶಿವರಾವ್ ೧೮೮೧ – ೧೯೬೭

೪೧. ಶ್ರೀ ರಘುನಾಥ ರೈ ನುಳಿಯಾಲು ೧೯೪೫

೪೨. ಶ್ರೀ ರಾಧಾಕೃಷ್ಣ ಕೆ. ಎಂ. ೧೯೩೧ – ೧೯೮೪

೪೩. ಶ್ರೀ ಲಕ್ಷ್ಮೀಶ ತೊಳ್ಪಾಡಿ ೧೯೨೯

೪೪. ಡಾ. ವರದರಾಜ ಚಂದ್ರಗಿರಿ ೧೯೬೪

೪೫. ಶ್ರೀ ವಿ. ಬಿ. ಅರ್ತಿಕಜೆ ೧೯೪೩

೪೬. ಶ್ರೀಮತಿ ಶಾಲಿನಿ ಶ್ರೀನಿವಾಸ (೧೯೪೭)

೪೭. ಡಾ.ಶ್ರೀಕೃಷ್ಣ ಭಟ್ ಅರ್ತಿಕಜೆ ೧೯೪೫

೪೮. ಡಾ. ಶ್ರೀಧರ್ ಹೆಚ್.ಜಿ ೧೯೬೨

೪೯. ಶ್ರೀ ಸುಬ್ರಹ್ಮಣ್ಯಂ ಕೊಳತ್ತಾಯ ಎನ್. ೧೯೩೩

೫೦. ಶ್ರೀ ಸುಬ್ರಾಯ ಚೊಕ್ಕಾಡಿ ೧೯೩೬

೫೧. ಶ್ರೀ ಸುಬ್ರಾಯ ಉಪಾಧ್ಯಾಯ ಕೆಮ್ಮಿಂಜೆ ೧೯೧೧-೧೯೭೯

೫೨. ಶ್ರೀ ಸೇಡಿಯಾಪು ಕೃಷ್ಣ ಭಟ್ ೧೯೦೦ – ೧೯೯೬

## ಕಲಾವಿದರು

೧. ಶ್ರೀ ಅಜ್ಜನ ಗದ್ದೆ ಗಣಪಯ್ಯ ಭಾಗವತ ೧೯೧೬ – ೧೯೮೨

೨. ಶ್ರೀ ಕನ್ನೆಪಾಡಿ ರಾಮಕೃಷ್ಣ ೨೯-೪-೧೯೨೫

೩. ಶ್ರೀ ಕಾಂಚನ ವೆಂಕಟ ಸುಬ್ರಹ್ಮಣ್ಯ ಅಯ್ಯರ್ ೧೯೨೧ – ೧೯೭೨

೪. ಶ್ರೀ ಕುಟ್ಟಿ ಪರವನ್, ಹಳೆನೇರೆಂಕಿ ೧೯೬೫

೫. ಶ್ರೀ ಕೃಷ್ಣ ಅಜಿಲ ತಿಂಗಳಾಡಿ (ನಲಿಕೆಯವರು) ೧೯೮೦

೬. ಶ್ರೀ ತಬಲಾ ತರಂಗ್ ಎನ್. ವಿ. ಮೂರ್ತಿ ೩೦-೦೩-೧೯೨೨

೭. ಶ್ರೀ ತುಕ್ರ ನಲಿಕೆ – ೧೯೫೦

೮. ಶ್ರೀ ಪುತ್ತೂರು ಕೃಷ್ಣ ಭಟ್ ೧೯೦೮ – ೧೯೭೯

೯. ಶ್ರೀ ಪುರುಷೋತ್ತಮ ತೋಳ್ಪಾಡಿ ೧೯೦೧

೧೦. ಶ್ರೀ ಪುತ್ತೂರು ದೇವದಾಸ ಜೋಶಿ ೧೯೨೫ – ೧೯೮೯

೧೧. ಶ್ರೀ ಪುತ್ತೂರು ನರಸಿಂಹ ನಾಯಕ್ – ೧೯೫೦

೧೨. ಶ್ರೀ ಬಿಕುರ ಪರವ –೧೯೬೩

೧೩. ಶ್ರೀ ಬೊಳುವಾರು ಮಾಧವ ನಾಯಕ್ ೯-೨-೧೯೩೨

೧೪. ಶ್ರೀ ಮಾಂಬಾಡಿ ನಾರಾಯಣ ಭಾಗವತ ೧೯೦೦ – ೧೯೯೦

೧೫. ಶ್ರೀ ಮಾಡಾವು ಕೋಟಿ ಪರವ–೧೯೮೩

೧೬. ಶ್ರೀ ರಂಗ ಕಲಾವಿದ ರಾಮಣ್ಣ ರೈ ಪುತ್ತೂರು ೩೦-೬-೧೯೩೯

೧೭. ಶ್ರೀ ರಾಧಾಕೃಷ್ಣ . ಕೆ.ಎಂ. ೧೯೩೧ – ೧೯೮೪

೧೮. ಶ್ರೀ ವಿಟ್ಲ ಬಾಬುರಾಯರು– ೧೮೯೭

೧೯. ಶ್ರೀ ಶ್ರೀಧರ ಭಂಡಾರಿ ಪುತ್ತೂರು ೧-೧೦-೧೯೪೪

## ಪುತ್ತೂರಿನ ಸಂಘ–ಸಂಸ್ಥೆಗಳು.

೧. ಶ್ರೀ ಆಂಜನೇಯ ಯಕ್ಷಗಾನ ಕಲಾ ಸಂಘ, ಬೊಳುವಾರು.

೨. ಶ್ರೀ ಉಮಾಮಹೇಶ್ವರ ಸಂಗೀತ ಶಾಲೆ, ಪುತ್ತೂರು.

೩. ಕರ್ನಾಟಕ ಸಂಘ, ಪುತ್ತೂರು.

೪. ಕಲಾಭಿಮಾನಿ ಬಳಗ, ಅಡ್ಯನಡ್ಕ.

೫. ಕಲಾರಂಗ, ಪುತ್ತೂರು.

೬. ಕೋಡಪದವಿನ ಶ್ರೀ ವೀರಾಂಜನೇಯ ಸ್ವಾಮಿ ಯಕ್ಷಗಾನ ಕಲಾ ಸಂಘ.

೭. ಗೋವಿಂದ ಗಾನಸಭಾ, ಸುಬ್ರಹ್ಮಣ್ಯ

೮. ಜೇಸಿಯವರ ನೃತ್ಯ ಮತ್ತು ಸಂಗೀತ ಶಾಲೆ.

೯. ದೃಶ್ಯ – ಪುತ್ತೂರು.

೧೦. ನಿರತ ನಿರಂತರ – ಗ್ರಾಮೀಣ ಕಲಾವಿದರ ಸಮುಚ್ಚಯ.

೧೧. ಪ್ರಕೃತಿ ರಂಗ ತಂಡ, ಬೆಳ್ಳಾರೆ.

೧೨. ಮಾನಸ ಹವ್ಯಾಸಿ ತಂಡ, ಜಾಲ್ಸೂರು.

೧೩. ಯಕ್ಷರಂಜಿನೀ, ಪುತ್ತೂರ.

೧೪. ರಂಗಾಸಕ್ತರು – ವಿಟ್ಲ.

೧೫. ಶ್ರೀ ಲಕ್ಷ್ಮೀ ನಾರಾಯಣ ಸಂಗೀತ ಶಾಲೆ, ಪುತ್ತೂರು.

೧೬. ಶ್ರೀ ವಾಸಕೀ ಯಕ್ಷಗಾನ ಮಂಡಳಿ.

೧೭. ವಾಣೀಗಣೇಶ ಪ್ರಸಾದಿತ ಕಲಾವೃಂದ, ಬೆಳ್ಳಾರೆ

೧೮. ವಿವೇಕಾನಂದ ಕಾಲೇಜು ಕನ್ನಡ ಸಂಘ.

೧೯. ವಿಠಲ ಆರ್ಟ್ಸ್ ಮತ್ತು ಸ್ಪೋರ್ಟ್ಸ್ ಕ್ಲಬ್.

೨೦. ವಿನ್ಯಾಸ, ಬಾಳಿಲ.

೨೧. ವಿಶ್ವಕಲಾ ನಿಕೇತನ.

೨೨. ಶ್ರುತಿ ವೇದಿಕೆ, ಬಾಳಿಲ.

೨೩. ಸಂತ ಫಿಲೋಮಿನಾ ಕಾಲೇಜು, ಕನ್ನಡ ಸಂಘ.

೨೪. ಸಂಗಮ ಕಲಾ ಸಂಘ, ಕಲ್ಮಡ್ಕ.

# ಅವಿಭಜಿತ ಪುತ್ತೂರು ತಾಲೂಕು



# ಪುತ್ತೂರು ತಾಲೂಕು – ಪ್ರಾಕೃತಿಕ



# ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪುತ್ತೂರು ತಾಲೂಕು




ಪುತ್ತೂರು ತಾಲೂಕು
ಪುತ್ತೂರು
ಉತ್ತರ
ಪಶ್ಚಿಮ
ಪೂರ್ವ
ದಕ್ಷಿಣ

# ಪರಾಮರ್ಶನ ಗ್ರಂಥಗಳು


**ಕನ್ನಡ**

**೧. ಅಭಿಮಾನ-೧೯೯೨**

(ಸಂ.)ಬೋಳಂತಕೋಡಿ ಈಶ್ವರ ಭಟ್ಟ, ದ.ಕ.ಜಿಲ್ಲಾ ಸಾಹಿತ್ಯ ಪರಿಷತ್.

**೨. ಅಮೂಲ್ಯ ಚೇತನ-೧೯೮೮**

ಬಡೆಕ್ಕಿಲ ಕೃಷ್ಣ ಭಟ್, ಕನ್ನಡ ಸಂಘ ಸಂತ ಫಿಲೋಮಿನ ಕಾಲೇಜು ಪುತ್ತೂರು.

**೩. ಅಯನ-೨೦೧೩**

(ಸಂ.)ಡಾ.ಕೆ.ಚಿನ್ನಪ್ಪ ಗೌಡ, ಡಾ.ತಾಳ್ತಜೆ ವಸಂತಕುಮಾರ್ ಅಭಿನಂದನಾ ಸಮಿತಿ,ಪುತ್ತೂರು,ದ.ಕ.

**೪. ಒಕ್ಕೊರಲು-೨೦೦೭**

(ಸಂ.)ಚೇತನ್ ಕುಮಾರ್, ಒಕ್ಕಲಿಗ ಗೌಡ ಸೇವಾ ಸಂಘ ಪುತ್ತೂರು.

**೫. ಐತಿಹಾಸಿಕ ತುಳುನಾಡು-೨೦೧೦**

ದಿನಕರ ಪಿ. ಬಂಗೇರ, ವಿನೋದಿನಿ ಡಿ.ಬಂಗೇರ,ಉಳ್ಳಾಲ.

**೬. ಕನ್ನಡ ವಿಶ್ವಕೋಶ: ಸಂಪುಟ-೧-೧೯೬೯**

ಕನ್ನಡ ಅಧ್ಯಯನ ಸಂಸ್ಥೆ,ಮೈಸೂರು ವಿಶ್ವವಿದ್ಯಾನಿಲಯ.

**೭. ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ-೨೦೦೬**

ಶಂಕರ ಭಟ್ ಡಿ.ಎನ್, ಭಾಷಾ ಪ್ರಕಾಶನ ಮೈಸೂರು.

**೮. ಕನ್ನಡ ಭಾಷೆಯ ಸಂಕ್ಷಿಪ್ತ ಚರಿತ್ರೆ-೧೯೬೯**

ಶಂಕರ ಭಟ್ ಡಿ.ಎನ್, ಭಾಷಾ ಪ್ರಕಾಶನ ಮೈಸೂರು.

**೯. ಕನ್ನಡ ಪದಗಳ ಒಳರಚನೆ-೨೦೦೨**

ಶಂಕರ ಭಟ್ ಡಿ.ಎನ್, ಭಾಷಾ ಪ್ರಕಾಶನ ಮೈಸೂರು.

**೧೦. ಕನ್ನಡ ವಾಕ್ಯಗಳ ಒಳರಚನೆ-೨೦೦೪**

ಶಂಕರ ಭಟ್ ಡಿ.ಎನ್, ಭಾಷಾ ಪ್ರಕಾಶನ ಮೈಸೂರು.

**೧೧. ಕನ್ನಡದ ಸರ್ವನಾಮಗಳು-೨೦೦೩**

ಶಂಕರ ಭಟ್ ಡಿ.ಎನ್, ಭಾಷಾ ಪ್ರಕಾಶನ ಮೈಸೂರು.

**೧೨. ಕನ್ನಡದ ಸಾಂಸ್ಕೃತಿಕ ಸವಾಲುಗಳು ಮತ್ತು ಸಾಧ್ಯತೆಗಳು-೨೦೦೯**

(ಸಂ.)ಸಂಪತ್ ಕುಮಾರ್ ಬಿ.ವಿ, ಕನ್ನಡ ಸಂಘ ಎಸ್.ಡಿ.ಎಮ್ ಕಾಲೇಜು, ಉಜಿರೆ.

೧೩. **ಕನ್ನಡ ಸಾಹಿತ್ಯ ಪರಂಪರೆ ಮತ್ತು ಅಭಿವ್ಯಕ್ತಿ–೨೦೦೬**

(ಸಂ.)ಎಸ್.ಡಿ.ಶೆಟ್ಟಿ, ಕನ್ನಡ ಸಂಘ ಎಸ್.ಡಿ.ಎಮ್ ಕಾಲೇಜು,ಉಜಿರೆ.

೧೪. **ಕನ್ನಡ ಸಾಹಿತ್ಯ ಕೋಶ–೧೯೯೬**

(ಸಂ.)ರಾಜಪ್ಪ ದಳವಾಯಿ, ರಾಘವೇಂದ್ರ ಪ್ರಕಾಶನ ಬೆಂಗಳೂರು.

೧೫. **ಕನ್ನಡ ಸಂಘದ ದಶಕದ ಸಾಧನೆ–೧೯೮೫**

(ಸಂ.)ಬೋಳಂತಕೋಡಿ ಈಶ್ವರ ಭಟ್ಟ,ಕನ್ನಡ ಸಂಘ ಸಂತ ಫಿಲೋಮಿನ ಕಾಲೇಜು ಪುತ್ತೂರು.

೧೬. **ಕನ್ನಡದಲ್ಲಿ ಶತಕ ಸಾಹಿತ್ಯ – ೨೦೦೨**

ಶ್ರೀಕೃಷ್ಣ ಭಟ್ ಅರ್ತಿಕಜೆ, ಶ್ರೀ ಭಗವತ್ಪಾದ ಪ್ರಕಾಶನ,ಶಿರಸಿ.

೧೭. **ಕರ್ನಾಟಕ ಪರಂಪರೆ ಸಂಪುಟ – ೨, ೨೦೦೬**

(ಪ್ರ) ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು.

೧೮. **ಕರಾವಳಿ ಜಾನಪದ–೧೯೯೦**

ಪುರುಷೋತ್ತಮ ಬಿಳಿಮಲೆ, ಶೋಭನ ಎನ್.ಎನ್

೧೯. **ಕೊಡಿಪು – ೨೦೦೯**

(ಸಂ.) ವಾಮನ ನಂದಾವರ ವಿಶ್ವ ತುಳು ಸಾಹಿತ್ಯ ಸಮ್ಮೇಳನ ಉಜಿರೆ.

೨೦. **ಕೊಂಕಣಿ ಭಾಷೆ ಸಾಹಿತ್ಯ – ೧೯೯೫**

ಮುರಳೀಧರ ಉಪಾಧ್ಯ ಹಿರಿಯಡಕ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ.

೨೧. **ಚಾರುಮುಡಿ – ೨೦೦೮**

(ಸಂ.) ವಿಶ್ವೇಶ್ವರ ವಿ. ಫಡ್ಕೆ, ಬೆಳ್ತಂಗಡಿ ತಾಲೂಕು ೮ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಸಮಿತಿ.

೨೨. **ಜಿ. ಎನ್. ಲಕ್ಷ್ಮಣ ಪೈ ಬದುಕು – ಬರಹ – ೧೯೮೪**

ವರದರಾಯ ಪೈ, , ಕನ್ನಡ ಸಂಘ ಸಂತ ಫಿಲೋಮಿನ ಕಾಲೇಜು ಪುತ್ತೂರು.

೨೩. **ಜನಪದ ಸಾಹಿತ್ಯ – ೧೯೭೨**

ಎಲ್. ಆರ್. ಹೆಗಡೆ, ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು.

೨೪. **ಜಾನಪದ ಕಲೆ ಬದುಕು – ೧೯೯೪**

ಕೆ. ಎಸ್. ಉಪಾಧ್ಯಾಯ, ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು.

೨೫. **ಜಾನಪದ ಪರಿಸರ – ೨೦೦೪**

ಪಾಲ್ತಾಡಿ ರಾಮಕೃಷ್ಣ ಆಚಾರ್, ಕರ್ನಾಟಕ ಸಂಘ ಪುತ್ತೂರು.

೨೭. ಜಾನಪದ ಜೀವನ-೧೯೮೧

ಶ್ರೀಕೃಷ್ಣ ಭಟ್ ಅರ್ತಿಕಜೆ,ಕನ್ನಡ ಸಂಘ ಸಂತ ಫಿಲೋಮಿನ ಕಾಲೇಜು, ಪುತ್ತೂರು.

೨೮. ತಾಳಮದ್ದಳೆ-೧೯೯೭

ವಿಜಯ ನಳಿನಿ ಆರ್.ಹೆಗಡೆ, ಕರ್ನಾಟಕ ಸಂಘ, ಪುತ್ತೂರು.

೨೯. ತಾಯ್ನಾಡ ಸುದ್ದಿ ೧೬-೦೪-೨೦೧೧

ಪುತ್ತೂರಿನಿಂದ ಪ್ರಕಾಶಿತ ವಾರ ಪತ್ರಿಕೆ.

೩೦. ತುಳುನಾಡಿನ ಬ್ಯಾರಿಗಳು – ೨೦೦೧

ಮೂಲ – ಇಚ್ಲಂಗೋಡು ಬಿ.ಎಂ. ಕನ್ನಡಕ್ಕೆ – ತುಫೈಲ್ ಮಹಮ್ಮದ್. ಕರ್ನಾಟಕ ಬ್ಯಾರಿ ಸಾಹಿತ್ಯ ಪರಿಷತ್,ಬೆಂಗಳೂರು.

೩೧. ತುಳುನಾಡಿನ ಜೈನ ಶಾಸನಗಳು – ೨೦೦೪

(ಸಂ.) ದೇವರ ಕೊಂಡಾರೆಡ್ಡಿ ಮತ್ತು ಜಯಪ್ರಕಾಶ್ ಮಾವಿನಕುಳಿ,ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ.

೩೨. ತುಳುನಾಡಿನ ಇತಿಹಾಸ-೧೯೬೯

ರಮೇಶ ಕೆ.ವಿ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ ಉಡುಪಿ.

೩೩. ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ – ೨೦೦೨

ಶೈಲಾ ಟಿ. ಶರ್ಮ, ಜ್ಞಾನೋದಯ ಪ್ರಕಾಶನ,ಬೆಂಗಳೂರು.

೩೪. ತುಳುನಾಡು – ೨೦೦೯

ಪಾದೂರು ಗುರುರಾಜ ಭಟ್, ಡಾ।ಪಾದೂರು ಗುರುರಾಜ ಭಟ್ ಮೆಮೊರಿಯಲ್ ಟ್ರಸ್ಟ್(ರಿ)ಉಡುಪಿ.

೩೫. ತುಳುವ ಅಧ್ಯಯನ ಕೆಲವು ವಿಚಾರಗಳು – ೧೯೮೦

ವಿವೇಕ್ ರೈ ಬಿ. ಎ, ಕನ್ನಡ ಸಾಹಿತ್ಯ ಪರಿಷತ್,ಬೆಂಗಳೂರು.

೩೬. ತುಳುನಾಡಿನ ಶಾಸನಗಳು – ೧೯೭೮

ರಮೇಶ್ ಕೆ.ವಿ., ಶರ್ಮ ಎಂ. ಜೆ. ಗೀತಾ ಬುಕ್ ಹೌಸ್ ಮೈಸೂರು.

೩೭. ತುಳು ಸಾಹಿತ್ಯ ಚರಿತ್ರೆ – ೨೦೦೭

(ಪ್ರಧಾನ ಸಂಪಾದಕರು) ವಿವೇಕ್ ರೈ ಬಿ. ಎ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ.

೩೮. ತುಳುನಾಡಿನ ಅರಸು ಮನೆತನಗಳು – ೨೦೦೦

(ಸಂ.) ಕೃಷ್ಣ ಭಟ್ ಹೆರಿಂಜೆ, ಎಸ್. ಡಿ. ಶೆಟ್ಟಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ.

೩೯. **ತುಳುವ ದರ್ಶನ – ೧೯೮೭**

ಮೂಲ : ಪೀಟರ್ ಜೆ. ಕ್ಲಾಸ್, ಕನ್ನಡಕ್ಕೆ : ಎ. ಬಿ. ನಾವಡ, ಸುಭಾಶ್ಚಂದ್ರ, ಪ್ರಾದೇಶಿಕ ವ್ಯಾಸಂಗ ಕುಂದಾಪುರ.

೪೦. **ತುಳು ಜಾನಪದ ಆಚರಣೆಗಳು – ೨೦೦೭**

ಬನ್ನಂಜೆ ಬಾಬು ಅಮೀನ್, ಪ್ರಸಾರಾಂಗ, ದ್ರಾವಿಡ ವಿಶ್ವವಿದ್ಯಾಲಯ, ಕುಪ್ಪಂ, ಆಂಧ್ರಪ್ರದೇಶ.

೪೧. **ತುಳುನಾಡಿನ ದೈವಗಳು – ೨೦೧೦**

ಬನ್ನಂಜೆ ಬಾಬು ಅಮೀನ್, ಕೆಮ್ಮಲಜೆ ಜಾನಪದ ಪ್ರಕಾಶನ,ಉಡುಪಿ.

೪೨. **ತುಳುವ ಜಾನಪದ ಕೆಲವು ನೋಟಗಳು – ೨೦೦೭**

ಅಮೃತ ಸೋಮೇಶ್ವರ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ.

೪೩. **ತುಳುವೆರೆ ಅಟಿಲ್ ಅಗರಣೆ – ೨೦೦೮**

ಇಂದಿರಾ ಹೆಗ್ಗಡೆ, ಪ್ರಸಾರಾಂಗ, ದ್ರಾವಿಡ ವಿಶ್ವವಿದ್ಯಾಲಯ, ಕುಪ್ಪಂ, ಆಂಧ್ರಪ್ರದೇಶ.

೪೪. **ತುಳು ಸಂಸ್ಕೃತಿ ಚತುರ್ಮುಖೀ ಅಧ್ಯಯನ – ೧೯೯೯**

ಮೋಹನ್ ಕೃಷ್ಣ ರೈ ಕೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ.

೪೫. **ತುಳುವ ಮಂದಾರ – ೨೦೦೭**

ಹರಿಕೃಷ್ಣ ಭರಣ್ಯ, ದ್ರಾವಿಡ ವಿಶ್ವವಿದ್ಯಾಲಯ, ಕುಪ್ಪಂ, ಆಂಧ್ರಪ್ರದೇಶ.

೪೬. **ತುಳುನಾಡಿನ ಮಾಸ್ತಿಕಲ್ಲುಗಳು – ವೀರಗಲ್ಲುಗಳು – ೨೦೧೦**

ರೋಹಿಣಿ ಬಿ. ಎಂ., ಶಶಿಕಲಾ ಬಿ.

೪೭. **ತುಳು ಪಾಡ್ದನ ಬಂಧ ಮತ್ತು ವಿನ್ಯಾಸ – ೨೦೦೩**

ನಾವಡ ಎ. ವಿ,ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ.

೪೮. **ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ – ೨೦೦೪**

ಗಣಪತಿ ರಾವ್ ಐಗಳ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ.

೪೯. **ದಕ್ಷಿಣ ಕನ್ನಡ ಜಿಲ್ಲೆಯ ಬಾಲ ಸಾಹಿತ್ಯದ ಮೊದಲಿಗರು – ೧೯೯೦**

(ಸಂ.) ಸಂತೋಷ್ ಕುಮಾರ್ ಗುಲ್ವಾಡಿ, ಎಸ್.ಡಿ.ಎಂ. ಕಾಲೇಜು, ಉಜಿರೆ ಮತ್ತು ಗುಲ್ವಾಡಿ ವೆಂಕಟರಾವ್ ಸ್ಮಾರಕ ಕೇಂದ್ರ,ಮಣಿಪಾಲ.

೫೦. **ದಕ್ಷಿಣ ಕನ್ನಡ ಜಿಲ್ಲೆಯ ಭೈರರು ಸಾಹಿತ್ಯ – ಸಾಂಸ್ಕೃತಿಕ ಅಧ್ಯಯನ ೧೯೯೦**

ಪಾಂಡುರಂಗ ಡಿ. ಆರ್, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ ಉಡುಪಿ.

೫೧. **ದೇರಾಜೆ ಸೀತಾರಾಮಯ್ಯ ಜೀವನ ಸಾಧನೆ ೧೯೯೭**

ವಿಜಯ ಕುಮಾರ್ ಮೊಳೆಯಾರ,ಕರ್ನಾಟಕ ಸಂಘ ಪುತ್ತೂರು.

೫೨. **ನಂಬಿದ ಸತ್ಯಗಳು – ೨೦೦೬**

ಸಾವಿತ್ರಿ ಕೆ, ಕೆಮ್ಮಲಜೆ ಜಾನಪದ ಪ್ರಕಾಶನ,ಉಡುಪಿ.

೫೩. **ನಿಜಕ್ಕೂ ಹಳೆಗನ್ನಡ ವ್ಯಾಕರಣ ಎಂತಹುದು – ೨೦೦೫**

ಡಿ.ಎನ್.ಶಂಕರ ಭಟ್, ಭಾಷಾಪ್ರಕಾಶನ ಮೈಸೂರು.

೫೪. **ನೆನಪಿನಂಗಳದಲ್ಲಿ ಕಾರಂತರು – ೨೦೧೦**

ಕರಣಾಕರ ಬಳ್ಳೂರು, ಗಣೇಶ್ ಎಂಟರ್ ಪ್ರೈಸಸ್ ಮಂಗಳೂರು.

೫೫. **ನುಡಿ ಸಿಂಗಾರ – ೨೦೦೬**

ಗಣೇಶ್ ಅಮೀನ್ ಸಂಕಮಾರ್, ಸಿರಿ ಪ್ರಕಾಶನ ಮಂಗಳೂರು.

೫೬. **ನುಡಿಕಟ್ಟ್ – ೨೦೧೧**

ಬನ್ನಂಜೆ ಬಾಬು ಅಮೀನ್, ಕೆಮ್ಮಲಜೆ ಜಾನಪದ ಪ್ರಕಾಶನ,ಉಡುಪಿ.

೫೭. **ನುಡಿ ಒಸಗೆ – ೨೦೦೫, ಡಾ| ಕೆ. ಕುಶಾಲಪ್ಪ ಗೌಡ ಅಭಿನಂದನಾ ಗ್ರಂಥ**

(ಸಂ.) ಚಿನ್ನಪ್ಪ ಗೌಡ, ಕುಶಾಲಪ್ಪ ಗೌಡ ಅಭಿನಂದನಾ ಸಮಿತಿ ಸುಳ್ಯ.

೫೮. **ಪಡಿದನಿ – ೨೦೦೯**

ಡಾ| ಶ್ರೀ ಕೃಷ್ಣ ಭಟ್ ಅರ್ತಿಕಜೆ, ನ್ಯೂವೇರ್ ಬುಕ್ಸ್ ಬೆಂಗಳೂರು.

೫೯. **ಪೆರಿಮೆ – ೨೦೧೧**

(ಸಂ.) ಇಚ್ಲಂಗೋಡು ಬಿ. ಎಂ, ಕರ್ನಾಟಕ ಬ್ಯಾರಿ ಸಾಹಿತ್ಯ ಪರಿಷತ್,ಬೆಂಗಳೂರು.

೬೦. **ಫಿಲೋ ಪ್ರಭಾ – ೨೦೦೩, ಫಿಲೋಮಿನಾ ಕಾಲೇಜು ವಾರ್ಷಿಕ ಸಂಚಿಕೆ**

(ಸಂ.) ಶ್ರೀಷ ಕುಮಾರ್, ಫಿಲೋಮಿನಾ ಕಾಲೇಜು, ಪುತ್ತೂರು.

೬೧. **ಪ್ರತಿಭಾಲೋಕ–೨೦೧೧**

ಡಾ| ಶ್ರೀಕೃಷ್ಣ ಭಟ್ ಅರ್ತಿಕಜೆ, ನ್ಯೂವೇರ್ ಬುಕ್ಸ್ ಬೆಂಗಳೂರು.

೬೨. **ಪ್ರತಿ ಸಂಸ್ಕೃತಿ – ೨೦೦೯**

ರಹಮತ್ ತರೀಕೆರೆ, ಅಭಿನವ ಪ್ರಕಾಶನ ಬೆಂಗಳೂರು.

೬೩. **ಪುತ್ತೂರು ತಾಲೂಕು ಇತಿಹಾಸ ದರ್ಪಣ – ೨೦೦೫**

ಪೀಟರ್ ವಿಲ್ಸನ್ ಪ್ರಭಾಕರ್, ವಿಘ್ನೇಶ್ರ ವರ್ಮುಡಿ, ಇತಿಹಾಸ ಮತ್ತು ಸಂಸ್ಕೃತಿ ಅಧ್ಯಯನ ಕೇಂದ್ರ, ವಿವೇಕಾನಂದ ಕಾಲೇಜು, ಪುತ್ತೂರು.

**೬೪. ಪುತ್ತೂರು ಕ್ಷೇತ್ರದ ಇತಿಹಾಸ – ೧೯೮೫**

ಉಮಾನಾಥ ಶೆಣೈ ವೈ, ದೇವಾಲಯ ಆಡಳಿತ ಮಂಡಳಿ,ಶ್ರೀಮಹಾಲಿಂಗೇಶ್ವರ ದೇವಾಲಯ, ಪುತ್ತೂರು.

**೬೫. ಪುತ್ತೂರು ಕ್ಷೇತ್ರ ದರ್ಶನ – ೨೦೦೬**

ಸುದ್ದಿ ಬಿಡುಗಡೆ ಪುತ್ತೂರು ವಿಶೇಷ ಸಂಚಿಕೆ೨೦೦೬.

**೬೬. ಪೊಲಿ ಕೆನರಾ ೨೦೦ – ೨೦೦೨**

(ಪ್ರಧಾನ ಸಂ.) ಮುಕುಂದ ಪ್ರಭು ಎಂ, ಜಿಲ್ಲಾಧಿಕಾರಿ, ದ.ಕ ಜಿಲ್ಲೆ.

**೬೭. ಪೊನ್ನ ಕಂಠಿ – ೧೯೯೭**

(ಸಂ.) ವಿವೇಕ್ ರೈ ಬಿ. ಎ. ಕನ್ನಡ ಸಾಹಿತ್ಯ ಪರಿಷತ್, ಮಂಗಳೂರು.

**೬೮. ಬೆಳ್ಳಿ ಗುರುತು – ೨೦೦೧**

(ಸಂ.) ನರೇಂದ್ರ ರೈ ದೇರ್ಲ,ಸಂತ ಫಿಲೋಮಿನಾ ಕಾಲೇಜು ಪುತ್ತೂರು, ಕನ್ನಡ ಸಂಘದ ಬೆಳ್ಳಿ ಹಬ್ಬದ ಸಂಚಿಕೆ.

**೬೯. ಭೂತಾಳ ಪಾಂಡ್ಯನ ಅಳಿಯ ಸಂತಾನಕಟ್ಟು ಒಂದು ವಿಭಿನ್ನ ನಿರೂಪಣೆ**

ಚಂದ್ರಶೇಖರ ಎನ್. ಸಿರಿ ಪ್ರಕಾಶನ ಮಂಗಳೂರು.

**೭೦. ಮಹಿಳಾ ಸಾಹಿತ್ಯ ಸಮೀಕ್ಷೆ – ೨೦೦೪**

ಆರ್ಯಾಂಬ ಪಟ್ಟಾಭಿ, ನೈರುತ್ಯ ಪ್ರಕಾಶನ,ಮೈಸೂರು.

**೭೧. ಮಹಾಲಿಂಗೇಶ್ವರ ದೇವಳದ ಧಾರ್ಮಿಕ ಕಾರ್ಯಕ್ರಮ ಹಾಗೂ ಉತ್ಸವಗಳ ಕೈಪಿಡಿ – ೨೦೦೩**

(ಸಂ.) ಜಗನ್ನಿವಾಸ ರಾವ್, ದೇವಳ ಸಮಿತಿ,ಪುತ್ತೂರು.

**೭೨. ಮಾನೀಪಾ – ೨೦೦೮ – ಎಸ್. ಡಿ. ಎಂ. ಕಾಲೇಜು ಉಜಿರೆ ವಾರ್ಷಿಕ ಸಂಚಿಕೆ**

(ಸಂ.) ಕುಮಾರ್ ಹೆಗ್ಡೆ, ಎಸ್. ಡಿ. ಎಂ. ಕಾಲೇಜು ಉಜಿರೆ.

**೭೩. ಮುಗೇರರು ಜನಾಂಗ ಜಾನಪದ ಅಧ್ಯಯನ – ೧೯೯೭**

ಅಭಯ ಕುಮಾರ್ ಕೌಕ್ರಾಡಿ, ಕರ್ನಾಟಕ ತುಳು ಸಾಹಿತ್ಯ ಅಕಾಡಮಿ,ಮಂಗಳೂರು.

**೭೪. ಯಕ್ಷಗಾನ ಮತ್ತು ನಾನು – ೧೯೮೧**

ಗೋಪಾಲಕೃಷ್ಣ ಭಟ್ ಶ್ರೇಣಿ, ಕನ್ನಡ ಸಂಘ ಸಂತ ಫಿಲೋಮಿನಾ ಕಾಲೇಜು,ಪುತ್ತೂರು.

**೭೫. ವ್ಯಕ್ತಿ ವಿಚಾರ – ೧೯೯೦**

ಮಾಧವ ನಾಯಕ್ ಪಿ. ಬೊಳುವಾರು ಪುತ್ತೂರು, ಕರ್ನಾಟಕ ಸಂಘ ಪುತ್ತೂರು.

೭೬. ವಿಟ್ಲದ ಕ್ರಾಂತಿ – ೨೦೦೦
ಪೀಟರ್ ವಿಲ್ಸನ್ ಪ್ರಭಾಕರ್, ಇತಿಹಾಸ ಮತ್ತು ಸಂಸ್ಕೃತಿ ಅಧ್ಯಯನ ಕೇಂದ್ರ,ವಿವೇಕಾನಂದ

೭೭. ಶತಮಾನದ ಕೊನೆಯಲ್ಲಿ ಶಿವರಾಮ ಕಾರಂತ – ೨೦೦೨
ವಿವೇಕ್ ರೈ ಬಿ. ಎ, ಡಾ।ಶಿವರಾಮ ಕಾರಂತ ಪೀಠ ಮಂಗಳೂರು ವಿಶ್ವವಿದ್ಯಾನಿಲಯ.

೭೮. ಶಾಸನ ಶಾಸ್ತ್ರ – ೧೯೮೬
ವಸಂತ ಶೆಟ್ಟಿ, ನೈರುತ್ಯ ಪ್ರಕಾಶನ,ಮೈಸೂರು.

೭೯. ಸಪ್ತಪದಿ–೨೦೦೧
(ಸಂ.)ಪಾಲ್ತಾಡಿ ರಾಮಕೃಷ್ಣ ಆಚಾರ್,ಪುತ್ತೂರು ಸಾಹಿತ್ಯ ಪರಿಷತ್.

೮೦. ಸಂಸ್ಕೃತಿ ಸಿರಿ – ೨೦೦೩
ಚಿನ್ನಪ್ಪ ಗೌಡ ಕೆ, ಸಿರಿ ಪ್ರಕಾಶನ ಮಂಗಳೂರು

೮೧. ಸಂಶೋಧನ ರತ್ನಮಾಲಿಕೆ–೧೯೮೭
ಟಿ.ಕೇಶವ ಭಟ್ಟ, ಚಿರಸಾಹಿತ್ಯ ಪ್ರಕಾಶನ,ಬೆಂಗಳೂರು.

೮೨. ಸಾಂಸ್ಕೃತಿಕ ಅಧ್ಯಯನ – ೨೦೦೪
ರಹಮತ್ ತರೀಕೆರೆ, ಕನ್ನಡ ಸಾಹಿತ್ಯ ಅಕಾಡಮಿ, ಬೆಂಗಳೂರು.

೮೩. ಸಾಹಿತಿ ಮಾಹಿತಿ ಕೋಶ ಭಾಗ – ೯ – ೨೦೧೨
ಬಿ. ಜಿ. ಸತ್ಯಮೂರ್ತಿ.

೮೪. ಸಾಹಿತ್ಯ ರಶ್ಮಿ – ದ. ಕ. ಜಿಲ್ಲಾ ೧೫ನೇ ಕನ್ನಡ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ
(ಸಂ.) ಹರಿನಾರಾಯಣ ಮಾಡಾವು, ಕನ್ನಡ ಸಾಹಿತ್ಯ ಪರಿಷತ್.

೮೫. ಸಾರ್ಥಕ – ೧೯೯೫
(ಸಂ.) ಶ್ರೀಕೃಷ್ಣಭಟ್ ಅರ್ತಿಕಜೆ, ಎಂ. ಮರಿಯಪ್ಪ ಭಟ್ ಸಂಸ್ಮರಣಾ ಸಮಿತಿ ಮೈಲಾಪುರ.

೮೬. ಸ್ವಾಭಿಮಾನ–೧೯೯೩
(ಸಂ.)ಬೋಳಂತಕೋಡಿ ಈಶ್ವರ ಭಟ್, ದ.ಕ.ಜಿಲ್ಲಾ ಸಾಹಿತ್ಯ ಪರಿಷತ್

೮೭. ಸುದ್ದಿ ಬಿಡುಗಡೆ ದೀಪಾವಳಿ ವಿಶೇಷಾಂಕ – ೨೦೦೮
(ಸಂ.) ಶಿವಾನಂದ, ಸುದ್ದಿ ಬಿಡುಗಡೆ,ಪುತ್ತೂರು.

೮೮. ಸೇಡಿಯಾಪು – ೧೯೯೬
ಪಾದೆಕಲ್ಲು ವಿಷ್ಣು ಭಟ್, ಪ್ರಸಾರಾಂಗ ಮಂಗಳೂರು ವಿಶ್ವವಿದ್ಯಾನಿಲಯ.

೮೯. ಸೇರಿಗೆ – ೨೦೦೦

(ಸಂ.) ಚಿನ್ನಪ್ಪ ಗೌಡ ಕೆ, ಮಂಗಳಾ ಪಬ್ಲಿಕೇಶನ್ ಮುಡಿಪು.

೮೯. ಸ್ವರ್ಣ ರೇಖೆ – ೨೦೦೮

ಪುತ್ತೂರು ತಾಲೂಕು ೧೨ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ

(ಸಂ.) ಚೇತನ್ ಕುಮಾರ್ ಟಿ.

೯೦. ಸ್ವರ್ಣ ಪ್ರಭಾ – ೨೦೦೮

ಸಂತ ಫಿಲೋಮಿನಾ ಕಾಲೇಜು ಸ್ವರ್ಣ ಮಹೋತ್ಸವ ಸಂಚಿಕೆ

೯೧. ಹಬ್ಬಗಳು ಮತ್ತು ದಿನಾಚರಣೆಗಳು – ೨೦೦೭

ಸಂಪಟೂರು ವಿಶ್ವನಾಥ, ಅಂಕಿತ ಪುಸ್ತಕ ಪ್ರಕಾಶನ ಬಸವನಗುಡಿ,ಬೆಂಗಳೂರು.

೯೨. ಹೀಗೊಂದು ವೃತ್ತಾಂತ – ೨೦೦೩

ವಿ. ಬಿ. ಅರ್ತಿಕಜೆ, ಕನ್ನಡ ಪ್ರಪಂಚ ಪ್ರಕಾಶನ,ಪುತ್ತೂರು.

**ಕೊಂಕಣಿ :**

೧. **ಆಮ್ಚಿಂ ಫೆಸ್ತಾಂ – ಫಾ। ಸಿಲ್ವೆಸ್ಟರ್ ಮೊಂತೆರೊ – ೧೯೮೬**

ಕೊಡಿಯಾಲ್‌ಬೈಲ್ ಪ್ರೆಸ್, ಮಂಗಳೂರು.

೨. **ರಾಕ್ಣೊ – ಭಾಂಗರೋತ್ಸವ್ ಸ್ಮಾರಕ್ ಅಂಕೊ – ೧೯೯೭**

(ಸಂ.) ಫಾ। ವಿಕ್ಟರ್ ಮಿನೇಜಸ್

ಕೊಡಿಯಾಲ್‌ಬೈಲ್ ಪ್ರೆಸ್, ಮಂಗಳೂರು.

## ಮಾಹಿತಿ ನೀಡಿದವರು

ಶ್ರೀ ಅಲ್ಬರ್ಟ್ ರೊಡ್ರಿಗಸ್
ಪರ್ಲಡ್ಕ ಮನೆ
ದರ್ಬೆ ಅಂಚೆ
ಪುತ್ತೂರು ತಾಲೂಕು
574202

ಶ್ರೀ ಕೃಷ್ಣ ಅಜಿಲ
ತಿಂಗಳಾಡಿ ಮನೆ
ತಿಂಗಳಾಡಿ ಅಂಚೆ
ಪುತ್ತೂರು ತಾಲೂಕು.

ಡಾ.ತಾಳ್ತಜೆ ವಸಂತಕುಮಾರ್
"ಸುಧಾಮ" ಪಂಜಳ,
ಉಪ್ಪಿನಂಗಡಿ ಅಂಚೆ
ಪುತ್ತೂರು ತಾಲೂಕು
574241

ಶ್ರೀ ನೋರ್ಬರ್ಟ್ ಮಸ್ಕರೇನಸ್
ದರ್ಬೆ ಅಂಚೆ
ಪುತ್ತೂರು ತಾಲೂಕು
574202

ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್
ಪೆಲತ್ತಾಜೆ ಮನೆ
ಬೆಟ್ಟಂಪಾಡಿ ಅಂಚೆ
ಪುತ್ತೂರು ತಾಲೂಕು
574202

ಶ್ರೀ ಬಿ.ಐತಪ್ಪ ನಾಯ್ಕ್
ಮುಖ್ಯೋಪಧ್ಯಾಯರು
ಸರಕಾರಿ ಮಾದರಿ ಹಿರಿಯ ಪ್ರಾಥಮಿಕ
ಶಾಲೆ,ಉಪ್ಪಿನಂಗಡಿ
ಪುತ್ತೂರು ತಾಲೂಕು 574241

ಶ್ರೀ ಮಹಾಬಲ ಭಟ್
ದರ್ಬೆ ಅಂಚೆ
ಪುತ್ತೂರು ತಾಲೂಕು
574202

ಶ್ರೀ ಮಾಡಾವು ಕೋಟಿ ಪರವ
ಮಾಡಾವು ಮನೆ
ಮಾಡಾವು ಅಂಚೆ
ಪುತ್ತೂರು ತಾಲೂಕು
574202

ಶ್ರೀಮತಿ ಮೇರಿ ಮಸ್ಕರೇನಸ್
ತೆಂಕಿಲ ಮನೆ
ದರ್ಬೆ ಅಂಚೆ
ಪುತ್ತೂರು ತಾಲೂಕು
574202

ಶ್ರೀ ವಿ.ಬಿ.ಅರ್ತಿಕಜೆ
'ಶ್ರೀ ನಿಲಯ' ಶಿವ ಪೇಟೆ
ದರ್ಬೆ ಅಂಚೆ
ಪುತ್ತೂರು ತಾಲೂಕು
574202

ಶ್ರೀ ಬಿ.ಪುರಂದರ ಭಟ್
'ಅನುರಾಗ' ಶ್ರೀ ರಾಧಾಕೃಷ್ಣ
ಮಂದಿರ ರಸ್ತೆ, ಪುತ್ತೂರು
574202

ಶ್ರೀ ಜಯರಾಮ ಸುವರ್ಣ
ಆಡಳಿತಾದಿಕಾರಿ
ವಿದ್ಯಾರಶ್ಮಿ ಶಿಕ್ಷಣ ಸಂಸ್ಥೆಗಳು
ಸವಣೂರು.

****

